ಎಸ್ ವಿ ಮಂಜುನಾಥ್

# ಕಲಿವ ಶಾಲೆಯ ಹಲವು ಮುಖಗಳು

ಶಾಲೆ-ಶಿಕ್ಷಣವ್ಯವಸ್ಥೆಗಳ ಒಂದು ಅನುಭವ ಕಥನ





## ಎಸ್ ವಿ ಮಂಜುನಾಥ್

ಎಸ್.ವಿ.ಮಂಜುನಾಥ್ ಅವರು ಕಾರ್ಪೊರೇಟ್ ವಲಯ ಹಾಗೂ ಶಿಕ್ಷಣ ರಂಗದಲ್ಲಿ ಮೂರು ದಶಕಗಳಿಗೂ ಹೆಚ್ಚಿನ ಕಾಲದ ವೃತ್ತಿ ಅನುಭವ ಹೊಂದಿದ್ದಾರೆ. ರಾಜ್ಯದ ಲೀಗ್ ಮತ್ತು ವಿಶ್ವವಿದ್ಯಾಲಯ ಮಟ್ಟಗಳಲ್ಲಿ ಅತ್ಯುತ್ತಮ ಕ್ರಿಕೆಟ್ ಆಟಗಾರರಾಗಿದ್ದ ಇವರು ವಿವಿಧ ಕೈಗಾರಿಕೆಗಳಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ವಿಭಾಗದ ಉನ್ನತ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ ಹನ್ನೆರಡು ವರ್ಷಗಳ ಹಿಂದೆ ಅಜೀಂ ಪ್ರೇಮ್‌ಜಿ ಫೌಂಡೇಷನ್ ಮೂಲಕ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿದರು.

ಮಂಜುನಾಥ್ ಅವರು ಫೌಂಡೇಷನ್‌ನ ಕರ್ನಾಟಕ ರಾಜ್ಯ ಸಂಸ್ಥೆಯ ಮುಖ್ಯಸ್ಥರಾಗಿ ಕ್ಷೇತ್ರಮಟ್ಟದ ಕೆಲಸಕಾರ್ಯಗಳಿಗೆ ನಾಯಕತ್ವ ಒದಗಿಸಿದ್ದಾರೆ. ಶಿಕ್ಷಕರ ವೃತ್ತಿಪರ ಅಭಿವೃದ್ಧಿ, ಮುಖ್ಯ ಶಿಕ್ಷಕರು – ಶೈಕ್ಷಣಿಕ ಅಧಿಕಾರಿಗಳ ನಾಯಕತ್ವ ಬೆಳವಣಿಗೆ ಕಾರ್ಯಕ್ರಮಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಪ್ರಸ್ತುತ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಅನುವಾದ ಉಪಕ್ರಮದ ಸಹನಿರ್ದೇಶಕರಾಗಿ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ಸಂಪನ್ಮೂಲ ಸಾಮಗ್ರಿಯನ್ನು ಕನ್ನಡದಲ್ಲಿ ಅಭಿವೃದ್ಧಿಪಡಿಸುವಲ್ಲಿ ಸಕ್ರಿಯರಾಗಿದ್ದಾರೆ.

ಉತ್ತಮ ಲೇಖಕರೂ ಆಗಿರುವ ಮಂಜುನಾಥ್ ಈ ಮೊದಲು ಮಾನವಸಂಪನ್ಮೂಲ ಅಭಿವೃದ್ಧಿ ಕ್ಷೇತ್ರದಲ್ಲಿನ ತಮ್ಮ ವೃತ್ತಿಪಯಣವನ್ನು ಕುರಿತು 'ಜನಸಂಪದ' ಎಂಬ ವಿಚಾರಕಥನವನ್ನೂ, ತಮ್ಮ ಕೌಟುಂಬಿಕ ಚಿತ್ರಪರಂಪರೆಯ 'ಸಖ-ಸಖಿ' ಎಂಬ ವಿಶಿಷ್ಟ ಕೃತಿಯನ್ನೂ ಪ್ರಕಟಿಸಿದ್ದಾರೆ. ತತ್ತ್ವಶಾಸ್ತ್ರದ ಗಂಭೀರ ಅಭ್ಯಾಸಿಯಾಗಿರುವ ಇವರು ವಿಸ್ತೃತ ಓದು, ಹಾಡುಗಾರಿಕೆ ಮತ್ತು ವಿದ್ಯಾರ್ಥಿಗಳೊಂದಿಗೆ ಕ್ರಿಕೆಟ್ ಆಡುವ ಗೀಳನ್ನು ಇಂದಿಗೂ ಉಳಿಸಿಕೊಂಡಿದ್ದಾರೆ. ಬ್ಯಾಟ್ಸ್‌ಮನ್‌ಗಳನ್ನು ತಮ್ಮ ಮಾರಕ ಇನ್‌ಸ್ವಿಂಗ್‌ನಿಂದ ಈಗಲೂ ಮಣಿಸುತ್ತಾರೆ.

**ಸ್ವಾಮಿ ವಿವೇಕಾನಂದ ಶೈಕ್ಷಣಿಕ ಅನುಸಂಧಾನ**
(ಶ್ರೀರಾಮಕೃಷ್ಣ ಸಮಗ್ರ ಶಿಕ್ಷಣ ಕೇಂದ್ರದ ಘಟಕ)
ಗೊಟ್ಟಿಗೆರೆ, ಬೆಂಗಳೂರು – ೫೬೦೦೮೩

ಬೋಧನೆ–ಕಲಿಕೆಗಳಲ್ಲಿ ಮನುಷ್ಯಕೇಂದ್ರಿತ ಮನೋಧರ್ಮವು ನೆಲೆಗೊಳ್ಳಲು ನೆರವಾಗುವುದು ಹಾಗೂ ಶೈಕ್ಷಣಿಕ ಪ್ರಕ್ರಿಯೆಗೆ ಮಾನವೀಕರಣದ ಮೂಲಕ ಸಹಜತೆಯ ಸ್ಪರ್ಶವನ್ನು ನೀಡುವುದು ಇದರ ಆಶಯ, ಶೈಕ್ಷಣಿಕ ಸಂವಾದ, ಸಮಾಲೋಚನೆ, ಕಾರ್ಯಾಗಾರ, ತರಬೇತಿ, ಪ್ರಯೋಗ, ಸಂಶೋಧನೆ, ಪ್ರಕಟಣೆಗಳ ಮೂಲಕ ಇದನ್ನು ಕಾರ್ಯರೂಪಕ್ಕೆ ತರುವಲ್ಲಿ ಸ್ವಾಮಿ ವಿವೇಕಾನಂದ ಶೈಕ್ಷಣಿಕ ಅನುಸಂಧಾನವು ಪ್ರವೃತ್ತವಾಗಿದೆ.

ಸಂಪರ್ಕ : ೯೪೪೯೩ ೫೩೮೩೦



# ಕಲಿವ ಶಾಲೆಯ ಹಲವು ಮುಖಗಳು

ಶಾಲೆ–ಶಿಕ್ಷಣವ್ಯವಸ್ಥೆಗಳ ಒಂದು ಅನುಭವ ಕಥನ

ಎಸ್ ವಿ ಮಂಜುನಾಥ್

ಸ್ವಾಮಿ ವಿವೇಕಾನಂದ ಶೈಕ್ಷಣಿಕ ಅನುಸಂಧಾನ
ಗೊಟ್ಟಿಗೆರೆ, ಬೆಂಗಳೂರು ಪರವಾಗಿ


ಎಂ. ಎಂ. ಪಬ್ಲಿಕೇಷನ್
ಬೆಂಗಳೂರು

**KALIVA SHAALEYA HALAVU MUKHAGALU**
A collection of essays on the various facets of school education
By **S.V.Manjunath**
#84, 1st floor, 'Sneha', Block 9, Jeevan Mitra Apartments,
9th cross, 1st Phase, J.P.Nagar, Bengaluru - 560 078.
(E-mail: manjunath.sidvis@gmail.com)

Published by
**M.C.Narendra**
**M.M.Publication**
(Messers M.Mooniswamy & Sons)
'Sarvodaya', #72, Prof. A.R.Krishna Shastri Road
(Surveyor Street), Basavanagudi, Bengaluru 560004

For

**Swami Vivekananda Shaikshanika Anusandhana**
(Unit of Sri Ramakrishna Samagra Shikshana Kendra)
Gottigere, Bengaluru - 560083



First Edition: 2021 | Pages : XXX + 290 | Price : Rs. 300.00

Paper Used : 80 GSM White Maplitho

Copies : 1000

Illustrations : Shivakumar M

Inner and Cover page Design : M R Guruprasad, 8050530468

Printed at : Sreeranga Printers Pvt Ltd
No. 34, 28th Cross, 9th Main, Banashankari
IInd Stage, Bangalore - 560070
Ph.: 080 - 26715813

ಬದುಕುವ ಕಲೆಯನ್ನು ಕಲಿಸಿದ
ತಂದೆತಾಯಿಗಳಿಗೆ
ಮತ್ತು
ಅರಿವನ್ನು ವಿಸ್ತರಿಸಿ ಬೆಳೆಸಿದ
ಗುರುಗಳಿಗೆ



# ಮುನ್ನುಡಿ

ನಮ್ಮ ದೇಶದ ಶೇಕಡ ನಲವತ್ತು ಭಾಗ ಜನಸಂಖ್ಯೆ ಮಕ್ಕಳಿಂದಾಗಿದೆ. ಈ ಮಕ್ಕಳು ಸರ್ಕಾರಿ ಶಾಲೆಗಳಲ್ಲಿ ಶಿಕ್ಷಣ ಪಡೆಯುವುದು ಅನಿವಾರ್ಯ. ಖಾಸಗಿ ಶಾಲೆಗಳ ಸಂಖ್ಯೆ ಗಣನೀಯವಾಗಿ ಏರಿಕೆಯಾಗಿದ್ದರೂ ಇದು ಎಂದಿಗೂ ಸರ್ಕಾರಿ ವ್ಯವಸ್ಥೆಗೆ ಪರ್ಯಾಯವಾಗಲಾರದು. ಈ ಅನಿವಾರ್ಯತೆಯನ್ನು ಒಪ್ಪಿಕೊಂಡು, ಸರ್ಕಾರಿ ಶಾಲೆಗಳ ಅಧ್ಯಾಪಕರಲ್ಲಿ ನಂಬಿಕೆ ಇಟ್ಟು, ಅವರಲ್ಲಿ ಕಂಡುಬರುವ ಶಿಕ್ಷಣಶ್ರದ್ಧೆಯನ್ನು ಗುರುತಿಸಿ, ಈ ಶ್ರದ್ಧೆಯನ್ನೇ ಕೇಂದ್ರವಾಗಿಟ್ಟುಕೊಂಡು ಈ ಶಿಕ್ಷಕರು ಮತ್ತಷ್ಟು ಉತ್ತಮ ಶಿಕ್ಷಕರಾಗಲು ಸಹಾಯ ಮಾಡಬಹುದೆ? ಹೌದು! ಈ ಸಾಧ್ಯತೆಯನ್ನು ಸಾಕಾರಗೊಳಿಸಲು ಅತ್ಯಂತ ಪ್ರಾಮಾಣಿಕವಾಗಿ ದುಡಿಯುತ್ತಿರುವ ಎಸ್.ವಿ. ಮಂಜುನಾಥ್ ಅವರು ಬರೆದಿರುವ ಈ ಅನುಭವ ಕಥನವನ್ನು ಓದಿದರೆ ಹೊಸದೊಂದು ಆಶಾಭಾವನೆ ಗರಿಗೆದರುತ್ತದೆ. ಈ ಸಾಧ್ಯತೆಯ ಕನಸನ್ನು ನನಸುಮಾಡಲು ಆಡಳಿತಾತ್ಮಕ ವ್ಯವಸ್ಥೆ ಹೇಗೆ ಬದಲಾಗಬೇಕು, ಶಿಕ್ಷಕರ ಶಿಕ್ಷಣವನ್ನು ಉತ್ತಮಪಡಿಸುವುದು ಹೇಗೆ, ವಸತಿಶಾಲೆಗಳು, ಬಿಬಿಎಮ್‌ಪಿ ಶಾಲೆಗಳು ಹೀಗೆ ಹತ್ತು ಹಲವು ಬಗೆಯ ಶಾಲೆಗಳು ಬಾಲಸ್ನೇಹಿ ಶಾಲೆಗಳಾಗಬೇಕಾದರೆ ಕೈಗೊಳ್ಳಬೇಕಾದ ಸುಧಾರಣೆಗಳಾವುವು? ಈ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತ ಮಂಜುನಾಥ್ ಅವರು ಕರ್ನಾಟಕದ ಮೂಲೆಮೂಲೆಗಳಲ್ಲಿರುವ ಶಾಲೆಗಳ ಜೊತೆ ನಿಕಟವಾಗಿ ಕೆಲಸ ಮಾಡುತ್ತಿದ್ದಾರೆ. ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಶಿಕ್ಷಣತಜ್ಞರಾಗಿ ದುಡಿಯುತ್ತಿರುವ ಇವರು ಇತರ ದೇಶಗಳ ಶಿಕ್ಷಣ ವ್ಯವಸ್ಥೆಗಳು ಹೇಗೆ ಕೆಲಸ ಮಾಡುತ್ತಿವೆ ಎಂದು ತಿಳಿಯಲು ಅಮೆರಿಕದ ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಗೂ ಭೇಟಿಕೊಟ್ಟಿದ್ದಾರೆ. ನಮ್ಮ ಶಿಕ್ಷಣ ವ್ಯವಸ್ಥೆಯ ಕುಂದು-ಕೊರತೆಗಳನ್ನು ಈ ಮುಂದುವರಿದ ದೇಶಗಳ ವ್ಯವಸ್ಥೆಯೊಡನೆ ಹೋಲಿಸಿ ನಾವು ಕೈಗೊಳ್ಳಬಹುದಾದ ಸುಧಾರಣಾಕ್ರಮಗಳ ಬಗ್ಗೆ,

ಅದರ ಅನುಷ್ಠಾನಕ್ಕೆ ಪೂರಕವಾಗಿ ನಾವು ಕೈಗೊಳ್ಳಬೇಕಾಗಿರುವ ವ್ಯವಸ್ಥೆಯ ಬದಲಾವಣೆಗಳ ಬಗ್ಗೆ ಈ ಪುಸ್ತಕದಲ್ಲಿ ಚರ್ಚಿಸಿದ್ದಾರೆ. ಜೊತೆಗೆ ನಮ್ಮ ಭಾಷೆ ಮತ್ತು ಸಂಸ್ಕೃತಿಗೆ ಅನುಗುಣವಾಗಿ ಗ್ರಾಮೀಣ ಭಾರತದ ಸರ್ಕಾರಿ ಶಾಲೆಗಳ ಗುಣಮಟ್ಟವನ್ನು ಹೇಗೆ ಹೆಚ್ಚಿಸಬಹುದು ಎಂಬ ಕುರಿತು ಅನೇಕ ಒಳನೋಟಗಳನ್ನು ನೀಡುತ್ತಾರೆ.

ಸಾಮಾಜಿಕ-ರಾಜಕೀಯ ಸಮೀಕರಣಗಳು ಮೂಲಭೂತವಾಗಿ ಬದಲಾಗುತ್ತಾ ಇರುವ ಈ ಕಾಲಮಾನದಲ್ಲಿ ದೇಶ ಹೆಚ್ಚುಹೆಚ್ಚು ಖಾಸಗೀಕರಣದ ಕಡೆ ವಾಲುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಇದು ಮುಂದುವರೆದು ಶಿಕ್ಷಣಕ್ಷೇತ್ರಕ್ಕೂ ವ್ಯಾಪಿಸಬಹುದೆ? ಸಮಾನತೆ ಎಂಬುದು ಯಾವುದೇ ದೇಶ ಸಾಧಿಸ ಬಯಸುವ ಅತ್ಯಂತ ಶ್ರೇಷ್ಠ ಮೌಲ್ಯ. ಸಮಾನ ಅವಕಾಶಗಳನ್ನು ಕಲ್ಪಿಸುವ ಅಭಿವೃದ್ಧಿ-ಆರ್ಥಿಕತೆಗೆ ಸಮಾನ ಶಾಲಾಶಿಕ್ಷಣದ ಮೂಲಕ ಮೂಡಬಹುದಾದ ಮನೋಧರ್ಮವೇ ಬುನಾದಿ. ಲೇಖಕರು ಅಮರ್ತ್ಯ ಸೇನ್ ಅವರ ಅಭಿಪ್ರಾಯಗಳನ್ನು ಉಲ್ಲೇಖಿಸುತ್ತಾರೆ. ಖಾಸಗಿ ಶಾಲೆಗಳು ಪರ್ಯಾಯ ಅವಕಾಶವನ್ನು ಒದಗಿಸಿದರೂ ಸಮಾನ ಸಮಾಜ ನಿರ್ಮಾಣದಲ್ಲಿ ಸರ್ಕಾರಿ ಶಾಲೆಗಳ ಪಾತ್ರವೇ ನಿರ್ಣಾಯಕ ಎಂಬುದನ್ನು ಸೇನ್ ಅವರು ಇತರ ದೇಶಗಳ ಉದಾಹರಣೆಯೊಂದಿಗೆ ಪ್ರತಿಪಾದಿಸುವುದನ್ನು ಗಮನಿಸಬೇಕು. ಇತ್ತೀಚಿನ ದಿನಗಳಲ್ಲಿ ನಾವು ನೋಡಿರುವಂತೆ ಶಿಕ್ಷಣದ ನೀತಿಯಾಗಲಿ ಅಥವಾ ಶಿಕ್ಷಣಕ್ಕೆ ಸಂಬಂಧಪಟ್ಟ ನ್ಯಾಯಾಲಯದ ತೀರ್ಪುಗಳಾಗಲಿ ಉದ್ದೇಶಪೂರ್ವಕವಾಗಿ ಕೆಲವರನ್ನು ಹೊರಗಿಡುತ್ತವೆ ಎಂದು ಭಾವಿಸದಿದ್ದರೂ ಕೆಲವೇ ಕೆಲವರನ್ನು ವಿಶೇಷವಾಗಿ ಗಮನದಲ್ಲಿಟ್ಟುಕೊಂಡು ಕಾರ್ಯನಿರ್ವಹಿಸುವ ಮೂಲಕ ಬಹುಸಂಖ್ಯಾತರನ್ನು ಹೊರಗಿಡುತ್ತವೆ ಎಂಬುದನ್ನು ಪರಿಣಾಮದಲ್ಲಿ ಗುರುತಿಸದೆ ಅನ್ಯಮಾರ್ಗವಿಲ್ಲ. ಇದಲ್ಲದೆ ಜಾತಿ, ವರ್ಗ, ಲಿಂಗ ಮುಂತಾದ ಅಸಮಾನತೆಗಳ ಕಾರಣದಿಂದಲೂ ಬಹುಸಂಖ್ಯಾತ ಭಾರತೀಯರು ಶಿಕ್ಷಣ ಕ್ಷೇತ್ರದಿಂದ ಹೊರಗುಳಿಯುತ್ತಾರೆ. ಈ ಅಸಮಾನತೆಗಳನ್ನು ಪರಿಹರಿಸುವಲ್ಲಿ ಸರ್ಕಾರಿ ಶಾಲೆಗಳ ಪಾತ್ರ ಬಹಳ ಮುಖ್ಯ. ಆದರೆ ಸರ್ಕಾರ ಶಿಕ್ಷಣ ಕ್ಷೇತ್ರವನ್ನು ನಿರ್ಲಕ್ಷಿಸಿರುವುದನ್ನು ಲೇಖಕರು ಪ್ರಶ್ನಿಸುತ್ತಾರೆ. ಶಿಕ್ಷಣ ಕ್ಷೇತ್ರಕ್ಕೆ ಹಂಚಿಕೆಯಾಗಿರುವ ಹಣ ನಮ್ಮ ಒಟ್ಟು ರಾಷ್ಟ್ರೀಯ ಆದಾಯದ ಕೇವಲ ಶೇ. 3.8 ಮಾತ್ರ. ದೇಶದ ಶೇಕಡ ನಲವತ್ತು ಭಾಗ ಜನರ ಕಲ್ಯಾಣಕ್ಕಾಗಿ ನಾವು ಮೀಸಲಾಗಿಟ್ಟಿರುವುದು ಇಷ್ಟು ಅಲ್ಪ ಮೊತ್ತದ ಹಣ! ಇದಲ್ಲದೆ ಶಿಕ್ಷಣ ಹಕ್ಕು ಕಾಯ್ದೆಯನ್ನು ಶೇಕಡ 9.5 ಶಾಲೆಗಳು ಮಾತ್ರ ಅನುಸರಿಸುತ್ತಿರುವುದನ್ನು ಮತ್ತು ಶಾಲೆಗಳಲ್ಲಿ ಇರುವ ಶಿಕ್ಷಕರ ಕೊರತೆಯನ್ನು ಲೇಖಕರು ಉಲ್ಲೇಖಿಸುತ್ತಾರೆ.

ನಮ್ಮ ಸರ್ಕಾರಿ ವ್ಯವಸ್ಥೆಯಲ್ಲಿ ಅನೇಕ ಸಮಸ್ಯೆಗಳು ಇರುವುದು ನಿಜ. ಹಾಗೆಂದು ಶಿಕ್ಷಣಾಸಕ್ತರು ಕೈಚೆಲ್ಲಿ ಕುಳಿತುಕೊಳ್ಳಬೇಕೆ? ಈ ಎಲ್ಲ ಹಿನ್ನಡೆಗಳು ಇರುವುದು ನಿಜವಾದರೂ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಉತ್ತಮ ಕೆಲಸಗಳನ್ನು ಸಾಧಿಸಲು ಸಾಧ್ಯವಿದೆ ಎಂಬ ಆಶಾಭಾವನೆಯನ್ನು ಲೇಖಕರು ವ್ಯಕ್ತಪಡಿಸುತ್ತಾರೆ.

ಸರ್ಕಾರಿ ಶಾಲೆಗಳೊಡನೆ ಕೆಲಸ ಮಾಡುತ್ತ ಸರಳ ಪರಿಹಾರಮಾರ್ಗಗಳ ಮೂಲಕ ಗುಣಾತ್ಮಕ ಬದಲಾವಣೆ ಸಾಧ್ಯವಾದದ್ದನ್ನು ಚರ್ಚಿಸುತ್ತಾರೆ. ಶಾಲೆ ಸಮುದಾಯದ ಭಾಗವಾಗುವುದಾದರೆ, ಪ್ರತಿಯೊಂದು ಸಮುದಾಯವೂ ಶಾಲೆಯ ವಾರಸುದಾರಿಕೆಯನ್ನು ವಹಿಸಿಕೊಳ್ಳುವುದಾದರೆ ಅನೇಕ ಪರಿಹಾರಗಳು ಎದುರಿಗೇ ಕಾಣುತ್ತವೆ. ಹಾಗಾಗಿ ಒಂದು ಸರ್ಕಾರಿ ಶಾಲೆಯನ್ನು ಗ್ರಾಮೀಣ ಸಮುದಾಯ 'ಇದು ನಮ್ಮ ಶಾಲೆ' ಎಂದು ಭಾವಿಸಿ ಶಾಲೆಗೆ ಒತ್ತಾಸೆಯಾಗಿ ನಿಲ್ಲುವಂತೆ ಮಾಡಬಹುದಲ್ಲವೆ? ಅಜೀಂ ಪ್ರೇಮ್‌ಜಿ ಫೌಂಡೇಷನ್ ಈ ತತ್ತ್ವದಲ್ಲಿ ನಂಬಿಕೆಯಿಟ್ಟು ಅತ್ಯಂತ ಹಿಂದುಳಿದ ಪ್ರದೇಶಗಳ ಜನಸಮುದಾಯವನ್ನೂ ಒಳಗೊಂಡು ಶಾಲಾಭಿವೃದ್ಧಿ ಕೆಲಸದಲ್ಲಿ ತೊಡಗಿದೆ. ಲೇಖಕರು ಶೈಕ್ಷಣಿಕವಾಗಿ ಬಹಳ ಹಿಂದುಳಿದಿರುವ ಈಶಾನ್ಯ ಕರ್ನಾಟಕದ ಎಂಟು ಜಿಲ್ಲೆಗಳ ಶಾಲೆಗಳ ಜೊತೆ ಕೆಲಸ ಮಾಡಿದ ಅನುಭವಗಳನ್ನು ಈ ಪುಸ್ತಕದಲ್ಲಿ ಹಂಚಿಕೊಂಡಿದ್ದಾರೆ. ಈ ಹಿಂದುಳಿದ ಪ್ರದೇಶಗಳಲ್ಲೂ ಲಾಭ ಗಳಿಕೆಯ ಖಾಸಗಿ ಶಾಲೆಗಳು ತಲೆ ಎತ್ತಿವೆಯಂತೆ. ಈ ಪ್ರದೇಶದ ಖಾಸಗಿ ಶಾಲೆಗಳಿಗೆ ಹೋಲಿಸಿದರೆ ನಮ್ಮ ಸರ್ಕಾರಿ ಶಾಲೆಗಳು ಯಾವ ರೀತಿಯಲ್ಲೂ ಕಳಪೆಯಲ್ಲ. ಆದರೆ ಈ ಸತ್ಯವನ್ನು ಪೋಷಕರಿಗೆ ಮನದಟ್ಟು ಮಾಡಿಕೊಡಬೇಕು ಎನ್ನುತ್ತಾರೆ ಲೇಖಕರು. ಈ ಸರ್ಕಾರಿ ಶಾಲೆಗಳಲ್ಲಿ ಶ್ರದ್ಧಾವಂತ ಶಿಕ್ಷಕರಿದ್ದಾರೆ. ತರಬೇತಿಯ ಸಂದರ್ಭದಲ್ಲಿ ಇವರಿಗೆ ತಿಳಿದ ವಿಷಯವೇನೆಂದರೆ ಯಾವ ಶಿಕ್ಷಕರು ನಿರಂತರವಾಗಿ ತಾವೇ ಕಲಿಯುವ ಮನೋಧರ್ಮವನ್ನು ಉಳಿಸಿಕೊಂಡಿರುತ್ತಾರೋ ಅವರು ಉತ್ತಮ ಶಿಕ್ಷಕರೂ ಆಗಿರುತ್ತಾರೆ ಎನ್ನುವುದು. ಒಟ್ಟಿನಲ್ಲಿ ಸಮುದಾಯವು ಶಾಲೆಯನ್ನು ತನ್ನ ಭಾಗ, ತನ್ನ ಅಂಗ ಎಂದು ಹೃತ್ಪೂರ್ವಕವಾಗಿ ಸ್ವೀಕರಿಸುವಂತಹ ಪರಿಸರ ನಿರ್ಮಿಸಿದರೆ ಶಾಲೆಗಳು ಸುಧಾರಣೆಯಾಗುತ್ತವೆ. ಚಾಮರಾಜನಗರದಲ್ಲಿ ನಾವು ಸರ್ಕಾರಿ ಶಾಲೆಗಳ ಜೊತೆ ಕೆಲಸ ಮಾಡುತ್ತಿದ್ದೇವೆ. ನಮ್ಮ ಅನುಭವವೂ ಲೇಖಕರ ಈಶಾನ್ಯ ಕರ್ನಾಟಕದ ಅನುಭವದಂತೆಯೇ ಇದೆ. ಇಲ್ಲಿಯೂ ಕಳಪೆಮಟ್ಟದ ಖಾಸಗಿ ಶಾಲೆಗಳು ಅಮಾಯಕ ಪೋಷಕರನ್ನು ವಂಚಿಸುತ್ತಿವೆ. ಎಷ್ಟೋ ಸರ್ಕಾರಿ ಶಾಲೆಗಳು ಈ ಖಾಸಗಿ ಶಾಲೆಗಳಿಗಿಂತ ಉತ್ತಮವಾಗಿವೆ. ಆದರೆ ಖಾಸಗಿ ಶಾಲೆಗಳು ದುಬಾರಿ ಸಮವಸ್ತ್ರದ ಉಡುಪು ಇತ್ಯಾದಿ ಚಮತ್ಕಾರಗಳಿಂದಾಗಿ ಪೋಷಕರನ್ನು ಮರುಳು ಮಾಡುತ್ತಿವೆ. ಮಕ್ಕಳು ಹೆಚ್ಚು ಹಣ ತೆತ್ತು ಕಳಪೆ ಗುಣಮಟ್ಟದ ಶಿಕ್ಷಣ ಪಡೆಯುತ್ತಿದ್ದಾರೆ.

ಶಿಕ್ಷಣ ಕ್ಷೇತ್ರದಲ್ಲಿ ಅಧಿಕಾರ ಸ್ಥಾನದಲ್ಲಿ ಕುಳಿತಿರುವವರು ಕೇವಲ ತಮ್ಮ ಅಧಿಕಾರದ ಬಲದಿಂದಲೇ ಗುಣಮಟ್ಟದ ಶಿಕ್ಷಣವನ್ನು ಸಾಧಿಸಬಹುದೆ? ಅದು ಸಾಧ್ಯವಿಲ್ಲ ಎಂಬುದನ್ನು ದಶಕಗಳ ನಮ್ಮ ಅನುಭವ ತೋರಿಸಿದೆ. ಶಿಕ್ಷಣ ಆಡಳಿತ ವ್ಯವಸ್ಥೆಯ ಅನೇಕ ಪದರಗಳನ್ನು ಒಳಹೊಕ್ಕು ಅದರ ಕವಲುಗಳನ್ನು ಅರಿಯುವುದಕ್ಕೇ ಸುಮಾರು ಆರು ತಿಂಗಳು ಬೇಕಾಗುತ್ತವೆ. ಆದರೆ ರಾಜಕೀಯ ಕಾರಣಗಳಿಗಾಗಿ

ಐ.ಎ.ಎಸ್. ಅಧಿಕಾರಿಗಳು ಶಿಕ್ಷಣ ಇಲಾಖೆಗೆ ಕಾರ್ಯದರ್ಶಿಯಾಗಿ ನೇಮಕಗೊಂಡ ಆರು ತಿಂಗಳು–ವರ್ಷದೊಳಗೇ ವರ್ಗವಾಗುವುದನ್ನು ಲೇಖಕರು ಅಂಕಿ–ಅಂಶಗಳ ಸಮೇತ ವಿವರಿಸುತ್ತಾರೆ. ಮೇಲುಹಂತದಲ್ಲಿ ಕಂಡುಬರುವ ಈ ಬಗೆಯ ಅಸ್ಥಿರತೆ–ಅನಿಶ್ಚಿತತೆಯ ಪರಿಣಾಮಗಳು ಶಾಲಾಹಂತದವರೆಗೆ ತಲುಪಿ ಕೋಟ್ಯಂತರ ಮಕ್ಕಳ ಶಿಕ್ಷಣವನ್ನು ಕೆಡಿಸುತ್ತವೆ. ಈ ಅಂತರ್ ಸಂಬಂಧಗಳ ಸೂಕ್ಷ್ಮತೆಯನ್ನರಿಯುವ ಮನೋಧರ್ಮ ನಮ್ಮ ರಾಜಕೀಯ ಧುರೀಣರಲ್ಲಿದೆಯೆ? ಶಿಕ್ಷಣ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಸರಿಪಡಿಸಬೇಕಾದರೆ ಆಡಳಿತ ವ್ಯವಸ್ಥೆಯನ್ನು ಸರಿಪಡಿಸುವುದಷ್ಟೇ ಅಲ್ಲದೆ ಶಿಕ್ಷಕರ ಶಿಕ್ಷಣ, ಸೇವಾನಿರತ ಶಿಕ್ಷಕರ ತರಬೇತಿ, ಸಂಪನ್ಮೂಲ ಕೇಂದ್ರ–ಸಂಪನ್ಮೂಲ ವ್ಯಕ್ತಿಗಳು ಹೀಗೆ ಹಲವು ವಲಯಗಳಲ್ಲಿ ಸುಧಾರಣೆಗಳಾಗಬೇಕು. ಶಾಲೆಗಳ ಹಂತದಲ್ಲಿನ ಈ ಬದಲಾವಣೆ ಸಮಗ್ರವಾಗಿ ಒಂದು ಪ್ರದೇಶದ ಎಲ್ಲ ಶಾಲೆಗಳನ್ನು ಒಳಗೊಂಡು ಸಾಧಿಸಿದಂತಹ ಬದಲಾವಣೆಯಾದಾಗ ಮಾತ್ರ ಶಿಕ್ಷಕ ವೃಂದದಲ್ಲಿ ನಿಜವಾದ ಶಿಕ್ಷಣ ಸಂಸ್ಕೃತಿ ಮೂಡುತ್ತದೆ. ಈ ಶಿಕ್ಷಣ ಸಂಸ್ಕೃತಿ ಎಂಬುದು ಸಮುದಾಯದ ಒತ್ತಾಸೆಯಿಂದ ಹುಟ್ಟುವ ಕನಿಷ್ಠ ಗುಣಮಟ್ಟದ ಶಿಕ್ಷಣ ನೀಡುವ ಸಾಮರ್ಥ್ಯ. ಹೀಗೆ ಸಂಸ್ಕೃತಿಯಾಗಿ ರೂಢಿಯಾದ ಗುಣಮಟ್ಟದ ಶಿಕ್ಷಣ ಸಾಮರ್ಥ್ಯ ಈ ಮಟ್ಟದಿಂದ ಮೇಲೇರುತ್ತದೆಯೇ ಹೊರತು ಕೆಳಗೆ ಇಳಿಯುವುದಿಲ್ಲ. ಈ ತತ್ತ್ವವನ್ನಾಧರಿಸಿ ಕೈಗೊಳ್ಳುವ ಸಮಗ್ರ ಶಿಕ್ಷಣ ಸುಧಾರಣೆಯ ಅಂಶಗಳನ್ನು ಲೇಖಕರು ತಮ್ಮ ಕ್ಷೇತ್ರಾಧ್ಯಯನದ ಅನುಭವದ ಹಿನ್ನೆಲೆಯಲ್ಲಿ, ಅಕಾಡೆಮಿಕ್ ಜ್ಞಾನದ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ.

ಅನೇಕ ಹಿನ್ನಡೆಗಳ ನಡುವೆಯೂ ಸಹೃದಯ, ಶ್ರದ್ಧಾವಂತ ಶಿಕ್ಷಕನೊಬ್ಬ ಸದ್ದು–ಗದ್ದಲಗಳಿಲ್ಲದ ಗ್ರಾಮೀಣ ಶಾಲೆಯೊಂದರಲ್ಲಿ ಮಕ್ಕಳೊಟ್ಟಿಗೆ ಗುಣಮಟ್ಟದ ಶಿಕ್ಷಣದಲ್ಲಿ ತೊಡಗಬಹುದು. ಇದಕ್ಕೆ ಅಧ್ಯಾಪಕನ ಜ್ಞಾನಭಂಡಾರದ ಹರಹು, ಮಕ್ಕಳ ಮನಸ್ಸನ್ನು ಅರಿಯುವ ಕಣ್ಣು, ಮಕ್ಕಳು ಹೇಗೆ ಕಲಿಯುತ್ತಾರೆ ಎಂಬ ಅರಿವು ಈ ಮುಂತಾದವು ಇದ್ದರೆ ಸಾಕು. ಆದರೆ ಈ ಎಲ್ಲ ಅಂಶಗಳನ್ನು ಅಧ್ಯಾಪಕನೊಬ್ಬ ಹುಟ್ಟಿನಿಂದಲೇ ಪಡೆದಿರುತ್ತಾನೆಯೆ? ಇಲ್ಲ; ಇವೆಲ್ಲ ಅಧ್ಯಾಪಕನಿಗೆ ಸಿಕ್ಕ ಶಿಕ್ಷಣ, ಅದರ ವ್ಯಾಪ್ತಿ ಮತ್ತು ಗುಣಮಟ್ಟ, ತರಬೇತಿ, ಜೊತೆಗೆ ಅನುಭವಗಳನ್ನು ಆಧರಿಸಿದೆ. ಹಾಗಾಗಿ ಲೇಖಕರು ಶಿಕ್ಷಕರ ಶಿಕ್ಷಣದ ಕುರಿತಾಗಿ ವಸ್ತುಸ್ಥಿತಿಯನ್ನು ಚರ್ಚಿಸುತ್ತಾರೆ. ನಮ್ಮ ಶಾಲೆಗಳಲ್ಲಿರುವ 1,70,000 ಶಿಕ್ಷಕರ ಪೈಕಿ ಒಂದು ಲಕ್ಷ ಶಿಕ್ಷಕರು ಹತ್ತು ಅಥವಾ ಹನ್ನೆರಡನೆಯ ತರಗತಿ ಪಾಸಾಗಿ ಟಿ.ಸಿ.ಹೆಚ್. ತರಬೇತಿ ಪಡೆದವರು. ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಯ ಶಿಕ್ಷಣ ವಿಭಾಗದಲ್ಲಿ ಶಿಕ್ಷಕರಾಗಬಯಸುವವರಿಗೆ ಹನ್ನೆರಡನೆಯ ತರಗತಿಯಿಂದ ಮುಂದಕ್ಕೆ ನಾಲ್ಕು ವರ್ಷದ ಶಿಕ್ಷಣ ನೀಡಿ ಐದನೆಯ ವರ್ಷ ಬೋಧನಾ ತರಬೇತಿಯನ್ನೂ ನೀಡುತ್ತದೆ. ಈಗ ಹೊಸದಾಗಿ ಅಂಗೀಕರಿಸಿರುವ ರಾಷ್ಟ್ರೀಯ ಶಿಕ್ಷಣ ನೀತಿಯು ಸಹ ಶಿಕ್ಷಕರ

ಶಿಕ್ಷಣಾವಧಿಯನ್ನು ಹೆಚ್ಚಿಸಿರುವುದು ಸ್ವಾಗತಾರ್ಹ. ಶಿಕ್ಷಕರ ಶಿಕ್ಷಣ ಮುಗಿಸಿದ ನಂತರವೂ ಶಿಕ್ಷಕರು ಓದುವ ಹವ್ಯಾಸವನ್ನು ಕೈಬಿಡದೆ ಮುಂದುವರೆಸಲು ಅಗತ್ಯ ಉತ್ತೇಜನವನ್ನೂ ನೆರವನ್ನೂ ನೀಡಬೇಕು, ಶಿಕ್ಷಕರ ಜ್ಞಾನದ ಹರಹು ಹೆಚ್ಚಾದಷ್ಟೂ ಶಿಕ್ಷಣದ ಗುಣಮಟ್ಟ ಹೆಚ್ಚುತ್ತಾ ಹೋಗುತ್ತದೆ. ಆದರೆ ನಮ್ಮ ಶಿಕ್ಷಕ ಸಂಘಗಳು ಶಿಕ್ಷಣ ಗುಣಮಟ್ಟದ ಕುರಿತಾಗಿ ಗಂಭೀರ ಚರ್ಚೆಗಳನ್ನು ತಮ್ಮ ಕಾರ್ಯವ್ಯಾಪ್ತಿಗೆ ತರುವುದೇ ಇಲ್ಲ. ನನಗೆ ನೆನಪಿರುವಂತೆ ಹಿಂದೆ ಲಂಡನ್ ಟ್ಯಾಕ್ಸಿ ಚಾಲಕರ ಸಂಘ ಬಳಕೆದಾರರಿಗೆ ಕಿರಿಕಿರಿಯಾಗದಂತೆ ಸೌಜನ್ಯದಿಂದ ವರ್ತಿಸುವುದು ಹೇಗೆ ಎಂದು ತಿಳಿಸಿಕೊಡುವ ಕಾರ್ಯಾಗಾರವನ್ನು ಹಮ್ಮಿಕೊಂಡಿತ್ತಂತೆ. ಈ ಮನೋಧರ್ಮ ಶಿಕ್ಷಣ ಕ್ಷೇತ್ರಕ್ಕೆ ಕಾಲಿಟ್ಟರೆ ಎಷ್ಟು ಒಳ್ಳೆಯದಲ್ಲವೆ? ಶಾಲಾ ಅಧ್ಯಾಪಕರಷ್ಟೇ ಏಕೆ, ಕಾಲೇಜು ಅಧ್ಯಾಪಕರ ಸಂಘಗಳೂ ಸಹ ತಮ್ಮ ಶಿಕ್ಷಣ ಸಂವರ್ಧನೆಗಾಗಿ, ಬೌದ್ಧಿಕ ವಿಕಾಸಕ್ಕಾಗಿ ಗಂಭೀರ ಚರ್ಚೆಗಳಲ್ಲಿ ತೊಡಗಿರುವುದು ವಿರಳ. ಇಷ್ಟಾದರೂ ಲೇಖಕರು ಅಮರ್ತ್ಯ ಸೇನ್ ಅವರ ಮಾತುಗಳನ್ನು ಉಲ್ಲೇಖಿಸುತ್ತ ಶಿಕ್ಷಕರ ಸಂಘಗಳನ್ನು ಸಂಪೂರ್ಣ ಕಡೆಗಣಿಸದೆ ರಚನಾತ್ಮಕ ಕೆಲಸಗಳನ್ನು ಕೈಗೊಳ್ಳುವ ಸಂಯೋಜಕರಂತೆ ಬೆಳೆಸಬೇಕಾದ ಅನಿವಾರ್ಯತೆಯನ್ನು ವಿವರಿಸುತ್ತಾರೆ.

ಶಿಕ್ಷಕರ ಮೇಲೆ ವಿಶ್ವಾಸವಿಟ್ಟು, ಅತ್ಯಂತ ಪ್ರೀತಿಯಿಂದ ಕೆಲಸ ಮಾಡುತ್ತಿರುವ ಎಸ್.ವಿ. ಮಂಜುನಾಥ್ ಮತ್ತು ತಂಡ ಅಜೀಂ ಪ್ರೇಮ್‌ಜಿ ಫೌಂಡೇಷನ್ ಶಿಕ್ಷಣ ಸಂಸ್ಥೆಯ ಮೂಲತತ್ತ್ವಗಳನ್ನು ಅನುಷ್ಠಾನಗೊಳಿಸಲು ಅತ್ಯಂತ ಪ್ರಾಮಾಣಿಕವಾಗಿ ಶ್ರಮಿಸುತ್ತಿದೆ. ಹೈದ್ರಾಬಾದ್-ಕರ್ನಾಟಕದಂತಹ ಅತಿಹಿಂದುಳಿದ ಪ್ರದೇಶದ ದುಃಸ್ಥಿತಿಯನ್ನು ಕಂಡು ಮರುಗಿ, ಶ್ರೀ ಅಜೀಂ ಪ್ರೇಮ್‌ಜಿಯವರು ತಮ್ಮ ವೈಯಕ್ತಿಕ ಗಳಿಕೆಯ ಅಪಾರ ಹಣವನ್ನು ಈ ಪ್ರದೇಶದ ಉನ್ನತಿಗಾಗಿ ಧಾರೆಯೆರೆದಿದ್ದಾರೆ. ಇದೇ ಪ್ರದೇಶದ ಬಡಜನರ ನೆರವಿನಿಂದ ಗೆದ್ದುಬಂದು ದೆಹಲಿಯ ಗದ್ದುಗೆಯನ್ನು ಏರುವ ರಾಜಕೀಯ ಧುರೀಣರು ಈ ಬಡಜನಗಳಿಗಾಗಿ ಏನು ಮಾಡಿದ್ದಾರೆ? ಬಹುಶಃ ಇದು ಎಲ್ಲಾ ಪ್ರದೇಶಗಳ ರಾಜಕೀಯ ಸಮೀಕರಣ! ಈ ಸಂದರ್ಭದಲ್ಲಿ ಈ ವೈರುಧ್ಯಗಳಾವುವನ್ನೂ ಗಣನೆಗೆ ತಾರದೆ ಮಂಜುನಾಥ್ ಅವರಂತೆ ರಚನಾತ್ಮಕ ಕಾರ್ಯದಲ್ಲಿ ತೊಡಗುವುದಷ್ಟೇ ನಮಗೆ ಉಳಿದಿರುವ ದಾರಿ. ಮಂಜುನಾಥ್ ಅವರ ಈ ಪುಸ್ತಕ ಹೀಗೆ ರಚನಾತ್ಮಕ ಕೆಲಸಗಳಲ್ಲಿ ತೊಡಗುವ ಎಲ್ಲರಿಗೂ ದಾರಿದೀಪವಾಗಲಿ ಎಂದು ಹಾರೈಸುತ್ತೇನೆ.

'ದೀನಬಂಧು'<br>ಚಾಮರಾಜನಗರ

**– ಜಿ.ಎಸ್.ಜಯದೇವ**



# ಕೃತಿಯನ್ನು ಕುರಿತು ನಾಲ್ಕು ಮಾತು

### ಕೃತಿ ರೂಪುಗೊಂಡ ಬಗೆ

ಯಾವುದೇ ವಿಷಯವನ್ನು ಕುರಿತಾದ ನಮ್ಮ ಗ್ರಹಿಕೆ ಮತ್ತು ತಿಳುವಳಿಕೆಯನ್ನು ಒರೆಗೆ ಹಚ್ಚಲು ಬರವಣಿಗೆ ಅತ್ಯಂತ ಉಪಯುಕ್ತ ಮಾಧ್ಯಮ. ನಿಯತವಾಗಿ ಬರೆಯುವುದರಿಂದ ನಾವು ಯಾವ ವಸ್ತುವಿಷಯದ ಬಗ್ಗೆ ಬರೆಯುತ್ತಿದ್ದೇವೋ ಅದಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಕೃತಿ, ಸಾಹಿತ್ಯವನ್ನು ಓದುವ, ಓದಿದ್ದನ್ನು ಕುರಿತು ಪರ್ಯಾಲೋಚಿಸುವ, ನಾವು ತಲುಪಲು ಇಚ್ಛಿಸುವ ಓದುಗರ ಅಗತ್ಯತೆಯನ್ನಾಧರಿಸಿ ಸೂಕ್ತ ಬರವಣಿಗೆಯ ಸ್ವರೂಪ ಮತ್ತು ಚೌಕಟ್ಟನ್ನು ನಿರ್ಮಿಸುವ ಕೆಲಸವಾಗುತ್ತದೆ. ಶಿಕ್ಷಣವನ್ನು ಕುರಿತು ಕನ್ನಡದ ದಿನಪತ್ರಿಕೆಗಳಿಗೆ ಬಿಡಿ ಲೇಖನಗಳನ್ನು ಬರೆದು ಆಗಿಂದಾಗ್ಗೆ ಕಳಿಸುತ್ತಿದ್ದೆ. ಅಲ್ಲದೆ ಬಿ ಫಸ್ಟ್ (BFirst) ಎಂಬ ಇಂಗ್ಲಿಷ್ ಆನ್‌ಲೈನ್ ಪತ್ರಿಕೆಗೆ 2016ರ ಫೆಬ್ರವರಿಯಿಂದ 2018ರ ಆಗಸ್ಟ್‌ವರೆಗೆ ನಿಯತವಾಗಿ ಶಾಲಾ ಶಿಕ್ಷಣವನ್ನು ಕುರಿತು ಅಂಕಣ ಬರಹಗಳನ್ನು ಬರೆದೆ. ಕರ್ನಾಟಕವನ್ನು ಮೀರಿ ಹೊರ ರಾಜ್ಯ ಹಾಗೂ ದೇಶಗಳಲ್ಲಿದ್ದ ಓದುಗರಿಗೂ ಈ ಪತ್ರಿಕೆ ತಲುಪುತ್ತಿದ್ದುದರಿಂದ ನನ್ನ ಬರಹಗಳು ಇಂಗ್ಲಿಷ್‌ನಲ್ಲೇ ಇರಬೇಕಾದ ಅನಿವಾರ್ಯತೆಯಿತ್ತು. ಈ ಎರಡೂ ಬಗೆಯ ಲೇಖನಗಳನ್ನು ಸಂಗ್ರಹಿಸಿ, ಹೊತ್ತಗೆಯ ರೂಪದಲ್ಲಿ ಕನ್ನಡದ ಓದುಗರಿಗೆ ಪ್ರಸ್ತುತಪಡಿಸಬೇಕೆಂಬ ತುಮುಲವಿದ್ದುದರಿಂದ, ಇಂಗ್ಲಿಷ್ ಅಂಕಣ ಬರಹಗಳನ್ನು ಕನ್ನಡದ ಜಾಯಮಾನಕ್ಕೆ ಒಗ್ಗುವಂತೆ ಅನುವಾದಿಸಿರುವುದಲ್ಲದೆ, ಮೂಲ ಕನ್ನಡದಲ್ಲಿ ಪ್ರಕಟವಾದ ಲೇಖನಗಳನ್ನು ಇವುಗಳೊಂದಿಗೆ ಸೇರಿಸಿ, ಎಲ್ಲಾ ಲೇಖನಗಳನ್ನು ಸಂಕಲಿಸಿ, ವಿಷಯವಾರು ವಿಂಗಡಿಸಿರುವ ಪ್ರಯತ್ನದ ಫಲವಾಗಿ ಈ ಕೃತಿ ಮೂಡಿಬಂದಿದೆ.

ಹೆಚ್ಚು ಕಡಿಮೆ ಪಾಕ್ಷಿಕವಾಗಿ ಒಮ್ಮೆ ಪ್ರಕಟವಾಗುತ್ತಿದ್ದ ಅಂಕಣ ಬರಹಗಳು ಶಾಲಾ ಶಿಕ್ಷಣದ ವಿವಿಧ ಆಯಾಮಗಳ ಮೇಲೆ ಗಮನ

ಹರಿಸಿವೆ. ಕ್ಷೇತ್ರ ಭೇಟಿಯಲ್ಲಿ ಗಮನಿಸಿದ ವಿದ್ಯಮಾನಗಳು, ನಡೆಸಿದ ಸಂವಾದಗಳು, ನನ್ನ ಕಾರ್ಯಭಾರದಿಂದ ಪಡೆದ ಒಳನೋಟಗಳೇ ಇಲ್ಲಿನ ವಸ್ತುವಿಷಯಗಳಾಗಿವೆ. ಅಂಕಣ ಬರಹಕ್ಕೆ ಪದಗಳ ಮಿತಿಯಿರುವುದರಿಂದ ಹೇಳಬೇಕಾಗಿರುವುದನ್ನು ನಿರ್ದಿಷ್ಟ ಚೌಕಟ್ಟಿನಲ್ಲಿ ಅಳವಡಿಸಲಾಗಿದೆಯಾದರೂ ವಾದ ಮಂಡನೆಗೆ ಪುಷ್ಟಿಯಾಗಿ ಪೂರಕ ಸಾಹಿತ್ಯದ ಪರಾಮರ್ಶನೆಯನ್ನು ಈ ಬರಹಗಳಲ್ಲಿ ಬಳಸಿರುವುದನ್ನು ಕಾಣಬಹುದಾಗಿದೆ.

ಈ ಲೇಖನಗಳನ್ನು ಮುಕ್ತವಾಗಿ ಬರೆದುದರಿಂದ ಪೂರ್ವನಿರ್ಧರಿತವಾಗಿ ಅವುಗಳನ್ನು ವಿಷಯವಾರು ವಿಂಗಡಿಸಿಕೊಂಡಿರಲಿಲ್ಲ. ಬಿಡಿಲೇಖನಗಳೂ ಸೇರಿ ನಾಲ್ಕೈದು ವರ್ಷ ಅವು ಪ್ರಕಟವಾದ ಮೇಲೆ ಸಹಜವಾಗಿ ಕೆಲವು ನಿರ್ದಿಷ್ಟ ವಿಷಯಗಳಡಿ ಕವಲೊಡೆದವು.

## ಬೋಧನೆ-ಕಲಿಕೆಯೇ ಶಿಕ್ಷಣದ ಮೂಲ ಸೆಲೆ

ವಿದ್ಯಾರ್ಥಿ-ಶಿಕ್ಷಕರ ನಡುವಿನ ಬೋಧನಾ-ಕಲಿಕೆಯ ಅನುಸಂಧಾನವೇ ಶಿಕ್ಷಣದ ಮೂಲ ಸೆಲೆ. ಅದು ನಡೆಯುವುದು ಶಾಲಾ ತರಗತಿಯಲ್ಲಿ. ಈ ಪ್ರಕ್ರಿಯೆಯು ನಿರ್ದಿಷ್ಟ ಗುರಿ-ಉದ್ದೇಶಗಳೊಂದಿಗೆ ಶಾಲೆಯ ಸಾಂಸ್ಥಿಕ ನೆಲೆಯಲ್ಲಿ ಔಪಚಾರಿಕವಾಗಿ ನಡೆಯುತ್ತದೆ. ಶಾಲೆಗಳು ಎಲ್ಲ ವರ್ಗದ ಸಾಮಾಜಿಕ ಹಿನ್ನೆಲೆಯ ಮಕ್ಕಳನ್ನು ಒಳಗೊಂಡು ಅವರಿಗೆ ಗುಣಾತ್ಮಕ ಶಿಕ್ಷಣವನ್ನು ಒದಗಿಸುವ ತಾಣಗಳಾಗಬೇಕಾದುದು ಶಿಕ್ಷಣದ ಮುಖ್ಯ ಆಶಯವಾಗಿದೆ. ಶಿಕ್ಷಣದ ಮೂಲಕ ಅಪೇಕ್ಷಿತ ಸಮಾಜವನ್ನು ನಿರ್ಮಿಸುವ ಮಹತ್ತರವಾದ ಉದ್ದೇಶ ಈ ಆಶಯದ ಭಾಗವಾಗಿದೆ. 'ಶಾಲೆ-ವಿದ್ಯಾರ್ಥಿ-ಕಲಿಕೆ' ಭಾಗದಲ್ಲಿರುವ ಲೇಖನಗಳು ಈ ಆಶಯವು ವಿವಿಧ ಶಾಲೆಗಳಲ್ಲಿ ಪ್ರಕಟವಾಗಿರುವ ಬಗೆಯನ್ನು ಪರಿಶೋಧಿಸುತ್ತವೆ. ಈ ವಿಭಾಗದಲ್ಲಿ ಮೂಡಿಬಂದಿರುವ ಲೇಖನಗಳು ಕಳೆದ ನೂರು ವರ್ಷಗಳಲ್ಲಿ ಆದ ವಿನೂತನ ಶೈಕ್ಷಣಿಕ ಪ್ರಯೋಗ, ಆಚರಣೆಗಳತ್ತ ಮರುನೋಟ ಹರಿಸಿವೆ. ಅವುಗಳಲ್ಲಿ ಒಂದು ಲೇಖನವು ಶಿಕ್ಷಣದ ಕುರಿತಾಗಿ ಕೋಟ ಶಿವರಾಮ ಕಾರಂತರು ಹೊಂದಿದ್ದ ಕಲ್ಪನೆ, ಚಿಂತನೆಗಳು ಈಗಿನ ಕಾಲಕ್ಕೂ ಪ್ರಸ್ತುತವಾಗಿರುವುದರ ಮೇಲೆ ಬೆಳಕು ಚೆಲ್ಲುತ್ತದೆ. ಇನ್ನೊಂದು ಲೇಖನವು ಲೇಖಕರು ಓದಿದ ಮಾಧ್ಯಮಿಕ ಶಾಲೆಯು ಮಕ್ಕಳ ಸಾಮಾಜೀಕರಣದ ವ್ಯಾಪಕ ಪ್ರಕ್ರಿಯೆಯಲ್ಲಿ ತನ್ನ ಪಾತ್ರವನ್ನು ಎಷ್ಟರಮಟ್ಟಿಗೆ ಪೂರೈಸಿತ್ತು ಎನ್ನುವುದನ್ನು ಮುಂದಿಡುತ್ತದೆ. ಇನ್ನುಳಿದ ಲೇಖನಗಳು ಅಂಚಿನಲ್ಲೇ ಉಳಿದಿರುವ ಬೆಂಗಳೂರು ಮಹಾನಗರದ ಹೊರವಲಯದ ಶಾಲಾ ಮಕ್ಕಳ ಸ್ಥಿತಿಗತಿಗಳನ್ನು ಚಿತ್ರಿಸುವುದಲ್ಲದೆ, ಮಕ್ಕಳ ಕಲಿಕೆಯ ಮೇಲೆ ಕೌಟುಂಬಿಕ ಹಿನ್ನೆಲೆಯು ಬೀರುವ ಪರಿಣಾಮವನ್ನು, ಮಕ್ಕಳ ಕುರಿತಾಗಿ ತಳಹಂತದಲ್ಲಿ ಇರುವ ನಂಬಿಕೆಗಳನ್ನು, ಮಕ್ಕಳ ಕುರಿತಾದ ಎರಡು ಜನಪ್ರಿಯ ಚಲನಚಿತ್ರಗಳು ಹಾಗೂ

ಒಂದು ವಾಸ್ತವಿಕ ಯಶೋಗಾಥೆಯ ಮೂಲಕ ವಿಶ್ಲೇಷಣೆಗೆ ಒಡ್ಡುತ್ತವೆ. ಕಥೆ, ಕವನ ಮುಂತಾದ ಸಾಹಿತ್ಯಿಕ ಚಟುವಟಿಕೆಗಳನ್ನು ಪಠ್ಯಕ್ರಮದೊಂದಿಗೆ ಹದವಾಗಿ ಬೆರೆಸುವ ಮೂಲಕ ಮಕ್ಕಳಲ್ಲಿ ಓದುವ ಹವ್ಯಾಸವನ್ನು ಬೆಳೆಸುವ ಬಗೆಗಳನ್ನು ಒಂದು ಲೇಖನ ಚರ್ಚಿಸಿದರೆ, ಕ್ರೀಡೆ ಮತ್ತು ದೈಹಿಕ ಚಟುವಟಿಕೆಯ ಮೂಲಕ ಮಕ್ಕಳನ್ನು ಸಹಕಾರ ಮನೋಭಾವ ಹಾಗೂ ಪರರನ್ನು ಕುರಿತಾದ ಸೂಕ್ಷ್ಮ ಸಂವೇದನೆಯುಳ್ಳ ವ್ಯಕ್ತಿಗಳಾಗಿ ರೂಪುಗೊಳಿಸುವ ಸಾಧ್ಯತೆಯನ್ನು ಇನ್ನೊಂದು ಲೇಖನ ಬಿಚ್ಚಿಡುತ್ತದೆ. ಇದರಲ್ಲಿ ಇತರ ಕಲಾ ಪ್ರಕಾರಗಳ ಕುರಿತಾದ ನೇರ ಚರ್ಚೆಯಿಲ್ಲದಿದ್ದರೂ ಈ ಎಲ್ಲ ಮಾಧ್ಯಮಗಳ ಮೂಲಕವೂ ಮಕ್ಕಳ ಸಮಗ್ರ ಬೆಳವಣಿಗೆಯನ್ನು ಸಾಧಿಸಬಹುದಾದ ಅವಕಾಶಗಳನ್ನು ಕಲ್ಪಿಸಬೇಕಾದ ಅಗತ್ಯವಿದೆ ಎನ್ನುವ ಧ್ವನಿಯಿದೆ. ಮಕ್ಕಳು ಭಾಷೆ, ಗಣಿತ ಮುಂತಾದ ವಿಷಯಗಳಲ್ಲಿ ಸಾಧನೆಗೈದು ಉನ್ನತ ಶಿಕ್ಷಣ ಮತ್ತು ವೃತ್ತಿಯಲ್ಲಿ ಮೇಲಿನ ಸ್ಥಾನವನ್ನು ಪಡೆದಂತೆಯೇ ಕ್ರೀಡೆ, ಕಲೆ ಮುಂತಾದ ಕ್ಷೇತ್ರಗಳಲ್ಲೂ ಭವಿಷ್ಯವನ್ನು ರೂಪಿಸಿಕೊಳ್ಳಲು ಪೋಷಕರು, ಶಿಕ್ಷಕರು ಮಕ್ಕಳಿಗೆ ನೆರವಾಗಬೇಕೆಂಬ ಆಶಯವನ್ನು ಈ ಲೇಖನ ಹೊಂದಿದೆ.

ಇನ್ನುಳಿದ ಮೂರು ಲೇಖನಗಳು ಪೋಷಕರು, ಶಿಕ್ಷಕರ ದೃಷ್ಟಿಕೋನಕ್ಕೆ ಸಂಬಂಧಿಸಿದವುಗಳಾಗಿವೆ. ದೈಹಿಕ ಶಿಕ್ಷೆಯನ್ನು ಕುರಿತ ಲೇಖನ ಶಿಶುಸ್ನೇಹಿ ಅಲ್ಲದ ಇಂತಹ ಆಚರಣೆಗಳಿಗೆ ಕಾರಣವಾದ ಸುಪ್ತ ಸಾಮಾಜಿಕ ಮನೋಧೋರಣೆಯನ್ನು, ಕಾನೂನಾತ್ಮಕ ಕ್ರಮಗಳನ್ನು ಮೀರಿದ ಸಾಮಾಜಿಕ ನಂಬಿಕೆಗಳ ಬೇರನ್ನು ಶೋಧಿಸಲು ಪ್ರಯತ್ನಿಸುತ್ತದೆ. ಮತ್ತೊಂದು ಲೇಖನದಲ್ಲಿ, ಸ್ಪರ್ಧಾತ್ಮಕ ಜಗತ್ತಿಗೆ ಅಣಿಗೊಳಿಸುವ ಭರದಲ್ಲಿ ಮಗುವನ್ನು ಸಹಜವಾಗಿ ಬೆಳೆಯುವ ರೀತಿಯಿಂದ ದೂರ ಮಾಡುವುದರ ಜೊತೆಗೆ 'ಅತಿಯಾಗಿ ತೊಡಗಿಸುವ' ಸ್ವಕೇಂದ್ರಿತ ಯಶಸ್ಸಿನ ಮಾದರಿಯೊಂದನ್ನು ಹಿಂಬಾಲಿಸುವ ಸಮಾಜದ 'ಹಿಂಡು ಮನೋಭಾವ'ವನ್ನು ಪ್ರಶ್ನಿಸುತ್ತದೆ. ಇದರ ಮುಂದುವರಿಕೆಯಾಗಿ, ಮಕ್ಕಳನ್ನು ಶ್ರೇಷ್ಠ ಬುದ್ಧಿಮತ್ತೆಯುಳ್ಳ ಅಗ್ರಣಿಗಳನ್ನಾಗಿ ರೂಪಿಸುವುದರ ಹಿಂದಿನ ಮೌಲ್ಯವ್ಯವಸ್ಥೆಯು ವಿಶಾಲ ಸಮಾಜದ ಆಶೋತ್ತರಗಳಿಗೆ ಹೇಗೆ ವಿಮುಖವಾಗಿದೆ ಎನ್ನುವುದನ್ನು ಸೋದಾಹರಣವಾಗಿ ವಿಶ್ಲೇಷಿಸುತ್ತದೆ.

## ಮೂಲ ಉದ್ದೇಶಗಳ ಈಡೇರಿಕೆಗಾಗಿ ಶೈಕ್ಷಣಿಕ ನೀತಿ–ಆಡಳಿತ

ಈ ಹೊತ್ತಗೆಯಲ್ಲಿನ ಎರಡನೆಯ ಭಾಗದಲ್ಲಿನ ಲೇಖನಗಳು 'ಶಿಕ್ಷಣ ನೀತಿಗಳು ಮತ್ತು ಅವುಗಳ ತಳಹದಿಯಲ್ಲಿ ರೂಪುಗೊಳ್ಳುವ ಶೈಕ್ಷಣಿಕ ಆಡಳಿತ ವ್ಯವಸ್ಥೆ'ಯ ಮೇಲೆ ಕೇಂದ್ರೀಕರಿಸಿವೆ. ಶಾಲಾ ಹಂತದ ಶೈಕ್ಷಣಿಕ ಸಾಧನೆಗೆ ಒತ್ತಾಸೆಯಾಗಿ ನಿಂತು ಕಾರ್ಯನಿರ್ವಹಿಸಬೇಕಾದ ಜವಾಬ್ದಾರಿ ಶಿಕ್ಷಣ ಇಲಾಖೆಯದಾಗಿದೆ. ಶಿಕ್ಷಣ ನೀತಿಯನ್ನು ರೂಪಿಸಲು ಎಲ್ಲ ಭಾಗೀದಾರರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ಅತ್ಯಮೂಲ್ಯವಾದ ಸಲಹೆಗಳನ್ನು ಕ್ರೋಡೀಕರಿಸಿ ನೀಡುವುದಲ್ಲದೆ ಅದನ್ನು

ಅರ್ಥಪೂರ್ಣವಾಗಿ ಜಾರಿಗೊಳಿಸಲು ಬೇಕಾದ ಆಡಳಿತಾತ್ಮಕ ಸಿದ್ಧತೆಗಳೊಂದಿಗೆ ವಿವಿಧ ಹಂತಗಳಲ್ಲಿ ಕಾರ್ಯಗತಗೊಳಿಸಬೇಕಾಗುತ್ತದೆ. ಸರ್ಕಾರದ ವಿವಿಧ ಯೋಜನೆ ಮತ್ತು ಕಾರ್ಯಕ್ರಮಗಳನ್ನು ನಿಗದಿತ ವೇಳಾಪಟ್ಟಿಯಂತೆ ಶಾಲೆಗಳ ಮೂಲಕ ಫಲಾನುಭವಿ ಮಕ್ಕಳಿಗೆ ತಲುಪಿಸಬೇಕಾದ ಹೊಣೆಯೂ ವಿವಿಧ ಸ್ತರಗಳಲ್ಲಿ ಕೆಲಸ ಮಾಡುವ ಅಧಿಕಾರಿಗಳದಾಗಿರುತ್ತದೆ. ವಿವಿಧ ಶಾಲಾ ಮಂಡಲಿಗಳ ಆಡಳಿತ ವ್ಯವಸ್ಥೆಯ ಪರಿಧಿಯಲ್ಲಿ ಬರುವ ಶಾಲೆಗಳ ನಿರ್ವಹಣೆಗೆ ನಿಯಮಗಳನ್ನು ರೂಪಿಸಿ, ಅದರ ಉಸ್ತುವಾರಿಯನ್ನು ವ್ಯವಸ್ಥಿತವಾಗಿ ನೋಡಿಕೊಳ್ಳುವುದು, ಇಲಾಖೆಯಲ್ಲಿ ಕಾರ್ಯ ನಿರ್ವಹಿಸುವ ಶಿಕ್ಷಕರು ಮತ್ತು ಇತರ ಸಿಬ್ಬಂದಿವರ್ಗದ ಸೇವಾ ನಿಯಮಗಳ ಪಾಲನೆ ಮತ್ತು ಅನುಷ್ಠಾನ, ಇಡೀ ಶೈಕ್ಷಣಿಕ ಆಡಳಿತ ಯಂತ್ರವು ಶಿಕ್ಷಣದ ಮೂಲ ಉದ್ದೇಶಗಳನ್ನು ಸಾಕಾರಗೊಳಿಸುವುದಕ್ಕೆ ತನ್ನನ್ನು ಮುಡಿಪಾಗಿರಿಸಿಕೊಳ್ಳುವುದು, ಹಾಗೂ ಆ ಉದ್ದೇಶ ಸಾಧನೆಗಾಗಿ ಶಿಕ್ಷಕರು ಮತ್ತು ಶಾಲೆಗೆ ಹತ್ತಿರವಿರುವ ಭಾಗೀದಾರರಿಗೆ ಸ್ಪಂದನಶೀಲವಾಗಿ ನಿಲ್ಲುವುದು, ಇವು ಶೈಕ್ಷಣಿಕ ಆಡಳಿತ ವ್ಯವಸ್ಥೆಯ ಪಾತ್ರವಾಗಿರುತ್ತವೆ. ಶಾಲೆಯ ಮುಖ್ಯೋಪಾಧ್ಯಾಯರಿಂದ ಹಿಡಿದು ಕ್ಲಸ್ಟರ್, ಬ್ಲಾಕ್ ಹಂತಗಳಲ್ಲಿ ಇರುವ ಅಧಿಕಾರಿಗಳು ಶಾಲೆಗಳ ಅಗತ್ಯಗಳಿಗೆ ಅತ್ಯಂತ ಶೀಘ್ರವಾಗಿ ಪ್ರತಿಸ್ಪಂದಿಸುತ್ತಾ, ಶಾಲೆ ಮತ್ತು ಶಿಕ್ಷಕರು ಎದುರಿಸುವ ಬಹುಪಾಲು ಸವಾಲುಗಳನ್ನು ಅಲ್ಲೇ ಬಗೆಹರಿಸಬೇಕು. ಅದು ಹಾಗೆ ಆಗುವ ಹಾಗೆ ಮಾಡುವ, ಅದಕ್ಕೆ ಪೂರಕ ಬೆಂಬಲ ವ್ಯವಸ್ಥೆಯನ್ನು ಏರ್ಪಡಿಸುವ ಜವಾಬ್ದಾರಿ ಜಿಲ್ಲಾ ಹಂತದ ಆಡಳಿತಗಾರರಿಗಿರುತ್ತದೆ. ಇದಕ್ಕೆ ಬೆಂಬಲವಾಗಿ ಇಡೀ ರಾಜ್ಯದ ಶಿಕ್ಷಣ ವ್ಯವಸ್ಥೆಯನ್ನು ಮುನ್ನಡೆಸುತ್ತಾ ಎಲ್ಲಾ ಮಕ್ಕಳಿಗೂ ಗುಣಾತ್ಮಕ ಶಿಕ್ಷಣ ಸಿಗುವುದನ್ನು ಖಾತ್ರಿಪಡಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಿ, ಅಗತ್ಯ ಆರ್ಥಿಕ ಮತ್ತು ಮಾನವ ಸಂಪನ್ಮೂಲವನ್ನು ಒದಗಿಸಿ ಇಡೀ ಸಾಂಸ್ಥಿಕ ವ್ಯವಸ್ಥೆಗೆ ನಾಯಕತ್ವವನ್ನು ನೀಡಬೇಕಾದುದು ರಾಜ್ಯ ಮಟ್ಟದ ಹಿರಿಯ ಅಧಿಕಾರಿಗಳು ಹಾಗೂ ಶಿಕ್ಷಣ ಸಚಿವರದ್ದಾಗಿದೆ. ಇವರು ಕೇಂದ್ರದ ಶಿಕ್ಷಣ ಸಚಿವಾಲಯದೊಂದಿಗೂ ಚಾಕಚಕ್ಯತೆಯಿಂದ ವ್ಯವಹರಿಸಿ, ರಾಜ್ಯದ ಒಳಿತಿಗೆ ಅವರ ಬೆಂಬಲವನ್ನು ಕೂಡ ಪಡೆಯಬೇಕಾಗುತ್ತದೆ. ಈ ಇಡೀ ಶೈಕ್ಷಣಿಕ ಆಡಳಿತ ವ್ಯವಸ್ಥೆಯ ಪಾತ್ರವನ್ನು ಪರಿಮಾಣಾತ್ಮಕ ದೃಷ್ಟಿಕೋನದಿಂದ ನೋಡಿದಾಗ ಅದರ ಅಗಾಧತೆಯ ಅರಿವಾಗುತ್ತದೆ. ರಾಜ್ಯ ಸರ್ಕಾರದ ಒಟ್ಟು ಸುಮಾರು ಆರು ಲಕ್ಷದ ಇಪ್ಪತ್ತು ಸಾವಿರ ಉದ್ಯೋಗಿಗಳಲ್ಲಿ ಶಿಕ್ಷಣ ಇಲಾಖೆಯಡಿಯಲ್ಲಿಯೇ ಸುಮಾರು ಎರಡು ಲಕ್ಷದ ಐವತ್ತು ಸಾವಿರ ಶಿಕ್ಷಕರು, ಅರವತ್ತೈದು ಸಾವಿರ ಶಾಲೆಗಳು, ಒಂದು ಕೋಟಿ ಮಕ್ಕಳು ಬರುತ್ತಾರೆ. ಅಂದರೆ ಶೇ. 40ರಷ್ಟು ಸರ್ಕಾರದ ಉದ್ಯೋಗಿಗಳು ಶಿಕ್ಷಣ ಇಲಾಖೆಯಲ್ಲಿದ್ದಾರೆ. ಈ ಸಂಖ್ಯೆಗೆ, ಶಾಲೆಯು ಬಾಧ್ಯಸ್ಥವಾಗಬೇಕಾದ ಹತ್ತಿರದ ಭಾಗೀದಾರರಾದ ಪೋಷಕರು, ಎಸ್‌ಡಿಎಮ್‌ಸಿ ಮತ್ತು ಸಮುದಾಯವನ್ನು ಸೇರಿಸಿದಲ್ಲಿ ಈ ಇಲಾಖೆಯನ್ನು ನಡೆಸುವಲ್ಲಿನ ಸಂಕೀರ್ಣತೆ ಸ್ಪಷ್ಟವಾಗುತ್ತದೆ.

ಶಿಕ್ಷಣ ಇಲಾಖೆಯ ವಿವಿಧ ಹಂತಗಳಲ್ಲಿ ಕೆಲಸ ಮಾಡುವ ಪ್ರಮುಖ ಅಧಿಕಾರಿಗಳು, ಅವರ ಪಾತ್ರ, ಅವರ ಕಾರ್ಯಭಾರದಲ್ಲಿ ಎದುರಾಗುವ ಸವಾಲುಗಳು ಮತ್ತು ಅವರ ಕಾರ್ಯ ಸುಗಮವಾಗಲು ಆಗಬೇಕಾದ ಬದಲಾವಣೆಗಳು, ಇವು ಇವರಿಗೆ ಸಂಬಂಧಿಸಿದ ಲೇಖನಗಳ ಕೇಂದ್ರ ವಸ್ತು. ನಮ್ಮ ರಾಜ್ಯ ಅಥವಾ ದೇಶದ ಯಾವುದೇ ಬ್ಲಾಕ್‌ನ ಶಿಕ್ಷಣ ಸಂರಚನೆಯನ್ನು ನೋಡಿದಾಗ ಸರಾಸರಿ ಇನ್ನೂರರಿಂದ ಇನ್ನೂರೈವತ್ತು ಶಾಲೆಗಳಿರುತ್ತವೆ. ಪ್ರತಿ ಶಾಲೆಯಲ್ಲಿ ಸರಾಸರಿ ನಾಲ್ಕು ಶಿಕ್ಷಕರು ಎಂದು ಪರಿಗಣಿಸಿದಾಗ ಒಂದು ಸಾವಿರ ಶಿಕ್ಷಕರಿರುತ್ತಾರೆ. ಖಾಸಗಿ ಅನುದಾನರಹಿತ ಶಾಲೆಗಳನ್ನು ಸೇರಿಸದೆಯೂ ಈ ಸಂಖ್ಯೆ ದೊಡ್ಡ ಪ್ರಮಾಣದ್ದು. ಇಡೀ ಬ್ಲಾಕ್‌ನ ಶಿಕ್ಷಣ ವ್ಯವಸ್ಥೆಯ ಮೇಲ್ವಿಚಾರಣೆ ಹೊತ್ತ ಕ್ಷೇತ್ರ ಶಿಕ್ಷಣಾಧಿಕಾರಿ(ಬಿಇಓ)ಯ ಪಾತ್ರ ಅತಿ ಮುಖ್ಯವಾದುದು. ಅವರಿಗೆ ವಿಶಾಲ ದೃಷ್ಟಿಕೋನ, ಆಡಳಿತಾತ್ಮಕ ಮತ್ತು ಶೈಕ್ಷಣಿಕ ಸಾಮರ್ಥ್ಯ, ಸಂಪನ್ಮೂಲ ಕ್ರೋಡೀಕರಣ ಹಾಗೂ ಶಾಲೆಗಳ ಅಗತ್ಯಕ್ಕನುಗುಣವಾಗಿ ಹಂಚಿಕೆ, ಶಾಲೆಯ ಮುಖ್ಯೋಪಾಧ್ಯಾಯರು ಮತ್ತು ಬ್ಲಾಕ್/ಕ್ಲಸ್ಟರ್ ಹಂತದ ಅಧಿಕಾರಿಗಳಿಗೆ ಮಾರ್ಗದರ್ಶನ ನೀಡುವುದರ ಮೂಲಕ ಇಡೀ ಬ್ಲಾಕ್‌ನ ಶೈಕ್ಷಣಿಕ ಪ್ರಗತಿಯನ್ನು ಹೆಚ್ಚಿಸುವುದಕ್ಕೆ ಬದ್ಧತೆಯಿಂದ ಕೆಲಸ ಮಾಡುವುದು; ಜೊತೆಗೆ ತನ್ನ ಕ್ಷೇತ್ರದ ಚುನಾಯಿತ ಪ್ರತಿನಿಧಿಗಳು, ಸಮುದಾಯದ ವಿಶ್ವಾಸವನ್ನು ಗಳಿಸಿ ಶೈಕ್ಷಣಿಕ ಸುಧಾರಣೆಗೆ ಅವರ ಬೆಂಬಲವನ್ನು ಪಡೆಯಬೇಕಾದ ಇನ್ನೊಂದು ಆಯಾಮವನ್ನೂ ಒಳಗೊಂಡಂತೆ ಸಂಬಂಧಿತ ಅಂಶಗಳನ್ನು 'ನಮ್ಮ ಶಿಕ್ಷಕರನ್ನು ವಿಮುಕ್ತಗೊಳಿಸಬೇಕಿದೆ' ಲೇಖನದಲ್ಲಿ ಚರ್ಚಿಸಲಾಗಿದೆ. ಶಾಲೆಗೆ ಹತ್ತಿರದಲ್ಲೇ ಇದ್ದು ಶಿಕ್ಷಕರು ಅವರ ಕಾರ್ಯವನ್ನು ಅತ್ಯಂತ ಸಮರ್ಥವಾಗಿ ನಿಭಾಯಿಸಲು ಅಗತ್ಯ ಶೈಕ್ಷಣಿಕ ನೆರವನ್ನು ಒದಗಿಸಬೇಕಾದ ಜವಾಬ್ದಾರಿ ಬ್ಲಾಕ್ ಮತ್ತು ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಗಳದ್ದು. ಮೂಲತ: ಶಿಕ್ಷಕರೇ ಆಗಿರುವ ಇವರು ಮೂರರಿಂದ ಐದು ವರ್ಷದ ಅವಧಿಗೆ ಸ್ವಇಚ್ಛೆಯಿಂದ ಆಯ್ಕೆಗೊಂಡು ನಿಯೋಜಿತಗೊಂಡಿರುತ್ತಾರೆ. ಆದರೆ ಅವರು ನಿಯೋಜನೆಗೊಂಡ ಉದ್ದೇಶದೊಳಗಿನ ದ್ವಂದ್ವ, ಅಂದರೆ ಶಿಕ್ಷಕರಿಗೆ ಶೈಕ್ಷಣಿಕ ಬೆಂಬಲ ನೀಡುವುದು ಹಾಗೂ ಆಡಳಿತಾತ್ಮಕ ಕೆಲಸಗಳನ್ನು ನಿರ್ವಹಿಸುವುದು, ಇವೆರಡರ ನಡುವಿನ ತಿಕ್ಕಾಟದಲ್ಲಿ ಆಡಳಿತದ ಒತ್ತಡವೇ ಮೇಲಾಗಿ, ಶಿಕ್ಷಕರಿಗೆ ಶೈಕ್ಷಣಿಕ ಬೆಂಬಲ ನೀಡಲು ಬಹುತೇಕ ಎಲ್ಲ ಸಂಪನ್ಮೂಲ ವ್ಯಕ್ತಿಗಳಿಗೆ ಸಾಧ್ಯವಾಗುತ್ತಿಲ್ಲ. ಹಾಗಾಗಿ ಬಿಆರ್‌ಪಿ ಮತ್ತು ಸಿಆರ್‌ಪಿಗಳು ಅಜ್ಞಾತ ಕಾಲಾಳುಗಳಾಗಿರುವುದು ವಾಸ್ತವ ಮತ್ತು ವಿಪರ್ಯಾಸದ ಸಂಗತಿ.

ಆಡಳಿತದ ಶ್ರೇಣೀಕರಣ ವ್ಯವಸ್ಥೆಯಲ್ಲಿ ಮೇಲಿನ ಸ್ತರದಲ್ಲಿದ್ದು ಆಡಳಿತಾತ್ಮಕವಾಗಿ ಪ್ರಮುಖ ನಿರ್ಧಾರಗಳನ್ನು ಕೈಗೊಳ್ಳುವವರು ಐಎಎಸ್ ಅಧಿಕಾರಿಗಳು. ಶಾಲಾ ಶಿಕ್ಷಣ ಇಲಾಖೆಯಲ್ಲಿ ಇಂತಹ ಮೂರು ಸ್ಥಾನಗಳಿದ್ದು ಮೂರು ವಿಭಿನ್ನ ವ್ಯಕ್ತಿಗಳು ಆ ಹುದ್ದೆಗಳನ್ನು ನಿರ್ವಹಿಸುತ್ತಾರೆ. ಇಲಾಖೆಯ ಪ್ರಧಾನ ಕಾರ್ಯದರ್ಶಿ, ಸಾರ್ವಜನಿಕ

ಶಿಕ್ಷಣ ಇಲಾಖೆಯ ಆಯುಕ್ತರು ಮತ್ತು ಯೋಜನಾ ನಿರ್ದೇಶಕರು (ಸಮಗ್ರ ಶಿಕ್ಷಣ). ಈ ಹುದ್ದೆಗಳನ್ನು ನಿರ್ವಹಿಸುವವರು ಎಷ್ಟೇ ಬದ್ಧತೆ ಮತ್ತು ಕ್ಷಮತೆಯನ್ನು ತೋರಿದರೂ, ಅವರು ಅಲಂಕರಿಸುವ ಸ್ಥಾನಗಳ ಕಾಲಾವಧಿ ತಾತ್ಕಾಲಿಕ. ಓರ್ವ ಆಯುಕ್ತರೊಂದಿಗೆ ಕೆಲವು ವರ್ಷಗಳ ಕೆಳಗೆ ಶೈಕ್ಷಣಿಕ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮದ ಸಂಪನ್ಮೂಲ ವ್ಯಕ್ತಿಗಳನ್ನು ನಿಗದಿತ ಅವಧಿಯವರೆಗೂ ಉಳಿಸಿಕೊಳ್ಳಬೇಕೆಂಬ ಪ್ರಸ್ತಾಪವನ್ನು ಮುಂದಿಟ್ಟುಕೊಂಡು ಚರ್ಚಿಸಿದ ಸಮಯದಲ್ಲಿ, ತಮ್ಮದೇ ನಿದರ್ಶನವನ್ನು ಕೊಡುತ್ತ, ಅವರು ತಮ್ಮ ಅಧಿಕಾರಾವಧಿ ಅನಿರ್ದಿಷ್ಟವಾದುದೆಂದೂ, ಯಾವುದೇ ಸಮಯದಲ್ಲಿ ವರ್ಗಾವಣೆಯ ತೂಗುಗತ್ತಿ ತಮ್ಮ ಮೇಲೆ ಹರಿದಾಡುತ್ತಿದೆಯೆಂದೂ ಹೇಳಿದ್ದು, ಅಂತಹ ಅಧಿಕಾರಿಗಳು ಯಾವ ಸ್ಥಾನಕ್ಕೂ ಅಂಟಿಕೊಳ್ಳದೆ ನಿರ್ಲಿಪ್ತತೆಯ ಮನಃಸ್ಥಿತಿಯನ್ನು ಬೆಳೆಸಿಕೊಂಡು ಯಾವುದೇ ಸಮಯದಲ್ಲಿ ಬೇರಾವುದೋ ಗೊತ್ತಿಲ್ಲದ ಸ್ಥಾನವನ್ನು ನಿರ್ವಹಿಸಬೇಕಾದ ಅನಿಶ್ಚಿತತೆಯ ನಡುವೆಯೂ ತಮ್ಮ ಹುದ್ದೆಗೆ ನ್ಯಾಯ ಒದಗಿಸಬೇಕಾದ ಅನಿವಾರ್ಯತೆಯನ್ನು ಮತ್ತೊಂದು ಲೇಖನವು ಅವಲೋಕಿಸುತ್ತದೆ. ಇಲಾಖೆಗೆ ಎಂತಹ ಮಹತ್ತರವಾದ ಆಶೋತ್ತರಗಳಿದ್ದರೂ 'ನೀರ ಮೇಲಣ ಗುಳ್ಳೆ'ಯಂತಿದ್ದು ನಿರಂತರತೆಯನ್ನು ಕಾಪಾಡಬೇಕಿರುವುದು ವಿಪರ್ಯಾಸವೇ ಸರಿ.

ಇವೆಲ್ಲದರ ಮಧ್ಯೆ, ಶಿಕ್ಷಣ ಕ್ಷೇತ್ರದ ಸುಧಾರಣೆಗೆ ಉತ್ತಮವಾದ ಕೊಡುಗೆಯನ್ನು ನೀಡಬಲ್ಲ ಸಾಧ್ಯತೆಯಿರುವುದು ಶಿಕ್ಷಕರ ಸಂಘಗಳಿಗೆ. ಅಮರ್ತ್ಯ ಸೇನ್ ತಮ್ಮ ಪ್ರತೀಚಿ ಟ್ರಸ್ಟ್ ಮೂಲಕ ಶಿಕ್ಷಕರ ಸಂಘಗಳೊಂದಿಗೆ ರಚನಾತ್ಮಕ ಸಹಯೋಗದಲ್ಲಿ ಪಶ್ಚಿಮ ಬಂಗಾಳದ ಶಾಲಾ ಶಿಕ್ಷಣ ವ್ಯವಸ್ಥೆಯಲ್ಲಿ ಧನಾತ್ಮಕ ಬದಲಾವಣೆ ತಂದಿರುವುದರ ಹಿನ್ನೆಲೆಯಲ್ಲಿ ಶಿಕ್ಷಕರ ಸಂಘಗಳ ಪಾತ್ರವನ್ನು ಕುರಿತ ಜಿಜ್ಞಾಸೆಯನ್ನು ಕೈಗೊಳ್ಳಲಾಗಿದೆ.

ಈ ಭಾಗದಲ್ಲಿ ಪ್ರಸ್ತುತ ಪಡಿಸಲಾಗಿರುವ ಎರಡು ಲೇಖನಗಳಲ್ಲಿ, ಶಿಕ್ಷಣ ಇಲಾಖೆಯ ಸುಪರ್ದಿಗೆ ನೇರವಾಗಿ ಸೇರದ ಬಿಬಿಎಮ್‌ಪಿ ಶಾಲೆ ಹಾಗೂ ಮೊರಾರ್ಜಿ ವಸತಿ ಶಾಲೆಗಳ ಬಗೆಗಿನ ಒಳನೋಟಗಳಿವೆ. ಈ ಶಾಲೆಗಳನ್ನು ನಡೆಸುತ್ತಿರುವ ವ್ಯವಸ್ಥೆಯಲ್ಲಿನ ವಾಸ್ತವಿಕತೆಗಳತ್ತ ದೃಷ್ಟಿ ಹಾಯಿಸುತ್ತ, ಅವುಗಳ ಸಬಲೀಕರಣಕ್ಕೆ ನೆರವಾಗಬಲ್ಲ ಅಂಶಗಳನ್ನು ಇವು ಮುಂದಿಡುತ್ತವೆ. ಮೇಲಾಗಿ, ಸರ್ಕಾರದ ಯಾವುದೇ ಇಲಾಖೆಯಡಿಯಲ್ಲಿ ಸಾರ್ವಜನಿಕ ಶಾಲೆಗಳು ನಡೆಯುತ್ತಿರಲಿ, ಅವುಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವವರು ಸಮಾಜದ ಅತ್ಯಂತ ಹಿಂದುಳಿದ ಮತ್ತು ಅವಕಾಶವಂಚಿತ ವರ್ಗಗಳ ಮಕ್ಕಳು. ಇಂತಹ ಶಾಲೆಗಳನ್ನು ಸಮರ್ಪಕವಾಗಿ ನಿರ್ವಹಿಸದೆ ಇದ್ದರೆ, ಸವಲತ್ತುಗಳಿಲ್ಲದಿರುವವರ ಕಡೆಗಣನೆಯನ್ನು ಇನ್ನೂ ತೀವ್ರಗೊಳಿಸಿದಂತಾಗುತ್ತದೆ.

ನೆರೆಯ ಕೇರಳ ರಾಜ್ಯದ ಸರ್ಕಾರ, ಅದು ಯಾವ ಪಕ್ಷದ್ದಾದರೂ ಆಗಿರಲಿ, ಸರ್ಕಾರಿ ಶಾಲೆಗಳ ಸಬಲೀಕರಣಕ್ಕೆ ಬಲವಾದ ಕಾರಣಗಳಿರುವ ಹಿನ್ನೆಲೆಯಲ್ಲಿ ಸಮುದಾಯದ ಸಹಯೋಗದೊಂದಿಗೆ ಹೆಚ್ಚು ಮುತುವರ್ಜಿ ವಹಿಸಿ, ಶ್ರಮಿಸುತ್ತಿದೆ. ಪರಿಣಾಮವಾಗಿ ಅಲ್ಲಿನ ಶಾಲೆಗಳಲ್ಲಿ ಸಾಪೇಕ್ಷವಾಗಿ ಹೆಚ್ಚಿನ ಪ್ರಮಾಣದ ಮಕ್ಕಳನ್ನು ಉಳಿಸಿಕೊಂಡು ಗುಣಾತ್ಮಕ ಶಿಕ್ಷಣ ನೀಡುತ್ತಿರುವುದು ಅಲ್ಲಿನ ಕೆಲವು ಜಿಲ್ಲೆಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ವ್ಯಕ್ತವಾಯಿತು. ಸಮುದಾಯದ ಜಾಗರೂಕತೆಗೆ ಶಿಕ್ಷಣ ಪದ್ಧತಿಯೂ ಕಾರಣವಾಗಿದೆ. ಅಲ್ಲಿ ಕಂಡ ಉತ್ತಮ ಆಚರಣೆಗಳನ್ನು ಚರ್ಚಿಸುತ್ತಾ ಅವುಗಳಲ್ಲಿ ಕೆಲವನ್ನಾದರೂ ನಮ್ಮ ರಾಜ್ಯದಲ್ಲಿ ಅನುಷ್ಠಾನಗೊಳಿಸಬಹುದಾದ ಸಾಧ್ಯತೆಯನ್ನು 'ಕೇರ್ಳ ಮಾದರಿ'ಯ ಕುರಿತಾದ ಲೇಖನ ಮಾಡುತ್ತದೆ. ಮತ್ತೊಂದು ಲೇಖನದಲ್ಲಿ ಸಾಮಾಜಿಕ-ಶೈಕ್ಷಣಿಕ ನೆಲೆಗಳಿಂದ ಅವಜ್ಞೆಗೆ ಗುರಿಯಾಗಿರುವ ಈಶಾನ್ಯ ಕರ್ನಾಟಕದ ಭಾಗದಲ್ಲಿನ ಶೈಕ್ಷಣಿಕ ಸುಧಾರಣೆಗೆ ಸಮಗ್ರ ಯೋಜನೆಯನ್ನು ರೂಪಿಸಬೇಕಾದ ಅಗತ್ಯತೆಯನ್ನು ಗುರುತಿಸುತ್ತ, ವಿಶೇಷವಾಗಿ ನಿರ್ದಿಷ್ಟ ನೀತಿ ಮತ್ತು ಆಡಳಿತಾತ್ಮಕ ಕ್ರಮಗಳನ್ನು ಕೈಗೊಳ್ಳಲು ಸಹಾಯಕವಾಗುವಂತೆ ವಿಶದೀಕರಿಸಲಾಗಿದ.

ಇನ್ನುಳಿದ ಲೇಖನಗಳು ಒಟ್ಟಾರೆ ನೀತಿನಿರೂಪಣೆ, ಆಡಳಿತಾತ್ಮಕ ನಿರ್ಣಯಗಳಿಗೆ ಸಂಬಂಧಿಸಿದವುಗಳಾಗಿವೆ. ಶಿಕ್ಷಣ ವ್ಯವಸ್ಥೆಯ ಜಟಿಲ ಸಮಸ್ಯೆಗಳಿಗೆ ಶಿಕ್ಷಕರನ್ನೇ ಗುರಿ ಮಾಡುವ ಪ್ರವೃತ್ತಿ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಾಗುತ್ತಿದೆ. ಮಾಧ್ಯಮಗಳು ಕೂಡ ಯಾವಾಗಲಾದರೂ ಅಲ್ಲಲ್ಲಿ ನಡೆಯುವ ಒಂದೆರಡು ಅವಘಡ, ಘಟನೆಗಳನ್ನೇ ವೈಭವೀಕರಿಸುತ್ತಾ ಶಿಕ್ಷಕರು ಸವಾಲುಗಳ ನಡುವೆಯೂ ಮಕ್ಕಳ ಬೆಳವಣಿಗೆಗೆ ಮಾಡುತ್ತಿರುವ ಪ್ರಯತ್ನ ಹಾಗೂ ತೋರುತ್ತಿರುವ ಬದ್ಧತೆಯನ್ನು ಕಂಡೂ ಕಾಣದಂತೆ ಪಕ್ಕಕ್ಕೆ ಸರಿಸುತ್ತವೆ. ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕರ ಗೈರು ಹಾಜರಾತಿಯ ಪ್ರಮಾಣ ಏರುತ್ತಿದೆಯೆಂಬ ನಿರೂಪಣೆಯನ್ನು ಪುಷ್ಟೀಕರಿಸಲಾಗುತ್ತಿರುವ ಬೆಳವಣಿಗೆಯು ಶಿಕ್ಷಕರ ಮೇಲೆ ಗೂಬೆ ಕೂರಿಸುವ ವ್ಯಾಪಕ ಮನೋಧೋರಣೆಯ ಫಲಶ್ರುತಿಯಾಗಿದೆ. ಈ ವಿಷಯದಲ್ಲಿನ ವಾಸ್ತವಾಂಶವನ್ನು, ಅಂದರೆ ಶಿಕ್ಷಕರ ಕಾರಣರಹಿತ ಗೈರುಹಾಜರಾತಿಯ ಪ್ರಮಾಣವು ಕೇವಲ ಶೇ. 2.5ರಷ್ಟು ಎಂಬುದನ್ನು ವಿಸ್ತೃತ ಸಂಶೋಧನೆಯ ಆಧಾರದಲ್ಲಿ ಬೆಳಕಿಗೆ ತರುವ ಪ್ರಯತ್ನವನ್ನು ಇನ್ನೊಂದು ಲೇಖನ ಮಾಡುತ್ತದೆ. ಪ್ರಾಥಮಿಕ ಶಿಕ್ಷಣದಲ್ಲಿ ಇಂಗ್ಲಿಷ್ ಭಾಷೆಯ ಉಪಯುಕ್ತತೆ ಮತ್ತು ಮೌಲ್ಯವನ್ನು ಸರ್ಕಾರಿ ಶಾಲೆಗಳಲ್ಲಿ ಕಡೆಗಣಿಸದೆ ಅದರ ಸ್ಥಾನಕ್ಕೆ ಅತಿಯಾದ ಒತ್ತನ್ನು ನೀಡುವುದು ಸಮಂಜಸವಲ್ಲ ಎಂಬುದನ್ನು 'ದೇಸಿಯ ಉಳಿವು' ಕುರಿತ ಲೇಖನವು ಮುಂದಿಡುತ್ತದೆ. ತನ್ನ ವಾದಕ್ಕೆ ಪೂರಕವಾಗಿ ಕೆಲವು ಮುಂದುವರೆದ ದೇಶಗಳಲ್ಲಿನ ಆಚರಣೆಗಳು ಹಾಗೂ ಸ್ವಯಂ ಲೇಖಕರ ತಂದೆಯವರು ಕೆಲವು ದಶಕಗಳ ಹಿಂದೆ ನಡೆಸುತ್ತಿದ್ದ ಕನ್ನಡ ಮಾಧ್ಯಮ ಶಾಲೆಯೊಂದರ ಅನುಭವವನ್ನಾಧರಿಸುತ್ತದೆ. ಕೆಲವು ವಿದ್ಯಾರ್ಥಿಗಳಿಗೆ ಸಾಮಾಜಿಕ ಮತ್ತು ಕೌಟುಂಬಿಕ ಕಾರಣಗಳಿಂದಾಗಿ ಕನಿಷ್ಠ

ಕಲಿಕೆಯ ಮಟ್ಟವನ್ನು ತಲುಪಲು ಆಗುವುದಿಲ್ಲ. ಅವರನ್ನು ಅನುತ್ತೀರ್ಣಗೊಳಿಸುವ ಬದಲು ನಿರಂತರ ಮತ್ತು ಸಮಗ್ರ ಮೌಲ್ಯಮಾಪನದ ಮೂಲಕ ವಿವಿಧ ಹಂತಗಳಲ್ಲಿ ಅವರದೇ ಆದ ಗತಿಯಲ್ಲಿ ಕಲಿಕೆಯ ಮಟ್ಟವನ್ನು ಗಳಿಸಿಕೊಳ್ಳಲು ಮಕ್ಕಳಿಗೆ ನೆರವಾಗಬೇಕೆಂಬ ಆಶಯವನ್ನು ವ್ಯಕ್ತಪಡಿಸುವ ಲೇಖನವು ಅನುತ್ತೀರ್ಣರಹಿತ ನೀತಿಯನ್ನು ಹಿಂಪಡೆಯುವ ಕ್ರಮವು ಅನುಕೂಲಕರವಲ್ಲದ ವಾತಾವರಣವನ್ನು ಸೃಷ್ಟಿಸುತ್ತದೆ ಎಂಬುದನ್ನು ತೋರಿಸುತ್ತದೆ. ಮೌಲ್ಯಮಾಪನಕ್ಕೆ ಸಂಬಂಧಿಸಿದ ಇನ್ನೊಂದು ಲೇಖನವು ತೆರೆದ ಪುಸ್ತಕ ಪರೀಕ್ಷೆಯು ಹೇಗೆ ವಿದ್ಯಾರ್ಥಿಗಳ ಉನ್ನತ ಕೌಶಲಗಳನ್ನು ಪರೀಕ್ಷಿಸುವಂತಿದ್ದು ಅದಕ್ಕೆ ಪೂರ್ವಭಾವಿಯಾಗಿ ಶಿಕ್ಷಕರು ತಮ್ಮ ಬೋಧನಾ ಕಲಿಕೆ ಪ್ರಕ್ರಿಯೆಯಲ್ಲಿ ಮಾಡಿಕೊಳ್ಳಬೇಕಾದ ಪೂರ್ವಸಿದ್ಧತೆಯ ಕುರಿತು ಗಮನ ಹರಿಸುತ್ತದೆ.

ಈ ಭಾಗದ ಲೇಖನಗಳಲ್ಲಿ ಮಂಡಿಸಿರುವ ವಾದಕ್ಕೆ ಪೂರಕವಾಗಿ ಶಿಕ್ಷಣವನ್ನು ಕುರಿತಾದ ತೇಜಸ್ವಿಯವರ ದೇಸಿ ಚಿಂತನೆಯನ್ನೂ, ಅಮೆರಿಕಾದ ಶಾಲಾ ಶಿಕ್ಷಣ ವ್ಯವಸ್ಥೆಯ ಮಾದರಿಯ ಸಾಧಕ-ಬಾಧಕವನ್ನು ಕುರಿತಾದ ಚರ್ಚೆಯನ್ನೂ ಕಡೆಯಲ್ಲಿ ಇರಿಸಲಾಗಿದೆ. ಇವುಗಳ ಒಟ್ಟು ಆಶಯ, ಪ್ರಸ್ತುತ ಶಾಲೆಗಳ ಸ್ಥಿತಿ-ಗತಿಗಳನ್ನು ಪ್ರಾಮಾಣಿಕವಾಗಿ ಅವಲೋಕಿಸಿ, ಅವುಗಳ ಸುಧಾರಣೆಗೆ ಅಗತ್ಯವಾದ ನೀತಿಗಳನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ರೂಪಿಸುವುದು ಹಾಗೂ ಇಡೀ ಆಡಳಿತಾತ್ಮಕ ಯಂತ್ರವನ್ನು ಶಾಲೆಗಳ ಸಬಲೀಕರಣಕ್ಕೆ ಮುಡಿಪಾಗಿರುವಂತೆ ಸಜ್ಜುಗೊಳಿಸುವುದೇ ಆಗಿದೆ.

**ಶಿಕ್ಷಕರ ಶಿಕ್ಷಣ – ಅಂದು, ಇಂದು, ಮುಂದು**

ಶಿಕ್ಷಣದಲ್ಲಿ ಶಿಕ್ಷಕನ ಪಾತ್ರ ಅನನ್ಯವಾದದ್ದು. ಮಕ್ಕಳ ಭವಿಷ್ಯವನ್ನು ರೂಪಿಸುವಲ್ಲಿ ಪೋಷಕರಷ್ಟೇ ಶಿಕ್ಷಕರೂ ಮಹತ್ವದ ಪಾತ್ರವನ್ನು ವಹಿಸುತ್ತಾರೆ. ಕುಟುಂಬದ ವಾತಾವರಣವು ಅನುಕೂಲಕರವಲ್ಲದ ಅನೇಕ ಸಂದರ್ಭಗಳಲ್ಲಿ ಶಿಕ್ಷಕರು ಮಕ್ಕಳ ಬಗ್ಗೆ ಹೆಚ್ಚಿನ ಆಸ್ಥೆ ವಹಿಸಿ, ಅವರ ಆರೈಕೆ ಮತ್ತು ಬೆಳವಣಿಗೆಗೆ ಸೂಕ್ತ ಕಾಳಜಿ ವಹಿಸಬೇಕಾಗುತ್ತದೆ. 'ಶಿಕ್ಷಕರ ಶಿಕ್ಷಣ' ಭಾಗದಲ್ಲಿನ ಲೇಖನಗಳು ಶಿಕ್ಷಕರ ವೃತ್ತಿ ಬದುಕಿನ ಎಲ್ಲ ಪ್ರಸ್ತುತ ಆಯಾಮಗಳನ್ನೂ ಶೋಧಿಸಲು ಯತ್ನಿಸುತ್ತವೆ. ಭವಿಷ್ಯದ ರೂಪುರೇಷೆಯು ಹಿಂದಿನಿಂದ ಆದ ಬೆಳವಣಿಗೆಯನ್ನು ಇವತ್ತಿನ ದಿನಮಾನದಲ್ಲಿ ಅಳವಡಿಸಿಕೊಂಡು ರೂಪಿಸಿಕೊಳ್ಳುವ ಬಗೆಯನ್ನು ಅವಲಂಬಿಸಿರುತ್ತದೆ. ಈ ಕಾರಣದಿಂದ ಶಿಕ್ಷಕ ಶಿಕ್ಷಣ ಕ್ಷೇತ್ರದ ಸಮಗ್ರ ತಿಳುವಳಿಕೆಗಾಗಿ ಅದರ ದೀರ್ಘಕಾಲಿಕ ಬೆಳವಣಿಗೆಯನ್ನು ಐತಿಹಾಸಿಕ ದೃಷ್ಟಿಕೋನದಿಂದ ನೋಡುವುದು ವಿಹಿತವಾಗುತ್ತದೆ. ಈ ಭಾಗದ ಒಂಬತ್ತು ಲೇಖನಗಳಲ್ಲಿ ಮೊದಲೆರಡು ಲೇಖನಗಳು ಈ ಕ್ಷೇತ್ರದ ಐತಿಹಾಸಿಕ ಬೆಳವಣಿಗೆಗಳನ್ನು ಅವಲೋಕಿಸುತ್ತವೆ. ಆ ಮೂಲಕ ಇಂದಿನ ಸ್ಥಿತಿ-ಗತಿಗಳಿಗೆ ಕಾರಣವಾದ ಚಾರಿತ್ರಿಕ ಚಲನೆಗಳನ್ನು ಗ್ರಹಿಸುತ್ತಾ, ಶಿಕ್ಷಕರ ಮೇಲಿನ

ಸಮಾಜದ ನಿರೀಕ್ಷೆಗಳಿಗೂ ವಾಸ್ತವಿಕ ಸಾಧನೆಗಳಿಗೂ ಏರ್ಪಟ್ಟಿರುವ ಸಂಬಂಧ, ವ್ಯತ್ಯಾಸಗಳನ್ನು ಗುರುತಿಸುತ್ತವೆ. ಈ ಅವಲೋಕನಕ್ಕೆ ಆಕರಗಳಾಗಿ ಆಯಾ ಕಾಲದ ಶಿಕ್ಷಣ ತಜ್ಞರು, ಸಾಹಿತಿಗಳು, ಇತಿಹಾಸಕಾರರ ಒಳನೋಟಗಳನ್ನು ಬಳಸಿಕೊಳ್ಳಲಾಗಿದೆ.

ಈ ಹಿನ್ನೆಲೆಯಲ್ಲಿ ಮೊದಲನೆಯ ಲೇಖನವು ಹತ್ತೊಂಬತ್ತನೇ ಶತಮಾನದ ಸಾಮಾಜಿಕ ಪರಿಸರದಲ್ಲಿ ವಿವಿಧ ಕಾಲಘಟ್ಟಗಳಲ್ಲಿ ಶಿಕ್ಷಕರ ಮೇಲಿರಿಸಿದ ನಿರೀಕ್ಷೆಗಳು, ಅವರ ಅಪೇಕ್ಷಿತ ವಿದ್ಯಾರ್ಹತೆ ಮತ್ತು ಗುಣಲಕ್ಷಣಗಳಲ್ಲಿ ಆದ ಬದಲಾವಣೆಗಳು. ಶಿಕ್ಷಕರಾಗಬಯಸುವವರು ಬೆಳೆಸಿಕೊಳ್ಳಬೇಕಾದ ವ್ಯಕ್ತಿತ್ವ ಮತ್ತು ಮನೋಧೋರಣೆಗಳತ್ತ ದೃಷ್ಟಿಹರಿಸುತ್ತದೆ. ಶೈಕ್ಷಣಿಕ ಚರಿತ್ರೆಯ ಈ ಜಿಜ್ಞಾಸೆಯೊಂದಿಗೆ ಶಿಕ್ಷಕರನ್ನು ರೂಪಿಸುವ ಸಾಂಸ್ಥಿಕ ಸ್ವರೂಪದ ವಿಶ್ಲೇಷಣೆ ಹಾಗೂ ಅಂತಹ ಸ್ವರೂಪದ ಮೂಲಕ ಶಿಕ್ಷಕರ ಮೇಲಿನ ಆಶಯಗಳು ಯಾವ ಪ್ರಮಾಣದಲ್ಲಿ ಈಡೇರಿದ್ದವು ಎನ್ನುವುದರತ್ತಲೂ ಗಮನವನ್ನು ಕೇಂದ್ರೀಕರಿಸಲಾಗಿದೆ. ಮೊದಲನೆಯ ಲೇಖನದ ದೀರ್ಘ ಇತಿಹಾಸದ ಎಳೆಯನ್ನು ಮುಂದುವರೆಸಿರುವ ಎರಡನೆಯ ಲೇಖನವು ಕರ್ನಾಟಕದಲ್ಲಿ ಸೇವಾಪೂರ್ವ ಶಿಕ್ಷಕರ ಶಿಕ್ಷಣದ ಚಲನೆಯನ್ನು ವಿಶ್ಲೇಷಿಸುತ್ತದೆ. ಮುಂದುವರೆದು, ಸಂಕೀರ್ಣಗೊಳ್ಳುತ್ತಿರುವ ಬೋಧನಾ ಕಾರ್ಯಕ್ಕೆ, ಸೇವಾನಿರತ ಶಿಕ್ಷಕರ ವೃತ್ತಿ ಬೆಳವಣಿಗೆಗೆ ಇರುವ ಅವಕಾಶ ಮತ್ತು ಸಾಧ್ಯತೆಗಳನ್ನು ಪರ್ಯಾಲೋಚಿಸುತ್ತದೆ. ಈ ಮೂಲಕ ಒಟ್ಟಾರೆ ಶಿಕ್ಷಕರ ನಿರಂತರ ವೃತ್ತಿಪರ ಬೆಳವಣಿಗೆಯ ಸ್ವರೂಪವನ್ನು ಕುರಿತು ಮರುಚಿಂತಿಸಬೇಕಾದ ಅಗತ್ಯತೆಯನ್ನು ಮನಗಾಣಿಸುತ್ತದೆ.

ಸಾಮಾನ್ಯವಾಗಿ ವಿವಿಧ ಕ್ಷೇತ್ರಗಳಲ್ಲಿ ಸುಧಾರಣೆಗಾಗಿ ನಡೆಯುವ ಸೈದ್ಧಾಂತಿಕ, ಸಾಮಾಜಿಕ ಹೋರಾಟಗಳು ಕಾನೂನಾತ್ಮಕ ಬದಲಾವಣೆಯ ರೂಪದಲ್ಲಿ ಮನುಷ್ಯನ ಅಪೇಕ್ಷಿತ ಸ್ಥಿತಿಯನ್ನು ಕಾಣಬಯಸುತ್ತವೆ. ಕಳೆದೆರಡು ದಶಕಗಳಲ್ಲಿ ಈ ಬಗೆಯ ಬೇಡಿಕೆ/ ಹೋರಾಟಗಳಿಂದಾಗಿ ಭಾರತದಲ್ಲಿ ಉದ್ಯೋಗ ಖಾತ್ರಿ ಯೋಜನೆ, ಮಾಹಿತಿ ಹಕ್ಕು ಕಾಯಿದೆ, ಶಿಕ್ಷಣ ಹಕ್ಕು ಕಾಯಿದೆ, ಆಹಾರ ಹಕ್ಕು ಕಾಯಿದೆಗಳಂಥ ಮಹತ್ವದ ಶಾಸನಗಳು ಅನುಷ್ಠಾನಗೊಂಡಿವೆ. ಇದೇ ಧಾಟಿಯಲ್ಲಿ ಶಿಕ್ಷಕರ ಶಿಕ್ಷಣವನ್ನು ಕುರಿತಂತೆ ಮಹತ್ವದ ಬದಲಾವಣೆಗಳಾಗಿವೆ. 2014ರಲ್ಲಿ ಬೋಧನೆಯ ಗುಣಮಟ್ಟವನ್ನು ಉತ್ತಮಪಡಿಸುವುದಕ್ಕೆ ಶಿಕ್ಷಕರ ಶಿಕ್ಷಣದ ಮಾದರಿಯಲ್ಲಾದ ಬದಲಾವಣೆಯಿಂದಾಗಿ ಬಿಎಡ್ ಮತ್ತು ಎಮ್ಎಡ್ ಕೋರ್ಸ್‌ಗಳ ಅವಧಿಯನ್ನು ಹೆಚ್ಚಿಸಲಾಯಿತು. ಈ ಸುಧಾರಣೆಯ ಹಿಂದಿನ ನಿರೀಕ್ಷೆಗಳು, ಅದರ ಅನುಷ್ಠಾನದಿಂದ ಉಂಟಾಗುವ ಸಾಧ್ಯತೆಗಳನ್ನು ಚರ್ಚಿಸುತ್ತಾ, ಸರ್ಕಾರ ಮತ್ತು ವಿಶ್ವವಿದ್ಯಾಲಯಗಳು ಕೈಗೊಳ್ಳಬೇಕಾದ ಸಾಂಸ್ಥಿಕ ನೆಲೆಗಟ್ಟಿನ ಕ್ರಮಗಳ ಮೇಲೆ ಇನ್ನೊಂದು ಲೇಖನವು ಬೆಳಕು ಚೆಲ್ಲುತ್ತದೆ. ಈ ಬದಲಾವಣೆಯನ್ನು ಪ್ರಮುಖ ಶಿಕ್ಷಣ ಸಂಸ್ಥೆಗಳಲ್ಲಿ ಜಾರಿಗೊಳಿಸಿರುವ ಬಗೆಯನ್ನು ತೆರೆದಿಟ್ಟಿರುವ ಮತ್ತೊಂದು ಲೇಖನವು ಈ ಬಗೆಯ ಕಳಪೆ ಗುಣಮಟ್ಟದ ಶಿಕ್ಷಕರ ಶಿಕ್ಷಣ ಕಾರ್ಯಕ್ರಮದ ಮೂಲಕ ಹಾದು ಬರುವ

ಶಿಕ್ಷಕರ ಕೃಪೆಯಲ್ಲಿ ಕಲಿಯಬೇಕಾದ ಬಡಪಾಯಿ ವಿದ್ಯಾರ್ಥಿಗಳ ಮೇಲೆ ಬೀರುವ ನೇರ ಪರಿಣಾಮದ ಬಗ್ಗೆ ಗಂಭೀರವಾದ ಎಚ್ಚರಿಕೆಯನ್ನು ಮುಂದಿಡುತ್ತದೆ.

ಸೇವಾಪೂರ್ವ ಅವಧಿಯಲ್ಲಿ ಶಿಕ್ಷಕರ ತಯಾರಿಯು ಸದೃಢವಾಗಿರದ ಕಾರಣ, ಸೇವಾನಿರತ ಶಿಕ್ಷಕರ ವೃತ್ತಿಪರ ಅಭಿವೃದ್ಧಿಯು ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಕಳೆದ ನಾಲ್ಕೈದು ವರ್ಷಗಳಲ್ಲಿ ಕರ್ನಾಟಕದಲ್ಲಿ ಸೇವಾನಿರತ ಶಿಕ್ಷಕರ ಅಭಿವೃದ್ಧಿಯ ವಿಷಯದಲ್ಲಿ ಮಹತ್ತರ ಸುಧಾರಣೆಗಳಾಗಿರುವುದು ರಾಷ್ಟ್ರದ ಗಮನವನ್ನು ಸೆಳೆದಿದೆ. ಇದರ ಮಹತ್ವವನ್ನರಿತು ಮೂರು ಲೇಖನಗಳನ್ನು ಈ ವಿಷಯದ ಮೇಲೆಯೇ ಕೇಂದ್ರೀಕರಿಸಲಾಗಿದೆ. ಸ್ವತಃ ಲೇಖಕರು ಈ ಬದಲಾವಣೆ ಪ್ರಕ್ರಿಯೆಯ ಭಾಗವಾಗಿದ್ದರಿಂದಲೂ ಈ ವಿಷಯವನ್ನು ನಿಕಟವಾಗಿ ಪರ್ಯಾಲೋಚಿಸಲು ಪ್ರೇರಣೆ ದೊರಕಿದೆ.

ಇಡೀ ಸೇವಾನಿರತ ಶಿಕ್ಷಕರ ವೃತ್ತಿಪರ ಅಭಿವೃದ್ಧಿಯನ್ನು ಮರುರೂಪಿಸಿ, ಶಿಕ್ಷಕರಿಗೆ ತಾವು ಯಾವ ವಿಷಯದಲ್ಲಿ ಕ್ಷಮತೆಯನ್ನು ಸಾಧಿಸಬೇಕೆಂಬ ಆಯ್ಕೆಯ ನಿರ್ಧಾರವನ್ನು ಅವರಿಗೇ ನೀಡುವುದರಿಂದ ಹಿಡಿದು, ಸಂಪನ್ಮೂಲ ವ್ಯಕ್ತಿಗಳ ಆಯ್ಕೆ ಮತ್ತು ಬೆಳವಣಿಗೆ, ತರಬೇತಿ ಸಾಹಿತ್ಯ ರಚನೆಯ ಪ್ರಕ್ರಿಯೆ, ಕಾರ್ಯಾಗಾರಗಳ ಆಯೋಜನೆ ಮತ್ತು ಗುಣಮಟ್ಟ ಹಾಗೂ ತರಗತಿಕೋಣೆಯಲ್ಲಿ ಇವುಗಳು ಅನುಷ್ಠಾನಗೊಳ್ಳುವವರೆಗೆ ಎಲ್ಲ ಹಂತಗಳಲ್ಲಿ ಆದ ಬದಲಾವಣೆಗಳ ಜಾಡನ್ನು ಈ ಲೇಖನಗಳು ಧನಾತ್ಮಕವಾಗಿಯೇ ಚಿತ್ರಿಸುತ್ತವೆ. 'ನೀರಸವಾದ, ಏಕತಾನತೆಯಿಂದ ಕೂಡಿದ, ಪ್ರೇರಣಾತ್ಮಕವಾಗಿರದ ಶಾಲಾ ಬೋಧನೆಗೆ ಉಳಿದೆಲ್ಲವುಗಳ ಜೊತೆ ಶಿಕ್ಷಕರ ಕಳಪೆ ಗುಣಮಟ್ಟವೇ ಕಾರಣ' ಹಾಗೂ 'ಶಿಕ್ಷಣದ ಗುಣಾತ್ಮಕ ಸುಧಾರಣೆಗೆ ಶಿಕ್ಷಕರ ವೃತ್ತಿಪರ ಶಿಕ್ಷಣ ಕಾರ್ಯಕ್ರಮವು ಉತ್ತಮವಾಗಿರಬೇಕಾದುದು ಅತ್ಯಂತ ಅವಶ್ಯಕ' ಎಂದು 1968ರಷ್ಟು ಹಿಂದೆಯೇ ಕೊಠಾರಿ ಶಿಕ್ಷಣ ಆಯೋಗವು ಗಮನಿಸಿತ್ತಾದರೂ ಕರ್ನಾಟಕ ಸರ್ಕಾರವು ದೀರ್ಘಕಾಲದಿಂದ ನಿರೀಕ್ಷಿಸುತ್ತಿದ್ದ ಸುಧಾರಣೆಗೆ 2016–17ರಲ್ಲಿ 'ಗುರುಚೇತನ' ಕಾರ್ಯಕ್ರಮದ ಮೂಲಕ ಚಾಲನೆ ನೀಡಿತು.

ಯಾವುದೇ ದೀರ್ಘಕಾಲಿಕ, ಸುಸ್ಥಿರ ಬದಲಾವಣೆಗೆ ಆರಂಭದಲ್ಲಿ ಒದಗುವ ಕಾಣ್ಕೆ, ಬದ್ಧತೆ ಮತ್ತು ಉತ್ಸಾಹಗಳಷ್ಟೇ ಸಾಕಾಗುವುದಿಲ್ಲ. ಗುಣಾತ್ಮಕ ಬದಲಾವಣೆಯು ಸಾಂಸ್ಥಿಕ ರೂಪದಲ್ಲಿ ನೆಲೆಗೊಂಡು ಶಿಕ್ಷಕರ ಆಚರಣೆ ಮತ್ತು ಮಕ್ಕಳ ಕಲಿಕಾ ಮಟ್ಟದಲ್ಲಿ ಪ್ರತಿಫಲಿತವಾಗಬೇಕಾದರೆ ಶಿಕ್ಷಣ ಇಲಾಖೆಯ ಆಡಳಿತ ವ್ಯವಸ್ಥೆಯಲ್ಲಾಗುವ ಬದಲಾವಣೆಯ ಹೊರತಾಗಿಯೂ ಹಿರಿಯ ಅಧಿಕಾರಿಗಳ ನಿರಂತರ ಬೆಂಬಲದ ಮುಂದುವರಿಕೆ, ಅಗತ್ಯ ಸಂಪನ್ಮೂಲಗಳಾದ ಸಮರ್ಥ ಸಂಪನ್ಮೂಲ ವ್ಯಕ್ತಿಗಳು ಮತ್ತು ಹಣಕಾಸಿನ ಲಭ್ಯತೆ, ಡಿಎಸ್‌ಇಆರ್‌ಟಿ, ಡಯಟ್, ಸಿಟಿಇ ಗಳಂಥ ಸಂಸ್ಥೆಗಳಲ್ಲಿ ಈ ಕಾರ್ಯಕ್ರಮದ ಗುಣಮಟ್ಟವನ್ನು ಕಾಪಾಡುವಲ್ಲಿ ಸಕ್ರಿಯ ಪಾತ್ರ ಹಾಗೂ ಬ್ಲಾಕ್

ಮತ್ತು ಕ್ಲಸ್ಟರ್ ಹಂತಗಳಲ್ಲಿ ತರಬೇತಿ ಹೊಂದಿದ ಶಿಕ್ಷಕರಿಗೆ ಬೆಂಬಲ ನೀಡುವುದು ಇವೇ ಮುಂತಾದ ಕ್ರಮಗಳು ಅಗತ್ಯವಾಗಿವೆ. ಇದರ ಜೊತೆಗೆ ಕಾರ್ಯಕ್ರಮದ ಆಯ್ಕೆಯ ಕುರಿತು ಕೇಂದ್ರದ ಶಿಕ್ಷಣ ಸಚಿವಾಲಯವು ರಾಜ್ಯಗಳಿಗೆ ಸ್ವಾಯತ್ತತೆಯನ್ನು ನೀಡಿ ಬೇರಾವುದೇ ಕಾರ್ಯಕ್ರಮವನ್ನು ಮೇಲಿನಿಂದ ಹೇರುವ ಪರಿಪಾಠವನ್ನು ತಪ್ಪಿಸಬೇಕು.

ಈ ಭಾಗದ ಕಡೆಯ ಎರಡು ಲೇಖನಗಳಲ್ಲಿ ಒಂದು, ಅಮೆರಿಕದ ಶಿಕ್ಷಕ ಶಿಕ್ಷಣ ಕಾರ್ಯಕ್ರಮದ ಸ್ಥೂಲನೋಟವನ್ನೊದಗಿಸುವ ಮೂಲಕ ಅಲ್ಲಿನ ಉತ್ತಮ ಅಂಶಗಳು ಮತ್ತು ಸವಾಲುಗಳನ್ನು ಅವಲೋಕಿಸುತ್ತದೆ; ಹಾಗೂ ಭಾರತಕ್ಕೆ ಅನ್ವಯವಾಗಬಹುದಾದ ನಿಹಿತಾರ್ಥಗಳನ್ನು ಹೆಕ್ಕಿ ಕೊಡುತ್ತದೆ. ಅಂತಿಮ ಲೇಖನವು ಶಿಕ್ಷಕ ಶಿಕ್ಷಣ ವ್ಯವಸ್ಥೆಯ ಸುಧಾರಣೆಗೆ 1937 ರಿಂದ 2020 ರವರೆಗೆ ಮಾಡಲಾದ ಶಿಫಾರಸುಗಳನ್ನು ವಿಶ್ಲೇಷಿಸುತ್ತಾ ಸಂಬಂಧಿಸಿದ ಆಯೋಗ/ನೀತಿಗಳು ಪ್ರಸ್ತಾಪಿಸಿದ ಬಹು ಮುಖ್ಯ ಅಂಶಗಳು 2020ರ ನೂತನ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಪ್ರತಿಬಿಂಬಿತವಾಗಿರುವುದನ್ನು ವ್ಯಾಖ್ಯಾನಿಸುತ್ತದೆ. ಅಲ್ಲದೆ, ಶಿಕ್ಷಕರ ಪೂರ್ವಸಿದ್ಧತೆಗೆ ಬೇಕಾದ ಅವಧಿಯನ್ನು ನಾಲ್ಕು ವರ್ಷಗಳಿಗೆ ಹೆಚ್ಚಿಸಿರುವುದರ ಹಿಂದಿನ ತಾರ್ಕಿಕ ಕಾರಣವನ್ನು ಅರ್ಥೈಸಿಕೊಳ್ಳುತ್ತಾ, ಶಿಕ್ಷಕರು ವೃತ್ತಿಪರರಾಗಿ ಶಿಕ್ಷಣ ಕ್ಷೇತ್ರಕ್ಕೆ ಮೌಲಿಕ ಕೊಡುಗೆಯನ್ನು ನೀಡುವುದಕ್ಕೆ ಪೂರಕವಾಗಿ ವಿಕಸಿತರಾಗಲು ಶಿಕ್ಷಕ ಶಿಕ್ಷಣ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ತಮ್ಮ ದೃಷ್ಟಿಕೋನ, ಆಲೋಚನೆ ಮತ್ತು ಕಾರ್ಯಾಚರಣೆಯ ಪ್ರಕ್ರಿಯೆಯಲ್ಲಿ ಮೂಲಭೂತ ಬದಲಾವಣೆಗಳನ್ನು ತಂದುಕೊಳ್ಳುತ್ತವೆ ಎಂದು ಆಶಿಸುತ್ತದೆ.

## ಜ್ಞಾನದ ಪುನರ್‌ನಿರ್ಮಾಣ

ಹೊತ್ತಗೆಯ ನಾಲ್ಕನೆಯ ಮತ್ತು ಕಡೆಯ ಭಾಗದಲ್ಲಿ 'ಶೈಕ್ಷಣಿಕ ಅನುವಾದ' ವನ್ನು ಕುರಿತ ಮೂರು ಲೇಖನಗಳಿವೆ. ಗಾತ್ರ ಮತ್ತು ಸಂಖ್ಯೆಯಲ್ಲಿ ಇವು ಕಡಿಮೆಯಾದರೂ ಪದವಿ ಮತ್ತು ಸ್ನಾತಕೋತ್ತರ ಹಂತಗಳಲ್ಲಿ ನೆಲಮೂಲದ ಭಾಷೆಯಲ್ಲಿಯೇ ಗುಣಾತ್ಮಕ ಶಿಕ್ಷಣವನ್ನು ಒದಗಿಸಬೇಕಾದುದರ ಔಚಿತ್ಯ, ಅನುವಾದ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಬೇಕಾದ ವ್ಯಕ್ತಿಗಳ ಸಾಮರ್ಥ್ಯ ಮತ್ತು ಈ ಕಾರ್ಯಕ್ಕೆ ಬೆನ್ನೆಲುಬಾಗಿ ಇರಬೇಕಾದ ಸಾಂಸ್ಥಿಕ ಬೆಂಬಲ ವ್ಯವಸ್ಥೆ, ಈ ಮಹತ್ಕಾರ್ಯದಲ್ಲಿ ಎದುರಾಗುವ ಸವಾಲುಗಳು ಹಾಗೂ ಅವುಗಳ ನಿವಾರಣೆಗೆ ಬಳಸಲಾಗುವ ಪ್ರಕ್ರಿಯೆಗಳನ್ನು ಗಟ್ಟಿಗೊಳಿಸುವುದರತ್ತ ವಿಶ್ವವಿದ್ಯಾಲಯಗಳು ಮತ್ತು ಸರ್ಕಾರಗಳು ವಹಿಸಬೇಕಾದ ಪಾತ್ರದ ಮೇಲೆ ಇವು ಬೆಳಕು ಚೆಲ್ಲುತ್ತವೆ. ಎಲ್ಲ ಹಿನ್ನೆಲೆಗಳಿಂದ ಬಂದ ವಿದ್ಯಾರ್ಥಿಗಳಿಗೂ ಗುಣಾತ್ಮಕ ಉನ್ನತ ಶಿಕ್ಷಣವನ್ನು ದೊರಕಿಸುವ ನ್ಯಾಯಯುತ ಆಶಯದ ಭಾಗವಾಗಿ ವಿಜ್ಞಾನ ಮತ್ತು ಮನೋವಿಜ್ಞಾನದಂತಹ

ವೈವಿಧ್ಯಮಯ ವಿಷಯಗಳ ಆಯ್ದ ಪಠ್ಯಗಳನ್ನು ಕನ್ನಡದಂತಹ ಪ್ರಾದೇಶಿಕ ಭಾಷೆಯಲ್ಲಿ ಅನುವಾದಿಸಿ, ವಿದ್ಯಾರ್ಥಿಗಳಿಗೆ ಲಭ್ಯವಾಗುವಂತೆ ಮಾಡಬೇಕಾಗುತ್ತದೆ. ಆ ಮೂಲಕ ಗಂಭೀರವಾದ ಪರಿಕಲ್ಪನೆಗಳನ್ನು ವಿದ್ಯಾರ್ಥಿಗಳು ಯಥಾರ್ಥವಾಗಿ ಗ್ರಹಿಸುವುದಲ್ಲದೆ ಹೊಸ ಜ್ಞಾನ ಸೃಷ್ಟಿಯ ಪ್ರಕ್ರಿಯೆಯಲ್ಲಿ ಪಾಲ್ಗೊಂಡು ಸಮಾಜಕ್ಕೆ ಉಪಯುಕ್ತ ಕೊಡುಗೆಯನ್ನು ನೀಡಬಲ್ಲವರಾಗುತ್ತಾರೆ. ಈ ಎರಡು ಪ್ರಮುಖ ವಿಷಯಗಳಲ್ಲಿ ಸಕ್ರಿಯವಾಗಿ ನಡೆಯುತ್ತಿರುವ ಅನುವಾದ ಪ್ರಕ್ರಿಯೆಯ ಅನುಭವದ ಹಿನ್ನೆಲೆಯಲ್ಲಿ ಎರಡು ಲೇಖನಗಳು ಮೂಡಿಬಂದಿವೆ. ಇವು ಸಾಂಸ್ಥಿಕ ನೆಲೆಯಲ್ಲಿ ನಡೆಯುತ್ತಿರುವ ವಿಸ್ತೃತ ಮತ್ತು ಆಳವಾದ 'ಜ್ಞಾನದ ಪುನರ್‌ನಿರ್ಮಾಣ' ಕಾರ್ಯದ ಸಾಂಕೇತಿಕ ರೂಪವಷ್ಟೆ. ಜ್ಞಾನಸೃಷ್ಟಿಯ ಭಾಗವಾಗಿ ಆಗಬೇಕಾಗಿರುವ ಇನ್ನೊಂದು ಮಹತ್ವದ ಕೆಲಸವೆಂದರೆ, ತಲಸ್ತರದ ಅನುಭವಗಳನ್ನು ಆಧರಿಸಿ ನಮ್ಮ ಭಾಷೆಯಲ್ಲೇ ಹೊಸದಾಗಿ ಶೈಕ್ಷಣಿಕ ಸಾಹಿತ್ಯವನ್ನು ರಚಿಸುವುದು. ಕಾರ್ಯಕ್ಷೇತ್ರದಲ್ಲಿ ತೊಡಗಿರುವ ಶಿಕ್ಷಕರು ಮತ್ತು ಆಸಕ್ತ ವೃತ್ತಿಪರರಿಂದ ಪ್ರಸ್ತುತ ಮತ್ತು ಆಸಕ್ತಿದಾಯಕ ವಿಷಯದ ಸುತ್ತ ಸಂಶೋಧನಾತ್ಮಕ ಪ್ರಬಂಧಗಳನ್ನು ಬರೆಯಲು ಪ್ರೇರೇಪಿಸಿ, ಸಮಾನ ವೇದಿಕೆಯಲ್ಲಿ ಪ್ರಸ್ತುತಪಡಿಸುವುದು, ಇಂತಹ ಶೈಕ್ಷಣಿಕ ಬರವಣಿಗೆಗೆ ಬೇಕಾದ ಸೂಕ್ತ ಬೆಂಬಲ ಮತ್ತು ಮಾರ್ಗದರ್ಶನವನ್ನು ನೀಡುವುದು, ಮಂಡಿತವಾದ ವಿಷಯದ ಕುರಿತು ಆರೋಗ್ಯಪೂರ್ಣ ಸಂವಾದವನ್ನೇರ್ಪಡಿಸುವುದು, ಈ ರೀತಿ ಹೊರಹೊಮ್ಮಿದ ಅತ್ಯುತ್ತಮ ಪ್ರಬಂಧಗಳನ್ನು ಪರಿಷ್ಕರಿಸಿ ಸಂಕಲಿಸುವುದು, ಹಾಗೂ ಸಂಕಲಿತ ಕೃತಿಯನ್ನು ವಾಚಿಕೆಯ ರೂಪದಲ್ಲಿ ಪ್ರಕಟಿಸಿ ವಿದ್ಯಾರ್ಥಿಗಳು, ಶಿಕ್ಷಕರು ಮತ್ತು ಇತರ ಆಸಕ್ತ ಓದುಗರಿಗೆ ತಲುಪಿಸುವುದು – ಇಂತಹ ವಿನೂತನ ಪ್ರಯತ್ನದ ಮೇಲೆ ಗಮನಹರಿಸಿರುವುದು ಇನ್ನೊಂದು ಲೇಖನ. ಸಾಹಿತ್ಯ ಮುಂತಾದ ಸೃಜನಾತ್ಮಕ ಕೃತಿಗಳ ಅನುವಾದಕ್ಕಿಂತ ವಿಭಿನ್ನ ಆಯಾಮವುಳ್ಳ ಶೈಕ್ಷಣಿಕ ಅನುವಾದದ ಮಹತ್ವದ ಪಾತ್ರವನ್ನು ಮನಗಂಡು ನೂತನ ರಾಷ್ಟ್ರೀಯ ಶಿಕ್ಷಣ ನೀತಿಯು, ಈ ಕಾರ್ಯಕ್ಕೆ ಹೆಚ್ಚಿನ ಒತ್ತನ್ನು ನೀಡಿರುವುದು ಕಾಕತಾಳೀಯ ಸಂಗತಿಯೇನಲ್ಲ.

**ಯಾರಿಗಾಗಿ**

ಈ ಕೃತಿಯಲ್ಲಿನ ಬರಹಗಳು ಶಿಕ್ಷಕರು, ಶೈಕ್ಷಣಿಕ ಅಧಿಕಾರಿಗಳು, ಶಿಕ್ಷಕ ಶಿಕ್ಷಕರು, ಉನ್ನತ ಹಂತದಲ್ಲಿ ಶಿಕ್ಷಣವನ್ನು ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳು, ಶಿಕ್ಷಣ ಕ್ಷೇತ್ರದ ಸುಧಾರಣೆಗಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಸಂಸ್ಥೆ–ವ್ಯಕ್ತಿಗಳು ಹಾಗೂ ಶಿಕ್ಷಣದಲ್ಲಿ ಆಸಕ್ತಿ ಹೊಂದಿದವರು, ಹೀಗೆ ಬಹುವಿಧದ ಓದುಗರಿಗೂ ಉಪಯುಕ್ತವಾಗಿದ್ದು ಆರೋಗ್ಯಪೂರ್ಣ ಚರ್ಚೆಗೆ ಕಾರಣವಾಗುತ್ತವೆ ಎಂದು ಆಶಿಸಲಾಗಿದೆ.

**– ಎಸ್.ವಿ.ಮಂಜುನಾಥ್**

# ಕೃತಜ್ಞತೆಗಳು

- **ಪತ್ರಿಕಾ ಸಂಪಾದಕರು–** ಈ ಹೊತ್ತಗೆಯ ಬಹುತೇಕ ಲೇಖನಗಳನ್ನು ಪ್ರಕಟಿಸಿದ ವಿವಿಧ ದಿನಪತ್ರಿಕೆಗಳ ಸಂಪಾದಕರಿಗೆ. ವಿಶೇಷವಾಗಿ ನವೀನ್ ಅಮ್ಮೆಂಬಳ (ಪ್ರಸ್ತುತ ಉದಯವಾಣಿ ಪತ್ರಿಕೆಯ ಬೆಂಗಳೂರು ಆವೃತ್ತಿಯ ಸಹ ಸಂಪಾದಕರು) ಮತ್ತು ಆಲ್ವಿನ್ ಮೆಂಡೊನ್ಸಾ ಅವರಿಗೆ – Bfirst ಆನ್‌ಲೈನ್ ಪತ್ರಿಕೆಯಲ್ಲಿ ನನ್ನ ಅಂಕಣ ಬರಹಗಳನ್ನು ಪ್ರಕಟಿಸಿದ್ದಕ್ಕಾಗಿ; ಅಲ್ಲದೆ ಪ್ರಜಾವಾಣಿ, ವಿಜಯವಾಣಿ, ವಿಜಯ ಕರ್ನಾಟಕ, ಆಂದೋಲನ ದಿನಪತ್ರಿಕೆಗಳ ಸಂಪಾದಕರಿಗೆ ಲೇಖನಗಳನ್ನು ಪ್ರಕಟಿಸಿದ್ದಕ್ಕಾಗಿ.
- **ಆತ್ಮೀಯ ಪ್ರೇರಕರು–** ಬರೆಯಲು ಪ್ರೇರಿಸಿದ್ದಲ್ಲದೆ ಮೂಲ ಇಂಗ್ಲಿಷ್ ಬರಹಗಳ ಮೊದಲ ಓದುಗರಾಗಿ ತಿದ್ದುಪಡಿಗಳನ್ನು ಸೂಚಿಸಿದ ಬಾಳ ಸಂಗಾತಿ ಅಪರ್ಣಾ ಮತ್ತು ಮಗ ನರೇನ್. ಹಾಗೆಯೇ ಕನ್ನಡದ ಬರಹಗಳನ್ನು ಮುತುವರ್ಜಿಯಿಂದ ಓದಿ, ಅಚ್ಚುಕಟ್ಟಾಗಿ ತಿದ್ದಿಕೊಟ್ಟ ತಾಯಿಸಮಾನರಾದ ಅತ್ತೆ ದಿ. ಇಂದು ರಮೇಶ್.

  ಬರವಣಿಗೆಯನ್ನು ಉತ್ತೇಜಿಸಿದ ಅನುರಾಗ್ ಬೆಹಾರ್, ದಿಲೀಪ್ ರಂಜೇಕರ್ ಮತ್ತು ಆನಂದ್ ಸ್ವಾಮಿನಾಥನ್ ಹಾಗೂ ಇಲ್ಲಿನ ಬಹುತೇಕ ಬರಹಗಳಿಗೆ ಸೂಕ್ತ ಸಲಹೆಗಳನ್ನಿತ್ತ ಸಹೋದ್ಯೋಗಿಗಳಾದ ಎಸ್. ಗಿರಿಧರ್, ಇಂದು ಪ್ರಸಾದ್, ಹೃದಯಕಾಂತ್ ದಿವಾನ್, ಪಿ. ಮನೋಜ್, ವೇಣು ನಾರಾಯಣ್, ಸುಧೀಶ್ ವೆಂಕಟೇಶ್, ಶರದ್ ಸುರೆ ಅವರಿಗೆ.
- **ಕೃತಿ ಮೌಲ್ಯವನ್ನು ಹೆಚ್ಚಿಸಿದವರು–** ಕನ್ನಡದ ಸಹೃದಯರಿಗೆ ನನ್ನ ಆಲೋಚನೆಗಳನ್ನು ತಲುಪಿಸಬೇಕೆಂಬ ಅಭೀಪ್ಸೆಯನ್ನು ಸಾಕಾರಗೊಳಿಸಲು ಹಲವು ಲೇಖನಗಳನ್ನು ಆಸ್ಥೆಯಿಂದ ಅನುವಾದಿಸಿ ಕೊಟ್ಟಿದ್ದಲ್ಲದೆ, ಕೃತಿರಚನೆಯ ಎಲ್ಲ ಹಂತಗಳಲ್ಲೂ ವಿಶೇಷ ಕಾಳಜಿಯಿಂದ ತೊಡಗಿಕೊಂಡು ಸಹಕರಿಸಿದ ಸಹನಾ ಹೆಗಡೆಯವರು. ಭಾಷೆ, ಅನುವಾದದ ಬಗೆಗಿನ ಅವರ ಕಾಳಜಿ ನಿಜಕ್ಕೂ ಹೆಮ್ಮೆಯ ಸಂಗತಿ. ಅಂತೆಯೇ ಲೇಖನಗಳ ಸಂಕಲನ, ಮರುವಿನ್ಯಾಸಕ್ಕೆ ನೆರವಾದ ಮೈಥಿಲಿ ರಘುಪತಿ.

ಬರಹಗಳನ್ನು ಕೂಲಂಕಷವಾಗಿ ಓದಿ, ಮೌಲಿಕ ಸಲಹೆಗಳನ್ನಿತ್ತು ಬೆಂಬಲಿಸಿದ ಬಾಲ್ಯದ ಗೆಳೆಯ, ಸಾಹಿತಿ ಡಿ.ವಿ.ಪ್ರಹ್ಲಾದ್, ನನ್ನೆಲ್ಲ ಕ್ರಿಯಾತ್ಮಕ ಕಾರ್ಯಗಳನ್ನು ಬೆನ್ನುತಟ್ಟಿ ಹುರಿದುಂಬಿಸುತ್ತಿರುವ ನನ್ನ ಗುರುಗಳೂ, ಶ್ರೇಷ್ಠ ಕವಿಗಳೂ ಆದ ಎಚ್.ಎಸ್.ವೆಂಕಟೇಶಮೂರ್ತಿಯವರು, ಕಥೆಗಾರ-ವಿಮರ್ಶಕರಾದ ಕೆ.ಸತ್ಯನಾರಾಯಣ ಅವರು, ಶಿಕ್ಷಣ ಇಲಾಖೆಯ ಆಡಳಿತದ ವಿವಿಧ ಹಂತಗಳಲ್ಲಿ ತಮ್ಮದೇ ವಿಶಿಷ್ಟ ಛಾಪನ್ನು ಮೂಡಿಸಿರುವ ಹಿರಿಯ ಐಎಎಸ್ ಅಧಿಕಾರಿ ಮತ್ತು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಕೆಲಸ ಕಾರ್ಯಗಳನ್ನು ಹುರಿದುಂಬಿಸುತ್ತಿರುವ ಜಿ.ಕುಮಾರ್ ನಾಯಕ್ ಅವರು, ಸಹೋದ್ಯೋಗಿ-ಚಿಂತಕರಾದ ನಾರಾಯಣ.ಎ, ದಶಕಗಳಿಂದಲೂ ಅಭಿವೃದ್ಧಿ, ಶಿಕ್ಷಣ ಕ್ಷೇತ್ರಗಳಲ್ಲಿ ಸೇವಾನಿರತರಾದ ಮಿತ್ರರಾದ ಉಮಾಶಂಕರ್ ಪೆರಿಯೋಡಿಯವರು, ಶಿಕ್ಷಣ ಕ್ಷೇತ್ರದಲ್ಲಿ ಅದರಲ್ಲೂ ನೀತಿ ನಿರೂಪಣೆಯಲ್ಲಿ ಆಸ್ಥೆಯಿಂದ ತೊಡಗಿಕೊಂಡಿರುವ ಸಹೋದ್ಯೋಗಿ ಮಿತ್ರರಾದ ರಿಷಿಕೇಶ್ ಬಿ.ಎಸ್., ಶಿಕ್ಷಕ ಕಾಯಕದಲ್ಲಿ ಬದ್ಧತೆಯನ್ನು ಮೆರೆಯುವ ಸಂವೇದನಾಶೀಲ ಗೆಳೆಯರಾದ ಶಿವಕುಮಾರ್. ಎಸ್ ಇವರೆಲ್ಲರೂ ತಮ್ಮ ಅನಿಸಿಕೆಗಳನ್ನು ಬರಹರೂಪದಲ್ಲಿ ಕಳುಹಿಸಿರುವುದು ಪ್ರೋತ್ಸಾಹಕಾರಿಯಾಗಿದೆ.

ಎಲ್ಲಕ್ಕೂ ಕಳಸಪ್ರಾಯವಾಗಿ, ಕೃತಿಗೆ ಅರ್ಥಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟ ಜಿ.ಎಸ್.ಜಯದೇವ ಅವರು. ದೀನಬಂಧು ಸಂಸ್ಥೆಯ ಮೂಲಕ ದೀರ್ಘ ಕಾಲದಿಂದಲೂ ಕಡೆಗಣಿಸಲ್ಪಟ್ಟ ಕುಟುಂಬಗಳ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ನೀಡುತ್ತಿರುವುದಲ್ಲದೆ, ಸರ್ಕಾರಿ ಶಾಲೆಗಳ ಶ್ರೇಯೋಭಿವೃದ್ಧಿಗೆ, ನೆಲ ಮೂಲದ ಸಂಸ್ಕೃತಿಯನ್ನು ಜೀವಂತವಾಗಿರಿಸಲು ಶ್ರಮಿಸುತ್ತಿದ್ದಾರೆ. ಕೃತಿಯ ಬಗ್ಗೆ ಅವರ ಸದಭಿಪ್ರಾಯದ ನುಡಿಯು ಕೃತಕೃತ್ಯತೆಯ ಭಾವವನ್ನು ಮೂಡಿಸುತ್ತದೆ.

- **ಕೃತಿ ರಚನೆಗೆ ಕೈಜೋಡಿಸಿದವರು**- ಆತ್ಮೀಯ ಸಹೋದ್ಯೋಗಿ ಮಿತ್ರರು - ಆನಂದ.ಎನ್, ದಿನೇಶ್ ಮಡಗಾಂವ್‌ಕರ್, ಮಹೇಶ್‌ಕುಮಾರ್ ಸಿ.ಎಸ್, ಮಧುಕರ ಪುಟ್ಟಿ ಹಾಗೂ ಅಂಕಣ ಬರಹಗಳು ಬೆಳಕು ಕಾಣಲು ನೆರವಾದ ಸಮಾಜಮುಖಿ ಗೆಳೆಯ ಶೇಕ್ ಜಿನ್ನಾ.
- **ಕೃತಿ ವಿನ್ಯಾಸ ಮತ್ತು ಪ್ರಕಾಶನಕ್ಕೆ ನೆರವಾದವರು**- ಇಲ್ಲಿನ ಬರಹಗಳನ್ನು ಓದಿ ಅನೇಕ ಉಪಯುಕ್ತ ಸಲಹೆಗಳನ್ನಿತ್ತಿದ್ದೇ ಅಲ್ಲದೆ ತಾವು ತೊಡಗಿಕೊಂಡಿರುವ ಸ್ವಾಮಿ ವಿವೇಕಾನಂದ ಶೈಕ್ಷಣಿಕ ಅನುಸಂಧಾನದ ಮೂಲಕ ಕೃತಿಯನ್ನು ಹೊರತರಲು ವಿಶೇಷ ಆಸಕ್ತಿ ವಹಿಸಿದ ಆ ಸಂಸ್ಥೆಯ ಶೈಕ್ಷಣಿಕ ನಿರ್ದೇಶಕರೂ ಲೇಖಕರೂ ವಿದ್ವಾಂಸರೂ ಆದ ಎಚ್.ಎನ್.ಮುರಳೀಧರ ಅವರಿಗೂ, ಎಂ.ಎಂ. ಪಬ್ಲಿಕೇಷನ್‌ನಿಂದ ಪ್ರಕಟಿಸಲು ಒಪ್ಪಿದ ಹುಲ್‌ಕುಲ್ ಮುನಿಸ್ವಾಮಪ್ಪ

ಮುನಿವೆಂಕಟಮ್ಮ ಚಾರಿಟಬಲ್ ಟ್ರಸ್ಟಿನ ಕಾರ್ಯದರ್ಶಿಗಳಾದ ಶ್ರೀ ಎಂ.ಸಿ.ನರೇಂದ್ರ ಅವರಿಗೂ ನಾನು ಆಭಾರಿಯಾಗಿದ್ದೇನೆ.

ಈ ಕೃತಿಯ ವಿವಿಧ ಪುಟಗಳಲ್ಲಿ ಆಸಕ್ತಿದಾಯಕ ಛಾಯಾಚಿತ್ರಗಳನ್ನು ಬಳಸಲಾಗಿದ್ದು ಇವು ಹಲವು ವರ್ಷಗಳಲ್ಲಿ ನಾನು ಕೈಗೊಂಡ ಕ್ಷೇತ್ರಭೇಟಿಯ ಸಂದರ್ಭಗಳಲ್ಲಿ ತೆಗೆದಂಥವು. ಈ ಚಿತ್ರಗಳು ಕೃತಿಯಲ್ಲಿನ ನನ್ನ ಒಟ್ಟಾರೆ ಆಶಯಗಳಿಗೆ ಪೂರಕವಾಗಿವೆಯಲ್ಲದೆ ವಾಸ್ತವಿಕತೆಯ ನೆಲೆಗಟ್ಟನ್ನು ಒದಗಿಸುತ್ತವೆ. ನನ್ನ ಸಹೋದ್ಯೋಗಿಗಳು ಇವುಗಳಲ್ಲಿ ಅನೇಕವನ್ನು ಕ್ಲಿಕ್ಕಿಸಿದ್ದರೆ, ಇನ್ನು ಕೆಲವನ್ನು ತೆಗೆದದ್ದು ಅನಾಮಧೇಯ ವ್ಯಕ್ತಿಗಳು. ಇವುಗಳನ್ನು ನನ್ನೊಂದಿಗೆ ಹಂಚಿಕೊಂಡ ನನ್ನ ಆತ್ಮೀಯ ಸಹೋದ್ಯೋಗಿಗಳಿಗೆ ನಾನು ಋಣಿ.

ಪುಟಗಳಿಗೆ ಅಚ್ಚುಕಟ್ಟಾಗಿ, ಲೇಖನ ವಿಷಯಗಳಿಗೆ ಹೊಂದುವಂತೆ ರೇಖಾಚಿತ್ರಗಳನ್ನು ಬಿಡಿಸಿಕೊಟ್ಟ ಸಹೋದ್ಯೋಗಿ ಮಿತ್ರ ಶಿವಕುಮಾರ್.ಎಂ ಹಾಗೂ ಯಾದಗಿರಿಯ ಶಹಾಪುರದ ಚಿರಂಜೀವಿ ಪ್ರೌಢಶಾಲೆಯ ಶಿಕ್ಷಕರಾದ ರುದ್ರೇಶ್ ಭಾಸ್ಕರ್ ಅವರಿಗೆ ಕೃತಜ್ಞತೆಗಳು.

ಸ್ನೇಹಿತ ಎಂ.ಆರ್.ಗುರುಪ್ರಸಾದ್ ಅವರು ಈ ಕೃತಿಯನ್ನು ವಿನ್ಯಾಸಗೊಳಿಸಲು ತೋರಿದ ಕಾಳಜಿ ಅಪೂರ್ವವಾದದ್ದು. ಅವರ ಪರಿಶ್ರಮವನ್ನು ಓದುಗರು ಖಂಡಿತ ಮೆಚ್ಚಿಕೊಳ್ಳುವರೆಂಬ ವಿಶ್ವಾಸ ನನ್ನದು.

ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀರಂಗ ಪ್ರಿಂಟರ್ಸ್ ಪ್ರೈ. ಲಿ.ನವರಿಗೆ ನನ್ನ ನಮನಗಳು.

– ಎಸ್‌ವಿಎಂ



# ಪ್ರಕಾಶಕರ ನುಡಿ

ಶ್ರೀ ಎಸ್.ವಿ. ಮಂಜುನಾಥ್ ಅವರ 'ಕಲಿವ ಶಾಲೆಯ ಹಲವು ಮುಖಗಳು' ಕೃತಿಯನ್ನು ಓದುಗರ ಕೈಗಿಡಲು ಸಂತೋಷವೆನಿಸುತ್ತದೆ.

ಶ್ರೀ ಮಂಜುನಾಥ್ ಅವರು ಶಿಕ್ಷಣ ಕ್ಷೇತ್ರದ ಹಲವು ಸಂಗತಿಗಳೊಂದಿಗೆ ತಮ್ಮನ್ನು ತಾವು ಸಕ್ರಿಯವಾಗಿ ತೊಡಗಿಸಿಕೊಂಡವರು. ಅವುಗಳ ಮೂಲ ನೆಲೆಗಳಿಗೆ ಮುಖವಾದವರು. ಹೀಗಾಗಿ ಶಿಕ್ಷಣದ ಬಗೆಗಿನ ಅವರ ಗ್ರಹಿಕೆಗಳು ಕೇವಲ ಪ್ರಮೇಯಾತ್ಮಕವಾಗದೆ ವಾಸ್ತವ ಅನುಭವದ ಗಟ್ಟಿತನದ ಮೇಲೆ ರೂಪುಗೊಂಡಿರುವುದನ್ನು ಗಮನಿಸಬಹುದಾಗಿದೆ. ಇದೇ ಅವರ ಬರೆವಣಿಗೆಗೆ ಅಧಿಕೃತತೆಯನ್ನೂ ತಂದುಕೊಟ್ಟಿದೆ.

ಈ ಕೃತಿ ನಮ್ಮ ಶೈಕ್ಷಣಿಕ ಸನ್ನಿವೇಶದ ಹಲವು ಮುಖಗಳನ್ನು ಸ್ಪರ್ಶಿಸುತ್ತದೆ. ಮುಖ್ಯವಾಗಿ ಗಮನಿಸಬೇಕಾದುದು ಈ ಸ್ಪರ್ಶದ ವಿಶಿಷ್ಟತೆಯ ಕುರಿತಾಗಿಯೇ ಎಂದು ತೋರುತ್ತದೆ.

ಇಲ್ಲಿನ ನಿರೂಪಣೆಯಲ್ಲಿ ಬಹುತೇಕ ಯಾವುದೂ ಒಂದು ವಾದದ ಸ್ವರೂಪದಲ್ಲಿ ಮಂಡಿತವಾಗುವಂತೆ ತೋರುವುದಿಲ್ಲ. ಬದಲಿಗೆ ನಿರುದ್ವಿಗ್ನವಾಗಿ, ನೇರವಾಗಿ ವಸ್ತುವಿವರಗಳನ್ನಷ್ಟೇ ಪ್ರಸ್ತುತಪಡಿಸುತ್ತ ಹೋಗಲಾಗುತ್ತದೆ. ಆದರೆ ಆ ವಸ್ತುವಿವರಗಳಿಂದಲೇ ಇನ್ನೊಂದು ನೆಲೆಯಲ್ಲಿ ಮಂಡನೆಯೊಂದು ಕೂಡ ತನಗೆ ತಾನೇ ನಿಷ್ಪನ್ನವಾಗತೊಡಗುತ್ತದೆ. ಈ ದೃಷ್ಟಿಯಿಂದ ಇದೊಂದು ಬಗೆಯ 'ಪರೋಕ್ಷಮಾರ್ಗ'; ಇದು 'ಹೇಳುವ' ದಾರಿಗಿಂತ ಹೆಚ್ಚಾಗಿ 'ಕಾಣಿಸುವ' ದಾರಿ. ಹೀಗೆ 'ಕಾಣಿಸುವ' ಸನ್ನಿವೇಶಗಳು ಹಲವು ಪ್ರಶ್ನೆಗಳನ್ನು ಹುಟ್ಟುಹಾಕುತ್ತವೆ. ಒಟ್ಟಾರೆಯಾಗಿ ಶೈಕ್ಷಣಿಕ ಸಂದರ್ಭದ ಆತ್ಮಾವಲೋಕನಕ್ಕೆ ಒತ್ತಾಯಿಸುತ್ತವೆ. ಇದು ಅಭಿಪ್ರಾಯಗಳನ್ನು ಮಂಡಿಸುವ ವಿಧಾನಕ್ಕಿಂತ ಬೇರೆಯಾದ, ಅಭಿಪ್ರಾಯಗಳನ್ನು ರೂಪಿಸುವ ವಿಧಾನವಾಗಿರುವುದರಿಂದ ವಿಶಿಷ್ಟವಾಗುತ್ತದೆ.

ವಿದ್ಯಾರ್ಥಿ, ಕಲಿಕೆ, ಬೋಧನೆ, ಶಿಕ್ಷಕ, ತರಬೇತಿ, ಆಡಳಿತ, ಸರ್ಕಾರ, ಯೋಜನೆ ಮೊದಲಾದ ಹಲವು ಮಜಲುಗಳಲ್ಲಿ ಸಂಚರಿಸುವ ಇಲ್ಲಿನ ಬರಹಗಳು ಮುಖ್ಯವಾಗಿ ಸಮುದಾಯಪರವಾದ ಹಾಗೂ ಸಮತೆ ಒಳಗೊಳ್ಳುವಿಕೆಗಳ ಶೈಕ್ಷಣಿಕ ಮಾದರಿಯೊಂದನ್ನು ಒತ್ತಾಯಿಸುತ್ತವೆ. ಮೇಲ್ಪದರಗಳಲ್ಲಿ ಶೀತಲವೆಂದು ತೋರಿದರೂ ಆಳದಲ್ಲಿನ ಕುದಿತವೊಂದು ಸಮಗ್ರ ಬದಲಾವಣೆ, ಮರು-ಕಟ್ಟುವಿಕೆಗಳಿಗಾಗಿ ಹಂಬಲಿಸುವುದನ್ನು ಒಟ್ಟಾರೆಯಾದ ಆಶಯದಲ್ಲಿ ಗುರುತಿಸಬಹುದು. ಇಂದು ಹಲವು ಮನಸ್ಸುಗಳು ಈ ದಿಸೆಯಲ್ಲಿ ಕಾರ್ಯಪ್ರವೃತ್ತವಾಗಿರುವಾಗ ಇಂತಹ ಪ್ರಾತಿನಿಧಿಕ ಬರಹಗಳ ಮೂಲಕ ಶೈಕ್ಷಣಿಕ ಪ್ರಜಾಸತ್ತಾತ್ಮಕತೆಯನ್ನು ಬಲಪಡಿಸಲು ಉದ್ಯುಕ್ತವಾಗಿರುವ ಇಲ್ಲಿನ ನೋಟಗಳಿಗಾಗಿ ಶ್ರೀ ಮಂಜುನಾಥ್ ಅವರಿಗೆ ನಮ್ಮೆಲ್ಲರ ಅಭಿನಂದನೆಗಳು ಸಲ್ಲಬೇಕು.

ಇಂತಹ ಮುಖ್ಯವಾದ ಕೃತಿಯೊಂದನ್ನು ಸ್ವಾಮಿ ವಿವೇಕಾನಂದ ಶೈಕ್ಷಣಿಕ ಅನುಸಂಧಾನದ ಮೂಲಕ ಹೊರತರಲು ಅನುವು ಮಾಡಿಕೊಟ್ಟ ಅವರಿಗೆ ನಾವು ಋಣಿಯಾಗಿದ್ದೇವೆ. ಅಲ್ಲದೆ ಇದನ್ನು ಆಗುಮಾಡಿಸಲು ಗೆಳೆಯರಾದ ಶ್ರೀ ಡಿ.ವಿ.ಪ್ರಹ್ಲಾದ್ ಮತ್ತು ಶ್ರೀ ಸಿ.ಎಸ್.ಮಹೇಶ್‌ಕುಮಾರ್ ಅವರು ಹಲವು ರೀತಿಯಲ್ಲಿ ನೆರವಾಗಿದ್ದಾರೆ. ಈ ಪ್ರಯತ್ನದಲ್ಲಿ ಆತ್ಮೀಯರಾದ ಶ್ರೀ ಜಿ.ಎಸ್.ಜಯದೇವ ಅವರ ಸಾಂಗತ್ಯವೂ ಎಂದಿನಂತೆ ಸೇರಿಕೊಂಡಿದೆ. ಹುಲ್‌ಕುಲ್ ಮುನಿಸ್ವಾಮಪ್ಪ ಮುನಿವೆಂಕಟಮ್ಮ ಚಾರಿಟಬಲ್ ಟ್ರಸ್ಟಿನ ಕಾರ್ಯದರ್ಶಿಗಳಾದ ಶ್ರೀ ಎಂ.ಸಿ. ನರೇಂದ್ರ ಅವರು ಸ್ವಾಮಿ ವಿವೇಕಾನಂದ ಶೈಕ್ಷಣಿಕ ಅನುಸಂಧಾನದ ಪರವಾಗಿ ಎಂ.ಎಂ. ಪಬ್ಲಿಕೇಷನ್‌ನಿಂದ ಪ್ರಕಟಿಸಲು ಪ್ರೀತಿಯಿಂದ ಮುಂದೆ ಬಂದಿದ್ದಾರೆ. ಮಿತ್ರ ಶ್ರೀ ಎಂ.ಆರ್. ಗುರುಪ್ರಸಾದ್ ಅವರು ವ್ರತಧಾರಿಗಳಾಗಿಯೋ ಎಂಬಂತೆ ಅತ್ಯಂತ ವಿಶ್ವಾಸದಿಂದ ಇದನ್ನು ವಿಶಿಷ್ಟವಾಗಿ ವಿನ್ಯಾಸಗೊಳಿಸಿದ್ದಾರೆ. ಶ್ರೀರಂಗ ಪ್ರಿಂಟರ್ಸ್‌ನವರು ಅಚ್ಚುಕಟ್ಟಾಗಿ ಮುದ್ರಿಸಿದ್ದಾರೆ. ಈ ಎಲ್ಲರಿಗೂ ನಮ್ಮ ಧನ್ಯವಾದಗಳು ಸಲ್ಲುತ್ತವೆ.

**– ಎಚ್.ಎನ್. ಮುರಳೀಧರ**
ಶೈಕ್ಷಣಿಕ ನಿರ್ದೇಶಕ
ಸ್ವಾಮಿ ವಿವೇಕಾನಂದ ಶೈಕ್ಷಣಿಕ ಅನುಸಂಧಾನ
ಗೊಟ್ಟಿಗೆರೆ, ಬೆಂಗಳೂರು



# ಪರಿವಿಡಿ

## ಭಾಗ 3: ಶಿಕ್ಷಕರ ಶಿಕ್ಷಣ



## ಭಾಗ 4: ಶೈಕ್ಷಣಿಕ ಅನುವಾದ



# ಪ್ರವೇಶಿಕೆ

## ಪ್ರೇರಣೆಯಾದ ಶಿಕ್ಷಣಕ್ಷೇತ್ರದ ಪಯಣ

ಅಂದು ಆಗಸ್ಟ್ 3, 2009. ಸುಮಾರು ಇಪ್ಪತ್ತು ವರ್ಷಗಳಷ್ಟು ಸುದೀರ್ಘ ಕಾಲ ಕೈಗಾರಿಕಾ ವಲಯದಲ್ಲಿನ ಮಾನವ ಸಂಪನ್ಮೂಲ ಅಭಿವೃದ್ಧಿ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸಿ ಪಡೆದ ಅರಿವು ಹಾಗೂ ಬೆಚ್ಚನೆಯ ಅನುಭವದ ನೆಲೆಯಿಂದ ಅಜ್ಞಾತ ಹಾಗೂ ಅನಿಶ್ಚಿತತೆಯಿಂದ ಕೂಡಿದ ಶಿಕ್ಷಣ ಕ್ಷೇತ್ರಕ್ಕೆ ಅಡಿಯಿರಿಸಿದ ದಿನವದು. ಹೊಸತನ್ನು ಕಲಿಯಬೇಕು, ವಿಶಿಷ್ಟವಾದ ಏನನ್ನಾದರೂ ಸಾಧಿಸಬೇಕು, ಸಮಾಜಕ್ಕೆ ಅರ್ಥಪೂರ್ಣ ಕೊಡುಗೆಯನ್ನು ಸಲ್ಲಿಸಬೇಕು ಎಂಬಂತಹ ಆಲೋಚನೆಗಳು ತಲೆಯಲ್ಲಿ ಗುನುಗುನಿಸುತ್ತಿದ್ದವೇ ಹೊರತು, ನಾನು ಆಗಷ್ಟೇ ಪ್ರವೇಶಿಸುತ್ತಿದ್ದ ಅಭಿವೃದ್ಧಿ ಕ್ಷೇತ್ರವು ಯಾವ ಸ್ವರೂಪದ್ದು, ಎಷ್ಟು ಆಳ ಮತ್ತು ಸಂಕೀರ್ಣವಾದದ್ದು ಎಂಬ ಕಲ್ಪನೆ ನನಗಿರಲಿಲ್ಲ.

### ಮರುಕಲಿಕೆಗೆ ದೊರೆತ ವೇದಿಕೆ

ನಾನು ಸೇರಿದ ಸಂಸ್ಥೆಯು ಅದಾಗಲೇ ಕಳೆದ ಏಳೆಂಟು ವರ್ಷಗಳಿಂದ ಶಿಕ್ಷಣ ಕ್ಷೇತ್ರದಲ್ಲಿ ತಲಸ್ಪರದಲ್ಲಿ ತೊಡಗಿಸಿಕೊಂಡು ಕೆಲಸ ಮಾಡುತ್ತಿತ್ತು. ಅಷ್ಟಲ್ಲದೆ ಅದರ ನಿರ್ದಿಷ್ಟ ಕಾರ್ಯಕ್ರಮಗಳೇನು ಮತ್ತು ಆ ಮೂಲಕ ಅದು ಏನನ್ನು ಸಾಧಿಸಲು ಹೊರಟಿದೆ ಎಂಬ ಸ್ಪಷ್ಟ ಅರಿವು ನನಗಿರಲಿಲ್ಲ. ಆದರೂ ನನ್ನೊಳಗಿನ

ಸ್ವವಿಕಸನದ ತುಡಿತ ಅಲ್ಲಿಯವರೆಗೆ ಕಟ್ಟಿಕೊಂಡಿದ್ದ ಸಂತೃಪ್ತ ಆಸರೆಯ ನೆಲೆಯನ್ನು ಕಳಚಿ, ಮುಕ್ತ ಸಾಧ್ಯತೆಗಳುಳ್ಳ ಬದುಕಿನ ಹೊಸ್ತಿಲಿಗೆ ತಂದು ನಿಲ್ಲಿಸಿತ್ತು. ಕೆಲವು ದಿನ ಕಳೆದಂತೆ, ಆವರೆಗಿನ ವೃತ್ತಿ ಅನುಭವದ ಬುತ್ತಿಯನ್ನು ಬದಿಗಿಟ್ಟು ಎಲ್ಲವನ್ನೂ ಹೊಸದಾಗಿ ಕಲಿಯಬೇಕು, ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಬೇಕಾದರೆ ನನ್ನ ಅನುಭವರಾಹಿತ್ಯ ಮತ್ತು ಪರಿಣತಿಯಿಲ್ಲದ ಸ್ಥಿತಿಯನ್ನು ಮೀರಿ ಹಂತಹಂತವಾಗಿ ತಿಳುವಳಿಕೆಯನ್ನು ಬೆಳೆಸಿಕೊಳ್ಳಬೇಕು, ಆವರೆಗೆ ಕಲಿತಿದ್ದನ್ನು ವರ್ಜಿಸಿ ಮರುಕಲಿಕೆಯಲ್ಲಿ ಉದ್ಯುಕ್ತನಾಗಬೇಕೆಂದು ಮನವರಿಕೆಯಾಯಿತು.

2009ರ ಅವಧಿಯಲ್ಲಿ ಸಂಸ್ಥೆಯು ಶಿಕ್ಷಣ ಇಲಾಖೆಯ ಸಹಯೋಗದಲ್ಲಿ ಕರ್ನಾಟಕದಾದ್ಯಂತ ವಿವಿಧ ಕಾರ್ಯಕ್ರಮಗಳನ್ನು ನಡೆಸುತ್ತಿತ್ತು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಸಿಆರ್‌ಪಿ/ಬಿಆರ್‌ಪಿ ಹಂತದ ಶೈಕ್ಷಣಿಕ ಅಧಿಕಾರಿಗಳ ಕ್ಷಮತೆಯನ್ನು ಬೆಳೆಸಲು ರೂಪಿಸಿದ್ದ 'ಎಮ್‌ಡಿಪಿ' ಕಾರ್ಯಕ್ರಮ. ಇದನ್ನೇ ಮುಂದೆ ಶೈಕ್ಷಣಿಕ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮ (ಇಎಲ್‌ಡಿಪಿ) ಎಂಬ ಹೆಸರಿನಲ್ಲಿ ವಿಸ್ತರಿಸಲಾಯಿತು. ಯಾದಗಿರಿಯ ಸುರಪುರ ತಾಲ್ಲೂಕಿನ ಶಾಲೆಗಳ ಸಮಗ್ರ ಅಭಿವೃದ್ಧಿಗಾಗಿ ರೂಪುಗೊಂಡಿದ್ದ 'ಬಾಲಸ್ನೇಹಿ ಶಾಲಾ ಉಪಕ್ರಮ', ಶಾಲೆ ಮತ್ತು ಸಮುದಾಯದ ನಡುವಿನ ಬಾಂಧವ್ಯವನ್ನು ಗಟ್ಟಿಗೊಳಿಸಲೆಂದು ರಚಿಸಲಾಗಿದ್ದ 'ನಮ್ಮ ಶಾಲೆ' ಕಾರ್ಯಕ್ರಮವೇ ಅಲ್ಲದೆ ಈಶಾನ್ಯ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಹಿಂದಿನ ವರ್ಷಗಳಲ್ಲಿ ಮಕ್ಕಳ ನೈಜ ಕಲಿಕೆಯ ಸಾಮರ್ಥ್ಯವನ್ನು ಒರೆಗೆ ಹಚ್ಚಲು ರೂಪಿಸಿ ಅನುಷ್ಠಾನಗೊಳಿಸಿದ್ದ 'ಕಲಿಕಾ ಖಾತ್ರಿ ಕಾರ್ಯಕ್ರಮ' ತನ್ನ ಅಂತಿಮ ಹಂತದಲ್ಲಿದ್ದಿತು. ಆ ಕಾರ್ಯಕ್ರಮದ ಮೌಲ್ಯಮಾಪನ ನಡೆಯುತ್ತಿದ್ದುದಲ್ಲದೆ ಉತ್ತಮ ಪ್ರದರ್ಶನ ತೋರಿದ್ದ ಶಾಲೆಗಳನ್ನು ಗುರುತಿಸಿ ಸಾರ್ವಜನಿಕವಾಗಿ ಸನ್ಮಾನಿಸಲಾಗುತ್ತಿತ್ತು. ಕರ್ನಾಟಕವಲ್ಲದೆ ಇತರ ಕೆಲವು ರಾಜ್ಯಗಳಾದ ರಾಜಸ್ಥಾನ, ಮಧ್ಯಪ್ರದೇಶ, ಉತ್ತರಾಖಂಡ್, ಮತ್ತು ಗುಜರಾತ್‌ಗಳಲ್ಲೂ ಜಾರಿಗೊಳಿಸಿದ್ದರಿಂದ ಕಲಿಕಾ ಖಾತ್ರಿ ಕಾರ್ಯಕ್ರಮದಿಂದ ಆದ ಕಲಿಕೆಗಳನ್ನು ಸಂಶೋಧನೆಯಿಂದ ತಿಳಿದುಕೊಳ್ಳುವ ಪ್ರಯತ್ನವೂ ಸಾಗಿತ್ತು. ಆಗಿನ ಅವಿಭಜಿತ ಆಂಧ್ರಪ್ರದೇಶದ ಐದು ಜಿಲ್ಲೆಗಳಲ್ಲಿ ಗ್ರಾಮೀಣ ಭಾಗದ ಮಕ್ಕಳ ಶೈಕ್ಷಣಿಕ ಪ್ರಗತಿಯನ್ನು ಅರಿಯಲು ದೀರ್ಘಕಾಲಿಕವಾದ ಸರಣಿ ಸಂಶೋಧನೆಗಳನ್ನು ಕೈಗೊಳ್ಳಲಾಗಿತ್ತು. ಎಮ್‌ಡಿಪಿ ಕಾರ್ಯಕ್ರಮದ ಅನುಭವವನ್ನಾಧರಿಸಿ ಶಾಲಾ ಮುಖ್ಯೋಪಾಧ್ಯಾಯರ ನಾಯಕತ್ವ ಬೆಳವಣಿಗೆಗಾಗಿ ಶಾಲಾ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮದ ರೂಪುರೇಷೆಯನ್ನು ಆಗಷ್ಟೆ ಸಿದ್ಧಗೊಳಿಸಲಾಗುತ್ತಿತ್ತು.

## ಪರ್ವಕಾಲದಲ್ಲಿ ಆಡಿದ ಎರಡನೇ ಇನ್ನಿಂಗ್ಸ್

2001ರಿಂದ ಅಲ್ಲಿಯವರೆಗಿನ ತನ್ನ ಪಯಣದಿಂದ ಗಳಿಸಿದ್ದ ಅನುಭವ/ಕಲಿಕೆಗಳತ್ತ ದೃಷ್ಟಿ ಹಾಯಿಸುತ್ತಾ, ಮುಂಬರುವ ದಶಕಗಳಲ್ಲಿ ಶಿಕ್ಷಣ ಕ್ಷೇತ್ರಕ್ಕೆ ತಾನು ಇನ್ನೂ ದೊಡ್ಡ ಸ್ತರದಲ್ಲಿ ಕೊಡುಗೆ ನೀಡಲು ಫೌಂಡೇಷನ್ ಯೋಜನೆ ರೂಪಿಸುತ್ತಿತ್ತು. ಈ ಕಾರಣಗಳಿಂದ ಅದೊಂದು ಪರ್ವಕಾಲವಾಗಿತ್ತು.

ನನ್ನ ವೃತ್ತಿಜೀವನದ ಎರಡನೆಯ ಇನ್ನಿಂಗ್ಸ್ ಆರಂಭವಾದ ಕೆಲವು ತಿಂಗಳುಗಳಲ್ಲಿ ನನಗೆ ಎರಡು ರೀತಿಯ ಅನುಭವಗಳು ಲಭ್ಯವಾದವು. ಒಂದನೆಯ ರೀತಿಯ ಅನುಭವವು ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಎಮ್‌ಡಿಪಿ ಕಾರ್ಯಕ್ರಮದ ಭಾಗವಾಗಿ ಸುಗಮಕಾರರಿಗೆ (ಇವರು ಡಯಟ್ ಉಪನ್ಯಾಸಕರು/ಬಿಆರ್‌ಪಿಗಳಾಗಿದ್ದರು) ನಡೆಯುತ್ತಿದ್ದ ಹತ್ತಾರು ಕಾರ್ಯಾಗಾರಗಳಲ್ಲಿ ವೀಕ್ಷಕನಾಗಿ ಪಾಲ್ಗೊಂಡ ಕಾರಣ ಪಡೆದಿದ್ದು. ಕಾರ್ಯಕ್ರಮದ ಸ್ವರೂಪ, ಅವರಿಗೆ ಒದಗಿಸುತ್ತಿದ್ದ ಸಂಪನ್ಮೂಲ ಸಾಹಿತ್ಯವನ್ನು ಅರ್ಥೈಸಿಕೊಳ್ಳುವುದು, ಅವರು ಪ್ರಾಯೋಗಿಕವಾಗಿ ಕೈಗೊಂಡ ಕಿರು ಯೋಜನೆಗಳ ಅನುಷ್ಠಾನಕ್ಕಾಗಿ ಹಲವು ಸರ್ಕಾರಿ ಶಾಲೆಗಳಿಗೆ ಭೇಟಿ ನೀಡಿ ಅವುಗಳ ಸ್ಥಿತಿ-ಗತಿಗಳನ್ನು ಹತ್ತಿರದಿಂದ ಗಮನಿಸುವುದು, ವಿವಿಧ ಭಾಗೀದಾರರೊಂದಿಗೆ ಸಂವಹಿಸಿ ಅವರ ಸವಾಲು, ನಿರೀಕ್ಷೆಗಳನ್ನು ವಾಸ್ತವ ನೆಲೆಯಲ್ಲಿ ಪರಿಚಯಿಸಿಕೊಳ್ಳುವುದು- ಇವು ಹಲವು ತಿಂಗಳುಗಳ ಕಾಲ ನಡೆದವು.

ಎರಡನೆಯ ಬಗೆಯ ಅನುಭವವು ನನ್ನ ನೇರ ತೊಡಗಿಸಿಕೊಳ್ಳುವಿಕೆಯ ಮೂಲಕ ಲಭಿಸಿತು. ಸಾರ್ವಜನಿಕ ಶಿಕ್ಷಣವ್ಯವಸ್ಥೆಯನ್ನು ಬಲಪಡಿಸುವ ಪ್ರಯತ್ನಗಳಿಗೆ ಪೂರಕವಾಗಿ ಕರ್ನಾಟಕ ಸರ್ಕಾರದ ಸಹಯೋಗದಲ್ಲಿ ಕೆಲಸ ಮಾಡುವ ಇರಾದೆ ಮತ್ತು ಬದ್ಧತೆಯನ್ನು ವ್ಯಕ್ತಪಡಿಸಲು ಫೌಂಡೇಷನ್ ಸಾರ್ವಜನಿಕ ಶಿಕ್ಷಣ ಇಲಾಖೆಯೊಂದಿಗೆ ಒಡಂಬಡಿಕೆಯನ್ನು ಮಾಡಿಕೊಂಡಿತ್ತು. ಅದನ್ನು ಸಾಕಾರಗೊಳಿಸಲು ಹಲವು ಉಪಕ್ರಮಗಳನ್ನು ರೂಪಿಸಿತು. ಶಾಲಾ ಶಿಕ್ಷಣ ಕ್ಷೇತ್ರದಲ್ಲಿ ನಾವೀನ್ಯಪೂರ್ಣ ಪ್ರಯೋಗಗಳನ್ನು ಪರಿಕಲ್ಪಿಸಿ ಪ್ರಾಯೋಗಿಕವಾಗಿ ಅನುಷ್ಠಾನಗೊಳಿಸಲು 2006-07ರ ಸಮಯದಲ್ಲಿ ಇಲಾಖೆಯ ಸಹಯೋಗದಲ್ಲಿ ಪಾಲಿಸಿ ಪ್ಲಾನಿಂಗ್ ಘಟಕ(ಪಿಪಿಯು)ವನ್ನು ಸ್ಥಾಪಿಸಲಾಯಿತು. ಈ ಘಟಕದ ವೈಶಿಷ್ಟ್ಯವೆಂದರೆ, ಶಿಕ್ಷಣ ಇಲಾಖೆ ಮತ್ತು ಫೌಂಡೇಷನ್ ಎರಡೂ ಕಡೆಗಳಿಂದಲೂ ತಲಾ ನಾಲ್ಕೈದು ಸದಸ್ಯರನ್ನು ನಿಯೋಜಿಸಿ, ಇವರೀರ್ವರೂ ಒಂದು ತಂಡವಾಗಿ ಕಾರ್ಯನಿರ್ವಹಿಸುವುದು. ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತಾಲಯದ ಕಟ್ಟಡದಲ್ಲೇ ಈ ಘಟಕದ ಕಾರ್ಯಾಚರಣೆಗೆ ಕಚೇರಿಯನ್ನು ನೀಡಲಾಯಿತು. 2009ರ ಕೊನೆಯ ಭಾಗದಲ್ಲೇ ಪಿಪಿಯು ಘಟಕದ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕೆಂದು ನನ್ನನ್ನು ಕೇಳಲಾಯಿತು.

ಶಾಲಾ/ಶೈಕ್ಷಣಿಕ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮಗಳಲ್ಲದೆ ಶಿಕ್ಷಣ ಕ್ಷೇತ್ರದ ಜ್ವಲಂತ ಸವಾಲುಗಳಿಗೆ ಪರಿಹಾರ ರೂಪದಲ್ಲಿ ಮತ್ತು ಈಗಾಗಲೇ ಜಾರಿಯಲ್ಲಿದ್ದ ಯೋಜನೆಗಳ ಪರಿಣಾಮಕಾರಿತ್ವವನ್ನು ಹೆಚ್ಚಿಸುವ ಮಾರ್ಗಗಳನ್ನು ಕಂಡುಹಿಡಿಯಲು ಹಲವು ಅಲ್ಪಕಾಲಿಕ ಅಧ್ಯಯನಗಳನ್ನು ರೂಪಿಸಿ ವರದಿಗಳನ್ನು ತಯಾರಿಸಲಾಯಿತು. ಶೈಕ್ಷಣಿಕ ನಾಯಕತ್ವ ಕ್ಷೇತ್ರವು ಭಾರತದಲ್ಲಿ ಹೊಸ ಪರಿಕಲ್ಪನೆಯಾಗಿದ್ದರಿಂದ ನಾಯಕತ್ವದ ವಿವಿಧ ಆಯಾಮಗಳನ್ನು ತಲಸ್ತರದ ಅನುಭವಗಳ ಮೂಸೆಯಲ್ಲಿ ಅನ್ವಯಿಸಿ ನೋಡುವ ಉದ್ದೇಶದಿಂದ ಶೈಕ್ಷಣಿಕ ಅಧಿಕಾರಿಗಳು ಮತ್ತು ತಜ್ಞರಿಂದ ಕಿರುಹೊತ್ತಗೆಗಳನ್ನು ಬರೆಯಿಸಿ ಪಿಪಿಯು ಘಟಕದಿಂದ ಅವುಗಳನ್ನು ಪ್ರಕಟಿಸಿ ರಾಜ್ಯದ ಜಿಲ್ಲೆ, ಬ್ಲಾಕ್ ಮತ್ತು ಕ್ಲಸ್ಟರ್ ಹಂತಗಳಿಗೆ ವಿತರಿಸಲಾಯಿತು. ಸುಮಾರು ಅದೇ ಸಮಯದಲ್ಲಿ ಮಂಡ್ಯ ಜಿಲ್ಲೆಯಲ್ಲಿ ಶಾಲಾ ಹಂತದಿಂದ ಜಿಲ್ಲಾ ಹಂತದವರೆಗೆ ಕಾರ್ಯನಿರ್ವಹಿಸುತ್ತಿದ್ದ ಎಲ್ಲ ಸಂಸ್ಥೆಗಳ ಸಾಮರ್ಥ್ಯವನ್ನು ಹೆಚ್ಚಿಸಿ ಅವುಗಳ ನಡುವಿನ ಸಂಯೋಜನೆಯನ್ನು ಬಲಪಡಿಸುವುದರ ಮೂಲಕ ಜಿಲ್ಲೆಯ ಶೈಕ್ಷಣಿಕ ಚಿತ್ರಣವನ್ನು ಧನಾತ್ಮಕವಾಗಿ ಬದಲಿಸುವ ಆಸಕ್ತಿದಾಯಕ ಪ್ರಯೋಗವನ್ನು ಸಾಂಸ್ಥಿಕ ಸಾಮರ್ಥ್ಯ ಅಭಿವೃದ್ಧಿ ಕಾರ್ಯಕ್ರಮದ ಮೂಲಕ ಕೈಗೊಳ್ಳಲಾಯಿತು.

### ವಿಶಿಷ್ಟ ಸಹಯೋಗದ ಒಳನೋಟ

ಪಿಪಿಯು ಘಟಕದ ಜವಾಬ್ದಾರಿಯಿಂದಾಗಿ, ರಾಜ್ಯಮಟ್ಟದಲ್ಲಿ ಶಿಕ್ಷಣ ಇಲಾಖೆಯ ನೇತೃತ್ವವಹಿಸಿದ್ದ ಐಎಎಸ್ ಅಧಿಕಾರಿಗಳು, ಇಲಾಖೆಯ ನಿರ್ದೇಶಕರು, ಜಂಟಿ ನಿರ್ದೇಶಕರು ಮತ್ತು ಇತರ ಸಿಬ್ಬಂದಿಯೊಡನೆ ನೇರ ಸಂಪರ್ಕಕ್ಕೆ ಬರುವಂತೆ ಆಯಿತು. ಅನೇಕ ಯೋಜನೆಗಳಿಗೆ ವಿಶ್ವಬ್ಯಾಂಕ್ ಮತ್ತು ಯುನಿಸೆಫ್ ಸಂಸ್ಥೆಗಳ ಅನುದಾನವಿತ್ತು ಮತ್ತು ಅವುಗಳನ್ನು ನಿರ್ದಿಷ್ಟ ಸಮಯದೊಳಗೆ ಜಾರಿಗೊಳಿಸಬೇಕಾಗಿತ್ತು. ಹಾಗಾಗಿ ಯೋಜನೆಗಳ ಪರಾಮರ್ಶೆಗೆಂದು ಇಲಾಖೆಯ ಅಧಿಕಾರಿಗಳೊಂದಿಗೆ ನಿಯತವಾಗಿ ಸಭೆಗಳು ನಡೆಯುತ್ತಿದ್ದವು. ಆ ಸಂದರ್ಭಗಳಲ್ಲಿ ಶಿಕ್ಷಣ ಇಲಾಖೆಯ ಇನ್ನಿತರ ಯೋಜನೆ, ಕಾರ್ಯಕ್ರಮಗಳ ಪರಿಶೀಲನೆಯೂ ನಡೆಯುತ್ತಿದ್ದುದರಿಂದ ಶಿಕ್ಷಣ ಇಲಾಖೆಯನ್ನು ಹತ್ತಿರದಿಂದ ಗಮನಿಸುವ, ಆ ಮೂಲಕ ಇಲಾಖೆಗೆ ರಾಜ್ಯ ಮಟ್ಟದಲ್ಲಿ ಎದುರಾಗುತ್ತಿದ್ದ ಸವಾಲುಗಳನ್ನು ಅರಿಯುವ ಅವಕಾಶ ದೊರೆಯಿತು. ಜೊತೆಗೆ ವಿವಿಧ ಜಿಲ್ಲೆಗಳಲ್ಲಿ ಅನುಷ್ಠಾನಗೊಳ್ಳುತ್ತಿದ್ದ ಕಾರ್ಯಕ್ರಮಗಳ ಪರಿಣಾಮಕಾರಿತ್ವವನ್ನು ಅರಿಯಲು ರಾಜ್ಯದ ಬಹುತೇಕ ಜಿಲ್ಲೆಗಳಿಗೆ ಭೇಟಿ ನೀಡಿ, ಶಾಲಾ ಶಿಕ್ಷಣ ವ್ಯವಸ್ಥೆಯನ್ನು ಇನ್ನೊಂದು ಮಗ್ಗುಲಿನಿಂದ ಅರ್ಥ ಮಾಡಿಕೊಳ್ಳಲು ಸಾಧ್ಯವಾಯಿತು.

## ಒಲವು-ನಿಲುವುಗಳ ಹಿಂದಿನ ಪ್ರಜ್ಞೆ

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸರ್ಕಾರದೊಂದಿಗೆ ಸಾರ್ವಜನಿಕ ವಲಯದಲ್ಲಿ ಹತ್ತಿರದಿಂದ ಕೆಲಸ ಮಾಡುವ ಸಂದರ್ಭದಲ್ಲಿ ಸರ್ಕಾರೇತರ ಸಂಸ್ಥೆ ಹೊಂದುವ ದೃಷ್ಟಿಕೋನ ಮತ್ತು ತಾಳುವ ನಿಲುವುಗಳು ಆ ಸಂಸ್ಥೆಯು ಆಳದಲ್ಲಿ ದೇಶದ ಅಭಿವೃದ್ಧಿಯ ಹಾದಿಯನ್ನು ಕುರಿತಾಗಿ ಯಾವ ಬಗೆಯ ನಂಬಿಕೆಯನ್ನಿರಿಸಿಕೊಂಡಿದೆ ಎನ್ನುವುದನ್ನು ಅವಲಂಬಿಸಿರುತ್ತದೆ. ಇದಕ್ಕೆ ಸಾರ್ವಜನಿಕ ಶಿಕ್ಷಣ ಕ್ಷೇತ್ರವನ್ನೇ ನಿದರ್ಶನವಾಗಿ ತೆಗೆದುಕೊಳ್ಳಬಹುದು. ಶಿಕ್ಷಣ ಹಕ್ಕು ಕಾಯಿದೆ ಜಾರಿಯಾದ ಮೇಲೆ ಎಲ್ಲ ಮಕ್ಕಳಿಗೂ ಪ್ರಾಥಮಿಕ ಹಂತದ ಶಿಕ್ಷಣ ಪಡೆಯುವ ಹಕ್ಕು ಶಾಸನಬದ್ಧವಾಗಿ ದೊರೆತಿದೆ. ಸದ್ಯಕ್ಕೆ ಇದರ ವ್ಯಾಪ್ತಿಯು ಎಂಟನೇ ತರಗತಿವರೆಗೆ ಇದೆಯಾದರೂ ನೂತನ ರಾಷ್ಟ್ರೀಯ ಶಿಕ್ಷಣ ನೀತಿಯಂತೆ ಪೂರ್ವ ಪ್ರಾಥಮಿಕ ಹಂತದಿಂದ ಹನ್ನೆರಡನೇ ತರಗತಿಯವರೆಗೆ ಅನ್ವಯವಾಗುವಂತೆ ಕಾಯಿದೆಗೆ ತಿದ್ದುಪಡಿ ತರಲಾಗುತ್ತಿದೆ. ಈ ನಿಯಮವನ್ನು ಕಾರ್ಯರೂಪಕ್ಕೆ ತರಬೇಕಾದ ಹೊಣೆ ಚುನಾಯಿತ ಸರ್ಕಾರ ಅರ್ಥಾತ್ ಕಾರ್ಯಾಂಗದ್ದು. ಅಭಿವೃದ್ಧಿ ಹೊಂದುತ್ತಿರುವ ಭಾರತದಂಥ ದೇಶದಲ್ಲಿ ಸಮಾನತೆ ಮತ್ತು ಸಮತೆಯಂತಹ ಮಹತ್ವದ ಮೌಲ್ಯಗಳನ್ನು ಶೈಕ್ಷಣಿಕ ನೀತಿಯಲ್ಲಿ ಅಳವಡಿಸಿ, ಸಮಾಜದ ತುತ್ತತುದಿಯ ಅವಕಾಶವಂಚಿತ ವ್ಯಕ್ತಿಗೂ ಸರ್ಕಾರದ ಕಾರ್ಯಕ್ರಮಗಳ ಲಾಭ ತಲುಪುವಂತೆ ಮಾಡುವ ಗುರುತರ ಜವಾಬ್ದಾರಿಯನ್ನು ಸಂವಿಧಾನವು ಕಾರ್ಯಾಂಗದ ಮೇಲಿರಿಸಿದೆ.

ಇದರರ್ಥ, ಸರ್ಕಾರಿ ಶಾಲೆಗಳಿಗೆ ದಾಖಲಾಗುವ ಅವಕಾಶವಂಚಿತ ಕುಟುಂಬಗಳ ಮಕ್ಕಳೂ 'ಉತ್ತಮ'ವೆಂದು ಪರಿಭಾವಿಸಲಾಗುವ ಖಾಸಗಿ ಶಾಲೆಗಳಿಗೆ ದಾಖಲಾಗುವ ಅವಕಾಶ ಹೊಂದಿದ ಕುಟುಂಬಗಳಿಗೆ ಸೇರಿದ ಮಕ್ಕಳಿಗೆ ಹೋಲಿಸಿದಾಗ ಗುಣಮಟ್ಟದ ಶಿಕ್ಷಣ ಮತ್ತು ಸವಲತ್ತುಗಳನ್ನು ಪಡೆಯುವಂತೆ ನೋಡಿಕೊಳ್ಳುವುದು. ವಾಸ್ತವವಾಗಿ ಎಳವೆಯಿಂದಲೇ ಸೌಲಭ್ಯಗಳಿಂದ ವಂಚಿತರಾಗಿ, ದೈನಂದಿನ ಬದುಕಿಗೂ ಪೋಷಕರು ಹೋರಾಡಬೇಕಾದ ಸ್ಥಿತಿಯನ್ನು ಎದುರಿಸುತ್ತಿರುವ ಕೌಟುಂಬಿಕ ವಾತಾವರಣವು ಮಕ್ಕಳ ಕಲಿಕೆಗೆ ಪೂರಕವಾಗಿರುವುದಿಲ್ಲ. ಹಾಗೆ ಪ್ರತಿಕೂಲತೆಯ ಸರಮಾಲೆಯಲ್ಲಿ ಬೆಳೆಯುವ ಮಕ್ಕಳೇ ಪ್ರಸ್ತುತ ಸರ್ಕಾರಿ ಶಾಲೆಗಳಲ್ಲಿ ದಾಖಲಾಗಿ ಉಳಿದಿರುವುದು. ಅಂತಹ ಮಕ್ಕಳಿಗೆ ಶಾಲೆಗಳಲ್ಲಿ ಸೂಕ್ತ ಸುರಕ್ಷತೆಯ ವಾತಾವರಣ, ಪೋಷಣೆಗೆ ಪೂರಕವಾದ ಪೌಷ್ಠಿಕ ಆಹಾರ ಮತ್ತು ಕಲಿಕೆಗೆ ಬೇಕಾದ ಎಲ್ಲ (ಅಗತ್ಯವಿದ್ದರೆ ಹೆಚ್ಚಿನ) ಅವಕಾಶಗಳನ್ನು ಕಲ್ಪಿಸುವುದು ದೇಶ ಮತ್ತು ನಾಗರಿಕ ಸಮಾಜದ ಕರ್ತವ್ಯವಾಗಿದೆ. ಈ ಉದ್ದೇಶದ ಭಾಗವಾಗಿಯೇ ಸರ್ಕಾರೇತರ ಸಂಸ್ಥೆಗಳು ಶಿಕ್ಷಣ ಇಲಾಖೆಯೊಂದಿಗೆ ಕೈಜೋಡಿಸಿ ಕೆಲಸ ಮಾಡಬೇಕಾದ ಅಗತ್ಯವಿರುವುದು.

ಮುಂದುವರೆದು, ಪ್ರಮುಖ ಅಭಿವೃದ್ಧಿ ಕ್ಷೇತ್ರಗಳಾದ ಶಿಕ್ಷಣ, ಆರೋಗ್ಯ, ಆಹಾರ ಮತ್ತು ಪೌಷ್ಟಿಕತೆ, ಮಕ್ಕಳು ಮತ್ತು ಮಹಿಳೆಯರ ಕಲ್ಯಾಣ ಮುಂತಾದವುಗಳಲ್ಲಿ ಸಂಪೂರ್ಣವಾಗಿ ತೊಡಗಿಕೊಂಡು ಸುಧಾರಣೆಗಳನ್ನು ತರುವ ಸಂವಿಧಾನದತ್ತವಾದ ಅಧಿಕಾರವಿರುವುದು ಚುನಾಯಿತ ಸರ್ಕಾರಗಳಿಗೆ ಎಂಬ ಸೂಕ್ಷ್ಮ ತಿಳುವಳಿಕೆ ಮುಖ್ಯ. ಈಗಾಗಲೇ ಮೂಲಭೂತ ಸವಲತ್ತುಗಳನ್ನು ಹೊಂದಿ, ಸುಸ್ಥಿತಿಯಲ್ಲಿರುವ ಕೆಲವೇ ಉಳ್ಳವರಿಗೆ ಮಾತ್ರ ಈ ಇಲಾಖೆಗಳ ಸೇವೆಗಳು ಸೀಮಿತವಾಗದೆ, ದುರ್ಬಲವರ್ಗಗಳಿಗೆ ಸೇರಿದ ಅರ್ಹರಿಗೆ ಕೂಡ ಇವುಗಳನ್ನು ಸಮಾನವಾಗಿ ದೊರಕಿಸಬೇಕಾದ ಬಾಧ್ಯತೆ ಸರ್ಕಾರದ್ದು. ಹೀಗಾಗಿ ಅಭಿವೃದ್ಧಿ ಕ್ಷೇತ್ರದಲ್ಲಿ ಕೊಡುಗೆ ನೀಡಬಯಸುವ ಸಾಮಾಜಿಕ ಸೇವಾ ಸಂಸ್ಥೆಗಳು, ತಾವು ಕೈಗೊಳ್ಳುವ ಯೋಜನೆ ಮತ್ತು ಉಪಕ್ರಮಗಳನ್ನು ಸರ್ಕಾರದ ಸಂಬಂಧಪಟ್ಟ ಇಲಾಖೆಗಳ ಆಶಯ-ಗುರಿಗಳಿಗೆ ಪೂರಕವಾಗಿರುವಂತೆ ರೂಪಿಸುವುದರಿಂದ ಪರ್ಯಾಯ ವ್ಯವಸ್ಥೆಯೊಂದು ನಿರ್ಮಾಣಗೊಳ್ಳುವ ಸಾಧ್ಯತೆಯನ್ನು ತಪ್ಪಿಸಿದಂತಾಗುತ್ತದೆ. ಅಲ್ಲದೆ ಇಲಾಖೆಯ ಸಹಯೋಗದಲ್ಲಿ ಯೋಜನೆ, ಅನುಷ್ಠಾನ ಮತ್ತು ಮೌಲ್ಯಮಾಪನದ ಹಂತಗಳಲ್ಲಿ ನಿಕಟವಾಗಿ ಬೆರೆತು ಕಾರ್ಯಕ್ರಮಗಳ ಗುಣಾತ್ಮಕತೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ತನ್ನ ಸಂಪನ್ಮೂಲಗಳನ್ನು ಸಂಯೋಜಿಸಿದಲ್ಲಿ ನಿರೀಕ್ಷಿತ ಪರಿಣಾಮವನ್ನುಂಟುಮಾಡುವ ಸಾಧ್ಯತೆಯಿರುತ್ತದೆ. ಈ ಬಗೆಯಲ್ಲಿ ಸರ್ಕಾರದ ಧನಾತ್ಮಕ ಪ್ರಯತ್ನಗಳೊಂದಿಗೆ ಕೈಜೋಡಿಸಿ ಕೆಲಸ ಮಾಡುತ್ತಾ ಅಭಿವೃದ್ಧಿ ಕಾರ್ಯಗಳಿಗೆ ಇಂಬು ಕೊಟ್ಟಂತಾಗುತ್ತದೆ.

## 'ಒಳ-ಹೊರಗಿನ' ದರ್ಶನ

ಇಂತಹ ಸಹಯೋಗಿ ಪ್ರವೃತ್ತಿಯು ನಿರ್ದಿಷ್ಟ ಮಾರ್ಗದ ಆಯ್ಕೆಯನ್ನೂ ಪ್ರಭಾವಿಸುತ್ತದೆ. ಸರ್ಕಾರದ ಪಾರಮ್ಯದಲ್ಲಿ ನಂಬಿಕೆಯಿರಿಸಿ, ವಿಶಾಲ ದೃಷ್ಟಿಕೋನದಲ್ಲಿ ಅದರ ಧ್ಯೇಯೋದ್ದೇಶಗಳಿಗೆ ಪೂರಕವಾಗಿ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿ, ಎದುರಾಗುವ ಸವಾಲುಗಳನ್ನು ಮೀರಿ ನಿಲ್ಲುವ ಪ್ರಯತ್ನ ಒಂದು ಬಗೆಯದಾದರೆ, ಸರ್ಕಾರಿ ಯಂತ್ರದೊಂದಿಗೆ ಗುರುತಿಸಿಕೊಳ್ಳದೆ, ಹೊರಗಡೆಯೇ ನಿಂತು ನೇರ ಕಾರ್ಯತಂತ್ರಗಳ ಮೂಲಕ ಪರ್ಯಾಯ ಯೋಜನೆಗಳನ್ನು ರೂಪಿಸಿ, ಸಾಮಾಜಿಕ ಬದಲಾವಣೆಗಾಗಿ ಹೋರಾಟ ಮಾಡುವ ಮಾರ್ಗ ಎರಡನೆಯ ವಿಧವಾದದ್ದು. ಮೊದಲನೆಯ ಗುಂಪಿಗೆ ಬದ್ಧರಾದವರಿಗೆ ಒಂದು ರೀತಿಯ 'ಒಳ-ಹೊರಗಿನ' ದರ್ಶನಾನುಭವ ಲಭಿಸುತ್ತದೆ. ಅಂದರೆ, ಅಂತಹ ಸಂಸ್ಥೆಗಳು ಸರ್ಕಾರಿ ವ್ಯವಸ್ಥೆಯ ಹೊರಗಿದ್ದೂ, ಅದರ ಆಡಳಿತ ಸ್ವರೂಪದ ನಿಕಟ ಪರಿಚಯವಿದ್ದು, ಸಂಪೂರ್ಣವಾಗಿ ವಿಮುಖವಾಗಿರದೆ ಆಡಳಿತದ ಸಂಕೀರ್ಣತೆ,

ಸವಾಲುಗಳನ್ನು ಸಂವೇದನೆಯಿಂದ ಅರ್ಥ ಮಾಡಿಕೊಂಡು ಸೂಕ್ತವಾಗಿ ಪ್ರತಿಸ್ಪಂದಿಸುವ ನಿಲುವಿಗೆ ತೆರೆದುಕೊಂಡಿರುತ್ತವೆ. ಎರಡನೆಯ ಗುಂಪಿಗೆ ಸೇರಿದ ಸಂಸ್ಥೆಗಳ ಉದ್ದೇಶ ಸಮಾಜಮುಖಿಯಾಗಿದ್ದರೂ, ಅವು ಆಯ್ಕೆ ಮಾಡಿಕೊಳ್ಳುವ ದಾರಿಯು ಸಂಘರ್ಷದ ರೂಪವನ್ನು ಪಡೆದು, ಆಡಳಿತ ವ್ಯವಸ್ಥೆಯು ಸಕಾರಾತ್ಮಕವಾಗಿ ಸ್ಪಂದಿಸದಿದ್ದಲ್ಲಿ ಅದರ ವಿರುದ್ಧ ಒತ್ತಡವನ್ನು ಹೇರುತ್ತಾ, ಪ್ರತಿರೋಧಕಾತ್ಮಕ ನಿಲುವನ್ನು ತಾಳುತ್ತವೆ. ಮೊದಲನೆಯ ಗುಂಪಿಗೆ ಸೇರಿದ ಸಂಸ್ಥೆಗಳಿಗೂ ಸರ್ಕಾರಿ ವ್ಯವಸ್ಥೆಯ ಕೊರತೆ, ನೀತಿ ಮತ್ತು ಆಚರಣೆಯ ನಡುವಿನ ಕಂದಕದ ಅರಿವು ಇರುತ್ತದೆ. ಆದರೆ ಆ ಕೊರತೆ, ಕಂದಕಗಳನ್ನು ನೀಗಿಸುವಲ್ಲಿ ಎದುರಾಗುವ ಸವಾಲುಗಳನ್ನು ಮೀರಿ, 'ಪರಿಹಾರ'ಗಳನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ತಮ್ಮ ಗಮನವನ್ನು ಕೇಂದ್ರೀಕರಿಸುವುದು ಒಳಿತು ಎಂಬ ನಿಲುವಿಗೆ ಬಂದಿರುತ್ತವೆ. ಇಂದಿನ ಸ್ಥಿತಿ-ಗತಿ ಸುಧಾರಿಸಬೇಕಾದರೆ ಏನು ಮಾಡಬೇಕು ಮತ್ತು ಹೇಗೆ ಮುಂದುವರೆಯಬೇಕು ಎನ್ನುವುದರತ್ತ ತಮ್ಮ ಶಕ್ತಿಯನ್ನು ನಿಯೋಜಿಸುತ್ತವೆ.

ಇದರ ಜೊತೆಗೆ, ತಾವು ಯಾವ ಇಲಾಖೆ/ಸಂಸ್ಥೆಯೊಡನೆ ಸಹಯೋಗವನ್ನು ಬೆಳೆಸಿ ಕಾರ್ಯೋನ್ಮುಖವಾಗುತ್ತವೆಯೋ ಆ ಸಂಸ್ಥೆಯ ಸದಸ್ಯರು, ಅವರ ಕರ್ತವ್ಯದ ಭಾಗವಾಗಿ ಮಾಡುವ ಒಳ್ಳೆಯ ಕೆಲಸವನ್ನು ಕಂಡು ಪ್ರಾಮಾಣಿಕವಾಗಿ ಮೆಚ್ಚಿಕೊಳ್ಳುತ್ತವೆ. ಅಂತಹ ಒಳ್ಳೆಯ ಕೆಲಸಗಳ ಬಗ್ಗೆ ಇತರರಿಗೂ ತಿಳಿಸುತ್ತವೆ. ಅವರಲ್ಲಿ ಕೆಲವು ಕೊರತೆಗಳು ಕಂಡರೂ ಅದನ್ನು ಮೀರಿ, ನಡೆಯಬೇಕಾದ ಹಾದಿಯ ಕಡೆಗೆ ಮುಖ ಮಾಡುತ್ತವೆ. ಫೌಂಡೇಷನ್ ಬಹುಶಃ ಕರ್ನಾಟಕವೂ ಸೇರಿದಂತೆ ತಾನು ಕಾರ್ಯಾಚರಣೆಯನ್ನು ಹೊಂದಿರುವ ಬಹುತೇಕ ಎಲ್ಲ ರಾಜ್ಯಗಳಲ್ಲಿ ಇದೇ ದೃಷ್ಟಿಕೋನವನ್ನು ಇರಿಸಿಕೊಂಡು ತನ್ನ ಯೋಜನೆಗಳನ್ನು ರೂಪಿಸಿಕೊಂಡಿದೆ.

### ದ್ವಂದ್ವಾತೀತ ದೃಷ್ಟಿಕೋನದ ಪ್ರಭಾವ

ಮೇಲಿನ ಸಾಂಸ್ಥಿಕ ನೆಲೆಯ ದೃಷ್ಟಿಕೋನ ಮತ್ತು ನಿಲುವುಗಳಿಗೂ, ವೈಯಕ್ತಿಕ ನೆಲೆಯ ಮೌಲ್ಯ ಮತ್ತು ನಂಬಿಕೆಗಳಿಗೂ ಹೊಂದಾಣಿಕೆಯಿರುವುದರಿಂದ ಈ ಹೊತ್ತಗೆಯಲ್ಲಿನ ಬಹುಪಾಲು ಲೇಖನಗಳು ಈ ವಿಶಾಲ ದೃಷ್ಟಿಕೋನದಿಂದ ಪ್ರಭಾವಿತಗೊಂಡಿವೆ. ಹಾಗಾಗಿ ಇಲ್ಲಿ ಯಾವುದೇ ದ್ವಂದ್ವಕ್ಕೆ, ತಾಕಲಾಟಕ್ಕೆ ಅವಕಾಶವಿಲ್ಲದಿರುವುದು ಆಶ್ಚರ್ಯದ ಸಂಗತಿಯಾಗದು.

2010ರ ಹೊತ್ತಿಗೆ ಫೌಂಡೇಷನ್, ತನ್ನ ಗುರಿ, ಉದ್ದೇಶಗಳನ್ನು ಮರು ರೂಪಿಸಿಕೊಂಡು ಮುಂದಿನ ದಶಕಗಳಲ್ಲಿ ತನ್ನ ಕಾರ್ಯವ್ಯಾಪ್ತಿಯನ್ನು

ವಿಸ್ತರಿಸಿತು. ಈ ಹೊಸ ಕಾರ್ಯತಂತ್ರದ ಭಾಗವಾಗಿ ನಿಗದಿತ ಕಾಲಮಿತಿಯುಳ್ಳ ಕಾರ್ಯಕ್ರಮಗಳ ಅನುಷ್ಠಾನದ ನೆಲೆಯಿಂದ, ಆಳವಾದ ಮತ್ತು ದೀರ್ಘಕಾಲೀನ ಪರಿಣಾಮವನ್ನು ಬೀರುವಂತಹ ಸಾಂಸ್ಥಿಕ ಬದಲಾವಣೆಯ ಮಾರ್ಗದ ನೆಲೆಯನ್ನು ರೂಪಿಸಿಕೊಂಡಿತು. ಈ ಉದ್ದೇಶಕ್ಕಾಗಿ, ಸಾಮಾಜಿಕ, ಶೈಕ್ಷಣಿಕ ಮಾನದಂಡಗಳ ಪ್ರಕಾರ ಬಹುತೇಕ ಹಿಂದುಳಿದಿರುವ, ದೇಶದ ಆರು ರಾಜ್ಯಗಳ ಐವತ್ತು ಜಿಲ್ಲೆಗಳಲ್ಲಿ ಜಿಲ್ಲಾ ಸಂಸ್ಥೆಗಳನ್ನು ಸ್ಥಾಪಿಸಿ, ಶೈಕ್ಷಣಿಕ ಅಭಿವೃದ್ಧಿಯ ಮೂಲಕ ಸುಸ್ಥಿರ ಸಾಮಾಜಿಕ ಅಭಿವೃದ್ಧಿಗೆ ಮುಂದಾಯಿತು. ಉದಾಹರಣೆಗೆ, ಕಲ್ಯಾಣ ಕರ್ನಾಟಕದ ಆರು ಜಿಲ್ಲೆಗಳು, ಬಾಗಲಕೋಟೆ, ವಿಜಯಪುರ, ಮಂಡ್ಯ, ಬೆಂಗಳೂರುಗಳಲ್ಲಿ ಪ್ರಸ್ತುತ ಹತ್ತು ಜಿಲ್ಲಾ ಸಂಸ್ಥೆಗಳಿದ್ದು, ಇನ್ನೂರೈವತ್ತಕ್ಕೂ ಹೆಚ್ಚಿನ ಸಂಪನ್ಮೂಲ ವ್ಯಕ್ತಿಗಳು ಪೂರ್ಣಾವಧಿ ಶೈಕ್ಷಣಿಕ ಕಾರ್ಯಗಳಲ್ಲಿ ತೊಡಗಿಕೊಂಡಿದ್ದಾರೆ. ಈ ಸದಸ್ಯರು ಶಿಕ್ಷಕರ ವೃತ್ತಿಪರ ಅಭಿವೃದ್ಧಿ, ಕಲಿಕಾ ಸಾಮಗ್ರಿಗಳ ತಯಾರಿ ಮತ್ತು ಬಳಕೆ, ಶಾಲೆಗಳಲ್ಲಿ ಶಿಕ್ಷಕರೊಂದಿಗೆ ಸಂವಹಿಸುತ್ತ ಅವರ ಬೋಧನೆಗೆ ನೆರವಾಗುವುದು, ಮುಂತಾದ ಉಪಕ್ರಮಗಳಲ್ಲಿ ತೊಡಗಿ, ತಾಲ್ಲೂಕು, ಹೋಬಳಿ ಮಟ್ಟದಲ್ಲಿ ಬದಲಾವಣೆಗೆ ಶ್ರಮಿಸುತ್ತಿದ್ದಾರೆ.

ಈ ರೀತಿ ಆಳವಾಗಿ, ದೀರ್ಘಕಾಲಿಕವಾಗಿ ಸಾಂಸ್ಥಿಕವಾಗಿ ಕೆಲಸ ಮಾಡುವ ಆಯ್ಕೆಯು ಸವಾಲಿನದಾದರೂ, ಹಲವಾರು ದಶಕಗಳಿಂದ ಅವಜ್ಞೆಗೆ ಒಳಗಾಗಿರುವ ಪ್ರದೇಶಗಳಲ್ಲಿ ಶಿಕ್ಷಣದಂಥ ಅಭಿವೃದ್ಧಿ ಕ್ಷೇತ್ರದಲ್ಲಿನ ಬದಲಾವಣೆಗೆ ಸಾಕಷ್ಟು ಸಮಯ ಹಿಡಿಯುವುದರಿಂದ ಸರ್ಕಾರದ ಪ್ರಯತ್ನಗಳಿಗೆ ಪೂರಕವಾಗಿ ಸಂಸ್ಥೆಯ ಸಂಪನ್ಮೂಲಗಳನ್ನು ತಲಸ್ತರದಲ್ಲಿ ವಿನಿಯೋಗಿಸಿ, ನೇರವಾಗಿ ಕೊಡುಗೆ ನೀಡುವುದು ಅವಶ್ಯಕವೆಂಬ ಪ್ರಜ್ಞೆ ಇಲ್ಲಿ ಕೆಲಸ ಮಾಡಿದೆ.

## ವಿಸ್ತೃತ ಕ್ಷೇತ್ರಭೇಟಿ – ಸಮೃದ್ಧ ಅನುಭವಧಾರೆ

ಶಿಕ್ಷಕರು ಹೆಚ್ಚಿನ ಪ್ರಮಾಣದಲ್ಲಿ ಒಂದೇ ಕಡೆ ವಾಸವಾಗಿರುವ ಪ್ರದೇಶಗಳ ಬಳಿ ಶಾಲಾ ಅವಧಿಯ ನಂತರ ಸ್ವ-ವಿಕಸನದ ಮಾರ್ಗವಾಗಿ ಪ್ರಾರಂಭಿಸಿರುವ ಶಿಕ್ಷಕ ಕಲಿಕಾ ಕೇಂದ್ರಗಳಲ್ಲಿ ನಿಯತವಾಗಿ ಸಂವಾದಗಳನ್ನು ಏರ್ಪಡಿಸಿ ಪರಸ್ಪರ ಅನುಭವ ಹಂಚಿಕೆಗೆ ಅವಕಾಶ ಕಲ್ಪಿಸುವುದು, ಶಿಕ್ಷಕರಿಗೆ ಕಲಿಕಾ ಪ್ರಕ್ರಿಯೆಯಲ್ಲಿ ನೆರವಾಗುತ್ತ ಬೋಧನೆಗೆ ಪೂರಕವಾದ ಪರಿಕರಗಳನ್ನು ಒದಗಿಸುವುದು, ತಾಲ್ಲೂಕು ಮತ್ತು ಜಿಲ್ಲಾ ಹಂತಗಳಲ್ಲಿ ಶಿಕ್ಷಣ ಇಲಾಖೆಯು ಯೋಜಿಸುವ ವಿವಿಧ ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಬೆಂಬಲ ನೀಡುವುದು, ಇವೇ ಮುಂತಾದ ಶೈಕ್ಷಣಿಕ ಉಪಕ್ರಮಗಳ ಮೂಲಕ ಶಿಕ್ಷಕರ ವೃತ್ತಿಪರ ಅಭಿವೃದ್ಧಿಗೆ ನಮ್ಮ ಜಿಲ್ಲಾ ಸಂಸ್ಥೆಗಳು ಬದ್ಧವಾಗಿವೆ. ಈ ರೀತಿ ತಳಮಟ್ಟದಲ್ಲಿ ನೆಲೆಯೂರಿ ಕೆಲಸ ಮಾಡುತ್ತಿರುವ ಎಲ್ಲ

ಜಿಲ್ಲೆಗಳಿಗೂ ಹಲವು ಬಾರಿ ಭೇಟಿ ನೀಡಿ ಸಂಪನ್ಮೂಲ ವ್ಯಕ್ತಿಗಳು, ಆಯಾ ಪ್ರದೇಶದ ಶಿಕ್ಷಕರು ಹಾಗೂ ಅಧಿಕಾರಿವರ್ಗದೊಂದಿಗೆ ಮುಖಾಮುಖಿಯಾಗಿ, ಅವರು ಹಂಚಿಕೊಳ್ಳುವ ಅನುಭವಗಳು, ಎದುರಿಸುತ್ತಿರುವ ಸವಾಲುಗಳನ್ನು ಹತ್ತಿರದಿಂದ ಅರಿಯುವ ಅವಕಾಶವಾಯಿತು.

ಕ್ಷೇತ್ರ ಭೇಟಿಯ ಮೂಲಕ ಶಿಕ್ಷಣವನ್ನು ಅರಿಯುವ ಅವಕಾಶದ ಭಾಗವಾಗಿ ಕರ್ನಾಟಕವಲ್ಲದೆ ಸಂಸ್ಥೆಯು ಕಾರ್ಯನಿರ್ವಹಿಸುತ್ತಿರುವ ಉತ್ತರ ಭಾರತದ ಕೆಲವು ರಾಜ್ಯಗಳಲ್ಲಿ ಶಾಲಾ ವ್ಯವಸ್ಥೆಯನ್ನು ಪರಿಚಯ ಮಾಡಿಕೊಳ್ಳಲು ಸಾಧ್ಯವಾಯಿತು. ನೆರೆಯ ಕೇರಳದಲ್ಲಿ ಕ್ರಿಯಾಶೀಲವಾಗಿರುವ ಸಾರ್ವಜನಿಕ ಶಿಕ್ಷಣ ವ್ಯವಸ್ಥೆ ಮತ್ತು ಶಾಲೆಗಳ ಬೆಳವಣಿಗೆಯಲ್ಲಿ ಸಮುದಾಯದ ಸಕ್ರಿಯ ಭಾಗವಹಿಸುವಿಕೆಯ ಹಿಂದಿನ ಕಾರಣಗಳನ್ನು ತಿಳಿಯುವ ಅವಕಾಶವಾಯಿತು. ಇದರ ಜೊತೆಗೆ 2015 ರಲ್ಲಿ ಅಮೆರಿಕದ ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಗೆ ಭೇಟಿ ನೀಡುವ ಸಂದರ್ಭ ಒದಗಿಬಂದಿತು. ಅಲ್ಲಿ ಎರಡು ವಾರಗಳ ಅವಧಿಯಲ್ಲಿ ವಿಶ್ವವಿದ್ಯಾಲಯದ ಶಿಕ್ಷಕ ಶಿಕ್ಷಣ ಕಾರ್ಯಕ್ರಮದ ವೈಶಿಷ್ಟ್ಯ, ನೆರೆಹೊರೆಯ ಶಾಲೆಗಳಿಗೆ ಭೇಟಿ ನೀಡಿ ಅಲ್ಲಿನ ಬೋಧನಾ-ಕಲಿಕೆ ಪ್ರಕ್ರಿಯೆಯ ಅಧ್ಯಯನ, ವಿವಿಧ ನಿಕಾಯಗಳ ಪ್ರಾಧ್ಯಾಪಕರೊಂದಿಗೆ ಸಂವಾದ ಮತ್ತು ಶೈಕ್ಷಣಿಕ ಆಡಳಿತ ವ್ಯವಸ್ಥೆಯ ಕಾರ್ಯವೈಖರಿ, ಇವುಗಳನ್ನು ಪರಿಚಯಿಸಿಕೊಳ್ಳಲು ಸಾಧ್ಯವಾಯಿತು. ಆ ಭೇಟಿಯಿಂದಾಗಿ ಅಲ್ಲಿನ ವ್ಯವಸ್ಥೆಯು ನಮ್ಮ ದೇಶದ ಸ್ಥಿತಿಗಿಂತ ಯಾವ ರೀತಿ ಭಿನ್ನವಾಗಿದೆ ಹಾಗೂ ನಾವು ಅಲ್ಲಿನ ಸಾಮಾಜಿಕ, ಸಾಂಸ್ಕೃತಿಕ ಭಿನ್ನತೆಯ ಹೊರತಾಗಿಯೂ ಯಾವ ಸಕಾರಾತ್ಮಕ ಅಂಶಗಳನ್ನು ಅಳವಡಿಸಿಕೊಳ್ಳಬಹುದು ಎನ್ನುವ ಸ್ಪಷ್ಟ ಚಿತ್ರಣ ದೊರೆಯಿತು.

ಇದರ ಜೊತೆಗೆ, ದೇಶದ ಮೂಲೆಮೂಲೆಗಳಲ್ಲಿ ಸಾಮಾಜಿಕ ವಲಯದಲ್ಲಿ ತೊಡಗಿಕೊಂಡಿರುವ ಸಂಸ್ಥೆಗಳಿಗೆ ಸೂಕ್ತ ಜ್ಞಾನ ಮತ್ತು ಬದ್ಧತೆಯುಳ್ಳ ಯುವ ಕಾರ್ಯಪಡೆಯ ತೀವ್ರ ಅಗತ್ಯವಿರುವುದನ್ನು ಗುರುತಿಸಿ, ಅಭಿವೃದ್ಧಿ ಕ್ಷೇತ್ರಕ್ಕೆ ಮೀಸಲಾದ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ, ಆ ಮೂಲಕ ಸಾವಿರಾರು ಯುವ ವಿದ್ಯಾರ್ಥಿಗಳು ಸಾಮಾಜಿಕ ಬದಲಾವಣೆಯಲ್ಲಿ ತೊಡಗುವಂತೆ ಅಣಿಗೊಳಿಸಲಾಗುತ್ತಿದೆ.

## ಸಂಬಂಧಗಳ ವೃದ್ಧಿಗೆ ಎಡೆಯಾದ ವಿನೂತನ ಶಿಕ್ಷಕರ ವೃತ್ತಿ ಅಭಿವೃದ್ಧಿ ಉಪಕ್ರಮ

ಸೇವಾನಿರತ ಶಿಕ್ಷಕರಿಗಾಗಿ ಡಿಎಸ್‌ಇಆರ್‌ಟಿಯು ಮರುರೂಪಿಸಿದ ಶಿಕ್ಷಕರ ಅಭಿವೃದ್ಧಿ ಕಾರ್ಯಕ್ರಮ 'ಗುರುಚೇತನ'ದ ಭಾಗವಾಗಿ ರಾಜ್ಯಮಟ್ಟದಲ್ಲಿ ಸಂಪನ್ಮೂಲ

ವ್ಯಕ್ತಿಯಾಗಿ ಸಕ್ರಿಯವಾಗಿ ಭಾಗವಹಿಸಿ, ಮಾಡ್ಯೂಲ್ ಮತ್ತು ಪೂರಕ ಸಾಹಿತ್ಯ ರಚನೆ, ಜಿಲ್ಲಾ ಸಂಪನ್ಮೂಲ ತಂಡದ ಆಯ್ಕೆ ಮತ್ತು ಕಾರ್ಯಾಗಾರಗಳ ಭಾಗವಾಗಿ ವಿಶಿಷ್ಟ ಅನುಭವವನ್ನು ಪಡೆಯಲು ಸಾಧ್ಯವಾಯಿತು. ಅದುವರೆಗೂ ಪ್ರತಿವರ್ಷ ನಿಯತವಾಗಿ ಇಂತಿಷ್ಟು ದಿನಗಳ ಅವಧಿಗೆ ಶಿಕ್ಷಕರು ತರಬೇತಿ ಪಡೆಯುತ್ತಿದ್ದರೂ ಅದು ನೀರಸವೂ ಯಾಂತ್ರಿಕವೂ ಆಗಿ ಹೊಸ ಕಲಿಕೆ ಆಗುತ್ತಿರಲಿಲ್ಲ ಎಂಬ ಶಿಕ್ಷಕರ ಕೂಗಿಗೆ ಸ್ಪಂದಿಸಿ, ಶಿಕ್ಷಣ ಇಲಾಖೆಯು ದೇಶದಲ್ಲೇ ಪ್ರಥಮ ಬಾರಿಗೆ ಸೇವಾನಿರತ ಶಿಕ್ಷಕರ ಅಭಿವೃದ್ಧಿಯನ್ನು 2016-17ರಿಂದ ಮರುರೂಪಿಸಿತು. ಶಿಕ್ಷಕರೇ ನಿರ್ದಿಷ್ಟ ತರಬೇತಿಯನ್ನು ತಮ್ಮ ಅಗತ್ಯಕ್ಕೆ ಅನುಗುಣವಾಗಿ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ನೀಡುವುದನ್ನೂ ಒಳಗೊಂಡಂತೆ ಹಲವು ವಿಶಿಷ್ಟ, ನಾವೀನ್ಯಪೂರ್ಣ ಅಂಶಗಳನ್ನು ವಿನ್ಯಾಸದಲ್ಲಿ ತಂದು ದೇಶಕ್ಕೇ ಮಾದರಿಯಾಯಿತು. ಆ ಹೊತ್ತಿನಲ್ಲಿ, ಆಡಳಿತಯಂತ್ರವನ್ನು ಕೈಯಲ್ಲಿ ಹಿಡಿದಿದ್ದ ಪ್ರಭುತ್ವ ಮತ್ತು ಶಿಕ್ಷಣ ಇಲಾಖೆಯ ಜವಾಬ್ದಾರಿ ಹೊತ್ತ ನಾಯಕತ್ವಕ್ಕೆ ಸ್ಪಷ್ಟ ಗುರಿ, ಕಾಳಜಿ ಹಾಗೂ ಇವೆಲ್ಲವೂ ಒಟ್ಟಿಗೆ ಕೂಡಿ ಬಂದರೆ, ವಿಸ್ತೃತ ಮಟ್ಟದ ಪರಿವರ್ತನೆ ತರಲು ಸಾಧ್ಯ ಎನ್ನುವ ಸಂಗತಿ ಮನದಟ್ಟಾಯಿತು.

ಸೇವಾಪೂರ್ವ ಶಿಕ್ಷಕರ ಶಿಕ್ಷಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಡಯಟ್, ಸಿಟಿಇ ಗಳ ಬೋಧಕವರ್ಗ, ಪ್ರಾಂಶುಪಾಲರು, ಬಿಇಓ ಗಳಿಗೆ ಆಯೋಜಿಸಿದ ಹಲವು ಕಾರ್ಯಾಗಾರ, ಕ್ಷೇತ್ರಭೇಟಿಯ ಸಂದರ್ಭದಲ್ಲಿ ಆದ ಒಡನಾಟಗಳು ಅಧಿಕಾರಿವರ್ಗದ ದೃಷ್ಟಿಕೋನ, ಅವರೆದುರಿನ ವಾಸ್ತವಿಕ ಸ್ಥಿತಿ-ಗತಿಯ ಅರಿವು ಇವೆಲ್ಲವೂ ನನ್ನ ಅನುಭವಗಳನ್ನು ಗಟ್ಟಿಗೊಳಿಸುತ್ತಾ ಹೋದವು. ಕಳೆದ ಕೆಲವು ವರ್ಷಗಳಲ್ಲಿ, ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರಿಗಾಗಿ ಆಯೋಜಿಸಿದ ಅನೇಕ ಸನಿವಾಸ ಕಾರ್ಯಾಗಾರಗಳು ವಿಶೇಷವಾಗಿ ಅವರೊಟ್ಟಿಗೆ ಆತ್ಮೀಯವಾಗಿ ಬೆರೆಯುವ ಅವಕಾಶಗಳನ್ನು ನಿರ್ಮಿಸಿವೆ. ತರಬೇತಿಯ ನಂತರ ಒದಗುವ ಅನೌಪಚಾರಿಕ ಸಂದರ್ಭಗಳು ಎದೆ ಎದೆಗಳ ನಡುವಿನ ಕದಗಳನ್ನು ತೆರೆದು ಹೃದಯ ಸಂವಾದಕ್ಕೆ ಎಡೆ ಮಾಡಿಕೊಟ್ಟಿವೆ. ವೃತ್ತಿಪರ ನೆಲೆಯನ್ನು ಮೀರಿ, ಶಿಕ್ಷಕರನ್ನು ಮತ್ತು ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ವೈಯಕ್ತಿಕ ಹಾಗೂ ಮಾನವೀಯ ನೆಲೆಯಲ್ಲಿ ಹತ್ತಿರದಿಂದ ಅರಿಯಲು ಸಾಧ್ಯವಾಗಿದೆ. ಬಹಳ ಮುಖ್ಯವಾಗಿ, ನಿರ್ದಿಷ್ಟ ಸಲಹೆ, ಸೂಕ್ತ ಬೆಂಬಲ, ಪ್ರೋತ್ಸಾಹದಾಯಕ ವಾತಾವರಣ ದೊರೆತರೆ ಗಣನೀಯ ಪ್ರಮಾಣದ ಶಿಕ್ಷಕರು, ಅಧಿಕಾರಿಗಳು (ನಿಖರವಾಗಿ ಅಲ್ಲದಿದ್ದರೂ ಇದು ಶೇ. 25 ರಿಂದ 30ರಷ್ಟು ಇರಬಹುದು), ತಾವು ತೊಡಗಿಸಿಕೊಂಡ ಶಾಲೆಗಳಲ್ಲಿ ಧನಾತ್ಮಕ ಬದಲಾವಣೆಯನ್ನು ತಂದು, ಅಲ್ಲಿನ ಮಕ್ಕಳ ಸಮಗ್ರ ಬೆಳವಣಿಗೆಗೆ ಹಾತೊರೆಯುತ್ತಿದ್ದಾರೆ ಎನ್ನುವುದು ನಿಚ್ಚಳವಾಯಿತು.

ಶಿಕ್ಷಣ ಇಲಾಖೆಯ ಸಹಯೋಗದಲ್ಲಿ ಜಾರಿಗೊಳಿಸಿದ ಹಲವಾರು ಕಾರ್ಯಕ್ರಮಗಳು, ಶಿಕ್ಷಕರು ಮತ್ತು ಶೈಕ್ಷಣಿಕ ಅಧಿಕಾರಿಗಳಿಗಾಗಿ ಆಯೋಜಿಸಲಾದ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿದ್ದುದೇ ಮೊದಲಾಗಿ ವಿಸ್ತೃತ ಕ್ಷೇತ್ರಕಾರ್ಯದ ಅನುಭವದ ಕಾರಣ, ಶಿಕ್ಷಣಕ್ಷೇತ್ರವನ್ನು ಪ್ರಾಯೋಗಿಕವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು.

## ಕಲಿತಿರುವುದಕ್ಕಿಂತ ಕಲಿಯಬೇಕಾದದ್ದು ಅಗಾಧ

ವೈವಿಧ್ಯಮಯ ಶೈಕ್ಷಣಿಕ ವೃತ್ತಿ ಅನುಭವಗಳ ಹಿನ್ನೆಲೆಯಿರುವ ವ್ಯಕ್ತಿಗಳಿಗೆ ಫೌಂಡೇಷನ್ ನೆಲೆಯಾಗಿರುವುದರಿಂದ ಶಿಕ್ಷಣವನ್ನು ಸೈದ್ಧಾಂತಿಕ ನೆಲೆಯಲ್ಲಿ ಅರ್ಥೈಸಿಕೊಳ್ಳಲು ವಿಪುಲ ಅವಕಾಶಗಳು ಇರುತ್ತವೆ. ಶಿಕ್ಷಣ ಕ್ಷೇತ್ರದಲ್ಲೇ ದೀರ್ಘಕಾಲಿಕವಾಗಿ ಮುಂದುವರೆದು ತಮ್ಮ ವೃತ್ತಿಯನ್ನು ರೂಪಿಸಿಕೊಳ್ಳುವ, ಅಧ್ಯಯನಶೀಲರಾಗುವ ಉತ್ಕಟ ಆಸಕ್ತಿಯಿರುವವರಿಗಂತೂ ಮುಕ್ತ ಕಲಿಕೆಯ ಅವಕಾಶಗಳಿರುತ್ತವೆ. ಶಿಕ್ಷಕರ ವೃತ್ತಿಪರ ಬೆಳವಣಿಗೆಯಲ್ಲಿ ತೊಡಗುವ ಸಂಪನ್ಮೂಲ ವ್ಯಕ್ತಿಗಳಿಗೆ, ಅವರು ಆಯ್ಕೆ ಮಾಡಿಕೊಂಡ ವಿಷಯದಲ್ಲಿ ಆಳವಾದ ಜ್ಞಾನವನ್ನು ಪಡೆಯಲು ವಿಸ್ತೃತ ಓದು ಮತ್ತು ಜಿಜ್ಞಾಸೆ, ಶಾಲೆಗಳಿಗೆ ನಿಯತವಾಗಿ ಭೇಟಿ ನೀಡಿ ತರಗತಿ ಪ್ರಕ್ರಿಯೆ, ಶಾಲಾ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸುವುದು, ಸಂಪನ್ಮೂಲ ಸಾಮಗ್ರಿಗಳನ್ನು ತಯಾರಿಸಿಕೊಳ್ಳುವುದು, ಇವೆಲ್ಲವುಗಳ ಪರಿಣಾಮವಾಗಿ ಅವರ ಮನಸ್ಸಿನಲ್ಲಿ ಮೂಡುವ ಪ್ರಶ್ನೆಗಳನ್ನು ಇತರ ಸಹಸದಸ್ಯರೊಂದಿಗಿನ ಆಂತರಿಕ ವೇದಿಕೆಗಳಲ್ಲಿ ಸಂವಾದಗಳ ಮೂಲಕ ಪರ್ಯಾಲೋಚಿಸುವುದಕ್ಕೆ ಇಂತಹ ಪ್ರಕ್ರಿಯೆಗಳು ನೆರವಾಗುತ್ತವೆ. ಈ ಎಲ್ಲ ಅವಕಾಶಗಳೂ ನನಗಿದ್ದವು. ಜೊತೆಗೆ, ಶಿಕ್ಷಣ ಕ್ಷೇತ್ರದ ತಜ್ಞರೂ, ಮಹತ್ವದ ಶೈಕ್ಷಣಿಕ ನೀತಿ ನಿರೂಪಣಾ ದಾಖಲೆಗಳಿಗೆ ಕೊಡುಗೆ ನೀಡಿರುವ ರೋಹಿತ್ ಧನ್‌ಕರ್ ರೂಪಿಸಿದ 'ಇಂಟ್ರೊಡಕ್ಷನ್ ಟು ಎಜುಕೇಷನ್' ಕೋರ್ಸ್‌ನಲ್ಲಿ ಭಾಗವಹಿಸಿದ್ದರಿಂದ ಶಿಕ್ಷಣವನ್ನು ಯಾವ ಪರಿಪ್ರೇಕ್ಷೆಯಿಂದ ಗ್ರಹಿಸಬೇಕು, ಯಾವುದೇ ಆಯಾಮವನ್ನು ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ಹೇಗೆ ವಿಶ್ಲೇಷಿಸಿ ನೋಡಬೇಕು, ಸಂಕೀರ್ಣ ವಿಷಯಗಳನ್ನು ಕುರಿತು ನಿರ್ಣಯಿಸುವಾಗ ಎದುರಾಗುವ ವೈರುಧ್ಯಗಳನ್ನು ಯಾವ ರೀತಿ ಸಂಭಾಳಿಸಬೇಕು, ಗಂಭೀರವಾದ ಓದಿನಲ್ಲಿ ಹೇಗೆ ತೊಡಗಬೇಕು ಇವೇ ಮುಂತಾದ ಉಪಯುಕ್ತ ಒಳನೋಟಗಳು ದೊರೆತವು.

ಹಲವು ವರ್ಷಗಳ ಕ್ಷೇತ್ರಕಾರ್ಯದ ಅನುಭವದ ಹಿನ್ನೆಲೆಯೊಂದಿಗೆ ವಿಶ್ವವಿದ್ಯಾಲಯದ ಅನುವಾದ ಉಪಕ್ರಮದ ಜವಾಬ್ದಾರಿಯು 2017ರಲ್ಲಿ ನನ್ನ

ಹೆಗಲೇರಿದಾಗ ಪದವಿ ಮತ್ತು ಸ್ನಾತಕೋತ್ತರ ಹಂತದ ಕಾರ್ಯಕ್ರಮಗಳಿಗೆ ಅಗತ್ಯವಾದ ಸಂಪನ್ಮೂಲ ಸಾಮಗ್ರಿಗಳನ್ನು ಸಿದ್ಧಪಡಿಸುವುದರೊಂದಿಗೆ ಅವುಗಳನ್ನು ವಿಪುಲವಾಗಿ ಓದುವ ಅವಕಾಶ ದೊರೆಯಿತು. ವಿಶ್ವವಿದ್ಯಾಲಯದ ಶೈಕ್ಷಣಿಕ ನಿಯತಕಾಲಿಕೆಗಳು, ಇತರ ವಾಚಿಕೆಗಳ ತಯಾರಿಯಲ್ಲೂ ತೊಡಗಿದ್ದುದರಿಂದ ಅರಿವಿನ ವಿಸ್ತಾರವಾಯಿತು. ಮೊದಲಿನಿಂದ ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ ವಿಷಯಗಳನ್ನು ಕುರಿತಾದ ಓದಿನಲ್ಲಿ ತೊಡಗುವ ಹವ್ಯಾಸವಿತ್ತು. ಶಿಕ್ಷಣವನ್ನು ಒಳಗೊಂಡು ಇತರ ಅಭಿವೃದ್ಧಿ ಕ್ಷೇತ್ರಗಳಲ್ಲಿ ಆಳವಾಗಿ ತೊಡಗಿಕೊಂಡಿರುವ ಬರಹಗಾರರ ಕೃತಿಗಳ ಓದು ಇದಕ್ಕೆ ಪುಷ್ಟಿಯೊದಗಿಸಿತು. ಇದರ ಪರಿಣಾಮವಾಗಿ, ಇದುವರೆಗೆ ಕಲಿತಿರುವುದಕ್ಕಿಂತ ಕಲಿಯಬೇಕಾಗಿರುವುದು ಅಗಾಧವಾಗಿದೆ ಎಂಬುದು ಗೋಚರಿಸಿತು.

ಪಯಣವೇನೋ ಸಾಗುತ್ತಿದೆ. ಸುದೀರ್ಘ ಪಯಣದ ಹಾದಿಯಲ್ಲಿ ನಿಂತು, ದೇಹಾಲಸ್ಯವನ್ನು ಕಳೆದು, ವಿರಮಿಸಿ, ರೈಲಿನಲ್ಲಿ ಮುಂದೆ ಚಲಿಸುವಂತೆ, ಇದಾಗಲೇ ಸವೆಸಿದ ಹಾದಿಯನ್ನು ಕುರಿತು ಸ್ವಲ್ಪ ಮೆಲುಕು ಹಾಕುವ ಸಮಯ ಬಂದಿದೆ. ಅಂತೆಯೇ ಈ ಪಯಣದಲ್ಲಿ ಗಳಿಸಿದ ಕಲಿಕೆಗಳನ್ನು ಸಹಪಯಣಿಗರೊಂದಿಗೆ ಹಂಚಿಕೊಂಡು ಅವರ ಪ್ರತಿಸ್ಪಂದನೆಗಾಗಿ ಈ ಹೊತ್ತಗೆಯನ್ನು ಕೈಯಲ್ಲಿರಿಸುತ್ತಿದ್ದೇನೆ.



ಪ್ರತಿಯೊಂದು ಶಾಲೆಯೂ ಮುಕ್ತ ಹಾಗೂ ಧರ್ಮನಿರಪೇಕ್ಷ ಸಂಸ್ಥೆಯಾಗಿ ತನ್ನ ಪಾತ್ರ ನಿರ್ವಹಿಸುತ್ತದೆ ಎಂದು ಭಾವಿಸಲಾಗದು. ಆದರೆ, ಹಾಗೆ ಮಾಡುವ ಶಾಲೆ ರಾಷ್ಟ್ರದ ಬದುಕಿನಲ್ಲಿ ಕೇವಲ ಶೈಕ್ಷಣಿಕ ದೃಷ್ಟಿಯಿಂದ ಮಾತ್ರವಲ್ಲ, ಸಾಮಾಜಿಕವಾಗಿಯೂ ಪ್ರಮುಖ ಪಾತ್ರ ನಿರ್ವಹಿಸಿರುತ್ತದೆ.

**– ಆಂದ್ರೆ ಬೆತೇ**

# ಮಾಧ್ಯಮಿಕ ಶಾಲೆಯ ದಿನಗಳನ್ನು ನೆನೆದು...

ಕಳೆದ ವಾರ ಒಂದು ದಿನ, ನ್ಯಾಷನಲ್ ಮಿಡ್ಲ್ ಸ್ಕೂಲ್‌ನಲ್ಲಿ ಸಹಪಾಠಿಗಳಾಗಿದ್ದ ನಾವು ಕೆಲವರು ಒಟ್ಟಿಗೆ ಸೇರಿದ್ದೆವು. ಅಂದು ಸುಮಾರು ನಲವತ್ತು ವರ್ಷಗಳ ಬಳಿಕ, ಹಿಂದೆ ನಮ್ಮ ಶಿಕ್ಷಕರಾಗಿದ್ದವರಲ್ಲಿ ಏಳು ಜನರನ್ನು ಭೇಟಿ ಮಾಡಿದೆವು. ಅನೇಕ ವರ್ಷಗಳ ಹಿಂದೆಯೇ ನಿವೃತ್ತಿಯಾದ ಅವರಲ್ಲಿ ಕೆಲವರು ಎಂಬತ್ತರ ವಯಸ್ಸಿನಲ್ಲಿದ್ದರು. ನಾವು ಮೂವತ್ತಕ್ಕೂ ಹೆಚ್ಚು ಜನ ವಾಟ್ಸ್ಯಾಪ್ ಗುಂಪಿನ ಮೂಲಕ ಪರಸ್ಪರ ಸಂಪರ್ಕಕ್ಕೆ ಬಂದಿದ್ದೇ ಒಂದು ಸಂತೋಷಕರ ಬೆರಗಾಗಿತ್ತು. ನಮ್ಮ ಪ್ರಾಥಮಿಕ ಶಾಲೆಯ ಶಿಕ್ಷಕರೊಡನೆ ಸಂಪರ್ಕವನ್ನು ಸಾಧಿಸಲು ಸಾಧ್ಯವಾಗಿದ್ದಂತೂ ಪವಾಡವೇ ಸರಿ.

ನಮ್ಮಲ್ಲಿ ಕೆಲವರು ಆ ಶಾಲೆಯಲ್ಲಿ ಏಳು ವರ್ಷಗಳ ಕಾಲ ಓದಿದ್ದೆವು. ಕೆಲವರು ಅದಕ್ಕಿಂತ ಕಡಿಮೆ ಕಾಲ ಓದಿದ್ದರು. ಏನೇ ಆದರೂ ಆ ಶಿಕ್ಷಕರು ನಮ್ಮ ಬೆಳವಣಿಗೆಯ ಮುಖ್ಯ ವರ್ಷಗಳಲ್ಲಿ ನಮಗೆ ಕಲಿಸಿದವರಾಗಿದ್ದರು. ಅವರ ದೃಷ್ಟಿಯಲ್ಲಿ, ಒಮ್ಮೆ ನಾವೆಲ್ಲ ಅವರ ಪುಟ್ಟ, ತುಂಟ ವಿದ್ಯಾರ್ಥಿಗಳಾಗಿದ್ದವರು. ಆದರೆ ಈಗ ಉತ್ತಮ ರೀತಿಯಲ್ಲಿ ನೆಲೆಗೊಂಡಿದ್ದೇವೆ. ಸಾಕಷ್ಟು ಒಳ್ಳೆಯ ಹುದ್ದೆಗಳಲ್ಲಿದ್ದೇವೆ. ಶಿಕ್ಷಕರಲ್ಲಿ ಎಲ್ಲರಿಗಿಂತ ಹಿರಿಯರಾಗಿದ್ದವರು ಹೇಳಿದ ಹಾಗೆ, 'ಬದುಕಿನ ಅನೇಕ ಏರಿಳಿತಗಳನ್ನು ಸ್ವತಃ ಕಂಡುಂಡ.' ನಮ್ಮನ್ನು ನೋಡಲು

ಅವರಿಗೆ ತುಂಬಾ ಹೆಮ್ಮೆಯೆನಿಸುತ್ತಿತ್ತು. ಅಂದು ನಾವು ಅವರೊಂದಿಗೆ ಕಳೆದ ಮೂರು ಗಂಟೆಗಳ ಕಾಲ, ಪ್ರತಿ ಕ್ಷಣವೂ ಅವರಿಗೆ ಆನಂದವನ್ನು ಉಂಟುಮಾಡಿದ್ದು ಸಹಜ. ವಿಪರ್ಯಾಸವೆಂದರೆ, ತಮ್ಮ ಬದುಕಿನ ಇಳಿಗಾಲದಲ್ಲಿ ನಮ್ಮ ಗುಂಪು ಅವರನ್ನು ನೆನಪಿಸಿಕೊಂಡ ರೀತಿಯಿಂದಾಗಿ ಅವರು ಭಾವುಕರಾದರು. ನಿವೃತ್ತಿಯ ಸಮಯದಲ್ಲಿ ಪದ್ಧತಿಯಂತೆ 'ಔಪಚಾರಿಕ' ರೀತಿಯಲ್ಲಿ ನಡೆದ ಬೀಳ್ಕೊಡುಗೆ ಸಮಾರಂಭದಲ್ಲಿ ತಾವು ಪಡೆದ ಸನ್ಮಾನಕ್ಕಿಂತಲೂ ಅಂದು ತಮ್ಮ ಶಿಷ್ಯರಿಂದ ಸಿಕ್ಕ ಗೌರವ ಹೆಚ್ಚು ಅರ್ಥಪೂರ್ಣವಾದುದು ಎಂದು ಹೇಳಿದರು.

ನಮ್ಮ ಶಾಲಾ ಅನುಭವಗಳು ಹೇಗೆ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಬ್ಬರಿಗೂ ಸಮಾನವಾದ ರೀತಿಯಲ್ಲಿ ಸಮೃದ್ಧವೂ ಫಲಕಾರಿಯೂ ಆಗಿದ್ದವು ಎನ್ನುವುದನ್ನು ಅಂದು ಬೆಳಗ್ಗೆ ನಾನು ಕಂಡ ಹಲವಾರು ವಿಶಿಷ್ಟ ಅಂಶಗಳು ತೋರಿಸಿಕೊಟ್ಟವು.

ನಾನು ಓದುತ್ತಿದ್ದ ದಿನಗಳಲ್ಲಿ ಪ್ರಾಥಮಿಕ ಹಂತದಲ್ಲಿ ಕನ್ನಡವು ಬೋಧನೆಯ ಮಾಧ್ಯಮವಾಗಿದ್ದುದು ವಿಶೇಷ ಸಂಗತಿಯಾಗಿರಲಿಲ್ಲ (ಈ ಆಯ್ಕೆಯು ಮುಂದೆ ಪ್ರೌಢ ಹಾಗೂ ಪದವಿಪೂರ್ವ ತರಗತಿಗಳಲ್ಲಿಯೂ ಲಭ್ಯವಿತ್ತು. ಆದರೆ ನಮ್ಮಲ್ಲಿ ಹಲವರು ಪ್ರೌಢಶಾಲಾ ಹಂತದಲ್ಲಿ ಇಂಗ್ಲಿಷ್ ಮಾಧ್ಯಮವನ್ನು ಆಯ್ದುಕೊಂಡೆವು). ಇದರಿಂದ ವಿದ್ಯಾರ್ಥಿಗಳು ಅಡೆತಡೆಗಳಿಲ್ಲದೆ ಮುಕ್ತವಾಗಿ ತಮ್ಮನ್ನು ತಾವೇ ಅಭಿವ್ಯಕ್ತಿಪಡಿಸಿಕೊಳ್ಳಬಹುದಿತ್ತು. ಶೈಕ್ಷಣಿಕವಾಗಿ ಮತ್ತು ಜೀವನ ಕೌಶಲ, ಮೌಲ್ಯ, ಮನೋಭಾವಗಳ ವಿಚಾರದಲ್ಲಿಯೂ ಕೂಡ ಬೆಳವಣಿಗೆ ಹೊಂದಲು ಇದು ಅನುಕೂಲ ಮಾಡಿಕೊಟ್ಟಿತ್ತು. ಕ್ರೀಡೆ, ಆಟೋಟಗಳು, ಸಂಗೀತ, ನೃತ್ಯಗಳಂತಹ ಸಹಪಠ್ಯ ಚಟುವಟಿಕೆಗಳಲ್ಲಿ ಕೂಡ ಸಕ್ರಿಯವಾಗಿ ಭಾಗವಹಿಸಲು ಅನುವು ಮಾಡಿಕೊಡುತ್ತಿತ್ತು. ಇನ್ನಿತರ ಭಾಷೆಗಳಲ್ಲದಿದ್ದರೂ (ವಿದ್ಯಾರ್ಥಿಗಳಲ್ಲಿ ಹಲವರು ತೆಲುಗು, ತಮಿಳು, ಮರಾಠಿ ಮತ್ತು ಉರ್ದು ಮಾತೃಭಾಷೆಯನ್ನು ಹೊಂದಿದವರಾಗಿದ್ದರೂ) ದಿನನಿತ್ಯ ಭಗವದ್ಗೀತೆಯ ಶ್ಲೋಕಗಳನ್ನು ಪಠಿಸಬೇಕಿದ್ದ ಕಾರಣ ನಮಗೆ ಸಂಸ್ಕೃತದ ಶ್ರೀಮಂತಿಕೆಯ ಪರಿಚಯವಾಯಿತು. ನಾವು ಬೆಳೆದಿದ್ದು ಬಹುಭಾಷಾ ಪರಿಸರವಾಗಿದ್ದ ಕಾರಣ, ಎರಡು ಅಥವಾ ಮೂರಕ್ಕಿಂತಲೂ ಹೆಚ್ಚು ಭಾಷೆಗಳಲ್ಲಿ ಪ್ರಾಥಮಿಕ ಮಟ್ಟದ ಜ್ಞಾನವನ್ನು ಪಡೆದುಕೊಳ್ಳಲು ಹಾಗೂ ಸಂವಹನದ ಸಾಮರ್ಥ್ಯವನ್ನು ಹೊಂದಲು ಸಾಧ್ಯವಾಯಿತು. ಇಂತಹ ಸನ್ನಿವೇಶದಲ್ಲಿ ನಮ್ಮ ಸುತ್ತಮುತ್ತಲಿನ ಪರಿಸರದೊಂದಿಗೆ ಸಹಬಾಳ್ವೆಯನ್ನು ನಡೆಸಲು ಹಾಗೂ ಜನಜೀವನದ ಅನುಭವಗಳನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತಿದ್ದುದು ಸಹಜ. ನನ್ನ ಬಹುತೇಕ ಸಹಪಾಠಿಗಳು ಎಂಜಿನಿಯರ್‌ಗಳು, ವೈದ್ಯರು, ತಾಂತ್ರಿಕತಜ್ಞರು, ಉದ್ಯಮಿಗಳು ಹೀಗೆ ಒಂದಲ್ಲ ಒಂದು ವೃತ್ತಿಯಲ್ಲಿ ಅಥವಾ ಮನೆವಾರ್ತೆಯ ಮೂಲಕ ಕುಟುಂಬಕ್ಕೆ

ಆಧಾರವಾಗಿರುವವರು. ಜೀವನದಲ್ಲಿ ಸಾಕಷ್ಟು ಯಶಸ್ವಿಗಳಾಗಿದ್ದಾರೆ ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ಕೆಲವರು ಕಲಾವಿದರಾಗಿ, ನಟರಾಗಿ, ಕ್ರೀಡಾಪಟುಗಳಾಗಿ ಇನ್ನಿತರ ಕ್ಷೇತ್ರಗಳಲ್ಲಿ ಅತ್ಯುತ್ತಮ ಸಾಧನೆಯನ್ನು ಮಾಡಿದ್ದಾರೆ. ನಾವು ನಮ್ಮ ಬದುಕಿನಲ್ಲಿ ಏನೇ ಆಗಿದ್ದರೂ ಎಲ್ಲಿಯೇ ಇದ್ದರೂ ಸ್ವತಂತ್ರ ಮನೋಭಾವವನ್ನು ಹೊಂದಿದವರಾಗಿದ್ದೇವೆ, ನಮ್ಮ ಆಯ್ಕೆಗಳನ್ನು ಮಾಡಿಕೊಳ್ಳುವ ಹಾಗೂ ಅದಕ್ಕೆ ಬದ್ಧರಾಗಿರುವ ಸಾಮರ್ಥ್ಯವನ್ನು ಹೊಂದಿದ್ದೇವೆ. ಪ್ರಾಥಮಿಕ ಮಟ್ಟದಲ್ಲಿಯೂ ಕೂಡ ಮಕ್ಕಳಿಗೆ ಕೇವಲ ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣವನ್ನು ನೀಡಬೇಕು ಎಂದು ಪ್ರಬಲವಾಗಿ ವಾದಿಸುವವರ ಎದುರು ಇದು ಮತ್ತೊಂದು ವೈರುಧ್ಯಮಯ ನಿದರ್ಶನವನ್ನು ಒದಗಿಸುತ್ತದೆ.

ಗಮನಾರ್ಹವಾದ ಮತ್ತೊಂದು ಸಂಗತಿಯೆಂದರೆ, ಶಿಕ್ಷಕರಲ್ಲಿ ಪರಸ್ಪರ ಇದ್ದ ಸೌಹಾರ್ದಯುತ ಸಂಬಂಧ. ಅವರಲ್ಲಿ ಕೆಲವರು ನಿವೃತ್ತಿಯಾದ ಮೇಲೆಯೂ ತಮ್ಮ ನಡುವಿನ ಸಂಪರ್ಕವನ್ನು ಉಳಿಸಿಕೊಂಡಿದ್ದರು. ಆದರೆ ಬಹುತೇಕವಾಗಿ ಒಬ್ಬರನ್ನೊಬ್ಬರು ಭೇಟಿಯಾಗುತ್ತಿದ್ದುದು ಹಲವಾರು ವರ್ಷಗಳ ನಂತರವೇ ಆಗಿತ್ತು. ಅವರು ಪರಸ್ಪರರಲ್ಲಿ ಹೊಂದಿದ್ದ ಪ್ರೀತಿ, ವಿಶ್ವಾಸ ಹಾಗೂ ಗೌರವಗಳು ಅವರ ನಡುವೆ ಇದ್ದ ನಿಜವಾದ ಬಾಂಧವ್ಯವನ್ನು ತೋರಿಸುತ್ತಿದ್ದವು ಹಾಗೂ ಅವರು ಶಿಕ್ಷಕರಾಗಿದ್ದಾಗಿನ ದಿನಗಳಲ್ಲಿ ಸಹೋದ್ಯೋಗಿಗಳಾಗಿ ಅವರು ತಮ್ಮೊಳಗೆ ಹೊಂದಿದ್ದ ಸಂಬಂಧವು ಹೇಗಿತ್ತು ಎಂಬುದನ್ನು ಸೂಚಿಸುತ್ತಿದ್ದವು. ಹಾಗಾಗಿ, ಅವರ ವಯಸ್ಸು ಮತ್ತು ಹಿರಿತನಗಳ ದೆಸೆಯಿಂದ, ನಂತರ ಕೆಲಸಕ್ಕೆ ಸೇರಿದ ಕೆಲವು ಶಿಕ್ಷಕರು ವೃತ್ತಿಗೆ ಸಂಬಂಧಿಸಿದಂತೆ ಅವರಲ್ಲಿ ಹಿರಿಯರಾದವರ ಸಲಹೆ, ಮಾರ್ಗದರ್ಶನವನ್ನು ಪಡೆಯುತ್ತಿದ್ದುದು ಸಹಜ. ಹಿರಿಯ ಶಿಕ್ಷಕರು ತಮ್ಮ ಕಿರಿಯ ಸಹೋದ್ಯೋಗಿಗಳನ್ನು ಅನೌಪಚಾರಿಕ ರೀತಿಯಲ್ಲಿ ಸುಸಂಸ್ಕೃತರನ್ನಾಗಿಸಿದ್ದಷ್ಟೇ ಅಲ್ಲ, ಒಟ್ಟಾರೆ ಅವರ ಬದುಕಿನಲ್ಲಿ ಎದುರಾದ ಇನ್ನಿತರ ಹಲವಾರು ಸಮಸ್ಯೆಗಳಿಗೆ ಕೂಡ ಸಲಹೆ ನೀಡಲು ಬಹುತೇಕವಾಗಿ ಲಭ್ಯವಿರುತ್ತಿದ್ದರು. ತಮ್ಮದೇ ಮಾರ್ಗಗಳನ್ನು ಕಂಡುಕೊಳ್ಳಲು, ನಿಧಾನಕ್ಕೆ ಆದರೆ ದೃಢವಾಗಿ ತಮ್ಮದೇ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಅವರಿಗೆ ನೆರವಾಗುತ್ತಿದ್ದರು. ಅದು ಯಾವುದೇ ವಿಷಯಕ್ಕೆ ಸಂಬಂಧಿಸಿದ ಚಿಕ್ಕ ಸಲಹೆಯೂ ಆಗಿದ್ದಿರಬಹುದು. ಉದಾಹರಣೆಗೆ, ನಿಭಾಯಿಸಲು ಕಷ್ಟವಾದ ತರಗತಿ ಅಥವಾ ವಿದ್ಯಾರ್ಥಿಗೆ ಸಂಬಂಧಿಸಿದ್ದಿರಬಹುದು, ಸರ್ಕಾರ ಅಥವಾ ಆಡಳಿತ ಮಂಡಳಿಯ ಜೊತೆಗಿನ ವ್ಯಾವಹಾರಿಕ ಸಂಗತಿಯಿರಬಹುದು (ಅದು, ಬೆಂಗಳೂರು ಹಾಗೂ ಅದರ ಸುತ್ತಮುತ್ತಲಿನ ಇನ್ನಿತರ ಗ್ರಾಮೀಣ ಭಾಗಗಳಲ್ಲಿ ಹದಿನಾಲ್ಕು ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುವ ಡಾ. ಎಚ್. ನರಸಿಂಹಯ್ಯ ಅವರ ಅಧ್ಯಕ್ಷತೆಯ ನ್ಯಾಷನಲ್ ಎಜುಕೇಷನ್

ಸೊಸೈಟಿಯು ನಡೆಸುತ್ತಿದ್ದ ಸರ್ಕಾರಿ ಅನುದಾನಿತ ಶಾಲೆಯಾಗಿತ್ತು) ಅಥವಾ ಕೇವಲ ಅವರ ಬದುಕಿಗೆ ಸಂಬಂಧಿಸಿದ ಯಾವುದೇ ವೈಯಕ್ತಿಕ ತೀರ್ಮಾನವನ್ನು ತೆಗೆದುಕೊಳ್ಳುವುದಾಗಿರಬಹುದು. ಅವರಿಗೆ ಪರಸ್ಪರರ ಕುಟುಂಬಗಳ ಪರಿಚಯ ಚೆನ್ನಾಗಿ ಇತ್ತು. ಅವರೆಲ್ಲರೂ ಒಂದೇ ಮನೋಭಾವದವರಾಗಿರಲಿಲ್ಲ. ಆದರೆ ಪರಸ್ಪರರ ಶಕ್ತಿ–ಸಾಮರ್ಥ್ಯ ಹಾಗೂ ಅನನ್ಯತೆಗಳನ್ನು ಗೌರವಿಸುತ್ತಿದ್ದರು. ಇದರಿಂದ ಅವರಿಗೆ ಒಟ್ಟಾರೆ ಒಂದು ತಂಡವಾಗಿ ಶಾಲೆಯ ಕೆಲಸಕಾರ್ಯಗಳನ್ನು ನಡೆಸಿಕೊಂಡು ಹೋಗಲು, ಹಲವಾರು ಅಡ್ಡಿ–ಆತಂಕಗಳನ್ನು ನಿವಾರಿಸಿಕೊಂಡು ಮುನ್ನಡೆಯಲು ಸಾಧ್ಯವಾಗಿತ್ತು.

ಸಂಸ್ಥೆಯು, ನಿಜವಾದ ರಾಷ್ಟ್ರೀಯತೆಯ ಭಾವನೆಗಳನ್ನು ಒಳಗೊಂಡಿರುವ, ನಿರ್ದಿಷ್ಟವಾದ ಒಂದು ವ್ಯಾಪಕ ದೃಷ್ಟಿಕೋನವನ್ನು ಹೊಂದಿದ್ದರಿಂದ, ಯಾವುದೇ ಸಾಮಾಜಿಕ, ಆರ್ಥಿಕ ವರ್ಗಕ್ಕೆ ಸೇರಿದವರಾಗಿದ್ದರೂ ಕೂಡ ವಿವಿಧ ಧರ್ಮ, ಭಾಷೆ ಹಾಗೂ ಸಂಸ್ಕೃತಿಗಳ ಹಿನ್ನೆಲೆಯಿಂದ ಬಂದ ವಿದ್ಯಾರ್ಥಿಗಳಿಗೆ ಶಾಲೆಯಲ್ಲಿ ದಾಖಲಾತಿಯನ್ನು ನೀಡಲಾಗುತ್ತಿತ್ತು. ಇದು ವೈವಿಧ್ಯತೆಯನ್ನು ಬೆಳೆಸುವಲ್ಲಿ (ಶಿಕ್ಷಣ ಹಕ್ಕು ಕಾಯಿದೆಯು ಬರುವುದಕ್ಕಿಂತ ಸಾಕಷ್ಟು ಮೊದಲೇ) ಮಹತ್ವದ ಪಾತ್ರವನ್ನು ವಹಿಸಿತು. ಶಾಲೆಯ ಆಚರಣೆ–ಅಭ್ಯಾಸಗಳು ಪ್ರಜ್ಞಾಪೂರ್ವಕವಾಗಿ ನಮ್ಮ ಸಂಸ್ಕೃತಿಯ ವಿಶಿಷ್ಟ ಮೌಲ್ಯಗಳು ಹಾಗೂ ವೈಶಿಷ್ಟ್ಯಗಳನ್ನು ಆಧರಿಸಿರುವಂತೆ ಕೂಡ ಮಾಡಿದರು. ಕೃಷ್ಣ ಜನ್ಮಾಷ್ಟಮಿಯನ್ನು (ಶಾಲೆಯ ವಾರ್ಷಿಕೋತ್ಸವದ ಸಮಯದಲ್ಲಿಯೇ ಬರುತ್ತಿದ್ದ ಅದನ್ನು ಹಬ್ಬವೆನ್ನುವುದಕ್ಕಿಂತಲೂ ಹೆಚ್ಚಾಗಿ ಒಂದು ಸಾಂಸ್ಕೃತಿಕ ಸಮಾರಂಭದಂತೆ ಆಚರಿಸಲಾಗುತ್ತಿತ್ತು.) ಆಚರಿಸುವಷ್ಟೇ ಸಂಭ್ರಮದಿಂದ ರಾಷ್ಟ್ರೀಯ ಹಬ್ಬಗಳನ್ನು ಆಚರಿಸಲಾಗುತ್ತಿತ್ತು. ಇದು ನಮ್ಮಲ್ಲಿ ಒಂದು ರೀತಿಯಲ್ಲಿ ಸುಪ್ತವಾಗಿ ರಾಷ್ಟ್ರೀಯ ಹಾಗೂ ಧರ್ಮನಿರಪೇಕ್ಷ ಭಾವನೆಗಳನ್ನು ಸಹಜರೀತಿಯಿಂದ (ಅಬ್ಬರದ ರಾಷ್ಟ್ರಪ್ರೇಮಕ್ಕೆ ವಿರುದ್ಧವಾಗಿ) ಹುಟ್ಟುಹಾಕುತ್ತಿತ್ತು. ಇಂತಹ ಚಾರಿತ್ರ್ಯನಿರ್ಮಾಣ ಪ್ರಕ್ರಿಯೆಗಳಲ್ಲಿ ನೆರವಾದ ಮಹತ್ವದ ಅಂಶವೆಂದರೆ, ಶಿಕ್ಷಕರಲ್ಲಿ ಹಲವರು ಸರಳ ಜೀವನ ಹಾಗೂ ಉನ್ನತ ವಿಚಾರ ಎಂಬ ಗಾಂಧೀಮಾರ್ಗವನ್ನು ಅನುಸರಿಸುತ್ತಿದ್ದುದು. ಇದು, ಜೀವನಪರ್ಯಂತ ಬ್ರಹ್ಮಚಾರಿಯಾಗಿಯೇ ಉಳಿಯುವುದು, ಸ್ವತಃ ಅಡುಗೆ–ಸ್ವಚ್ಛತೆಯ ಕೆಲಸಗಳನ್ನು ಮಾಡಿಕೊಳ್ಳುತ್ತ ಒಂದೇ ಕೋಣೆಯನ್ನುಳ್ಳ ಪುಟ್ಟ ಮನೆಯಲ್ಲಿ ಸ್ವತಂತ್ರವಾಗಿ ವಾಸಿಸುವುದು, ಸದಾ ಟೊಪ್ಪಿಗೆ ಧರಿಸುವುದರ ಜೊತೆಗೆ ಶುಭ್ರವಾದ ಖಾದಿ ಪಂಚೆ ಜುಬ್ಬಾಗಳನ್ನಷ್ಟೇ ತೊಡುವುದು (ಅಥವಾ ಬಿಳಿ ಪ್ಯಾಂಟ್ ಮತ್ತು ಅಂಗಿ), ತಿಳುವಳಿಕೆಯುಳ್ಳವರಾಗಿದ್ದು ನಿರಂತರ ಓದಿನಿಂದ ತಮ್ಮ ಜ್ಞಾನದ ಮಟ್ಟವನ್ನು ಹೆಚ್ಚಿಸಿಕೊಳ್ಳುತ್ತಲೇ ಇರುವುದು, ಬದುಕಿನ ಕುರಿತಾಗಿ

ವಿಶಾಲ ದೃಷ್ಟಿಕೋನವನ್ನು ಬೆಳೆಸಿಕೊಳ್ಳುವುದು ಹಾಗೂ ವಸ್ತುನಿಷ್ಠತೆಯನ್ನು, ಸಮಚಿತ್ತತೆ ಕಾಯ್ದುಕೊಳ್ಳುವುದು ಇತ್ಯಾದಿ ಅನೇಕ ರೀತಿಗಳಿಂದ ಬಾಹ್ಯರೂಪದಲ್ಲಿ ಪ್ರಕಟವಾಗುತ್ತಲೇ ಇತ್ತು.

ಹಿಂದಿರುಗಿ ನೋಡಿದರೆ, ಬಹಳಷ್ಟು ಶಿಕ್ಷಕರು ಸಾಧಾರಣ ಹಿನ್ನೆಲೆಯಿಂದ ಬಂದವರಾಗಿದ್ದು ಕೇವಲ ಮೂಲಭೂತ ಶೈಕ್ಷಣಿಕ ಅರ್ಹತೆಗಳನ್ನಷ್ಟೇ ಹೊಂದಿದ್ದರು. ಹಾಗಿದ್ದರೂ ಅವರು ಈ ಕೊರತೆಗಳನ್ನು ಮೀರಿ, ಶಿಕ್ಷಕರಾಗಿ ತಮ್ಮ ಪಾತ್ರಕ್ಕೆ ನ್ಯಾಯ ಒದಗಿಸಿದರು, ಶ್ರದ್ಧೆ ಹಾಗೂ ಬದ್ಧತೆಯಿಂದ ಕೆಲಸ ಮಾಡಿದರು. ಅವರು ಕೇವಲ ಸಂಬಳಕ್ಕಾಗಿ ಕೆಲಸ ಮಾಡಲಿಲ್ಲ ಎನ್ನುವುದು ಸ್ಪಷ್ಟ. ತರಗತಿಯಲ್ಲಿ ಪಾಠ ಮಾಡುವಾಗ (ಅವರಲ್ಲಿ ಕೆಲವರು ನಿರ್ದಿಷ್ಟ ವಿಷಯದಲ್ಲಿ ಪದವಿ ಪಡೆದವರಾಗಿದ್ದರೂ ಇನ್ನಿತರ ಹಲವಾರು ವಿಷಯಗಳನ್ನೂ ಬೋಧಿಸುತ್ತಿದ್ದರು ಹಾಗೂ ಹಾಗೆ ಮಾಡುತ್ತಲೇ ಅವುಗಳ ಪ್ರಾಥಮಿಕ ಮಟ್ಟದ ಜ್ಞಾನವನ್ನು ಅನುಭವದಿಂದ ಸಂಪಾದಿಸಿಕೊಂಡರು) ಮತ್ತು ಬೆಳಗಿನ ಪ್ರಾರ್ಥನೆ, ಸಾಂಸ್ಕೃತಿಕ ಕಾರ್ಯಕ್ರಮಗಳು, ಒಳಾಂಗಣ ಮತ್ತು ಹೊರಾಂಗಣ ಕ್ರೀಡೆಗಳು, ಎನ್‌ಸಿಸಿ, ಸ್ಕೌಟ್ಸ್ ಅಂಡ್ ಗೈಡ್ಸ್ ಮುಂತಾದ ಶಾಲೆಯ ಇನ್ನಿತರ ಪ್ರಕ್ರಿಯೆಗಳನ್ನು ಅತ್ಯುತ್ತಮವಾಗಿ ನಿರ್ವಹಿಸಿದರು. ಶಾಲೆಯಲ್ಲಿ ದೊಡ್ಡದಾದ ಆಟದ ಮೈದಾನವಿತ್ತು. ಅದರ ಸುತ್ತಲೂ ಉದ್ಯಾನವನ. ವೇದಿಕೆಯನ್ನು ಹೊಂದಿದ್ದ ಬೃಹತ್ ಸಭಾಂಗಣವು ಸಹಪಠ್ಯ ಚಟುವಟಿಕೆಗಳು ಧಾರಾಳವಾಗಿ ನಡೆಯಲು ಅನುವು ಮಾಡಿಕೊಟ್ಟಿತ್ತು. (ನನಗೆ ಕ್ರಿಕೆಟ್‌ನ ಪರಿಚಯವಾಗಿದ್ದೇ ಈ ಶಾಲೆಯಲ್ಲಿ. ಕ್ರಿಕೆಟ್ ಮೈದಾನದಲ್ಲಿ ಕಳೆದ ಆ ಸಮಯವನ್ನು ಈಗಲೂ ಪ್ರೀತಿಯಿಂದ ನೆನೆಯುತ್ತೇನೆ!) ಎಲ್ಲಕ್ಕಿಂತ ಮುಖ್ಯವಾಗಿ, ಶಿಕ್ಷಕರು ಮಕ್ಕಳ ಒಡನಾಟವನ್ನು ಇಷ್ಟಪಡುತ್ತಿದ್ದರು ಹಾಗೂ ಶಾಲೆಯ ಬಗ್ಗೆ ಅವರಿಗೆ ಪ್ರೀತಿಯಿತ್ತು. ತಾವು ಯಾವುದೇ ವಿಷಯವನ್ನು ಕಲಿಸಲಿ, ಅವರಲ್ಲಿ ಹೆಮ್ಮೆ, ಅಭಿಮಾನವಿದ್ದುದನ್ನು ಕಾಣಬಹುದಿತ್ತು. ಕಲೆ ಮತ್ತು ಕರಕುಶಲ ಚಟುವಟಿಕೆಗಳನ್ನು ಕಲಿಸುವ ಅಥವಾ ದೈಹಿಕ ಶಿಕ್ಷಣವನ್ನು ಕಲಿಸುವ ಶಿಕ್ಷಕರಿಗೂ ಗೌರವವಿತ್ತು!

ಸಂಸ್ಥೆಯು ಕೂಡ ಶಿಕ್ಷಣದ ಮೂಲಕ ಒಟ್ಟಾರೆ ಸಾಮಾಜಿಕ ಗುರಿಗಳಿಗೆ ಕೊಡುಗೆ ನೀಡುವ ಉದ್ದೇಶ ಮತ್ತು ಆ ಕುರಿತು ಸ್ಪಷ್ಟ ಕಾಣ್ಕೆಯನ್ನು ಹೊಂದಿತ್ತು. ಆ ಪ್ರಕ್ರಿಯೆಯ ಭಾಗವಾಗಿ, ಶಿಕ್ಷಕರ ಹಿತಾಸಕ್ತಿಯನ್ನು ಕಾಪಾಡುವುದು ಅದರ ಅತ್ಯಂತ ಮುಖ್ಯ ಆಶಯವಾಗಿತ್ತು. ಹಾಗಾಗಿ, ಕೆಲಸ ಮಾಡಲು ಬೆಂಬಲವನ್ನು ನೀಡುವ ಹಾಗೂ ಉತ್ತೇಜನಪೂರ್ವಕ ವಾತಾವರಣವನ್ನು ಒದಗಿಸುವ ಮೂಲಕ ಅವರ ಪ್ರಯತ್ನಗಳನ್ನು ಪ್ರೋತ್ಸಾಹಿಸುತ್ತಿತ್ತು. ಆಡಳಿತ ಮಂಡಳಿ ಹಾಗೂ ವಿಶೇಷವಾಗಿ ಎಚ್ಚೆನ್ (ಎಚ್. ನರಸಿಂಹಯ್ಯ ಅವರ ಹೆಸರಿನ ಸಂಕ್ಷಿಪ್ತ ರೂಪ) ಅವರು

ಶಿಕ್ಷಕರನ್ನು ನೇಮಕ ಮಾಡಿಕೊಳ್ಳುವಾಗ ಅವರ ಶೈಕ್ಷಣಿಕ ಸಾಮರ್ಥ್ಯಕ್ಕಿಂತಲೂ ಹೆಚ್ಚಾಗಿ ಬದ್ಧತೆ ಮತ್ತು ಕಲಿಯುವ ಆಸಕ್ತಿಯನ್ನು ನೋಡುತ್ತಿದ್ದರು. ಮಕ್ಕಳಿಗೆಂದು ಆಯೋಜಿಸಿದ ಕ್ರೀಡೆ, ಸಾಂಸ್ಕೃತಿಕ ಕಾರ್ಯಕ್ರಮಗಳ ಸಮಯದಲ್ಲಿ ಅವರೊಂದಿಗೆ ಆಗಾಗ ಅನೌಪಚಾರಿಕವಾಗಿ ಬೆರೆತು, ಒಡನಾಡುತ್ತಿದ್ದರು, ಅವರೊಡನೆ ಸ್ಥಳೀಯ ಸಂಗೀತ ಕಛೇರಿಗಳಲ್ಲಿ ಕೂಡ ಪಾಲ್ಗೊಳ್ಳುತ್ತಿದ್ದರು.

ಅಂದಿನ ದಿನಗಳಲ್ಲಿ ಶಿಕ್ಷಕರ ಕೆಲಸವು ಯಾವ ರೀತಿಯಲ್ಲಿಯೂ ಸುಲಭದ್ದಾಗಿರಲಿಲ್ಲ. ಶಾಲೆಯಲ್ಲಿ ಒಂದೂವರೆ ಸಾವಿರಕ್ಕೂ ಹೆಚ್ಚಿನ ಸಂಖ್ಯೆಯ ಮಕ್ಕಳಿದ್ದರು. ಬೇರೆ ಬೇರೆ ವಿಭಾಗಗಳಿದ್ದರೂ ಒಂದೊಂದು ತರಗತಿಯಲ್ಲಿಯೂ ಎಂಬತ್ತು–ತೊಂಬತ್ತು ವಿದ್ಯಾರ್ಥಿಗಳಿದ್ದರು. ದೊಡ್ಡ ತರಗತಿಯೊಂದರಲ್ಲಿ ವಿವಿಧ ರೀತಿಯ ವಿದ್ಯಾರ್ಥಿಗಳನ್ನು ನಿಭಾಯಿಸುವುದು ಅಂದರೆ ತುಂಬಾ ಹೆದರಿಕೆ ಹುಟ್ಟಿಸುವಂತಹುದೇ ಆಗಿದ್ದಿರಬೇಕು ವಿಶೇಷವಾಗಿ, ಎಲ್ಲಾ ವಿದ್ಯಾರ್ಥಿಗಳೂ 'ಅಮೂಲ್ಯ ರತ್ನ'ಗಳೇ ಆಗಿರುತ್ತಿರಲಿಲ್ಲ. ತೊಂದರೆ ಕೊಡುವಂತಹ ಕೆಲವರು ಆ ಶಾಲೆಯಲ್ಲಿಯೂ ಇದ್ದರು. ಕಳೆದ ವಾರ ನಾವೆಲ್ಲ ಒಟ್ಟು ಸೇರಿದ್ದಾಗ, ನಮ್ಮ ಸಮಾಜ ವಿಜ್ಞಾನ ಶಿಕ್ಷಕರು ಅಂತಹದೊಂದು ಘಟನೆಯನ್ನು ಹಂಚಿಕೊಂಡರು. ಒಮ್ಮೆ ಒರಟು ಹುಡುಗನೊಬ್ಬ ಕೆಸರಾದ ಸಮವಸ್ತ್ರವನ್ನು ಧರಿಸಿ ತರಗತಿಗೆ ಬರುತ್ತಿದ್ದುದನ್ನು ಅವರು ನೋಡಿದರು. ಆತ ತನ್ನ ಕುತ್ತಿಗೆ ಪಟ್ಟಿಯ ಹಿಂಭಾಗದ ಬಳಿ ಉದ್ದನೆಯ ಸರಳಿನಂತಹದ್ದೇನನ್ನೋ (ಕಂಬಿ) ಅಡಗಿಸಿಕೊಂಡಿದ್ದ. ಅವನು ತನ್ನ ಇನ್ನಿತರ ಸಹಪಾಠಿಗಳ ಬಳಿ ಅಷ್ಟೇನೂ ಮಾತನಾಡುತ್ತಿರಲಿಲ್ಲ. ಅವನ ಕೆಲವು ಸಹಪಾಠಿಗಳಿಂದ ಆತನ ಕುರಿತು ವಿವರಗಳನ್ನು ಪಡೆಯಲು ಅವರು ಯತ್ನಿಸಿದರು. ಅವರಲ್ಲೊಬ್ಬ ಆತನನ್ನು ಅವನಷ್ಟಕ್ಕೇ ಬಿಟ್ಟುಬಿಡುವಂತೆ ಸಲಹೆ ಕೂಡ ನೀಡಿದ! ಕುತೂಹಲದಿಂದ ಆ ಶಿಕ್ಷಕಿಯು ಶಾಲೆಯ ಅವಧಿ ಮುಗಿದ ನಂತರ ಅವನನ್ನು ಹಿಂಬಾಲಿಸುವ ನಿರ್ಧಾರ ಮಾಡಿದರು. ಆತ ಸಾಧಾರಣವಾಗಿ ತನ್ನ ಕೆಲವು ಒಡನಾಡಿಗಳೊಂದಿಗೆ ಸೇರುತ್ತಿದ್ದ, ಬೀದಿಯ ಮೂಲೆಯೊಂದರಲ್ಲಿದ್ದ ಅಡ್ಡೆಗೆ ಯಾವುದೇ ಸುಳಿವನ್ನೂ ನೀಡದೆ ಹೋದರು. ಆತ ಇಟ್ಟುಕೊಂಡು ಓಡಾಡುತ್ತಿದ್ದುದು ಉದ್ದನೆಯ ಹರಿತವಾದ ಒಂದು ಚೂರಿಯಾಗಿತ್ತು ಎನ್ನುವುದನ್ನು ತಿಳಿದಾಗ ಅವರಿಗೆ ಸಿಟ್ಟು ಬಂದಿತು, ಗಾಬರಿಯೂ ಆಗಿತ್ತು. ಆದರೆ ತಮ್ಮನ್ನೇ ತಾವು ಸಂಭಾಳಿಸಿಕೊಂಡು ಆ ಹುಡುಗ ಮತ್ತು ಅವನ ಸ್ನೇಹಿತರೊಡನೆ ಚಾತುರ್ಯದಿಂದ ವ್ಯವಹರಿಸಿದರು. ಕೊನೆಯಲ್ಲಿ, ಆತ ಅಂತಹ ಅಭ್ಯಾಸಗಳಿಂದ ಎಂದೆಂದಿಗೂ ದೂರವಾಗುವ ಹಾಗೆ ಮಾಡುವಲ್ಲಿ ಯಶಸ್ವಿಯಾದರು. ಇತ್ತೀಚೆಗೆ ಅಂತಹ ಭಯಾನಕ ಘಟನೆಯನ್ನು ನೆನೆದ ಅವರು, ತಾವು ಮೊದಲಿಗೆ ಆ ದಿನದಂದು ಭಯಭೀತರಾಗಿದ್ದರೆಂದು ಕಳೆದ ವಾರ ನಾವೆಲ್ಲ ಸೇರಿದ್ದಾಗ

ಒಪ್ಪಿಕೊಂಡರು. ಆದರೆ ಅದು ಹೇಗೋ ಸೂಕ್ಷ್ಮಜ್ಞರಾಗಿದ್ದ ಅವರು ಆತ ಎಲ್ಲಿಂದ ಬಂದಿದ್ದಾನೆ, ಆತನ ಮೇಲೆ ಏನು ಪ್ರಭಾವ ಬೀರಿರಬಹುದು ಇತ್ಯಾದಿ ಆತನ ಹಿನ್ನೆಲೆಗಳ ಕುರಿತು ಆಲೋಚಿಸಿ, ತಮಗೆ ಸೂಕ್ತವೆಂದು ತಿಳಿದ ರೀತಿಯಲ್ಲಿ ಅವನನ್ನು ಸುಧಾರಿಸುವ ಧೈರ್ಯವನ್ನು ತೋರಿದರು.

ಆಂದ್ರೆ ಬೆತೇ ಅವರು– 'ಸ್ಕೂಲ್, ಸೊಸೈಟಿ, ನೇಷನ್' (ಓರಿಯಂಟ್ ಲಾಂಗ್‌ಮನ್ ಪ್ರೈ. ಲಿ. ಹೈದರಾಬಾದ್) ಶೀರ್ಷಿಕೆಯ ಪುಸ್ತಕದಲ್ಲಿ ಬರೆದ, 'ದ ಸ್ಕೂಲ್ ಆ್ಯಸ್ ಆ್ಯನ್ ಇನ್ಸ್ಟಿಟ್ಯೂಶನ್' ('ಸಂಸ್ಥೆಯಾಗಿ ಶಾಲೆ', ಕುಮಾರ ರಜನಿ ಮುಂತಾದವರಿಂದ ಸಂಪಾದಿತ, 2005) ಎಂಬ ಲೇಖನವು ನನಗೆ ನೆನಪಿಗೆ ಬಂದಿತು. ಆ ಲೇಖನದ ಕೆಲವು ಭಾಗಗಳು ಇಲ್ಲಿ ಉಲ್ಲೇಖಿಸಲು ತುಂಬಾ ಸೂಕ್ತವಾಗಿವೆ: –

> "ಚೆನ್ನಾಗಿ ಅಭಿವೃದ್ಧಿ ಹೊಂದಿದ ಶಿಕ್ಷಣ ವ್ಯವಸ್ಥೆಗಳನ್ನು ಹೊಂದಿರುವ ಸಮಾಜಗಳಲ್ಲಿಯೂ ಕೂಡ ಶಾಲೆಯೊಂದೇ ಮಗುವಿನ ಶಿಕ್ಷಣಕ್ಕೆ ಕೊಡುಗೆ ನೀಡುವುದಿಲ್ಲ. ಆದರೆ ಅದು ವಿಶಿಷ್ಟವಾದ ಕೊಡುಗೆಯನ್ನು ನೀಡುತ್ತದೆ ಹಾಗೂ ಕೊಡುಗೆಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ."
>
> "ಶಾಲೆಯು ಬೋಧನಾಕ್ರಮದ ನಿರ್ವಹಣೆ ಮಾಡುವುದಷ್ಟೇ ಅಲ್ಲ, ಸಾಮಾಜಿಕ ಸಂಗತಿಯನ್ನು ಕೂಡ ಹೊಂದಿರುತ್ತದೆ. ಪರೀಕ್ಷೆಯಲ್ಲಿ ತಮ್ಮ ಮಕ್ಕಳು ಪಡೆಯುವ ಅಂಕಗಳ ಬಗ್ಗೆ ಅತೀವ ಮಹತ್ವಾಕಾಂಕ್ಷಿಗಳಾದ ಹಾಗೂ ಸ್ಪರ್ಧಾತ್ಮಕ ಮನೋಭಾವದ ಪೋಷಕರು, ಸಾಮಾಜೀಕರಣದ ವ್ಯಾಪಕ ಪ್ರಕ್ರಿಯೆಯಲ್ಲಿ ಶಾಲೆಯು ನಿರ್ವಹಿಸುವ ಪಾತ್ರವನ್ನು ಕಡೆಗಣಿಸುವುದೇ ಹೆಚ್ಚು. ಕೆಲವೊಮ್ಮೆ ಶಾಲೆಯೊಂದು ಅತ್ಯಂತ ಯಶಸ್ವಿ ಶೈಕ್ಷಣಿಕ ಸಾಧನೆಯ ದಾಖಲೆಯನ್ನು ಕಾಯ್ದುಕೊಳ್ಳಬಹುದು. ಆದರೆ ತನ್ನ ಸಾಮಾಜಿಕ ಬಾಧ್ಯತೆಯನ್ನು ನಿರ್ವಹಿಸುವ ವಿಷಯದಲ್ಲಿ ಅದು ಕಳಪೆಯಾಗಿರಬಹುದು. ಅಂದ ಹಾಗೆ, ಬೋಧನೆ ಹಾಗೂ ಕಲಿಕೆಗಳನ್ನು ಯಾವ ಶಾಲೆಯಲ್ಲಿ ಕಡೆಗಣಿಸಲಾಗುತ್ತದೆಯೋ ಅಥವಾ ಲಘುವಾಗಿ ತೆಗೆದುಕೊಳ್ಳಲಾಗುತ್ತದೆಯೋ ಆ ಶಾಲೆಯನ್ನು ಯಾವುದೇ ಅರ್ಥದಲ್ಲಿಯೂ ಯಶಸ್ವಿಯೆಂದು ಪರಿಗಣಿಸಲಾಗುವುದಿಲ್ಲ. ದುರದೃಷ್ಟವಶಾತ್, ಭಾರತದಲ್ಲಿ ಅಂತಹ ಅನೇಕ ಶಾಲೆಗಳಿದ್ದು, ಶಿಕ್ಷಣವನ್ನು ಎಲ್ಲರ ಹಕ್ಕನ್ನಾಗಿ ಮಾಡುವ ಉತ್ಸಾಹವನ್ನು ಅವು ಅಪಹಾಸ್ಯಕ್ಕೀಡುಮಾಡುತ್ತವೆ."

ಹೀಗೆ ಮುಂದುವರೆಯುವ ಆಂದ್ರೆ ಬೆತೇ, "....ಶಾಲೆಯು ಒಂದು ಸಂಸ್ಥೆಯಾಗಿ ವಿಶಿಷ್ಟವಾದ ಅಸ್ತಿತ್ವವನ್ನು ಹೊಂದಿರುತ್ತದೆ. ಹಾಗೂ ಅದು ಬಹಳ ಕಾಲದವರೆಗೆ ಉಳಿಯುವಂತಹದು. ಸಂಸ್ಥೆಯನ್ನು, ಅದರಲ್ಲಿ ತಮ್ಮ ವಿಭಿನ್ನ

ಪಾತ್ರಗಳನ್ನು ನಿರ್ವಹಿಸಿ, ನಿರ್ಗಮಿಸುವ ಹಾಗೂ ಹೊಸ ಸದಸ್ಯರಿಗೆ ಒಳಬರಲು ಅವಕಾಶವನ್ನು ಮಾಡಿಕೊಡುವ ಅನೇಕ ಸದಸ್ಯರಿಂದ ಸಂಸ್ಥೆಯನ್ನು ಬೇರೆಯಾಗಿ ನೋಡಬೇಕು. ಹಳಬರ ಜಾಗದಲ್ಲಿ ಹೊಸ ಸದಸ್ಯರು ಬರುವುದನ್ನು ವಿದ್ಯಾರ್ಥಿಗಳ ರೂಪದಲ್ಲಿ ಸ್ಪಷ್ಟವಾಗಿ ಕಾಣಬಹುದು. ಆದರೆ ಇದು ಶಿಕ್ಷಕರು, ಪ್ರಾಂಶುಪಾಲರು ಹಾಗೂ ಶಾಲಾ ಆಡಳಿತಗಾರರಿಗೂ ಅನ್ವಯಿಸುತ್ತದೆ. ಕಳೆದ ಐವತ್ತು ವರ್ಷಗಳ ಅವಧಿಯಲ್ಲಿ ಹಲವಾರು ವ್ಯಕ್ತಿಗಳು ಈ ಶಾಲೆಗೆ ಬಂದು ಹೋಗಿದ್ದಾರೆ. ಆದರೆ ಶಾಲೆಯು ಇನ್ನೂ ಇದೆ. ನಾನು ಯಾವ ಶಾಲೆಯಲ್ಲಿ ಮೆಟ್ರಿಕ್ಯುಲೇಷನ್ ಮುಗಿಸಿದೆನೋ ಅದೀಗ ಶತಮಾನೋತ್ಸವವನ್ನು ಆಚರಿಸುತ್ತಿದೆ (ಇದು ನನ್ನ ಶಾಲೆಯ ವಿಷಯದಲ್ಲಿಯೂ ನಿಜ; ಮುಂದಿನ ವರ್ಷ ಅದರ ಶತಮಾನೋತ್ಸವ ಆಚರಣೆ ನಡೆಯಲಿದೆ. –ಲೇ.). ಇತ್ತೀಚೆಗೆ ನಾನು ಅಲ್ಲಿಗೆ ಹೋಗಿದ್ದಾಗ, ಅಲ್ಲಿ ಈಗ ಇರುವ ಸದಸ್ಯರಲ್ಲಿ ಯಾರೊಬ್ಬರ ಪರಿಚಯವೂ ನನಗಿಲ್ಲ ಎಂಬುದು ನನಗರಿವಾಯಿತು. ಆದರೂ ವಿಚಿತ್ರವಾದೊಂದು ರೀತಿಯಲ್ಲಿ ಅದು ಅದೇ ಶಾಲೆಯೇ. ಶಾಲೆಯೊಂದು ತನ್ನ ಶತಮಾನೋತ್ಸವವನ್ನು ಆಚರಿಸಿಕೊಳ್ಳುವಾಗ, ಸಂಸ್ಥೆಯೊಂದರ ಜೀವಿತಾವಧಿಗೆ ಹೋಲಿಸಿದರೆ ವ್ಯಕ್ತಿಗತ ಬದುಕು ಎಷ್ಟು ಅಲ್ಪಕಾಲೀನ ಎಂಬುದು ಅರಿವಿಗೆ ಬರುತ್ತದೆ" ಎಂದು ಹೇಳುತ್ತಾರೆ.

ಇದಲ್ಲದೆ, ಬೆತೇ ಹೇಳುವ ಹಾಗೆ, "...ಅದೊಂದು ಮಹಾನ್ ಶಾಲೆಯಾಗಿರಲಿಲ್ಲ ಅಥವಾ ಪ್ರಮುಖ ಶಾಲೆ ಕೂಡ ಆಗಿರಲಿಲ್ಲ (ನನ್ನ ಶಾಲೆಯು ಅಸಾಧಾರಣವಾದುದೂ ಪ್ರಮುಖ ಶಾಲೆಗಳಲ್ಲೊಂದೂ ಆಗಿತ್ತು! –ಲೇ.) ಆದರೆ, ನಾನು ಅಲ್ಲಿ ಸಂತೋಷವಾಗಿದ್ದೆ ಮತ್ತು ಅದು ಸಣ್ಣ ಸಂಗತಿಯೇನಲ್ಲ."

ಕೊನೆಯದಾಗಿ, "ಒಂದು ಸಾಮಾಜಿಕ ಸಂಸ್ಥೆಯಾಗಿ ಶಾಲೆಯು ವ್ಯಕ್ತಿಗಳ ನಡುವೆ ಪರಸ್ಪರ ಸಂಬಂಧ ಹಾಗೂ ಸಮಾಜದೊಂದಿಗೆ ಸಂಪರ್ಕವನ್ನು ಬೆಸೆಯುವಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಬಲ್ಲುದು. ಆದರೆ ಕೇವಲ ಸಂಪರ್ಕವನ್ನು ಸೃಷ್ಟಿಸುವುದಷ್ಟೇ ಸಾಲದು. ಪ್ರತಿಯೊಂದು ಶಾಲೆಯೂ ಮುಕ್ತ ಹಾಗೂ ಧರ್ಮನಿರಪೇಕ್ಷ ಸಂಸ್ಥೆಯಾಗಿ ತನ್ನ ಪಾತ್ರವನ್ನು ನಿರ್ವಹಿಸುತ್ತದೆ ಎಂದು ನಾವು ಭಾವಿಸಲಾಗದು. ಆದರೆ ಹಾಗೆ ಮಾಡುವ ಶಾಲೆಯು ರಾಷ್ಟ್ರದ ಬದುಕಿನಲ್ಲಿ ಕೇವಲ ಶೈಕ್ಷಣಿಕ ದೃಷ್ಟಿಯಿಂದ ಮಾತ್ರವಲ್ಲ, ಸಾಮಾಜಿಕವಾಗಿಯೂ ಕೂಡ ಪ್ರಮುಖವಾದ ಪಾತ್ರವೊಂದನ್ನು ನಿರ್ವಹಿಸಿರುತ್ತದೆ."

ಅಂತಹ ಮಹಾನ್ ಸಂಸ್ಥೆಯೊಂದರ ಭಾಗವಾಗಿದ್ದಕ್ಕೆ ನಾನು ನಿಜಕ್ಕೂ ಕೃತಜ್ಞ! ■

ಬಿ ಫಸ್ಟ್, 11–01–2017

ಶಿಕ್ಷಣವ್ಯವಸ್ಥೆಗೆ ಹೆಚ್ಚುವರಿ ಸಾರ್ವಜನಿಕ ಹಣಬೇಕು. ಅಲ್ಲದೆ, ಇನ್ನಷ್ಟು ಹೆಚ್ಚಿನ ರಾಜಕೀಯ ಆದ್ಯತೆಗಳು, ಆಡಳಿತಾತ್ಮಕ ಇಚ್ಛಾಶಕ್ತಿ ಹಾಗೂ ಹೊಣೆಯನ್ನು ಹೊರುವ ಮನಸ್ಸು ಸೃಷ್ಟಿಯಾಗಬೇಕು. ಏಕೆಂದರೆ, ಸಾರ್ವಜನಿಕ ಹೂಡಿಕೆ ಹಾಗೂ ಅಭಿವೃದ್ಧಿಯೆಡೆಗಿನ ಗಮನ ನೀಡುವಿಕೆಗೆ ನಮ್ಮ ಮಕ್ಕಳ ಸ್ವಾಸ್ಥ್ಯ ಹಾಗೂ ಭವಿಷ್ಯಕ್ಕೂ ಮಿಗಿಲಾದ ಆದ್ಯತೆ ಇನ್ನೇನಿರಲು ಸಾಧ್ಯ? ಎಲ್ಲರೂ ನಮ್ಮ ಮಕ್ಕಳೇ.

– ಹರ್ಷ್ ಮಂದರ್

# ಅಂಚಿನಲ್ಲಿಯೇ ಉಳಿದಿರುವ ಬೆಂಗಳೂರಿನ ಹೊರವಲಯದ ಮಕ್ಕಳು

ಬೆಂಗಳೂರು ನಗರ ಕಂದಾಯ ಜಿಲ್ಲೆಯು ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ಬೆಂಗಳೂರು ಪೂರ್ವ ಮತ್ತು ಬೆಂಗಳೂರು ಪಶ್ಚಿಮ ಎಂಬ ನಾಲ್ಕು ತಾಲ್ಲೂಕುಗಳನ್ನು ಒಳಗೊಂಡಿದೆ. ಆನೇಕಲ್‌ನಲ್ಲಿರುವ, ಸಿಲಿಕಾನ್ ಸಿಟಿ ಬೆಂಗಳೂರಿನ ಹೆಮ್ಮೆಯಾಗಿರುವ ಎಲೆಕ್ಟ್ರಾನಿಕ್ ಸಿಟಿಯು ಐಟಿ ಕೇಂದ್ರವಾಗಿದ್ದು ಭಾರತದ ಅತಿದೊಡ್ಡ ವಿದ್ಯುನ್ಮಾನ ಕೈಗಾರಿಕಾ ಉದ್ಯಾನಗಳಲ್ಲಿ ಒಂದಾಗಿದೆ. ಇದು ಪ್ರಮುಖ ಐಟಿ/ಐಟಿಇಎಸ್ ಸಂಸ್ಥೆಗಳ ಹಾಗೂ ಜೈವಿಕ–ತಂತ್ರಜ್ಞಾನ ಉದ್ಯಾನವೊಂದರ ನೆಲೆಯಾಗಿದ್ದು ಲಕ್ಷಕ್ಕೂ ಹೆಚ್ಚು ಜನರಿಗೆ ಉದ್ಯೋಗವನ್ನು ಒದಗಿಸಿದೆ.

2011ರ ಜನಗಣತಿಯು ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ ಕೆಲವು ಕುತೂಹಲಕಾರೀ ಒಳನೋಟಗಳನ್ನು ನೀಡುತ್ತದೆ. ಅವು ಒಟ್ಟಾರೆ ಶೈಕ್ಷಣಿಕ ಗುರಿಗಳ ಸಾಧನೆಗೆ ಸಂಬಂಧಿಸಿದ್ದು ಮುಂಬರುವ ದಿನಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ನಾವು ಮಾಡಬೇಕಾಗಿರುವ ಕೆಲಸಗಳಿಗೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ. ನಾವು ಯಾವ ಶಿಕ್ಷಕರ ಜೊತೆಗೆ ನಿಕಟವಾಗಿ ಕೆಲಸ ಮಾಡಬೇಕೆಂದು ಆಶಿಸುತ್ತೇವೆಯೋ ಅವರು ಈ ನಾಲ್ಕು ತಾಲ್ಲೂಕುಗಳ ಐನೂರಾ ಅರವತ್ತೆರಡು ಹಳ್ಳಿಗಳುದ್ದಕ್ಕೂ ಹರಡಿಕೊಂಡಿರುವ ಶಾಲೆಗಳಲ್ಲಿ ಕಲಿಸುತ್ತಿದ್ದಾರೆ.

ಇದು ಮುಖ್ಯವಾಗಿ ಗ್ರಾಮೀಣ ಹಾಗೂ ನಗರ ಪ್ರದೇಶಗಳೆರಡೂ ಸೇರಿಕೊಂಡಿರುವ ಹಾಗೂ ಮುಂಬರುವ ದಿನಗಳಲ್ಲಿ ಬಹುತೇಕ ನಗರವಾಗುವ ಸ್ಪಷ್ಟ ಲಕ್ಷಣಗಳನ್ನು ಹೊಂದಿರುವ ಅರೆನಗರ ಕ್ಷೇತ್ರ. ಸುಮಾರು ಒಂದು ಕೋಟಿ ಜನಸಂಖ್ಯೆ ಇರುವ (95.89 ಲಕ್ಷ) ಈ ಪ್ರದೇಶವು ಭಾರತದ ಆರು ನೂರಾ ನಲವತ್ತು ಜಿಲ್ಲೆಗಳಲ್ಲಿ ಅತಿ ಹೆಚ್ಚು ಜನಸಂಖ್ಯೆಯಿರುವ ಜಿಲ್ಲೆಗಳಲ್ಲಿ ಮೂರನೆಯದಾಗಿದೆ.

ಇಲ್ಲಿನ ಜನರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳೆಡೆಗಿನ ನೋಟವು ಹೆಚ್ಚಿನ ಜನರು ಬಹುತೇಕವಾಗಿ ಮಧ್ಯಮ ಹಾಗೂ ಕೆಳ ಮಧ್ಯಮವರ್ಗಕ್ಕೆ ಸೇರಿದವರಾಗಿದ್ದಾರೆ ಎಂಬುದನ್ನು ಸೂಚಿಸುತ್ತದೆ. ಆರ್ಥಿಕ ಕ್ಷೇತ್ರಕ್ಕೆ ಬಂದರೆ, ಜನಸಂಖ್ಯೆಯ ಶೇ. 41 ಭಾಗವು ಅಂಚಿನ, ಆದರೆ ಪ್ರಧಾನವಾಗಿ ಕಾರ್ಮಿಕವಲಯಕ್ಕೆ ಸೇರಿದ್ದಾರೆ. ಅವರು ಕೃಷಿಯಿಂದ ಹಾಗೂ ಪಶುಸಂಗೋಪನೆಯಂತಹ ಗ್ರಾಮೀಣ ವೃತ್ತಿಗಳಿಗೆ ಪೂರಕವಾದ ಕಾರ್ಯಗಳಿಂದ ದೂರವಾಗಿದ್ದಾರೆ ಎನ್ನುವುದು ಕಂಡುಬರುತ್ತದೆ. ಕಾರ್ಮಿಕಶಕ್ತಿಯಲ್ಲಿ ಸುಮಾರು ಶೇ. 79 ಭಾಗ ಪುರುಷರಿದ್ದು ಅವರು ಸಿದ್ಧ ಉಡುಪು, ಜವಳಿ ಉದ್ಯಮ, ರಾಸಾಯನಿಕ, ಎಂಜಿನಿಯರಿಂಗ್ ಹಾಗೂ ಇನ್ನಿತರ ಕೈಗಾರಿಕೆ ಹಾಗೂ ಸೇವೆಗಳಿಗೆ ಸಂಬಂಧಿಸಿದ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಇಲ್ಲಿ ಲಭ್ಯವಿರುವ ಉದ್ಯೋಗಾವಕಾಶಗಳ ಸಂಖ್ಯೆಯನ್ನು ನೋಡಿದರೆ, ಹೆಚ್ಚು ಪ್ರತಿಶತ ಜನರು ನೆರೆರಾಜ್ಯಗಳಿಂದ ಹಾಗೂ ರಾಜ್ಯದ ಉತ್ತರ ಭಾಗದ ಜಿಲ್ಲೆಗಳಿಂದ ಜೀವನೋಪಾಯಕ್ಕಾಗಿ ವಲಸೆ ಬಂದಿರುವುದು ಕಂಡುಬರುತ್ತದೆ.

ನಮ್ಮ ಸಂಸ್ಥೆಯ ಕಾರ್ಯಕ್ಷೇತ್ರವಾದ ಆನೇಕಲ್, ಬೆಂಗಳೂರು ದಕ್ಷಿಣ ಹಾಗೂ ಪೂರ್ವದ ತಾಲ್ಲೂಕುಗಳ ಭಾಗಗಳಲ್ಲಿ ಸಾಕ್ಷರತಾ ಮಟ್ಟವು ಶೇ. 26ರಷ್ಟಿದೆ. ಹೆಚ್ಚಿನ ಪ್ರಮಾಣದ ಜನರು ಅನಕ್ಷರಸ್ಥರು ಎನ್ನುವುದನ್ನು ಇದು ಸೂಚಿಸುತ್ತದೆ. ಬೆಂಗಳೂರು ನಗರ ಜಿಲ್ಲೆಯೂ ಕೂಡ 2013–14ರ ಅವಧಿಯಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ಮಕ್ಕಳು ಶಾಲೆಯಿಂದ ಹೊರಗೆ ಉಳಿದಿರುವುದನ್ನು (3996) ದಾಖಲಿಸಿದೆ. ಇದನ್ನು, ಹೆಚ್ಚಿನ ಸಂಖ್ಯೆಯಲ್ಲಿ (18,393) ಶಾಲೆಯನ್ನು ಬಿಟ್ಟಿರುವ ಮಕ್ಕಳ ಸಂಗತಿಯ ಜೊತೆಗೆ ವಿವರಿಸುವುದಾದರೆ, ಬಹಳಷ್ಟು ಸನ್ನಿವೇಶಗಳಲ್ಲಿ ಪೋಷಕರಿಬ್ಬರೂ ಉದ್ಯೋಗದಲ್ಲಿ ಇರುವ ಕಾರಣದಿಂದ ಮನೆಯನ್ನು ನಿಭಾಯಿಸುವ, ಕುಡಿಯುವ ನೀರನ್ನು ಸಂಗ್ರಹಿಸುವ, ಪಾತ್ರೆ–ಬಟ್ಟೆಗಳನ್ನು ತೊಳೆಯುವ ಹಾಗೂ ಒಡಹುಟ್ಟಿದ ಕಿರಿಯರನ್ನು ಸಂಭಾಳಿಸುವ ಹೊಣೆಯು ಹೆಣ್ಣುಮಕ್ಕಳದ್ದಾಗಿರುತ್ತದೆ.

**2014–15ರ ಅವಧಿಯಲ್ಲಿ ಪೂರ್ವ ಬೆಂಗಳೂರು ತಾಲ್ಲೂಕಿನಲ್ಲಿರುವ ಕೊಡತಿ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿನ ಐದು ಹಳ್ಳಿಗಳಲ್ಲಿ ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ ನಡೆಸಿದ ದಾಖಲಾತಿ ಅಭಿಯಾನದ ಒಳನೋಟಗಳು:**

- ದಾಖಲಾತಿಗೆ ಸಂಬಂಧಿಸಿರುವ, ಮಕ್ಕಳು ಶಾಲೆಯನ್ನು ಮಧ್ಯದಲ್ಲಿಯೇ ಬಿಟ್ಟು ಹೋಗದಂತೆ ಉಳಿಸಿಕೊಳ್ಳುವ ಹಾಗೂ ನಗರ ಪ್ರದೇಶದ ಸುತ್ತಮುತ್ತಲಿನಲ್ಲಿರುವ ಅಂಚಿಗೆ ತಳ್ಳಲ್ಪಟ್ಟ ಸಮುದಾಯದ ಮಕ್ಕಳೆಲ್ಲರಿಗೂ ಗುಣಮಟ್ಟದ ಶಿಕ್ಷಣವನ್ನು ಒದಗಿಸುವ ಗಂಭೀರ ಸವಾಲುಗಳನ್ನು ಈ ಅಭಿಯಾನವು ಎದುರಿಗಿರಿಸಿತು. ನಮ್ಮ ಜಂಟಿ ಪ್ರಯತ್ನವು ಕಟ್ಟಡ ನಿರ್ಮಾಣ ಹಾಗೂ ಇನ್ನಿತರ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದ ವಲಸಿಗ ಕಾರ್ಮಿಕರ ಇಪ್ಪತ್ತೊಂದು ಮಕ್ಕಳನ್ನು ಗುರುತಿಸಿ, ಶಾಲೆಯಲ್ಲಿ ದಾಖಲಿಸಲು ಹಾಗೂ ಇಂತಹುದೇ ಹಿನ್ನೆಲೆಯನ್ನುಳ್ಳ, ಶಾಲೆಯಿಂದ ಗೈರುಹಾಜರಾಗಿ ದೂರವಿದ್ದ ಮೂವತ್ತು ಮಕ್ಕಳನ್ನು ಮತ್ತೆ ಶಾಲೆಗೆ ತಂದು ಸೇರಿಸುವಲ್ಲಿ ಸಫಲವಾಯಿತು. ಶಾಲೆಗೆ ಅವರು ಬರದಿರಲು ಅನೇಕ ಕಾರಣಗಳಿದ್ದವು. ಅವರಲ್ಲಿ ಆಳವಾದ ಅಭದ್ರತೆಯ ಭಾವನೆಯಿತ್ತು. ಅರೆಕಾಲಿಕ ಕೆಲಸಗಳಿಗೆ ವಲಸೆ ಹೋಗುವುದರಿಂದಾಗಿ ತಾತ್ಕಾಲಿಕ ಗುಡಿಸಲುವಾಸವು ಇನ್ನಷ್ಟು ಹೆಚ್ಚುತ್ತಿತ್ತು. ವಸತಿ ಮತ್ತಿತರ ಮೂಲಭೂತ ಸೌಕರ್ಯಗಳ ಕೊರತೆಯಿತ್ತು. ಬಹಳಷ್ಟು ಮಕ್ಕಳು ಬಹುಭಾಷಾ ಹಿನ್ನೆಲೆಯನ್ನುಳ್ಳವರಾಗಿದ್ದ ಕಾರಣ, ಅವರ ಕಲಿಕೆಯ ಕೊರತೆಗಳನ್ನು ನೀಗಿಸಲು ಶಿಕ್ಷಕರ ವಿಶೇಷ ಕಾಳಜಿಯ ಅಗತ್ಯವಿತ್ತು. ಆದರೆ ಅದು ಶಾಲೆಗಳಲ್ಲಿ ಸಿಗುತ್ತಿರಲಿಲ್ಲ. ಅಲ್ಲಿ ಒಟ್ಟಾರೆ ಬೆಂಬಲದ ಕೊರತೆ ಇತ್ತು. ನಾವು ಮನೆಮನೆಗೆ ತೆರಳಿ ಅಭಿಯಾನವನ್ನು ಕೈಗೊಂಡೆವು. ಪೋಷಕರು ಮತ್ತು ಸಮುದಾಯದೊಂದಿಗೆ ಅನೌಪಚಾರಿಕ ಮಾತುಕತೆಗಳನ್ನು ನಡೆಸಿದೆವು. ಆ ವೇಳೆಯಲ್ಲಿ, ಅವರು ತಮ್ಮ ಮಕ್ಕಳಿಗೆ ಯಾವ ತರಹದ ಶಿಕ್ಷಣವನ್ನು ಕೊಡಲು ಬಯಸುತ್ತಾರೆ ಎಂಬುದರ ಕುರಿತು ಕೆಲವು ಅತ್ಯಂತ ಮುಖ್ಯ ಮಾಹಿತಿಗಳನ್ನು ಕಲೆಹಾಕಿದೆವು.
- 'ಒಳ್ಳೆಯ' ಎಂಬ ಹಣೆಪಟ್ಟಿ ಧರಿಸಿಕೊಂಡ ಖಾಸಗಿ ಶಾಲೆಗಳಲ್ಲಿ ತಮ್ಮ ಮಕ್ಕಳನ್ನು ಸೇರಿಸಲು ಅವರು ತೀವ್ರ ಉತ್ಸುಕರಾಗಿದ್ದರು. ಶಾಲಾ ಶುಲ್ಕ ಮತ್ತು ಇನ್ನಿತರ ನಿಧಿಗಳ ಹೆಸರಿನಲ್ಲಿ ಹೆಚ್ಚಿನ ಮೊತ್ತವನ್ನು ಪಾವತಿಸುವಂತೆ ಅವರ ಮೇಲೆ ಅತಿಯಾದ ಒತ್ತಡವಿತ್ತು. ಆದರೂ ಅವರು ಅದನ್ನು ಕಷ್ಟಪಟ್ಟು ನಿಭಾಯಿಸುತ್ತಿದ್ದರು. ಏಕೆಂದರೆ ಆ ಶಾಲೆಗಳು ಕಲಿಸುವುದರಲ್ಲಿ ಮತ್ತು ಇತರ ಸೌಲಭ್ಯಗಳನ್ನು ನೀಡುವುದರಲ್ಲಿ ಉತ್ತಮವಾಗಿವೆ ಎಂಬ ಬಲವಾದ ನಂಬಿಕೆ ಅವರಲ್ಲಿತ್ತು.

## ಪೋಷಕರಿಂದ ದೊರೆತ ಅಭಿಪ್ರಾಯಗಳು

ಅದಕ್ಕೆ ತದ್ವಿರುದ್ಧವಾಗಿ, ಅವರು ಸರ್ಕಾರಿ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮ ಪರಿಚಯಿಸಿಲ್ಲ, ಅಲ್ಲದೇ ಶಾಲೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುತ್ತಿಲ್ಲ ಎಂದು ವ್ಯವಸ್ಥೆಯನ್ನು ದೂರಿದರು. ಬದುಕಿನ ಸಂಕಷ್ಟಗಳನ್ನು ಎದುರಿಸುವ ಸಾಮರ್ಥ್ಯವನ್ನು ಬೆಳೆಸುವುದರ ಜೊತೆಗೆ ಮಕ್ಕಳಲ್ಲಿ ಆತ್ಮವಿಶ್ವಾಸ ಹಾಗೂ ನಾಯಕತ್ವದ ಗುಣಗಳನ್ನು ರೂಢಿಸುವಲ್ಲಿ ಸರ್ಕಾರಿ ಶಾಲೆಗಳು ಸಾಕಷ್ಟು ಉತ್ತಮ ಕೆಲಸ ಮಾಡಿದ್ದರೂ ಕೂಡ ಇಂತಹ ದೂರು ಕೇಳಿಬರುತ್ತದೆ.

- ದಾಖಲಾತಿ ಹಾಗೂ ಶಾಲೆಯಲ್ಲಿ ಮುಂದುವರೆಯುವುದರ ಕುರಿತಾಗಿ ಲಭ್ಯವಿರುವ ದತ್ತಾಂಶಗಳಿಗೆ ಸಂಬಂಧಿಸಿದಂತೆ, ಮೊದಲಿನಿಂದಲೂ ಈ ಹಳ್ಳಿಯ ಮೂಲ ನಿವಾಸಿಗಳಾದ ಪೋಷಕರ ಮಕ್ಕಳ ದಾಖಲೆಯು ಉತ್ತಮವಾಗಿದ್ದಂತೆ ತೋರುತ್ತದೆ. ಆದರೆ, ಶಾಲೆಯಿಂದ ಹೊರಗುಳಿಯುವ, ಅಂಚಿಗೆ ತಳ್ಳಲ್ಪಟ್ಟ ವಲಸಿಗ ಕಾರ್ಮಿಕರ ಮಕ್ಕಳ ವಿಷಯದಲ್ಲಿ ಅನ್ಯಾಯವಾಗುತ್ತಿರುವ ನಿದರ್ಶನಗಳಿವೆ.
- ಹಳ್ಳಿಗರಲ್ಲಿ ಬಹಳ ಜನರಿಗೆ ಶಿಕ್ಷಣ ಹಕ್ಕು ಕಾಯಿದೆಯ ನಿಬಂಧನೆಗಳ ಕುರಿತು ಏನೂ ಗೊತ್ತಿರದೇ ಇರುವುದು ನಮಗೆ ಆಶ್ಚರ್ಯಕರವಾಗಿ ತೋರಿತು.
- ಇದಕ್ಕೆ ಸಂಬಂಧಿಸಿದ ಒಂದು ಪ್ರವೃತ್ತಿ ಎಂದರೆ, ಈ ಹಳ್ಳಿಗಳಲ್ಲಿ ಎಸ್‌ಡಿಎಮ್‌ಸಿಗಳು ಬಹುತೇಕ ನಿಷ್ಕ್ರಿಯವಾಗಿದ್ದವು. ಅರಿವು ಹಾಗೂ ಒಡೆತನದ ಭಾವನೆಯ ಕೊರತೆಯಿಂದಾಗಿ ಶಾಲೆಯಿಂದ ಅವು ಸಾಕಷ್ಟು ದೂರವೇ ಉಳಿದಿದ್ದವು. ಅದೇ ರೀತಿ, ಈ ಹಿಂದಿನ ದಾಖಲಾತಿ ಅಭಿಯಾನಗಳಲ್ಲಿ ಶಾಲೆಗಳೊಂದಿಗೆ ತೊಡಗಿಕೊಂಡಿದ್ದರೂ ಕೂಡ ಸಮುದಾಯದೊಂದಿಗೆ ನಿಕಟ ಸಂಬಂಧ ಕಾಪಾಡಿಕೊಳ್ಳಲು ಶಾಲೆಗಳೂ ವಿಫಲವಾಗಿದ್ದವು.
- ಬಡ ಮತ್ತು ಅನನುಕೂಲತೆಯ ಹಿನ್ನೆಲೆಯ ಮಕ್ಕಳ ಪೋಷಕರೊಡನೆಯಂತೂ ಶಾಲೆಯ ಸಂಬಂಧವು ಗಮನಾರ್ಹವಾಗಿ ಕೆಳಮಟ್ಟದಲ್ಲಿತ್ತು. ಇದು ಪೋಷಕರ ಸಕ್ರಿಯ ಭಾಗವಹಿಸುವಿಕೆಗೆ ಅಡ್ಡಿಯಾಗಿತ್ತು.
- ಮುಖ್ಯವಾಗಿ, ದೂರದೂರದ ಸ್ಥಳಗಳಿಂದ ದಿನನಿತ್ಯ ಪ್ರಯಾಣಿಸಿ ಬರುತ್ತಿದ್ದ ಶಿಕ್ಷಕರು ತಡವಾಗಿ ಶಾಲೆಯನ್ನು ತಲುಪುವ ಸಾಧ್ಯತೆಗಳಿದ್ದವು. ಅದರಿಂದಾಗಿ ತರಗತಿಕೋಣೆಗಳಲ್ಲಿನ ಪರಿಣಾಮಕಾರಿ ಬೋಧನಾ ವೇಳೆಯು ನಷ್ಟವಾಗುತ್ತಿತ್ತು. ಪೋಷಕರು ಅಂತಹ ಶಿಕ್ಷಕರ ಕೈಯಲ್ಲಿ ತಮ್ಮ ಮಕ್ಕಳನ್ನು ಒಪ್ಪಿಸಲು ಸಿದ್ಧರಿರಲಿಲ್ಲ.

ತಲಸ್ತರದಿಂದ ದೊರೆತ ಈ ಮೇಲಿನ ಒಳನೋಟಗಳು ಶಾಲೆ ಹಾಗೂ ಭಾಗೀದಾರರಾದ ಶಿಕ್ಷಕರು, ಎಸ್‌ಡಿಎಮ್‌ಸಿ, ಪೋಷಕರು, ಪಂಚಾಯತ್‌ಗಳು, ಸ್ಥಳೀಯ ಯುವಜನತೆ, ಅಂಗನವಾಡಿಗಳು, ಸಂಬಂಧಿಸಿದ ಇನ್ನಿತರ ಇಲಾಖೆಗಳು, ಸ್ವಸಹಾಯ ಗುಂಪುಗಳು ಹಾಗೂ ಸರ್ಕಾರೇತರ ಸಂಘ-ಸಂಸ್ಥೆಗಳ ನಡುವೆ ನಿಕಟ ಸಹಯೋಗದ ಅಗತ್ಯವನ್ನು ಎತ್ತಿತೋರಿಸುತ್ತವೆ.

ಈ ವರ್ಷ ಮಾರ್ಚ್‌ನಲ್ಲಿ, ಶಿಕ್ಷಕರ ವ್ಯಕ್ತಿಚಿತ್ರಣದ (ಪ್ರೊಫೈಲ್) ಮೂಲಕ ಅವರ ಹಿನ್ನೆಲೆಯನ್ನು ಅರಿಯುವ ನಿಟ್ಟಿನಲ್ಲಿ, ಅತ್ತಿಬೆಲೆ ಮತ್ತು ದಕ್ಷಿಣ ಬೆಂಗಳೂರಿನ ಶೈಕ್ಷಣಿಕ ಬ್ಲಾಕ್‌ಗಳ ಆಯ್ದ ಕ್ಲಸ್ಟರ್‌ಗಳಲ್ಲಿ ನಾವು ಕೈಗೊಂಡ ಸಂಕ್ಷಿಪ್ತ ಕ್ರಿಯೆಯು ಮೇಲಿನ ಅಂಶಗಳನ್ನು ಮತ್ತಷ್ಟು ದೃಢಪಡಿಸಿತು. ಶೇ. 50ಕ್ಕಿಂತಲೂ ಹೆಚ್ಚು ಶಿಕ್ಷಕರು ಬೆಂಗಳೂರು ನಗರದಲ್ಲೆಲ್ಲೋ ದೂರದಲ್ಲಿ ವಸತಿಯನ್ನು ಹೊಂದಿದ್ದ ಕಾರಣ, ಶಾಲೆ ತಲುಪಲು ಅವರು ದೀರ್ಘ ಅಂತರವನ್ನು ಕ್ರಮಿಸಬೇಕಾಗುತ್ತಿತ್ತು. ಶೇ. 88ರಷ್ಟು ಅಗಾಧ ಸಂಖ್ಯೆಯ ಕಿರಿಯ ಪ್ರಾಥಮಿಕ ಶಾಲೆಗಳು ಒಬ್ಬರು ಅಥವಾ ಇಬ್ಬರೇ ಶಿಕ್ಷಕರನ್ನು ಹೊಂದಿದ್ದವು. ಅದೇ ವೇಳೆಗೆ, ಶೇ. 75ಕ್ಕೂ ಹೆಚ್ಚು ಶಿಕ್ಷಕಿಯರಿಗೆ ತಮ್ಮ ಮನೆ, ಕುಟುಂಬಗಳ ಜವಾಬ್ದಾರಿಯನ್ನು ಪೂರೈಸಲು ವೇಳೆಗೆ ಸರಿಯಾಗಿ ಶಾಲೆಯನ್ನು ಬಿಡುವುದು ಅನಿವಾರ್ಯವಾಗುತ್ತಿತ್ತು. ಈ ಅಂಶಗಳು ಅಲ್ಲಿನ ಶಾಲೆಗಳಲ್ಲಿ ಚೈತನ್ಯಪೂರ್ಣ ಕಲಿಕೆಯ ವಾತಾವರಣವನ್ನು ನಿರ್ಮಿಸುವ ದಿಸೆಯಲ್ಲಿ ಗಂಭೀರವಾದ ಸವಾಲುಗಳಾಗಿದ್ದವು. ಜೊತೆಗೆ, ಶಿಕ್ಷಕರನ್ನು ಅವರ ವೃತ್ತಿಪರ ಅಭಿವೃದ್ಧಿಗೆ ಸಂಬಂಧಿಸಿದಂತೆ ಯಾವುದೇ ಅರ್ಥಪೂರ್ಣ ಚಟುವಟಿಕೆಗಳಲ್ಲಿ ತೊಡಗಿಸುವುದಕ್ಕೂ ಕೂಡ ಅಡ್ಡಿಯಾಗಿದ್ದವು.

*ಅದೇನೇ ಇದ್ದರೂ ಸಮಾಜದಲ್ಲಿ ಇಂದಿಗೂ ಆಳವಾಗಿ ಬೇರು ಬಿಟ್ಟಿರುವ ಸಾಮಾಜಿಕ ಅನನುಕೂಲಗಳನ್ನು ಗಮನದಲ್ಲಿಟ್ಟು ನೋಡಿದಾಗ, ವಿಶೇಷವಾಗಿ ಸಮಾಜದ ಅತ್ಯಂತ ವಂಚಿತ ವರ್ಗಗಳ ಮಕ್ಕಳಿಗೆ 'ಸಮಾನ ಅವಕಾಶ'ಗಳು ದೊರೆಯಬೇಕಾಗಿರುವುದು ಅತಿಮುಖ್ಯ. ಇದು ಕೇವಲ ಹಣ ನೀಡುವ ಸಾಮರ್ಥ್ಯವನ್ನು ಅವಲಂಬಿಸಿರಬಾರದು. ಕೆಲವು ಖಾಸಗಿ ಶಾಲೆಗಳು, 'ಗಿರಾಕಿಗಳು ಏನನ್ನು ಬಯಸುತ್ತಾರೋ', 'ಯಾರು ಅತ್ಯುತ್ತಮ ಬೆಲೆಯನ್ನು ತೆರುತ್ತಾರೋ' ಅವರಿಗಾಗಿಯೇ ತಾವು ಇರುವುದು ಎಂಬ ವಾಸ್ತವಕ್ಕೆ ಕಟ್ಟುಬಿದ್ದಿವೆ. ನಗರ ಪ್ರದೇಶಗಳಲ್ಲಿ ಸುಮಾರು ಶೇ.80 ಮಕ್ಕಳು ಖಾಸಗಿ ಶಾಲೆಗಳಲ್ಲಿ ದಾಖಲಾತಿ ಪಡೆದಿರುತ್ತಾರೆ. ಗ್ರಾಮೀಣ ಭಾಗದ ಶೇ. 40–50 ಮಕ್ಕಳು ಇದನ್ನೇ ಅನುಸರಿಸುತ್ತಾರೆ. ಈ ಹಿನ್ನೆಲೆಯಲ್ಲಿ ಸರ್ಕಾರಿ ಶಾಲಾ ವ್ಯವಸ್ಥೆಯನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಮುಂಬರುವ ಕೆಲ ವರುಷಗಳು ಅತ್ಯಂತ ನಿರ್ಣಾಯಕವಾಗಿವೆ. ಹೆಚ್ಚಿದ ಖರೀದಿ ಸಾಮರ್ಥ್ಯ ಹಾಗೂ ವಾರಿತಪ್ಪಿರುವ ಭೋಗಪರವಾದ ಗ್ರಾಹಕ ಸಂಸ್ಕೃತಿಗಳು ಖಾಸಗಿ*

ಶಾಲೆಗಳಲ್ಲಿ ನಡೆಯುವ ದಾಖಲಾತಿ ಪ್ರಕ್ರಿಯೆಯ ವೇಗವನ್ನು ಇನ್ನೂ ಹೆಚ್ಚಿಸುವ ಸಾಧ್ಯತೆಗಳಿವೆ.

2013ರಲ್ಲಿ ಸೆಂಟರ್ ಆಫ್ ಈಕ್ವಿಟಿ ಸ್ಟಡೀಸ್ ಹೊರತಂದ 'ಇಂಡಿಯಾ ಎಕ್ಸ್‌ಕ್ಲೂಶನ್ ರಿಪೋರ್ಟ್'ನ ಪ್ರಕಾರ:

> 'ಕಳೆದ ದಶಕದಲ್ಲಿ ಮಹಿಳೆಯರ, ಹೆಣ್ಣುಮಕ್ಕಳ, ದಲಿತ, ಬುಡಕಟ್ಟು ಮತ್ತು ಮುಸ್ಲಿಂ ಮಕ್ಕಳ, ವಿಶೇಷ ಅಗತ್ಯಗಳನ್ನುಳ್ಳ ಮಕ್ಕಳ ಸಾಕ್ಷರತೆ, ಶಾಲಾ ದಾಖಲಾತಿ ಹಾಗೂ ಶಾಲೆಯಲ್ಲಿ ಮುಂದುವರೆಯುವುದೂ ಸೇರಿದಂತೆ ಶೈಕ್ಷಣಿಕ ಸಾಧನೆಗಳೆಲ್ಲವೂ ಸುಧಾರಿಸಿವೆ. ಆದರೂ ಈ ಪ್ರಗತಿಯು ಒಟ್ಟಾರೆ ಸಾಮಾನ್ಯ ಜನಸಂಖ್ಯೆಯ ಮಟ್ಟಕ್ಕೆ ಹೋಲಿಸಿದರೆ ಸಾಕಷ್ಟು ಹಿಂದೆಯೇ ಇದೆ. ಇವರಲ್ಲಿಯೂ ಶಾಲೆಗಳಲ್ಲಿ ದಾಖಲಾತಿ ಪಡೆಯುವ ಲಕ್ಷಾಂತರ ಮಕ್ಕಳು ವಂಚಿತ ಜಾತಿಗಳಿಗೆ ಅಥವಾ ಕಳಂಕಿತ ಮತ-ಧರ್ಮ, ಪಂಥಗಳಿಗೆ ಸೇರಿದವರಾಗಿದ್ದು ಅಥವಾ ವಿಶೇಷ ಅಗತ್ಯಗಳನ್ನುಳ್ಳವರಾಗಿದ್ದು ತರಗತಿ ಕೋಣೆಯಲ್ಲಿಯೇ ಮೂದಲಿಕೆ, ಅನಾದರಗಳನ್ನು ಅನುಭವಿಸಿ ಬಳಲುತ್ತಾರೆ. ಮನುಷ್ಯರಾಗಿ ನಾವು ವಿಫಲರಾದ ಅದೆಷ್ಟೋ ಸನ್ನಿವೇಶಗಳಿದ್ದು ಅದರಲ್ಲಿ ನಾವು ಮಕ್ಕಳನ್ನು ನಡೆಸಿಕೊಳ್ಳುವ ರೀತಿಯು ಅತ್ಯಂತ ಅಕ್ಷಮ್ಯವಾದುದಾಗಿದೆ... ನಮ್ಮ ತರಗತಿಕೋಣೆಗಳಲ್ಲಿ ಸಮತ್ವ ಮತ್ತು ಮಾನವೀಯತೆಗಳು ಹೆಚ್ಚಿದಾಗಷ್ಟೇ ಅಸಮ ಭಾರತವು ಬದಲಾಗುವುದು.'

ಆದ್ದರಿಂದ, ಸರ್ಕಾರಿ ಶಾಲಾ ವ್ಯವಸ್ಥೆಗೆ ಸಂಬಂಧಿಸಿದಂತೆ ಪೋಷಕರ ನಂಬಿಕೆಯನ್ನು ಮರುಸ್ಥಾಪಿಸಲು ನಗರದ ವಿವಿಧ ಭಾಗಗಳಲ್ಲಿ ಧನಾತ್ಮಕ ಬದಲಾವಣೆಗಳನ್ನು ಕಾರ್ಯಗತಗೊಳಿಸುವುದು ಅತ್ಯಂತ ಮುಖ್ಯವಾಗಿದೆ. ತಮ್ಮ ರೋಮಾಂಚಕಾರಿ ಪುಸ್ತಕ, 'ಲುಕಿಂಗ್ ಅವೇ'ದಲ್ಲಿ (ಸ್ಪೀಕಿಂಗ್ ಟೈಗರ್‌ನಿಂದ 2015ರಲ್ಲಿ ಪ್ರಕಾಶಿತ), ಹರ್ಷ ಮಂದರ್ ಅವರು ಸೂಕ್ತವಾಗಿಯೇ ಅವಲೋಕಿಸಿದ ಹಾಗೆ, "ಇದೆಲ್ಲದಕ್ಕೂ ಹೆಚ್ಚುವರಿ ಸಾರ್ವಜನಿಕ ಹಣ ಬೇಕು. ಅಲ್ಲದೆ ಇನ್ನಷ್ಟು ಹೆಚ್ಚಿನ ರಾಜಕೀಯ ಆದ್ಯತೆಗಳು, ಆಡಳಿತಾತ್ಮಕ ಇಚ್ಛಾಶಕ್ತಿ ಹಾಗೂ ಹೊಣೆಯನ್ನು ಹೊರುವ ಮನಸ್ಸು ಸೃಷ್ಟಿಯಾಗಬೇಕು. ಆದರೆ ಸಂಪನ್ಮೂಲಗಳನ್ನು ಹಾಗೂ ಅದಕ್ಕೆ ಅಗತ್ಯವಾದ ಇಚ್ಛಾಶಕ್ತಿಯನ್ನು ಒಗ್ಗೂಡಿಸಿಕೊಳ್ಳಲು ನಾವು ಹೆಣಗಬೇಕಿದೆ, ಧ್ವನಿಯೆತ್ತಬೇಕಿದೆ. ಏಕೆಂದರೆ, ಸಾರ್ವಜನಿಕ ಹೂಡಿಕೆ ಹಾಗೂ ಅಭಿವೃದ್ಧಿಯೆಡೆಗಿನ ಗಮನ ನೀಡುವಿಕೆಗೆ ನಮ್ಮ ಮಕ್ಕಳ ಸ್ವಾಸ್ಥ್ಯ ಹಾಗೂ ಭವಿಷ್ಯಕ್ಕೂ ಮಿಗಿಲಾದ ಆದ್ಯತೆ ಇನ್ನೇನಿರಲು ಸಾಧ್ಯ? ಎಲ್ಲರೂ ನಮ್ಮ ಮಕ್ಕಳೇ."

■

ಬಿ ಫಸ್ಟ್, 23-05-2016

## ಶಾಲೆಗಳ ಪ್ರಮಾಣ




ಆಕರ: *Elementary Education in India - District Report Cards* 2016-17, Vol.: 1, Published by the National Institute of Educational Planning and Administration, New Delhi

## ದಾಖಲಾತಿ ಪ್ರಮಾಣ




ಆಕರ: *Elementary Education in India - District Report Cards* 2016-17, Vol.: 1, Published by the National Institute of Educational Planning and Administration, New Delhi

**ಬೆಂಗಳೂರು ಮಹಾನಗರದ ಒಟ್ಟು ಶಾಲೆಗಳಲ್ಲಿ ಬೆಂಗಳೂರು ಉತ್ತರ ಶೈಕ್ಷಣಿಕ ಜಿಲ್ಲೆಯಲ್ಲಿ ಶೇ. 25ರಷ್ಟು ಮತ್ತು ಬೆಂಗಳೂರು ದಕ್ಷಿಣ ಶೈಕ್ಷಣಿಕ ಜಿಲ್ಲೆಯಲ್ಲಿ ಶೇ. 31ರಷ್ಟು ಸರ್ಕಾರಿ ಶಾಲೆಗಳಿವೆ. ಆದರೆ ದಾಖಲಾತಿ ಪ್ರಮಾಣವು ಅನುಕ್ರಮವಾಗಿ ಬೆಂಗಳೂರು ಉತ್ತರದಲ್ಲಿ ಶೇ. 15ರಷ್ಟು ಹಾಗೂ ಬೆಂಗಳೂರು ದಕ್ಷಿಣದಲ್ಲಿ ಶೇ. 14ರಷ್ಟು ಇರುವುದು, ಅತ್ಯಂತ ಅವಕಾಶವಂಚಿತ ಕುಟುಂಬಗಳ ಈ ಮಕ್ಕಳು ಗುಣಾತ್ಮಕ ಶಿಕ್ಷಣದಿಂದ ವಂಚಿತರಾಗದಂತೆ ಕಾಳಜಿ ವಹಿಸುವ ಜರೂರಿದೆ.**

ಕೆಲವು ವಿದ್ಯಾರ್ಥಿಗಳಂತೂ ಶಾಲೆಗೆ ಹೋಗಿ ಕಲಿಯುತ್ತಿರುವವರಲ್ಲಿ ಮೊದಲನೆಯ ಪೀಳಿಗೆಯವರಾಗಿರುತ್ತಾರೆ. ಅವರ ಮನೆಗಳಲ್ಲಿ ಈ ಹಿಂದೆ ಯಾರೂ ಶಾಲೆಗೆ ಹೋಗಿರುವುದೇ ಇಲ್ಲ. ಆದರೆ ಶಿಕ್ಷಣದ ಮೂಲಕ ಅವರೆಲ್ಲರ ಬದುಕಿನ ಸ್ಥಿತಿಗತಿಗಳನ್ನು ಸುಧಾರಿಸಲು ಸಾಧ್ಯವಿದೆ ಎಂಬುದನ್ನು ಗುರುತಿಸುವಲ್ಲಿ ಶಿಕ್ಷಕರ ಹಾಗೂ ಶಿಕ್ಷಕ ಶಿಕ್ಷಕರ ಪಾತ್ರ ಅತ್ಯಂತ ಮುಖ್ಯವಾದದ್ದು.

# ಮಕ್ಕಳ ಕಲಿಕೆಯ ಮೇಲೆ ಕೌಟುಂಬಿಕ ಹಿನ್ನೆಲೆಯ ಪರಿಣಾಮ

## ಮಕ್ಕಳ ಕುರಿತಾಗಿ ತಳಹಂತದಲ್ಲಿ ಇರುವ ನಂಬಿಕೆಗಳು

ಶಿಕ್ಷಕರು, ಶಿಕ್ಷಕ ಪ್ರಶಿಕ್ಷಕರು ಹಾಗೂ ಶೈಕ್ಷಣಿಕ ಅಧಿಕಾರಿಗಳ ಜೊತೆಗೆ ಆ ಕ್ಷೇತ್ರಕ್ಕೆ ಸಂಬಂಧಪಟ್ಟ ಕೆಲಸಗಳ ನಿಮಿತ್ತ ಒಡನಾಡುವ ಸಂದರ್ಭದಲ್ಲಿ ಮಕ್ಕಳ ಹಾಗೂ ಕಲಿಕೆಯ ಕುರಿತಾಗಿ ಸಾಮಾನ್ಯವಾದ ಅನೇಕ ನಂಬಿಕೆಗಳು ಇರುವುದು ಕಂಡುಬರುತ್ತದೆ. ಅವುಗಳಲ್ಲಿ ಕೆಲವನ್ನು ಪರಾಮರ್ಶಿಸೋಣ:

- ಮೂರು ತರಹದ ಮಕ್ಕಳಿದ್ದಾರೆ – ಬುದ್ಧಿವಂತ, ಸಾಧಾರಣ ಹಾಗೂ ಚುರುಕಲ್ಲದವರು. ಇಂತಹ ತೀವ್ರ ತರಹದ ವ್ಯತ್ಯಾಸಕ್ಕೆ ಮುಖ್ಯ ಕಾರಣ ಮಗುವಿನ ಕೌಟುಂಬಿಕ ಹಿನ್ನೆಲೆ.
- ಕೆಲವು ಮಕ್ಕಳು ಓದುವುದರಲ್ಲಿ ಮುಂದಿರುತ್ತಾರೆ; ಮತ್ತೆ ಕೆಲವರು ಇನ್ನಿತರ ಸಾಮಾನ್ಯ ದೈನಂದಿನ ಕೆಲಸಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗಲು ಮಾತ್ರ ಸಮರ್ಥರಾಗಿರುತ್ತಾರೆ.
- ನಮ್ಮ ಶಾಲೆಗಳಿಗೆ ಬರುವ ಮಕ್ಕಳ ಕೌಟುಂಬಿಕ ಅಡಿಪಾಯವು ಚೆನ್ನಾಗಿಲ್ಲ.
- ಕೆಲವು ನಿರ್ದಿಷ್ಟ ಜಾತಿಗಳಿಗೆ ಸೇರಿದ ಮಕ್ಕಳು ಓದುವುದರಲ್ಲಿ ತುಂಬಾ ಹಿಂದಿರುತ್ತಾರೆ ಅಥವಾ ತುಂಬಾ ಮುಂದಿರುತ್ತಾರೆ.

ಈ ನಂಬಿಕೆಗಳು, ಮಕ್ಕಳ ಶಿಕ್ಷಣದ ಕುರಿತಾಗಿ ಕಾಳಜಿ ಹೊಂದಿರುವ, ಸರಿಯಾಗಿ ಆಲೋಚಿಸುವ ವ್ಯಕ್ತಿಗಳ ಮನಸ್ಸಿನಲ್ಲಿ ಈ ಕೆಳಗಿನ ಮೂಲಭೂತ ಪ್ರಶ್ನೆಗಳನ್ನು ತನ್ನಿಂದ ತಾನೇ ಹುಟ್ಟುಹಾಕಬೇಕು.

- ಎಲ್ಲಾ ಮಕ್ಕಳಿಗೂ ಎಲ್ಲಾ ರೀತಿಯಿಂದಲೂ ಕಲಿಯಲು ಸಮಾನ ಅವಕಾಶಗಳನ್ನು ನೀಡಿದರೆ, ಅವರು ಒಂದೇ ರೀತಿಯಲ್ಲಿ ಕಲಿಯಲು ಸಮರ್ಥರಾಗುತ್ತಾರೆಯೇ?
- ಮಗು ಕಲಿಕೆಯ ಪ್ರಕ್ರಿಯೆಯಲ್ಲಿ ಯಾವಾಗ ತೊಡಗಿಕೊಳ್ಳುತ್ತದೆ?
- ಕಲಿಕೆಗೆ ಎಂತಹ ವಾತಾವರಣವು ಅನುಕೂಲಕರ?
- 'ಬುದ್ಧಿವಂತಿಕೆ' ಅಂದರೆ ಏನು? ಮಕ್ಕಳ ಬುದ್ಧಿಮಟ್ಟಗಳಲ್ಲಿ ವ್ಯತ್ಯಾಸಗಳಿವೆಯೇ?
- ಆನುವಂಶಿಕ ಸಂಗತಿ ಎಷ್ಟರ ಮಟ್ಟಿಗೆ ಮನುಷ್ಯನ ಬುದ್ಧಿಮತ್ತೆಯನ್ನು ರೂಪಿಸುತ್ತದೆ? ವ್ಯಕ್ತಿಯ ಪರಿಸರದ ಕೊಡುಗೆ ಎಷ್ಟರ ಮಟ್ಟಿಗೆ ಇರುತ್ತದೆ?
- ಯಾವ ಮಕ್ಕಳನ್ನು ಬೇಗ ಕಲಿಯುವವರು ಎಂದು ಕರೆಯಬಹುದು ಮತ್ತು ಹಾಗೆ ಯಾವ ಆಧಾರದ ಮೇಲೆ ಕರೆಯಬಹುದು?

**ಕೊಟ್ರೇಶಿಯ ಕನಸು**

'ಕೊಟ್ರೇಶಿ ಕನಸು' ಎನ್ನುವುದು 1994 ರಲ್ಲಿ ವಿಮರ್ಶಕರ ಮೆಚ್ಚುಗೆ ಪಡೆದ ಕನ್ನಡ ಚಲನಚಿತ್ರ. ಇದು ಕುಂ. ವೀರಭದ್ರಪ್ಪ ಅವರ 'ಕೊಟ್ರೇಶಿ ಹೈಸ್ಕೂಲಿಗೆ ಸೇರಿದ್ದು' ಎಂಬ ಕಾದಂಬರಿಯನ್ನು ಆಧರಿಸಿದೆ. ನ್ಯಾಯ–ಸಮಾನತೆಗಳ ಸೂಕ್ಷ್ಮ ಸಂಗತಿಯನ್ನು ಸಶಕ್ತವಾಗಿ ನಿಭಾಯಿಸುತ್ತದೆ. ನಾಗತಿಹಳ್ಳಿ ಚಂದ್ರಶೇಖರ್ ಅವರು ಈ ಚಿತ್ರದ (ಅವರೂ ಕೂಡ ಲೇಖಕರಾದ ಕುಂ.ವೀರಭದ್ರಪ್ಪನವರಂತೆ ಶಿಕ್ಷಕರಾಗಿ ಅನುಭವವುಳ್ಳವರು) ನಿರ್ದೇಶಕರು. ಈ ಚಲನಚಿತ್ರವು ಎರಡು ರಾಷ್ಟ್ರೀಯ ಪ್ರಶಸ್ತಿಗಳನ್ನು ಗೆದ್ದಿದೆ. ಒಂದು, ಅತ್ಯುತ್ತಮ ಕನ್ನಡ ಚಲನಚಿತ್ರ ಪ್ರಶಸ್ತಿ. ಮತ್ತೊಂದು, ಅತ್ಯುತ್ತಮ ಬಾಲಕಲಾವಿದ ಪ್ರಶಸ್ತಿ (ವಿಜಯ್ ರಾಘವೇಂದ್ರ). ಇದು ಬುದ್ಧಿವಂತ ಹುಡುಗನೊಬ್ಬನ ತೀವ್ರ ಹೋರಾಟ. ಕೆಳಜಾತಿಗೆ ಸೇರಿದ ಅವನ ಕಡುಬಡವ ತಂದೆತಾಯಿ ಹಾಗೂ ಅವರ ಸಮುದಾಯವು ಊರಿನ ಮುಖ್ಯಸ್ಥ ಗೌಡನು ಮಾಡುವ ಪ್ರಬಲವಾದ ಒಳಸಂಚಿನ ಹಿನ್ನೆಲೆಯಲ್ಲಿ ಹುಡುಗನನ್ನು ಪ್ರೌಢಶಾಲಾ ಮಟ್ಟದಲ್ಲಿ ಓದಿಸಲು ಹೆಣಗಾಡಿದ್ದನ್ನು ಹಾಗೂ ಕೇವಲ ತನ್ನ ಆರ್ಥಿಕ ಹಾಗೂ ರಾಜಕೀಯ ಬಲದಿಂದ ಹುಡುಗನ ಏಳಿಗೆಯನ್ನು ಮಟ್ಟಹಾಕಲು ಗೌಡನು ಪಡುವ

ಪ್ರಯತ್ನಗಳನ್ನು (ಚೆನ್ನಾಗಿ ಓದುತ್ತಿರದ ಅವನದೇ ಮಗನ ಮೂಲಕ ಇದನ್ನು ತೋರಿಸಲಾಗಿದೆ) ಚಿತ್ರಿಸುತ್ತದೆ. ವಿಪರ್ಯಾಸವೆಂದರೆ, ಕೊಟ್ರೇಶಿ ದಾಖಲಾತಿ ಪಡೆಯಲು ಪ್ರಯತ್ನಿಸುವ ಶಾಲೆಗೇ ಗೌಡನು ಹಣವನ್ನು ನೀಡುವುದು ಹಾಗೂ ಅದರಿಂದಾಗಿಯೇ ಶಾಲಾ ಆಡಳಿತವು ಒಂದಲ್ಲ ಒಂದು ನೆಪವೊಡ್ಡಿ ಹುಡುಗನಿಗೆ ದಾಖಲಾತಿ ನಿರಾಕರಿಸುವಂತೆ ಮಾಡುವಲ್ಲಿ ಸಫಲವಾಗುವುದು. ತಮ್ಮ ಮಗನನ್ನು ಓದಲು ಕಳುಹಿಸುವಂತೆ ಕೊಟ್ರೇಶಿಯ ಅನಕ್ಷರಸ್ಥ ತಂದೆತಾಯಿಗಳ ಮನವೊಲಿಸುವ ಮಾಧ್ಯಮಿಕ ಶಾಲಾ ಶಿಕ್ಷಕರಿಗೆ ದಿನನಿತ್ಯದ ಜೀವನಕ್ಕೆ ಬೇಕಾದ ಸಾಮಾನು ಸರಂಜಾಮುಗಳನ್ನು ಒದಗಿಸುವುದನ್ನೂ ಆತ ನಿಲ್ಲಿಸಿಬಿಡುತ್ತಾನೆ ಹಾಗೂ ಕೊಟ್ರೇಶಿಯ ಕುಟುಂಬಕ್ಕೆ ಪಾಠ ಕಲಿಸಲು ಅವರ ಗುಡಿಸಲಿಗೆ ಬೆಂಕಿ ಹಚ್ಚಿಸಿ, ಸುಡಿಸುತ್ತಾನೆ. ಕೊನೆಯಲ್ಲಿ, ಆತ್ಮಸಾಕ್ಷಿಯುಳ್ಳ ಹಾಗೂ ಕಾನೂನುಗಳನ್ನು ಕಾರ್ಯಗತಗೊಳಿಸುವ ಪೋಲೀಸ್ ಅಧಿಕಾರಿಯು ಮಧ್ಯಪ್ರವೇಶಿಸಿ, ಗೌಡನ ಶೋಷಣೆಗೆ ತಡೆಯೊಡ್ಡುವ ಮೂಲಕ ಹಾಗೂ ಕೊಟ್ರೇಶಿಯ ತಂದೆಯು ಉಪವಾಸವನ್ನು ಮುರಿದು, ಮೊದಲು ತನ್ನ ಮಗನಿಗೆ ದಾಖಲಾತಿಯನ್ನು ನಿರಾಕರಿಸಿದ ಶಾಲೆಯಲ್ಲಿಯೇ ಅವನನ್ನು ಸೇರಿಸುವುದರ ಮೂಲಕ ಕೊಟ್ರೇಶಿಯ ಕುಟುಂಬದ ಹಾಗೂ ಅವರ ಕಡೆಯವರ ಬೆಂಬಲಿಗರ ಹೋರಾಟಗಳು ಫಲಪ್ರದವಾಗುತ್ತವೆ. ಆದಾಗ್ಯೂ ಆಳವಾಗಿ ಬೇರೂರಿದ ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಯು ಕಾನೂನನ್ನು ಹೇಗೆ ಧಿಕ್ಕರಿಸುತ್ತದೆ ಮತ್ತು ಪ್ರಬಲ-ದುರ್ಬಲ ವರ್ಗಗಳ ನಡುವೆ ಇರುವ ಶಕ್ತಿಯ ಸಮೀಕರಣವು ಬದಲಾಗದಂತೆ ದುರ್ಬಲ ವರ್ಗದವರ ಮೇಲಿನ ತನ್ನ ಬಲವಾದ ಹಿಡಿತವನ್ನು ಉಳಿಸಿಕೊಳ್ಳಲು ಪ್ರಬಲವರ್ಗವು ಹೇಗೆ ಪ್ರಯತ್ನಿಸುತ್ತದೆ ಎಂಬುದು ಮನಸ್ಸಿನಲ್ಲಿ ಅಚ್ಚೊತ್ತಿದಂತೆ ಉಳಿದುಬಿಡುತ್ತದೆ.

## ಚಿನ್ನಾರಿ ಮುತ್ತ

'ಚಿನ್ನಾರಿ ಮುತ್ತ' ಎಂಬ ಮತ್ತೊಂದು ಸುಂದರವಾದ ಮಕ್ಕಳ ಚಲನಚಿತ್ರವಿದೆ. ಖ್ಯಾತ ಕವಿ ಹಾಗೂ ನನ್ನ ಸಾಹಿತ್ಯಿಕ ಗುರು ಎಚ್.ಎಸ್.ವೆಂಕಟೇಶಮೂರ್ತಿ ಅವರು ಬರೆದ ಹಾಡೊಂದು ಈ ಚಿತ್ರದಲ್ಲಿದೆ. ಎಲ್ಲ ಪ್ರಭೇದಗಳಿಗೆ ಸೇರಿದ ಜೀವಿಗಳಿಗೂ ಅವು ಹೊಂದಿರುವ ಅಗತ್ಯ ಸಾಮರ್ಥ್ಯಕ್ಕೆ ಸರಿಯಾಗಿ ಏಳಿಗೆ ಹೊಂದಲು ಅನುಕೂಲಕರವಾದ ವಾತಾವರಣವಿರಬೇಕು ಎನ್ನುವುದನ್ನು ಈ ಹಾಡು ಒತ್ತಿ ಹೇಳುತ್ತದೆ. ಪ್ರಕೃತಿಯಲ್ಲಿನ ವಿವಿಧ ಪ್ರತಿಮೆಗಳನ್ನು ಬಳಸಿಕೊಳ್ಳುವುದರ ಜೊತೆಗೆ ಈ ಹಾಡು ಕೆಲವು ಚಿಂತನಾರ್ಹ ಪ್ರಶ್ನೆಗಳನ್ನೂ ಎತ್ತುತ್ತದೆ. ಹಕ್ಕಿಗೆ ರೆಕ್ಕೆಗಳಿದ್ದರೆ ಸಾಕೆ? ಹಾರಲು ಆಕಾಶವೂ ಬೇಡವೇ? ಜಿಂಕೆಗೆ ಕಾಲುಗಳಿದ್ದರೆ

ಸಾಕೆ? ಕುಣಿದಾಡಲು ಕಾಡು ಬೇಡವೇ? ಹೂವಿಗೆ ಪರಿಮಳವಿದ್ದರೆ ಸಾಕೆ? ಅದನ್ನು ಹರಡಲು ಗಾಳಿಯು ಬೇಡವೇ? ಜೇನುಹುಳಕ್ಕೆ ಬಾಯಿಯಿದ್ದರೆ ಸಾಕೆ? ಮಕರಂದವನ್ನು ಹೀರಲು ಹೂವುಗಳು ಬೇಡವೇ? ಮೋಡಗಳಿಗೆ ಮಳೆ ಸುರಿಸಲು ಭೂಮಿ ಬೇಡವೇ ...? ತೊರೆಗೆ ಹರಿಯಲಾರಂಭಿಸುವ ಮೊದಲು ಕೊಳವೊಂದು ಬೇಡವೇ....? ಹೀಗೇ.

ಬಹಳಷ್ಟು ವಿದ್ಯಾರ್ಥಿಗಳು ತೀವ್ರ ನಿರ್ಬಂಧಗಳನ್ನು ಹೇರುವ ಹಿನ್ನೆಲೆಗಳಿಂದ ಬಂದವರಾಗಿರುತ್ತಾರೆ. ಕೆಲವರಂತೂ ಶಾಲೆಗೆ ಹೋಗಿ ಕಲಿಯುತ್ತಿರುವವರಲ್ಲಿ ಮೊದಲನೆಯ ಪೀಳಿಗೆಯವರಾಗಿರುತ್ತಾರೆ. ಅವರ ಮನೆಗಳಲ್ಲಿ ಈ ಹಿಂದೆ ಯಾರೂ ಶಾಲೆಗೆ ಹೋಗಿರುವುದೇ ಇಲ್ಲ. ಆದರೆ ಶಿಕ್ಷಣದ ಮೂಲಕ ಅವರೆಲ್ಲರ ಬದುಕಿನ ಸ್ಥಿತಿಗತಿಗಳನ್ನು ಸುಧಾರಿಸಲು ಸಾಧ್ಯವಿದೆ ಎಂಬುದನ್ನು ಗುರುತಿಸುವಲ್ಲಿ ಶಿಕ್ಷಕರ ಹಾಗೂ ಶಿಕ್ಷಕ ಶಿಕ್ಷಕರ ಪಾತ್ರ ಅತ್ಯಂತ ಮುಖ್ಯವಾದದ್ದು ಎನ್ನುವುದು ಮೇಲಿನ ವಿಶ್ಲೇಷಣೆಯಿಂದ ಕಂಡುಬಂದಿರುವ ಅಂಶ.

**ಮಾಧುರಿಯ ಸ್ಫೂರ್ತಿದಾಯಕ ಕಥೆ**

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನ ಐನಹಳ್ಳಿಯ ಸಾಮಾನ್ಯ ಗ್ರಾಮೀಣ ಬಾಲಕಿಯಾದ ಮಾಧುರಿಯು ಇತ್ತೀಚೆಗೆ ತೋಟಗಾರಿಕೆಯಲ್ಲಿ ಸ್ನಾತಕೋತ್ತರ ಪದವಿಗೆ ದಾಖಲಾತಿಯನ್ನು ಪಡೆದ ಕಥೆಯು ನಿಜಕ್ಕೂ ಆಶಾದಾಯಕವಾದುದು. ಇತ್ತೀಚೆಗೆ ಅಂಬಲಗೆರೆ ಸರ್ಕಾರಿ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ನಾಗರಾಜಾಚಾರ್ ಅವರು (ಸೇವಾನಿರತ ಶಿಕ್ಷಕರಿಗಾಗಿ ಮಾಡ್ಯೂಲ್‌ಗಳನ್ನು ತಯಾರಿಸುವ ಸಂಬಂಧ, ನಾನು ಅವರ ಜೊತೆಗೆ ಇತ್ತೀಚೆಗೆ ಕೆಲಸ ಮಾಡಿದ್ದೆ. –ಲೇ.) ಅವಳ ಯಶೋಗಾಥೆಯನ್ನು ಹೇಳಿದರು. ಅವಳು ಅದೇ ಶಾಲೆಯಲ್ಲಿ ತನ್ನ ಎಸ್‌ಎಸ್‌ಎಲ್‌ಸಿ ವಿದ್ಯಾಭ್ಯಾಸವನ್ನು ಯಶಸ್ವಿಯಾಗಿ ಮುಗಿಸಿದ್ದಳು. ಕಷ್ಟಕರವಾದ ಕೌಟುಂಬಿಕ ಹಿನ್ನೆಲೆಯಿದ್ದಾಗ್ಯೂ ಪರಿಸರವು ವಿದ್ಯಾರ್ಥಿಯ ಜೀವನವನ್ನು ರೂಪಿಸುವಲ್ಲಿ ಹೇಗೆ ಮಹತ್ವದ ಪಾತ್ರವನ್ನು ವಹಿಸಬಲ್ಲುದು ಎಂಬ ದೃಷ್ಟಿಯಿಂದ ಮಾಧುರಿಯ ಕಥೆಯು ಕುತೂಹಲಕರವಾಗಿದೆ.

ಅವಳಂತಹ ಹಲವಾರು ಹುಡುಗಿಯರ ಹಾಗೆಯೇ ಮಾಧುರಿ ದೊಡ್ಡದೊಂದು ಅವಿಭಕ್ತ ಕುಟುಂಬದಲ್ಲಿ ಬೆಳೆದಳು. ಹತ್ತನೆಯ ತರಗತಿಯವರೆಗೆ ಸರ್ಕಾರಿ ಕನ್ನಡ ಮಾಧ್ಯಮ ಶಾಲೆಯಲ್ಲಿ ಓದಿದಳು. ಪ್ರೌಢಶಾಲೆಯಲ್ಲಿದ್ದಾಗ ಅವಳು ವಿಜ್ಞಾನದ ಬಗ್ಗೆ ಗಾಢ ಆಸಕ್ತಿಯನ್ನು ಬೆಳೆಸಿಕೊಂಡಳು ಹಾಗೂ ತಾನೇ ಪ್ರಾಯೋಗಿಕ ಮಾದರಿಗಳನ್ನು ನಿರ್ಮಿಸಿಕೊಂಡು ತಾಲ್ಲೂಕು ಮತ್ತು ಜಿಲ್ಲಾಮಟ್ಟದ

ಹಲವಾರು ವಿಜ್ಞಾನ ಪ್ರದರ್ಶನಗಳಲ್ಲಿ ಭಾಗವಹಿಸಿದಳು. ಪದವಿಪೂರ್ವ ಶಿಕ್ಷಣಕ್ಕಾಗಿ ಬೆಂಗಳೂರಿಗೆ ಬರಬೇಕಾದ ಅವಳು ತನ್ನ ಸೋದರಮಾವನ ಮನೆಯಲ್ಲಿದ್ದು ಓದಿದಳು. ಈ ಹಂತದಲ್ಲಿ ಅವಳು ನಗರದಲ್ಲಿಯೇ ಹುಟ್ಟಿ ಬೆಳೆದ ವಿದ್ಯಾರ್ಥಿಗಳೊಡನೆ ಕಾಲೇಜಿನಲ್ಲಿ ಸ್ಪರ್ಧಿಸಬೇಕಾದ ಕಾರಣ ಗಂಭೀರವಾದ ಸವಾಲುಗಳನ್ನು ಎದುರಿಸಿದಳು. ತನ್ನ ದೃಢಚಿತ್ತತೆ, ಕಠಿಣ ಪರಿಶ್ರಮ, ಕುಟುಂಬದವರ ಬೆಂಬಲ ಹಾಗೂ ನಿಕಟ ಪರಿಸರದ ಸಹಾಯದಿಂದ ಅವಳು ತನ್ನ ಕೀಳರಿಮೆಯನ್ನು ಗೆದ್ದು ವಿಜ್ಞಾನದಲ್ಲಿ ಅಧ್ಯಯನವನ್ನು ಮುಂದುವರೆಸಿದಳು. ಪದವಿಪೂರ್ವ ತರಗತಿಯ ಪಬ್ಲಿಕ್ ಪರೀಕ್ಷೆಯಲ್ಲಿ ಶೇಕಡಾವಾರು ಅಧಿಕ ಅಂಕಗಳನ್ನು ಪಡೆಯುವುದರೊಂದಿಗೆ ತನ್ನ ಸಾಮರ್ಥ್ಯವನ್ನು ಮತ್ತೊಮ್ಮೆ ಸಾಬೀತುಪಡಿಸಿದಳು.

ಯಾವುದಾದರೊಂದು ಎಂಜಿನಿಯರಿಂಗ್ ಅಥವಾ ವೈದ್ಯಕೀಯ ಕಾಲೇಜಿನಲ್ಲಿ ಸುಲಭವಾಗಿ ದಾಖಲಾತಿ ಸಿಕ್ಕುವಂತಿದ್ದರೂ ಅವಳು ಶಿವಮೊಗ್ಗದ ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದಲ್ಲಿ ತೋಟಗಾರಿಕೆ ವಿಷಯದಲ್ಲಿ ನಾಲ್ಕು ವರ್ಷ ಅವಧಿಯ ಬಿಎಸ್‌ಸಿ ಪದವಿ ಓದುವುದನ್ನೇ ಆಯ್ದುಕೊಂಡಳು. ಅವಳು ಓದಿದ ಕಾಲೇಜು ಹಿರಿಯೂರಿನಲ್ಲಿತ್ತು. ಕೃಷಿ ಕುಟುಂಬದಿಂದ ಬಂದವಳು. ಇಪ್ಪತ್ತು ಹೆಕ್ಟೇರುಗಳಷ್ಟು ಜಮೀನನ್ನು ಹೊಂದಿರುವ ಅವಳ ತಂದೆ ಪ್ರಕಾಶ್, ತನ್ನ ದೊಡ್ಡ ಕುಟುಂಬದ ಜೊತೆ ಜಂಟಿಯಾಗಿ ಅಡಿಕೆ ಮತ್ತು ತೆಂಗನ್ನು ಬೆಳೆಯುವವರು. ಹೀಗಾಗಿ ಅವಳು ತನ್ನ ಕುಟುಂಬಕ್ಕೊಂದೇ ಅಲ್ಲ, ಒಟ್ಟಾರೆ ಕೃಷಿ ಸಮುದಾಯಕ್ಕೇ ತನ್ನ ಕೊಡುಗೆಯನ್ನೀಯಲು ಬಯಸಿದಳು. ಅವಳ ಕುಟುಂಬವಲ್ಲದೇ ಅವಳ ಪ್ರೌಢಶಾಲಾ ಮುಖ್ಯೋಪಾಧ್ಯಾಯರೂ ಕೂಡ ಅವಳ ಆಯ್ಕೆಗೆ ಬೆಂಬಲವಾಗಿ ನಿಂತರು. ಪದವಿಯನ್ನು ಓದುತ್ತಿದ್ದ ಅವಧಿಯಲ್ಲಿ ಅವಳು ಒಮ್ಮೆ ಸೋದರಮಾವನ ಮನೆಯಲ್ಲಿ ಇರಬೇಕಾಗಿ ಬಂದರೆ ಮತ್ತೊಮ್ಮೆ ಹಿರಿಯೂರಿನ ವಿದ್ಯಾರ್ಥಿನಿಲಯದಲ್ಲಿ ಇರಬೇಕಾಗಿ ಬರುತ್ತಿತ್ತು. ಶಿವಮೊಗ್ಗದಲ್ಲಿ ನಡೆದ ವಿಶ್ವವಿದ್ಯಾಲಯದ ಪದವಿ ಪ್ರದಾನ ಸಮಾರಂಭದಲ್ಲಿ ನಾಲ್ಕು ಸ್ವರ್ಣಪದಕಗಳನ್ನು ಪಡೆದುಕೊಳ್ಳುವುದರೊಂದಿಗೆ ಪದವಿಯ ಹಂತದಲ್ಲಿ ಮತ್ತೆ ಯಶಸ್ವಿಯಾಗಿ ಹೊರಹೊಮ್ಮಿದಳು. ನಂತರ, ಬಾಗಲಕೋಟೆಯ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿಗೆ ದಾಖಲಾತಿಯನ್ನು ಪಡೆದಳು. ತೋಟಗಾರಿಕೆ ವಿಷಯದಲ್ಲಿ ವಿಜ್ಞಾನಿಯಾಗುವ ಕನಸನ್ನು ಹೊಂದಿರುವ ಅವಳು ಕಡಿಮೆ ವೆಚ್ಚದಲ್ಲಿ ಉತ್ತಮ ಇಳುವರಿಯನ್ನು ನೀಡುವ ವಿವಿಧ ತರಕಾರಿ ಬೆಳೆಗಳನ್ನು ಬೆಳೆಯಲು ಕೃಷಿಕರಿಗೆ ನೆರವಾಗುವ ಉದಾತ್ತ ಆಲೋಚನೆಗಳನ್ನು ಹೊಂದಿದ್ದಾಳೆ.

## ಇತ್ತೀಚಿನ ಅಧ್ಯಯನವೊಂದರಿಂದ ಪಡೆದ ಒಳನೋಟಗಳು*

ಇತ್ತೀಚೆಗೆ ಯಾದಗಿರಿ ಜಿಲ್ಲೆಯ ಶೋರಾಪುರ ತಾಲೂಕಿನಲ್ಲಿ ಅಧ್ಯಯನವೊಂದನ್ನು ಕೈಗೊಳ್ಳಲಾಯಿತು. ಪ್ರಾಥಮಿಕ ಹಾಗೂ ಅದಕ್ಕೂ ಮೇಲಿನ ಮಟ್ಟಗಳಲ್ಲಿ ಹೆಣ್ಣು ಮಕ್ಕಳು ಶಿಕ್ಷಣವನ್ನು ಮುಂದುವರೆಸುವಲ್ಲಿ ಉಳಿದೆಲ್ಲ ಅಂಶಗಳ ಜೊತೆಗೆ ಮೊದಲನೆಯದಾಗಿ ತಾಯಂದಿರ ಸಾಕ್ಷರತೆ, ನಂತರ ತಂದೆಯರ ಸಾಕ್ಷರತೆಗಳು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ ಎನ್ನುವುದನ್ನು ಈ ಅಧ್ಯಯನವು ಸೂಚಿಸುತ್ತದೆ. ಬಡತನ ಹಾಗೂ ನಿರುದ್ಯೋಗಗಳು ದುರ್ಬಲ ವರ್ಗದವರು ಶಿಕ್ಷಣ ಪಡೆಯುವುದರ ವಿರುದ್ಧವಾಗಿ ಕೆಲಸ ಮಾಡುತ್ತವೆಯಾದರೂ ಮಹಿಳಾ ಸಾಕ್ಷರತೆಯೂ ಸೇರಿದಂತೆ ಸಾಮಾಜಿಕ ಅಭಿವೃದ್ಧಿಯ ಕೊರತೆಯು ಹೆಚ್ಚು ಪ್ರಬಲವಾದ ಅಂಶವಾಗಿದೆ.

ಬೇರೆ ಬೇರೆ ಜಿಲ್ಲೆಗಳಲ್ಲಷ್ಟೇ ಅಲ್ಲದೆ ಬೇರೆ ಬೇರೆ ತಾಲ್ಲೂಕುಗಳಲ್ಲಿಯೂ ಸಾಮಾಜಿಕ-ಆರ್ಥಿಕ ಸಂದರ್ಭಗಳು ವಿಭಿನ್ನವಾಗಿರುತ್ತವೆ. ಹಾಗಿದ್ದರೂ ಹಲವಾರು ಸ್ಥಳಗಳಲ್ಲಿ ಒಂದೇ ತರಹದ ಸ್ಥಿತಿ-ಗತಿಗಳು ಇರಲು ಸಾಧ್ಯ. ಶಿಕ್ಷಕರು ತಮ್ಮ ತರಗತಿಯಲ್ಲಿನ ಪ್ರತಿಯೊಂದು ಮಗುವಿನ ನಿರ್ದಿಷ್ಟ ಸಾಮಾಜಿಕ-ಆರ್ಥಿಕ ಹಿನ್ನೆಲೆಯನ್ನು ತಿಳಿದಿರಬೇಕು ಹಾಗೂ ಸಾಧ್ಯವಾದಷ್ಟೂ ಮಗುವಿಗೆ ಬೆಂಬಲವನ್ನೊದಗಿಸಲು ಪ್ರಯತ್ನಿಸಬೇಕು. ಅವಕಾಶವಂಚಿತ ಕುಟುಂಬಗಳ ಹಿನ್ನೆಲೆಯಿಂದ ಬರುವ ಮಕ್ಕಳಿಗೆ ಅನುಕೂಲಸ್ಥ ಕುಟುಂಬಗಳಿಂದ ಬರುವ ಮಕ್ಕಳಿಗಿಂತ ಹೆಚ್ಚಿನ ಗಮನದ ಅಗತ್ಯವಿದೆ ಎನ್ನುವುದು ಸ್ಪಷ್ಟ. ಇದು ಸರ್ಕಾರವು ನಡೆಸುವ ಶಾಲೆಗಳಿಗಷ್ಟೇ ಅಲ್ಲ, ಶಿಕ್ಷಣ ಹಕ್ಕು ಕಾಯ್ದೆ ಜಾರಿಯಾದ ನಂತರದಲ್ಲಿ ವಿವಿಧತೆಯು ಹೆಚ್ಚಿರುವ ಖಾಸಗಿ ಸಂಸ್ಥೆಗಳಿಗೂ ಅನ್ವಯಿಸುತ್ತದೆ.

ಮಕ್ಕಳು ಹೇಗೆ ಬೆಳೆಯುತ್ತಾರೆ ಮತ್ತು ಕಲಿಯುತ್ತಾರೆ ಎಂಬುದರ ಬಗ್ಗೆ ತಾವು ಹೊಂದಿರುವ ನಂಬಿಕೆಗಳನ್ನು ಅಗತ್ಯವಿದ್ದಲ್ಲೆಲ್ಲ ಪ್ರಶ್ನಿಸಿಕೊಳ್ಳುವುದು, ಅವುಗಳನ್ನು ಮರುರೂಪಿಸಿಕೊಳ್ಳುವುದು ಹಾಗೂ ಮಕ್ಕಳಿಗೆ ತಮ್ಮ ಆನುವಂಶಿಕ ಅಥವಾ ನೈಸರ್ಗಿಕ ಮಿತಿಗಳನ್ನು ಜಯಿಸಲು ಬೇಕಾದ ಬೆಂಬಲದ ವಾತಾವರಣವನ್ನು ಒದಗಿಸುವುದು, ಇವು ಶಿಕ್ಷಕರು ಮತ್ತು ಶಿಕ್ಷಕ ಶಿಕ್ಷಕರು ಮನಃಪೂರ್ವಕವಾಗಿ ತೆಗೆದುಕೊಳ್ಳಬೇಕಾದ ಕೆಲವು ಮುಖ್ಯ ಜವಾಬ್ದಾರಿಗಳು.

* V Santhakumar, Namita Gupta and Ramamurthy Sripada, 'Schooling for All - Can We Neglect the Demand?', Oxford University Press, 2016.

ಈ ಲೇಖನವನ್ನು ಯಹೂದಿ ಗುರು ಬೋನಮ್‌ನ ದೃಷ್ಟಾಂತದೊಂದಿಗೆ ಮುಗಿಸುವುದು ಸೂಕ್ತವಾಗಬಹುದು.

ವರ್ಷಾನುಗಟ್ಟಲೇ ನೂರಾರು ಶಿಷ್ಯರಿಗೆ ಮಾರ್ಗದರ್ಶನ ಮಾಡಿದ ಆತ ವರ್ಷಗಳುರುಳಿದ ಹಾಗೆ ಸಾಕಷ್ಟು ವೃದ್ಧನಾಗಿದ್ದ. ಒಂದು ದಿನ, ಅವನ ಶಿಷ್ಯರು ತಮ್ಮ ಜೀವನದುದ್ದಕ್ಕೂ ನಿರಂತರವಾಗಿ ಮಾರ್ಗದರ್ಶನ ಮಾಡಬಲ್ಲಂತಹ ಸಂದೇಶವೊಂದನ್ನು ನೀಡುವಂತೆ ಅವನನ್ನು ಕೇಳಿಕೊಂಡರು. ಅವರತ್ತ ನಗೆಯೊಂದನ್ನು ಬೀರಿದ ಬೋನಮ್ ತಾನು ಸತ್ತ ನಂತರ ಅದನ್ನು ನೀಡುವುದಾಗಿ ಅವರಿಗೆ ತಿಳಿಸಿದ. ಗೊಂದಲಕ್ಕೊಳಗಾದ ಅವನ ಶಿಷ್ಯರು, ಅದು ಹೇಗೆ ಆಗುವುದೆಂದು ತಿಳಿಯಲು ಬಯಸಿದರು. ಮಹತ್ವದ ಸಂದೇಶವನ್ನು ತನ್ನ ಮರಣದ ನಂತರವೇ ತಾನು ಬಿಟ್ಟುಹೋಗುವುದಾಗಿಯೂ ಮರಣ ಸಂಭವಿಸಿದಾಗ ಅವರದನ್ನು ತನ್ನ ಅಂಗೈಗಳಲ್ಲಿ ಕಾಣಬೇಕೆಂತಲೂ ಅವರಿಗೆ ಅಭಯವನ್ನಿತ್ತ.

**ಬೋನಮ್‌ನ ಸಂದೇಶ**

ಮುಂದೆ ನಿರೀಕ್ಷಿಸಿದಂತೆಯೇ ಕೆಲವು ತಿಂಗಳುಗಳ ಕಾಲದಲ್ಲಿ ಬೋನಮ್ ತೀರಿಕೊಂಡ. ಅವನ ಶಿಷ್ಯರು ಸಹಜವಾಗಿಯೇ ದುಃಖಿತರಾದರು. ಆದರೆ, ತನ್ನ ಹಿಂದೆ ಅವರಿಗಾಗಿ ಆತ ಬಿಟ್ಟುಹೋದ ಸಂದೇಶವೇನೆಂದು ಬಿಚ್ಚಿ ನೋಡಲೂ ಅವರು ಕಾತರರಾಗಿದ್ದರು. ಅವರಲ್ಲೊಬ್ಬ ಬುದ್ಧಿವಂತ ಶಿಷ್ಯನು ಸತ್ತು ಹೋದ ಗುರುವಿನ ಸಮೀಪ ಕುಳಿತುಕೊಂಡು, ಬಿಗಿದುಕೊಂಡಿದ್ದ ಗುರುವಿನ ಎರಡೂ ಅಂಗೈಗಳನ್ನು ಬಿಡಿಸಿದ. ಎರಡರಲ್ಲಿಯೂ ಒಂದೊಂದು ಚೀಟಿಯಿತ್ತು. ಎಡಗೈನಲ್ಲಿದ್ದ ಚೀಟಿಯಲ್ಲಿ, 'ನಾನು ಕೇವಲ ಮಣ್ಣು' ಎಂದು ಬರೆದಿದ್ದರೆ ಬಲಗೈನಲ್ಲಿದ್ದ ಚೀಟಿಯಲ್ಲಿ, 'ಇಡೀ ಪ್ರಪಂಚವನ್ನು ನನಗಾಗಿ ನಿರ್ಮಿಸಲಾಗಿದೆ,' ಎಂದು ಬರೆದಿತ್ತು. ಸ್ಪಷ್ಟವಾಗಿಯೂ ಅಲ್ಲಿ ದೊಡ್ಡದೊಂದು ವಿರೋಧಾಭಾಸವು ಸೃಷ್ಟಿಯಾಗಿತ್ತು! ಮತ್ತೊಬ್ಬ ಚತುರ ಶಿಷ್ಯನು ಆ ಎರಡೂ ಚೀಟಿಗಳನ್ನು ಸೇರಿಸಿ, ತಿರುವಿಹಾಕಿದನು. ಆಗ ಸ್ಪಷ್ಟವಾದ ಟಿಪ್ಪಣಿಯೊಂದು ಕಾಣಸಿಕ್ಕಿತು–

> 'ಪ್ರೀತಿಯ ವಿದ್ಯಾರ್ಥಿಗಳೇ, ನನ್ನ ಎಡಗೈನಲ್ಲಿ ಉಲ್ಲೇಖಿಸಿದ್ದು ವಾಸ್ತವ; ಅದರಲ್ಲಿ ಅಸಾಧಾರಣವಾದುದೇನೂ ಇಲ್ಲ. ವ್ಯಕ್ತಿಯೊಬ್ಬ ನಿರಾಶಾವಾದಿಯಾದರೆ, ಅವನು ಬರೀ ಮಣ್ಣಾಗಿಯೇ ಉಳಿದುಬಿಡುತ್ತಾನೆ. ಆದರೆ, ನನ್ನ ಬಲಗೈಯಲ್ಲಿರುವ ಚೀಟಿಯು ಸಾಧ್ಯತೆಯೊಂದನ್ನು ಸೂಚಿಸುತ್ತದೆ. ವ್ಯಕ್ತಿಯೊಬ್ಬ ತನ್ನ ಸಂಪೂರ್ಣ

ಸಾಮರ್ಥ್ಯ ಹಾಗೂ ಬುದ್ಧಿಶಕ್ತಿಯನ್ನು ಬಳಸಿಕೊಂಡು ಬೆಳೆದರೆ, ಇಡೀ ಪ್ರಪಂಚವು ಅವನಿಗಾಗಿ ತೆರೆದುಕೊಳ್ಳುತ್ತದೆ. ಜೀವನವು ಕೇವಲ ವಾಸ್ತವದಿಂದ ಸಾಧ್ಯತೆಯೆಡೆಗಿನ ಪ್ರಯಾಣ ಮಾತ್ರ.'

ಬೋಸಮ್‌ನ ಅಂತಿಮ ಸಂದೇಶವು, ವಿಶೇಷವಾಗಿ ಮಕ್ಕಳು ಮತ್ತು ಕಲಿಕೆಯ ಮೇಲೆ ಯಾವುದು ಪರಿಣಾಮ ಬೀರುತ್ತದೆ ಎನ್ನುವುದರ ಕುರಿತಾಗಿ ಶಿಕ್ಷಕರು ಹಾಗೂ ಶಿಕ್ಷಕ ಶಿಕ್ಷಕರು ಸಮಾನವಾಗಿ ಹೊಂದಿರುವ ಕೆಲವು ಆಳವಾದ ನಂಬಿಕೆಗಳ ಸಂದರ್ಭದಲ್ಲಿ ಅತ್ಯಂತ ಶಕ್ತಿಯುತವಾದುದು.

■

ಬಿ ಫಸ್ಟ್, 20–02–2017



**17ನೇ ಮಾರ್ಚ್ 2010–** ಕಾಸರಗೋಡಿನ ಮೂಡಂಬೈಲಿನ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಸಂತಸದಾಯಕ ಮಕ್ಕಳು. ಈ ಶಿಶುಸ್ನೇಹಿ ಕನ್ನಡ ಮಾಧ್ಯಮ ಶಾಲೆಯಲ್ಲಿ ಮಕ್ಕಳ ಹಕ್ಕುಗಳನ್ನು ಪೂರ್ಣವಾಗಿ ಅಂಗೀಕರಿಸಲಾಗಿದ್ದು, ಮಕ್ಕಳನ್ನು ಮಾನಸಿಕವಾಗಿ ಹಾಗೂ ಶಾರೀರಿಕವಾಗಿ ಶಿಕ್ಷಿಸಲಾಗುವುದಿಲ್ಲ ಎಂಬುದು ಘೋಷಿಸಿ ಪಾಲಿಸುತ್ತಿರುವ ಅಂಶಗಳಲ್ಲಿ ಒಂದಾಗಿದೆ.

ಮಕ್ಕಳಿಗೆ ತಂತ್ರಜ್ಞಾನ/ಮೂಲಭೂತ ಸೌಕರ್ಯಗಳು ಲಭ್ಯವಾಗುವಂತೆ ಮಾಡುವುದರ ಬದಲು, ಮೂಲಭೂತ ಪರಿಕಲ್ಪನೆಗಳನ್ನು ವಿವಿಧ ಹಂತಗಳಲ್ಲಿ ಪರಿಣಾಮಕಾರಿ ವಿಧಾನದಲ್ಲಿ ಒದಗಿಸಬೇಕು.

# ಶಿಕ್ಷಣದಲ್ಲಿ ಹಿಂಡು ಮನೋಭಾವ

ರಮ್ಯಾ ಅವಕಾಶ ವಂಚಿತ ಕುಟುಂಬವೊಂದರಿಂದ ಬಂದವಳು. ಅವಳು, ಮಲ್ಲಿಯ ಒಬ್ಬಳೇ ಮಗಳು. ಅವಳ ತಂದೆ ಕೆಲವು ವರ್ಷಗಳ ಹಿಂದೆ ತೀರಿಕೊಂಡಿದ್ದಾನೆ. ತಾಯಿ ಬೆಂಗಳೂರಿನ ದಕ್ಷಿಣ ಭಾಗದಲ್ಲಿ ಮನೆಗೆಲಸ ಮಾಡಿಕೊಂಡಿದ್ದಾಳೆ. ರಮ್ಯಾಳ ಕುಟುಂಬವು ತುಮಕೂರಿನ ಬಳಿಯ ಪುಟ್ಟದೊಂದು ಹಳ್ಳಿಗೆ ಸೇರಿದೆ. ಅಲ್ಲಿ ಅವಳ ಅಜ್ಜ ಅಜ್ಜಿ ಹಾಗೂ ಸೋದರ ಮಾವ ಇದ್ದಾರೆ. ಅವಳ ಅಜ್ಜಿ ಮಾಯಮ್ಮನೂ ಮನೆಗೆಲಸ ಮಾಡುತ್ತಿದ್ದವಳೇ. ಅವಳ ಅಜ್ಜ ತನ್ನ ಹೆಂಡತಿ ಮತ್ತು ಮಗಳು ಶ್ರಮಪಟ್ಟು ದುಡಿಯುವ ಅಲ್ಪ ಆದಾಯದ ಮೇಲೆ ಜೀವಿಸುವುದರ ಜೊತೆಗೆ ಅದನ್ನು ಕುಡಿತಕ್ಕಾಗಿ ಮಿತಿಮೀರಿ ಬಳಸುತ್ತಿದ್ದ. ಇಂತಹ ಬಹುತೇಕ ಕುಟುಂಬಗಳಲ್ಲಿ ಇದೇ ಪರಿಸ್ಥಿತಿ ಇದೆ. ಅವರು ಕೆಲವು ತಿಂಗಳುಗಳ ಹಿಂದೆ ತಮ್ಮ ಊರಿಗೆ ಹಿಂದಿರುಗಿ ಹೋಗಿ ನೆಲೆಸುವವರೆಗೂ ಮಲ್ಲಿಯ ಜೊತೆಗೇ ಇದ್ದರು.

ಅವಳ ಮನೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವವರಲ್ಲಿ ರಮ್ಯಳದೇ ಮೊದಲ ಪೀಳಿಗೆ. ಆದರೆ ಅವಳು ಬಹಳ ಕೆಚ್ಚು ಹಾಗೂ ದೃಢಸಂಕಲ್ಪದಿಂದ ಶಿಕ್ಷಣವನ್ನು ಮುಂದುವರೆಸುತ್ತಿದ್ದಾಳೆ. ರಮ್ಯಾ ಈ ವರ್ಷದ ಆರಂಭದಲ್ಲಿ ಪದವಿ ಪೂರ್ವ ಶಿಕ್ಷಣವನ್ನು ಮುಗಿಸಿದಳು. ಆ ನಂತರ ಅವಳು ಓದನ್ನು ಮುಂದುವರೆಸುವುದು

ಅವಳ ಅಜ್ಜಿಗೆ ಇಷ್ಟವಿರಲಿಲ್ಲ. ತನ್ನ ಮೊಮ್ಮಗಳು ಊರಿಗೆ ಹಿಂದಿರುಗಬೇಕೆಂದು ಅವಳು ನಿರ್ಧರಿಸಿಬಿಟ್ಟಿದ್ದಳು. ತನಗೆ ಓದನ್ನು ಮುಂದುವರೆಸಲು ಬಿಡುವಂತೆ ಕೇವಲ ತನ್ನ ಅಜ್ಜ ಅಜ್ಜಿಯರನ್ನು ಹಾಗೂ ಸೋದರ ಮಾವನನ್ನು ಒಪ್ಪಿಸಲು ರಮ್ಯಾ ಒಂದು ತಿಂಗಳಿಗೂ ಹೆಚ್ಚು ಕಾಲ ಪಣತೊಟ್ಟು ಹೋರಾಡಬೇಕಾಯಿತು. ಕೆಲವೇ ವರ್ಷಗಳಲ್ಲಿ ಅವಳ ಮದುವೆಯನ್ನು ಮಾಡಬೇಕಾಗಿರುವುದರಿಂದ ಅವಳು ಮುಂದೆ ಓದುವುದು ವ್ಯರ್ಥವೆಂದು ಭಾವಿಸಿ ಅವರು ಅವಳ ಓದಿಗೆ ವಿರೋಧ ಒಡ್ಡುತ್ತಿದ್ದರು.

ಅಂತೂ ಕೊನೆಗೆ ರಮ್ಯಾಳ ಮನವಿಗೆ ಒಪ್ಪಿಗೆ ದೊರೆಯಿತು. ಜೀವನೋಪಾಯಕ್ಕಾಗಿ ಬೆಂಗಳೂರಿನಲ್ಲಿಯೇ ಉಳಿಯುವ ಮಲ್ಲಿಯ ನಿರ್ಧಾರ ಅವಳ ಉದ್ದೇಶಕ್ಕೆ ನೆರವಾಯಿತು. ಆದರೂ ರಮ್ಯಾ ಅದು ಹೇಗೋ ತನ್ನ ಒಟ್ಟು ಕುಟುಂಬದ ಒತ್ತಡದಿಂದ ಪಾರಾಗಿ ಓದನ್ನು ಮುಂದುವರೆಸುತ್ತಿದ್ದಾಳೆ. ಸನ್ನಿವೇಶದ ಹಿನ್ನೆಲೆಯಲ್ಲಿ ಸದ್ಯ ತನ್ನ ಮನೆಗೆ ಹತ್ತಿರವಿರುವ (ರಮ್ಯಾಳ ಕುಟುಂಬವು ವಿಧಿಸಿದ್ದ ಮಾನದಂಡಗಳಲ್ಲಿ ಕಾಲೇಜು ಮತ್ತು ಮನೆಗಳ ನಡುವಿನ ಅಂತರ ಹಾಗೂ ಸಾಮೀಪ್ಯವೂ ಒಂದಾಗಿತ್ತು) ಖಾಸಗಿ ಅನುದಾನರಹಿತ ಕಾಲೇಜೊಂದರಲ್ಲಿ ಅವಳು ಬಿ.ಕಾಂ ಮೊದಲ ವರ್ಷದಲ್ಲಿ ಓದುತ್ತಿರುವುದೇ ದೊಡ್ಡ ಸಂಗತಿ. ಅವಳ ತಾಯಿಯು ಕೆಲಸ ಮಾಡುವ ಮನೆಗಳಲ್ಲಿ ಒಂದೆರಡು ಕುಟುಂಬಗಳು ಕೂಡ ಸದುದ್ದೇಶದಿಂದ ಸ್ವಲ್ಪಮಟ್ಟಿಗಿನ ನೆರವನ್ನು ಅವಳಿಗೆ ನೀಡುತ್ತಿವೆ.

ಪದವಿ ತರಗತಿಯ ಮೊದಲ ವರ್ಷದಲ್ಲಿ ಕನ್ನಡ ಮಾಧ್ಯಮದಿಂದ ಇಂಗ್ಲಿಷ್ ಮಾಧ್ಯಮಕ್ಕೆ ಬದಲಾಯಿಸಬೇಕಾದಾಗ (ಅದು ಅನಿವಾರ್ಯವಾಗಿತ್ತು) ಅಲ್ಲಿಯ ತನಕವೂ ಕನ್ನಡ ಮಾಧ್ಯಮ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದ ರಮ್ಯಾಳಿಗೆ ಬಹಳ ಕಷ್ಟವಾಯಿತು. ಮನೆಯಲ್ಲಿ ಇಂಗ್ಲಿಷ್‌ನಲ್ಲಿ ಮಾತನಾಡುವ ವಾತಾವರಣ ಇರಲಿಲ್ಲ. ಹಾಗಾಗಿ, ಇಂಗ್ಲಿಷ್ ಜೊತೆಗಿನ ಅವಳ ಹೆಣಗಾಟ ಮುಂದುವರೆದಿದೆ. ವಿದ್ಯಾಭ್ಯಾಸವನ್ನು ಮುಗಿಸಿ ತಾಯಿಯ ಕಷ್ಟವನ್ನು ಕೊನೆಗಾಣಿಸುವ ಉದ್ದೇಶವನ್ನು ಅವಳು ಹೊಂದಿದ್ದಾಳೆ. ಅದಕ್ಕಾಗಿ ಯೋಗ್ಯ ಉದ್ಯೋಗವೊಂದನ್ನು ಪಡೆಯಲು ಒಂದೇ ಮನಸ್ಸಿನಿಂದ ತನ್ನ ಪ್ರಯತ್ನವನ್ನು ಮುಂದುವರೆಸಿದ್ದಾಳೆ.

ತನ್ನ ಮನೆಯವರೊಂದಿಗಿನ ಹೋರಾಟವನ್ನು ಗೆದ್ದ ಅಂದುಕೊಳ್ಳು ವಷ್ಟರಲ್ಲಿಯೇ ರಮ್ಯಾಳಿಗೆ ಇನ್ನೊಂದು ಸವಾಲು ಎದುರಾಗಿತ್ತು. ಅದು ಅವಳ ಕಾಲೇಜಿನಲ್ಲಿ ವಿಧಿಸಿದ ಪರಕೀಯವೆನ್ನಿಸುವ ಹಾಗೂ ಅಸಂಬದ್ಧವಾದ ನಿಯಮ. ಇದೇ ಮೊದಲ ಬಾರಿಗೆ ಅವಳು ಪ್ಯಾಂಟ್, ಜಾಕೆಟ್ ಹಾಗೂ ಟೈಗಳನ್ನು ಒಳಗೊಂಡ ಸಮವಸ್ತ್ರವನ್ನು ಕಡ್ಡಾಯವಾಗಿ ಧರಿಸಬೇಕಿತ್ತು. ಈ ತೊಂದರೆಗಳ

ಜೊತೆಗೆ, ದುರದೃಷ್ಟವೆಂಬಂತೆ ಅವಳಿಗೆ ಸಿಕ್ಕ ಸಮವಸ್ತ್ರದ ಜೊತೆ ಅವಳ ಅಳತೆಗೆ ಹೊಂದುವಂತಹುದಾಗಿರಲೇ ಇಲ್ಲ. ಇದರಿಂದ ಅವಳಿಗೆ ತುಂಬಾ ಇರುಸುಮುರುಸಾಗುತ್ತಿತ್ತು. ಕಳೆದ ಎರಡು ತಿಂಗಳುಗಳಲ್ಲಿ ರಮ್ಯಾಳ ಕಾಲೇಜು, ವಿದ್ಯಾರ್ಥಿಗಳಿಗಾಗಿ ಫ್ಯಾಷನ್ ಪೆರೇಡ್, ಕೇಶಾಲಂಕಾರ ಇತ್ಯಾದಿ ಸಹಪಠ್ಯ ಸ್ಪರ್ಧೆಗಳನ್ನು ಆಯೋಜಿಸಿತ್ತು. ಈ ಕಾಲೇಜು ವಿಧಿಸಿದ ಇಂತಹ ನಿಯಮಗಳ ಹಿಂದಿನ ಉದ್ದೇಶವನ್ನು ಅರ್ಥಮಾಡಿಕೊಳ್ಳಲು ಹೆಣಗುತ್ತಿದ್ದ ನನಗೆ ಮತ್ತು ನನ್ನ ಪತ್ನಿಗೆ ದಿಗ್ಭ್ರಮೆಯಾಯಿತು. ವಿದ್ಯಾರ್ಥಿಗಳಲ್ಲಿ ವೃತ್ತಿಪರತೆಯನ್ನು ಮೈಗೂಡಿಸಲು ಹಾಗೂ ಮುಂದೆ ಉದ್ಯೋಗಕ್ಕೆ ಸೇರಲಿರುವ ಅವರನ್ನು ಆ ದಿಸೆಯಲ್ಲಿ ತಯಾರು ಮಾಡಲು ಹೀಗೆ ಮಾಡಿದ್ದಾರೆಂದು ಭಾವಿಸಬಹುದು. ಆದರೂ ಇಂದಿನ ಪ್ರಗತಿಪರ ವೃತ್ತಿ ಸಂಸ್ಥೆಗಳಲ್ಲಿ ಹೆಚ್ಚಿನವು ತಮ್ಮ ಭಾವೀ ಉದ್ಯೋಗಿಗಳು ಇಂತಹ ದಿರಸುಗಳನ್ನು ಧರಿಸಿ ಕೆಲಸಮಾಡಬೇಕೆಂದು ನಿರೀಕ್ಷಿಸುವುದಿಲ್ಲ. ವಿದ್ಯಾರ್ಥಿಗಳು ಉದ್ಯೋಗ ಸಂಬಂಧೀ ಸಂದರ್ಶನಗಳಿಗೆ ಈ ರೀತಿ ಹಾಜರಾಗಬೇಕೆಂದು ಅವರು ನಿರೀಕ್ಷಿಸುವ ಯಾವ ಸಾಧ್ಯತೆಯೂ ಇಲ್ಲ. ಅಂದಾಗ, ಇಂತಹ ವಿಚಿತ್ರ ನಿಯಮಗಳನ್ನು ಮಾಡುವುದಾದರೂ ಏಕೆ?

ಅನಗತ್ಯವಾದರೂ ಮಹತ್ವಾಕಾಂಕ್ಷೆಯ ಆಚರಣೆಗಳೆಂದು ಬಿಂಬಿಸಲ್ಪಟ್ಟಿರುವ ಇಂತಹ ಹಲವಾರು ನಿಯಮಗಳು ಶಿಕ್ಷಣ ವ್ಯವಸ್ಥೆಯ ಉದ್ದಗಲಕ್ಕೂ ವಿವಿಧ ಮಟ್ಟಗಳಲ್ಲಿ ನುಸುಳಿಕೊಂಡಿವೆ. ಒಂದೆರಡು ಘಟನೆಗಳನ್ನು ಉಲ್ಲೇಖಿಸುವುದರ ಮೂಲಕ ಈ ಅಂಶವನ್ನು ಹೆಚ್ಚು ಸ್ಪಷ್ಟಪಡಿಸುವುದು ಸೂಕ್ತ ಎಂದು ಕಾಣುತ್ತದೆ.

ಬಹಳ ವರ್ಷಗಳ ಹಿಂದೆ, ನನ್ನ ಮಗ ಎರಡು ವರ್ಷದವನಿದ್ದಾಗ ಅವನನ್ನು ಸೇರಿಸಲು ಬಾಲವಿಹಾರವೊಂದರ ಹುಡುಕಾಟದಲ್ಲಿದ್ದೆವು. ನನ್ನ ಪತ್ನಿ, ನಮ್ಮ ಮನೆಯ ಸಮೀಪವೇ ಇದ್ದ ಬಾಲವಿಹಾರವೊಂದರ ಉಸ್ತುವಾರಿ ವಹಿಸಿದ್ದ ಮಹಿಳೆಯೊಬ್ಬರನ್ನು ಭೇಟಿಯಾದಳು. ಹತ್ತಿರವೇ ಇರುವ ಒಳ್ಳೆಯದೆಂದು ಪರಿಗಣಿಸಲ್ಪಟ್ಟ ಐಸಿಎಸ್‌ಸಿ ಪಠ್ಯಕ್ರಮ ಹೊಂದಿದ್ದ ಶಾಲೆಯೊಂದರಲ್ಲಿ ಮೊದಲನೆಯ ತರಗತಿಗೆ 'ಆಯ್ಕೆಯಾಗುವ ಹಾಗೆ' ಅವನನ್ನು ಒಂದು ವರುಷದೊಳಗೆ 'ತಯಾರು' ಮಾಡುವುದಾಗಿ ಅವರು ಭರವಸೆ ಇತ್ತರು. ತಾವು ಇನ್ನೂ ನೋಡಿಯೇ ಇರದ ಮಗುವೊಂದರ ಕುರಿತು, ಅದೇನೋ ಒಂದು ತರಹದ ಕರಾರುವಾಕ್ಕಾದ ಉತ್ಪಾದನಾ ಪ್ರಕ್ರಿಯೆಯೇನೋ ಎಂಬಂತೆ ಅಂತಹ ಖಚಿತ ನಿರ್ಣಾಯಕ ಭರವಸೆಯನ್ನು ಅವರು ನೀಡಿದ್ದು ಆಶ್ಚರ್ಯಕರವಾಗಿತ್ತು. ಮಾನವರಲ್ಲಿ ಕ್ರಿಯಾಶೀಲತೆ ಹೇಗೆ ಕೆಲಸ ಮಾಡುತ್ತದೆ, ಈ ಮಕ್ಕಳು ಬೆಳೆಯುವ ಹಂತದಲ್ಲಿ ಯಾವುದಾದರೂ ತೊಂದರೆಗಳನ್ನು ಎದುರಿಸುತ್ತಾರೆಯೇ ಎನ್ನುವ ಯಾವುದೇ ತರಹದ ಅನುಮಾನಗಳ ಲವಲೇಶವೂ ಆಕೆಯಲ್ಲಿ ಇರಲಿಲ್ಲ.

ಸಾಕಷ್ಟು ಇತ್ತೀಚೆಗೆ, ಅಂದರೆ ಎರಡು ವರ್ಷಗಳ ಹಿಂದೆ ನಾನು ಈ ಮೊದಲು ಕೆಲಸ ಮಾಡುತ್ತಿದ್ದ ಸಂಸ್ಥೆಯಲ್ಲಿನ ಕಿರಿಯ ಸಹೋದ್ಯೋಗಿಗಳಲ್ಲೊಬ್ಬರು (ಅವರೂ ಹತ್ತಿರದಲ್ಲಿಯೇ ವಾಸಿಸುತ್ತಾರೆ) ಕರೆ ಮಾಡಿದ್ದರು. ತಮ್ಮ ಮಗನನ್ನು ಸೇರಿಸಲು ನಮ್ಮ ಸುತ್ತಮುತ್ತಲಿನ ಜಾಗದಲ್ಲಿಯೇ ಎಲ್ಲಾದರೂ ಒಳ್ಳೆಯ ಬಾಲ ವಿಹಾರವಿರುವುದು ನನಗೆ ತಿಳಿದಿದೆಯೇ ಎಂದು ವಿಚಾರಿಸಿದ್ದರು. ನಾನು ಅವರಿಗೆ, ಬಾಲವಿಹಾರದಲ್ಲಿ ತರಬೇತಿ ಪಡೆದ ಶಿಕ್ಷಕರಿದ್ದಾರೆಯೇ, ಅವರಿಗೆ ನಿಜಕ್ಕೂ ಮಕ್ಕಳ ಬಗ್ಗೆ 'ಕಾಳಜಿ' ಇದೆಯೇ, ಅಲ್ಲಿ ಮಕ್ಕಳು ಬರಲು ಇಷ್ಟಪಡುವಂತಹ ವಾತಾವರಣವನ್ನು ಒದಗಿಸಲಾಗುತ್ತದೆಯೇ, ಅದರ ಅಸ್ತಿತ್ವವು ವಾಣಿಜ್ಯ ಉದ್ದೇಶಗಳನ್ನು ಮೀರಿದುದಾಗಿದೆಯೇ ಇತ್ಯಾದಿ ಕೆಲವು ಪರ್ಯಾಯ ಮಾನದಂಡಗಳನ್ನು ಗಮನಿಸುವಂತೆ ಸಲಹೆ ನೀಡಿದ್ದೆ.

ಸಾರಿಗೆ, ವಿವಿಧ ಬಣ್ಣದ ಆಕರ್ಷಕ ಸಮವಸ್ತ್ರಗಳು, ಆರನೆಯ ತರಗತಿಯಿಂದಲೇ ವಿದ್ಯಾರ್ಥಿಗಳಿಗೆ ಐಐಟಿ–ಜೆಇಇ, ಸಿಇಟಿ ಇತ್ಯಾದಿ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತಯಾರಿಗಳಂತಹ ಸಾಧಾರಣ ಸೌಲಭ್ಯಗಳಲ್ಲದೇ ಸಂಪೂರ್ಣ ಸುಸಜ್ಜಿತ ವಿದ್ಯುನ್ಮಾನ ಸಾಧನಗಳು, ತರಗತಿ ಕೋಣೆಗಳು, ಎಲ್ಲ ತರಗತಿಯ ಮಕ್ಕಳಿಗೂ ಕೊಡಮಾಡುವ ಐ–ಪ್ಯಾಡ್ ಮತ್ತು ಟ್ಯಾಬ್ಲೆಟ್‌ಗಳು, ಒಳಾಂಗಣ ಮತ್ತು ಹೊರಾಂಗಣ ಕ್ರೀಡಾ ಸೌಲಭ್ಯಗಳು, ಈಜುಗೊಳ, ಕಲೆ ಮತ್ತು ಸಂಗೀತ ತರಗತಿಗಳು, ಸುಸಜ್ಜಿತ ಸಭಾಂಗಣ ಮುಂತಾದ ತಾವು ಒದಗಿಸುವ ಸೌಲಭ್ಯಗಳು 'ಸರ್ವಶ್ರೇಷ್ಠವಾದವುಗಳೆಂದು – ಎಲ್ಲವೂ ಬೃಹತ್ ವೆಚ್ಚದವೇ – ಹಲವಾರು ಖಾಸಗಿ ಶಿಕ್ಷಣ ಸಂಸ್ಥೆಗಳು ನೀಡುವ ನೂರಾರು ಜಾಹೀರಾತುಗಳನ್ನು ಟೆಲಿವಿಷನ್, ಬಾನುಲಿ, ಸುದ್ದಿ ಪತ್ರಿಕೆ ಹಾಗೂ ನಿಯತಕಾಲಿಕೆಗಳಲ್ಲಿ ದಿನನಿತ್ಯ ಕಾಣಬಹುದು.

ಇಂತಹ ಸ್ಪರ್ಧಾತ್ಮಕ ಬೆಳೆಸುವಿಕೆಯು ಮಗುವನ್ನು 'ಅತಿಯಾಗಿ ತೊಡಗಿಸುವ' ಅಪಾಯಕ್ಕೆ ಒಡ್ಡುತ್ತದೆ ಹಾಗೂ ಅದನ್ನು ಸಹಜವಾಗಿ ಬೆಳೆಯುವ ರೀತಿಯಿಂದ ದೂರಮಾಡುತ್ತದೆ. ಜೊತೆಗೆ ಶೈಕ್ಷಣಿಕ ಹಾಗೂ ಸಹಪಠ್ಯ ಆಯಾಮಗಳೆರಡರಲ್ಲಿಯೂ ನಿಗದಿತ, ನಿರ್ದಿಷ್ಟ ಸ್ವ–ಕೇಂದ್ರಿತ ಯಶಸ್ಸಿನ ಮಾದರಿಯೊಂದನ್ನು ಅದು ಹಿಂಬಾಲಿಸುವಂತೆ ಮಾಡುತ್ತದೆ. ಸಂಕೀರ್ಣ ಜಗತ್ತೊಂದರಲ್ಲಿ ಬೆಳೆಯುವ ಮಗು ಸಹಭಾಗಿತ್ವದ, ಒಳಗೊಳ್ಳುವಿಕೆಯ ಕಾಯಕ ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕು. ಅದರ ಪರಿಣಾಮವಾಗಿ ಸಾಮಾಜಿಕ ಜೀವಿಯಾಗಿ ಬದುಕನ್ನು ನಿರ್ವಹಿಸಬೇಕು. ಆದರೆ ಆ ರೀತಿಗೆ ಇದು ಸಂಪೂರ್ಣ ವಿರುದ್ಧವಾದದ್ದು. ಕೆಲವು ವರ್ಷಗಳ ಹಿಂದೆ ಒಡಿಶಾದ ಬಾಲಕ ಬುಧಿಯಾ ಸಿಂಗ್‌ನನ್ನು ಮ್ಯಾರಥಾನ್ ಓಟದಲ್ಲಿ ಭಾಗವಹಿಸುವಂತೆ ಬಲವಂತವಾಗಿ ತರಬೇತಿಗೊಳಪಡಿಸಿದ ರೀತಿ ಮತ್ತು ಹಾಗೆ ಮಾಡಿದ ಅವನ ತರಬೇತುದಾರನ

ಕತೆ ಸಾಕಷ್ಟು ಪರಿಚಿತವಾಗಿರುವಂತಹುದು. ಈ ಕುರಿತು ಚಲನಚಿತ್ರವೂ ನಿರ್ಮಾಣವಾಗಿದೆ. ಟೆಲಿವಿಷನ್ ವಾಹಿನಿಗಳಲ್ಲಿ ಇಂದು ನಾವು ನೋಡುತ್ತಿರುವ ಹಲವಾರು ರಿಯಾಲಿಟಿ ಶೋಗಳು, ಒತ್ತಾಯಪೂರ್ವಕವಾಗಿ ತಮ್ಮ ಮಕ್ಕಳನ್ನು ಸ್ಪರ್ಧೆಗಳಿಗೆ ನೂಕುತ್ತಿರುವ ಪೋಷಕರ ಪ್ರವೃತ್ತಿಯ ಅಭಿವ್ಯಕ್ತ ರೂಪಗಳೇ ಆಗಿವೆ.

ಈ ಸನ್ನಿವೇಶದಲ್ಲಿ, ಪೋಷಕರ ಮತ್ತು ಶಿಕ್ಷಕರ ಈ ಪ್ರಯತ್ನಗಳು ಎಷ್ಟರ ಮಟ್ಟಿಗೆ ಅರ್ಥಪೂರ್ಣ? ಅವರು ಶಿಕ್ಷಣದ ಹಲವಾರು ಅನಗತ್ಯ ಸಂಗತಿಗಳ ಮೇಲೆ ಗಮನವನ್ನು ಕೇಂದ್ರೀಕರಿಸುತ್ತಿದ್ದಾರೆಯೇ? ನಮ್ಮ ಮಕ್ಕಳನ್ನು ಬೆಳೆಸಬಹುದಾದ ಪರ್ಯಾಯ ವಿಧಾನಗಳತ್ತ ನಾವು ದೃಷ್ಟಿ ಹಾಯಿಸಬೇಕೆ? ಎಂಬಂತಹ, ಅಷ್ಟೇನೂ ಹಿತಕರವಲ್ಲದ ಪ್ರಶ್ನೆಗಳು ಏಳುತ್ತವೆ. ಹಾಗೆ ಪ್ರಶ್ನೆಗಳನ್ನು ಎತ್ತುವುದು ಯೋಗ್ಯವಾಗಿಯೂ ತೋರುತ್ತದೆ.

ಸದ್ಯದ ನಮ್ಮ ಬಿರುಬೀಸಿನ ಪಯಣವನ್ನು ಒಮ್ಮೆ ನಿಲ್ಲಿಸಿ, ನಮ್ಮ ಮಕ್ಕಳು ಎಲ್ಲಿಗೆ ಹೋಗಲು ಬಯಸುತ್ತಾರೆ ಎಂಬುದರ ಕುರಿತು ಮರುನೋಟವೊಂದನ್ನು ಹಾಯಿಸುವ ಅಗತ್ಯವಿದೆ. ಪ್ರತಿಯೊಬ್ಬ ಪೋಷಕ ಅಥವಾ ಶಿಕ್ಷಕನೂ ತನಗೆ ತಾನೇ ಕೇಳಿಕೊಳ್ಳಬೇಕಾದ ಒಂದು ಸರಳ ಪ್ರಶ್ನೆಯೆಂದರೆ, ಈ ಅನಿಯಂತ್ರಿತ ಸ್ಪರ್ಧೆಯು ಅವರ ಮಕ್ಕಳನ್ನು ಎಲ್ಲಿಗೆ ಕರೆದೊಯ್ಯುತ್ತಿದೆ ಎನ್ನುವುದು: ತಮ್ಮ ಮಗುವಿಗೆ ಅದು ಹೊಂದುತ್ತದೆಯೋ ಇಲ್ಲವೋ ಎಂಬುದನ್ನು ಕೂಡ ಸಾಧಾರಣವಾಗಿ ಜನರು ವಿವೇಚಿಸುವುದಿಲ್ಲ. ಹೆಚ್ಚಿನ ಜನರು ಸವೆದ ಹಾದಿಯನ್ನೇ ಅನುಸರಿಸುವಂತೆ ತಮ್ಮನ್ನು ಒತ್ತಾಯಿಸುವ ಈ 'ಹಿಂಡು ಮನೋಭಾವ'ದ ಜಾಲದೊಳಕ್ಕೆ ಅವರು ಸದಾ ಸಿಕ್ಕಿಹಾಕಿಕೊಳ್ಳಲೇಬೇಕೇ?

ನಮ್ಮ ಆಚರಣೆಗಳ ಮರುಮೌಲ್ಯಮಾಪನವನ್ನು ಕೈಗೊಳ್ಳಲು ಒಂದು ಮಾರ್ಗವಿದೆ. ಅದು, ಅಷ್ಟೇನೂ ಹಿತವಾಗಿರದಿದ್ದರೂ ಕೆಲವು ಪ್ರಸ್ತುತ ಪ್ರಶ್ನೆಗಳನ್ನು ಕೇಳುವುದು. ಇತ್ತೀಚೆಗೆ ರಾಜ್ಯದ ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳೊಡನೆ ನಾವು ಸಭೆಗಳನ್ನು ನಡೆಸಿದೆವು. ನಮ್ಮ ಮಕ್ಕಳು ಪ್ರಾಥಮಿಕ ಶಾಲೆಗಳಲ್ಲಿ ಮಾಡುವ ಬರವಣಿಗೆ ಕಾರ್ಯದ ಪ್ರಮಾಣವನ್ನು ಹೇಗೆ ಹೆಚ್ಚಿಸಬಹುದು ಎನ್ನುವುದು ಚರ್ಚೆಯ ವಿಷಯವಾಗಿತ್ತು. ಬಹಳಷ್ಟು ಶಾಲೆಗಳಲ್ಲಿ ಹಿಂದೆ ಬಳಕೆಯಲ್ಲಿದ್ದ ಅನೇಕ ರೀತಿಗಳು ಈಗ ಚರಿತ್ರೆಗೆ ಸೇರಿವೆ. ಅವುಗಳಲ್ಲಿ ಸ್ಲೇಟು ಮತ್ತು ಬಳಪದ ಬಳಕೆಯೂ ಒಂದು. ಮಕ್ಕಳ ಬರವಣಿಗೆಯ ಕೌಶಲವನ್ನು ಹೆಚ್ಚಿಸುವುದಕ್ಕಾಗಿ ಕಿರಿಯ ಪ್ರಾಥಮಿಕ ಹಂತದಲ್ಲಿ ಸ್ಲೇಟು ಮತ್ತು ಬಳಪವನ್ನು ಮತ್ತೆ ಪರಿಚಯಿಸುವುದು ಅತ್ಯಂತ ಯೋಗ್ಯವೆಂಬುದು ಗುಂಪಿನ ಅನಿಸಿಕೆಯಾಗಿತ್ತು. ನಾನು ಮೂರನೆಯ ತರಗತಿಯಲ್ಲಿದ್ದಾಗ ಮೊತ್ತಮೊದಲ

ಬಾರಿಗೆ ಇಂಗ್ಲಿಷ್ ಮಾಧ್ಯಮ ಶಾಲೆಯಿಂದ ಗೌರವಾನ್ವಿತ ಕನ್ನಡ ಮಾಧ್ಯಮ ಶಾಲೆಯೊಂದಕ್ಕೆ ಸ್ಥಳಾಂತರಗೊಂಡೆ. ಆಗ ಕನ್ನಡ ಭಾಷೆಯ ಬರವಣಿಗೆಯ ಮೂಲಭೂತ ಕೌಶಲಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿದ್ದು ಹೀಗೆ ಸ್ಲೇಟಿನ ಮೇಲೆ ಬರೆದು ಮಾಡಿದ ಕಠಿಣ ಅಭ್ಯಾಸವೇ. ನನ್ನ ಈ ಧನಾತ್ಮಕ ಅನುಭವವೇ ಈ ನಿಲುವನ್ನು ಮತ್ತಷ್ಟು ಗಟ್ಟಿಗೊಳಿಸುತ್ತದೆ.

ಇದರಿಂದ, ಮಕ್ಕಳಿಗೆ ತಂತ್ರಜ್ಞಾನ ಅಥವಾ ಮೂಲಭೂತ ಸೌಕರ್ಯಗಳು ಲಭ್ಯವಾಗುವಂತೆ ಮಾಡುವುದರ ಬದಲಾಗಿ, ಮೂಲಭೂತ ಪರಿಕಲ್ಪನೆಗಳನ್ನು ವಿವಿಧ ಹಂತಗಳಲ್ಲಿ ಅತ್ಯಂತ ಪರಿಣಾಮಕಾರಿ ವಿಧಾನದಲ್ಲಿ ಅವರು ಹೇಗೆ ಕಲಿಯುತ್ತಾರೆ ಎನ್ನುವುದನ್ನು ಗುರುತಿಸಬೇಕು ಮತ್ತು ಇಂತಹ ಕಲಿಕೆಯನ್ನು ಅವರಿಗೆ ಒದಗಿಸಬೇಕು ಎನ್ನುವ ಅತ್ಯಂತ ಮುಖ್ಯವಾದ ಹೊಳಹುಗಳು ದೊರಕುತ್ತವೆ. ಈ ಮಾರ್ಗದ ಅರ್ಥ ನಾವು ಎಲ್ಲಾ ಹಳೆಯ ರೀತಿನೀತಿಗಳಿಗೆ ಹಿಂದಿರುಗಬೇಕು ಎಂಬುದಲ್ಲ. ನಾವು ತುಳಿಯುವ ಹಾದಿ ಹಳೆಯದೋ ಅಥವಾ ಸದ್ಯದ್ದೋ ಎನ್ನುವ ಅಂಶವನ್ನು ಬದಿಗಿಟ್ಟು ಉಚಿತವಾದ ಸಮತೋಲನವೊಂದನ್ನು ಕಂಡುಕೊಳ್ಳುವುದು ಹಾಗೂ ಮಾಡಬೇಕಾಗಿರುವುದನ್ನು ಮಾಡುವುದು ಮುಖ್ಯವಾಗುತ್ತದೆ.

ಡಿವಿಜಿಯವರು ತಮ್ಮ ಅತ್ಯಂತ ಖ್ಯಾತ ಹಾಗೂ ಮುಖ್ಯ ಕೃತಿ, 'ಮಂಕುತಿಮ್ಮನ ಕಗ್ಗ'ದಲ್ಲಿನ ಒಂದು ಪದ್ಯದಲ್ಲಿ, ಬದುಕಿನಲ್ಲಿ ಸಂತುಲಿತ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು ಕರೆ ನೀಡಿದ್ದಾರೆ. ಕೆಳಗೆ ನೀಡಲಾದ ಸಾಲುಗಳಲ್ಲಿ ಹಿಡಿದಿಟ್ಟಿರುವ ಆ ಪದ್ಯದ ಅಂತರಾತ್ಮವು ನಮ್ಮ ಶಿಕ್ಷಣದ ಸಂದರ್ಭದಲ್ಲಿ ಅತ್ಯಂತ ಸೂಕ್ತವಾದುದಾಗಿದೆ.

ಹೊಸ ಚಿಗುರು ಹಳೆಬೇರು ಕೂಡಿರಲು ಮರ ಸೊಬಗು
ಹೊಸ ಯುಕ್ತಿ ಹಳೆ ತತ್ತ್ವದೊಡಗೂಡೆ ಧರ್ಮ ।
ಋಷಿವಾಕ್ಯದೊಡನೆ ವಿಜ್ಞಾನಕಲೆ ಮೇಳವಿಸೆ
ಜಸವು ಜನಜೀವನಕೆ – ಮಂಕುತಿಮ್ಮ ॥

■

ಬಿ ಫಸ್ಟ್, 13-10-2016

ನಾನು ಕೋಚಿಂಗ್ ಸೆಂಟರ್‌ಗಳ ಬೋಧಕರಿಂದ ತರಬೇತಿಗೊಳಗಾದ ಮನಸ್ಸುಗಳನ್ನಲ್ಲ, ಬದಲಿಗೆ ಇನ್ನೂ ಎರಕಗೊಂಡಿರದ, ತಾಜಾ ಬುದ್ಧಿಮತ್ತೆಯನ್ನುಳ್ಳ ವಿದ್ಯಾರ್ಥಿಗಳನ್ನು ಎದುರು ನೋಡುತ್ತಿದ್ದೇನೆ. ಕೇವಲ ಪ್ರಶ್ನೆಪತ್ರಿಕೆಗಳ ವಿನ್ಯಾಸವನ್ನು ಗುರುತಿಸುವ ಕೌಶಲವನ್ನು ಕರಗತ ಮಾಡಿಕೊಳ್ಳುವುದಕ್ಕಷ್ಟೇ ಕೋಚಿಂಗ್ ತರಗತಿಗಳು ವಿದ್ಯಾರ್ಥಿಗಳಿಗೆ ನೆರವಾಗುತ್ತವೆ. ಇದರಿಂದ ತಾಜಾ ಬುದ್ಧಿಮತ್ತೆಯನ್ನುಳ್ಳ ವಿದ್ಯಾರ್ಥಿಗಳು ಸಿಗುವುದಿಲ್ಲ.

–**ಡಾ. ಎಮ್.ಎಸ್.ಅನಂತ್,** ಮಾಜಿ ನಿರ್ದೇಶಕ, ಐಐಟಿ ಮದ್ರಾಸ್

# ಅಗ್ರಣಿಗಳಿಗಾಗಿ ಯಶಸ್ಸಿನ ಕಲ್ಪನೆ

ಇತ್ತೀಚೆಗೆ ಹನ್ನೆರಡನೆಯ ತರಗತಿಯ ಪರೀಕ್ಷಾ ಫಲಿತಾಂಶ ಪ್ರಕಟವಾದ ತರುವಾಯದಲ್ಲೇ ಇಂಜಿನಿಯರಿಂಗ್ ಕೋರ್ಸ್‌ಗಳಿಗೆ ದಾಖಲಾತಿಯನ್ನು ಒದಗಿಸುವ ಸಾಮಾನ್ಯ ಪ್ರವೇಶ ಪರೀಕ್ಷೆ(ಸಿಇಟಿ)ಯ ಫಲಿತಾಂಶವೂ ಬಂದಿತು. ವಿದ್ಯುನ್ಮಾನ ಮಾಧ್ಯಮಗಳು ಹಾಗೂ ವಾರ್ತಾಪತ್ರಿಕೆಗಳು ಅಗ್ರಶ್ರೇಣಿ ಪಡೆದ ವಿದ್ಯಾರ್ಥಿಗಳ ಸಂದರ್ಶನವನ್ನು ಅವರ ಪೋಷಕರ ಸಂದರ್ಶನವನ್ನೂ ಸೇರಿಸಿ ಬಿತ್ತರಿಸುವ ಚಿರಪರಿಚಿತ ದೃಶ್ಯವನ್ನು ಎಲ್ಲರೂ ವೀಕ್ಷಿಸಿದರು. ಸಿಇಟಿಯಲ್ಲಿ ಉನ್ನತ ಸಾಧನೆ ಮಾಡಿದ ಹಲವರು ಇಷ್ಟರಲ್ಲಿಯೇ ಐಐಟಿ–ಜೆಇಇ ಫಲಿತಾಂಶಗಳನ್ನೂ ತಿಳಿದಿರುತ್ತಾರೆ ಹಾಗೂ ಯಾವುದಾದರೊಂದು ಐಐಟಿಯನ್ನು ಸೇರಿ ತಮ್ಮ ಶೈಕ್ಷಣಿಕ/ವೃತ್ತಿ ಭವಿಷ್ಯವನ್ನು ಉತ್ತಮಗೊಳಿಸಿಕೊಳ್ಳಲು ಕಾತರರಾಗಿರುತ್ತಾರೆ.

ಸಿಇಟಿ ಅಗ್ರಣಿಗಳ ಸಂದರ್ಶನಗಳಿಂದ ಕೆಲವು ಸಂಗತಿಗಳನ್ನು ತಿಳಿದುಕೊಳ್ಳಲು ಸಾಧ್ಯವಾಯಿತು. ತಮ್ಮ ಯಶಸ್ಸಿಗೆ ಕಳೆದ ಎರಡು ವರ್ಷದ ಅವಧಿಯಲ್ಲಿ ತಾವು ದಿನಕ್ಕೆ ಹತ್ತು–ಹನ್ನೆರಡು ತಾಸುಗಳ ಕಾಲ ತಮ್ಮ ಬೋರ್ಡ್ ಪರೀಕ್ಷೆಯ ಪಠ್ಯಭಾಗ ಹಾಗೂ ಕೋಚಿಂಗ್ ಕೇಂದ್ರಗಳು (ತರಬೇತಿ ಸಂಸ್ಥೆಗಳು) ಒದಗಿಸಿದ ಅಧ್ಯಯನ ಸಾಮಗ್ರಿಗಳೆರಡರನ್ನೂ ಮನನ ಮಾಡುವುದರ ಮೂಲಕ ನಡೆಸಿದ ಪರಿಶ್ರಮಪೂರ್ವಕ ಸಿದ್ಧತೆಯೇ ಕಾರಣವೆಂದು ಅವರು ಹೇಳುತ್ತಿದ್ದರು. ವಾಸ್ತವದಲ್ಲಿ, ಏಳನೆಯ ತರಗತಿಯಲ್ಲಿ ಇದ್ದಾಗಲೇ ಬುನಾದಿ ಮಟ್ಟದ

ಕೋರ್ಸ್‌ಗಳನ್ನು (ಫೌಂಡೇಷನ್ ಕೋರ್ಸ್) ತೆಗೆದುಕೊಳ್ಳುವುದರ ಮೂಲಕ ಐಐಟಿಯಲ್ಲಿ ದಾಖಲಾತಿ ಪಡೆಯುವುದಕ್ಕಾಗಿ ಕಷ್ಟಕರ ಓಟವನ್ನು ಅವರು ಸಾಕಷ್ಟು ಹಿಂದೆಯೇ ಆರಂಭಿಸಿದ್ದಿರಬೇಕು. ಈ ಅವಧಿಯುದ್ದಕ್ಕೂ ತಮ್ಮ ಮಕ್ಕಳ ಈ ಬೆನ್ನಟ್ಟುವಿಕೆಯ ಓಟದಲ್ಲಿ ಕನಿಷ್ಠ ಒಬ್ಬ ಪೋಷಕರಾದರೂ ಅವರಿಗೆ ಬೇಕಾದ ಕಾಳಜಿ, ಬೆಂಬಲವನ್ನು ನೀಡುವುದರ ಮೂಲಕ ಅಗಾಧವಾದ ತ್ಯಾಗವನ್ನು ಮಾಡಿರಲೇಬೇಕು.

ನನಗೆ ಕಳೆದ ಎರಡು ದಶಕಗಳಲ್ಲಿ ಐಐಟಿ–ಜೆಇಇ ಅಗ್ರಣಿಗಳಾಗಿದ್ದವರ ವೃತ್ತಿಗಳು ಯಾವ ರೀತಿಯಲ್ಲಿ ಬೆಳೆದಿವೆ ಎನ್ನುವುದನ್ನು ತಿಳಿಯುವ ಕುತೂಹಲವಿತ್ತು. ಹುಡುಕಾಟವು ಸ್ಪಷ್ಟವಾಗಿ ಮಧ್ಯಮವರ್ಗದ ಆಶೋತ್ತರಗಳ ಮೂಲಕ್ಕೇ ತಂದು ನಿಲ್ಲಿಸುತ್ತದೆ. ನನಗೆ ಸಂಗ್ರಹಿಸಲು ಸಾಧ್ಯವಾದ ಅಂಕಿ–ಅಂಶವು ಕಳೆದ ಎರಡು ದಶಕಗಳಿಗೆ, ಅಂದರೆ ಸುಮಾರು 1995 ರಿಂದ 2015ರವರೆಗಿನ ಅವಧಿಗೆ ಸಂಬಂಧಿಸಿದ್ದಾಗಿತ್ತು. ಇದು ಮುಖ್ಯವಾಗಿ ಅವರ ಐಐಟಿ ಶಿಕ್ಷಣವು ಮುಗಿದ ಮೇಲಿನ ಹಾಗೂ ನಂತರದ ಅವಧಿಯಲ್ಲಿ ವೃತ್ತಿಸಂಬಂಧಿ ಸ್ಥಾನಮಾನ, ಹುದ್ದೆಗಳನ್ನು ಕುರಿತಾಗಿತ್ತು. ದತ್ತಾಂಶದೆಡೆಗಿನ ಒಂದು ಕ್ಷಿಪ್ರನೋಟವು ಕೆಲವು ಕುತೂಹಲಕಾರಿ ಒಳನೋಟಗಳನ್ನು ನೀಡಿತು.

ಪದವಿ ಮತ್ತು ಸ್ನಾತಕೋತ್ತರ ಶಿಕ್ಷಣದಲ್ಲಿ ಪ್ರಧಾನವಾಗಿ ಆಯ್ದುಕೊಂಡ ವಿಷಯ ಕಂಪ್ಯೂಟರ್ ವಿಜ್ಞಾನವಾಗಿತ್ತು. ಭೌತವಿಜ್ಞಾನ/ಗಣಿತದಂತಹ ಶುದ್ಧ ವಿಜ್ಞಾನ ವಿಷಯಗಳನ್ನು ಆಯ್ದುಕೊಂಡವರು ಕಡಿಮೆ ಸಂಖ್ಯೆಯಲ್ಲಿದ್ದರು. ಬಹುತೇಕ ಎಲ್ಲರೂ ಅಮೆರಿಕದ ಪ್ರತಿಷ್ಠಿತ ವಿಶ್ವವಿದ್ಯಾಲಯಗಳಲ್ಲಿ ಸ್ನಾತಕೋತ್ತರ/ ಡಾಕ್ಟೊರಲ್ ಶಿಕ್ಷಣವನ್ನು (ಸಂಶೋಧನಾಕಾರ್ಯ) ಮುಂದುವರೆಸಿದ್ದರು. ಉದ್ಯೋಗಕ್ಕೆ ಬಂದರೆ, ಅವರಲ್ಲಿ ಬಹಳಷ್ಟು ಜನರು ಪಾಶ್ಚಿಮಾತ್ಯ ವಿಶ್ವವಿದ್ಯಾಲಯಗಳಲ್ಲಿ ಬೋಧಕರಾಗಿ ಅಥವಾ ಟ್ವಿಟ್ಟರ್, ಅಮೆಝಾನ್, ಗೂಗಲ್ ಮುಂತಾದ ತಂತ್ರಜ್ಞಾನ ಸಂಸ್ಥೆಗಳಲ್ಲಿ ಅಥವಾ ಡಾಯ್ಚ ಬ್ಯಾಂಕ್(Deutsche Bank)ಗಳಂತಹ ಬಹುರಾಷ್ಟ್ರೀಯ ಹಣಕಾಸು ಸಂಸ್ಥೆಗಳಲ್ಲಿ ಸಂಶೋಧಕ ಹುದ್ದೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರಲ್ಲಿ ಕೆಲವರು ಉದ್ಯಮ ಮತ್ತು ಶೈಕ್ಷಣಿಕ ಕ್ಷೇತ್ರಗಳ ನಡುವೆ ವೃತ್ತಿ ಬದಲಿಸಿದ್ದಾರೆ. ಕೆಲವೇ ಕೆಲವರು ಹೊಸ ಉದ್ದಿಮೆಯ ಆರಂಭ, ನಾಗರಿಕ ಸೇವೆ ಅಥವಾ ಅಭಿವೃದ್ಧಿ ಕ್ಷೇತ್ರದಲ್ಲಿ ಕೆಲಸ ಮಾಡುವುದು ಇತ್ಯಾದಿ ಪರ್ಯಾಯ ಮಾರ್ಗಗಳನ್ನು ಅನುಸರಿಸಿ ನಡೆದಿದ್ದಾರೆ. ಐಐಟಿ ಅಗ್ರಣಿಗಳಲ್ಲಿ ಭಾರತದಲ್ಲಿ ಉಳಿದುಕೊಂಡವರು ಇಲ್ಲವೇ ಇಲ್ಲ ಎನ್ನುವಷ್ಟು ಅಪರೂಪ.

ಹಾಗಾದರೆ, ಮೇಲಿನ ವಿಶ್ಲೇಷಣೆಯಿಂದ ಏನನ್ನು ತೀರ್ಮಾನಿಸಬಹುದು? ಐಐಟಿ–ಜೆಇಇ ಅಗ್ರಣಿಯಾಗುವುದೆಂದರೆ, ಭಾರತದ ಅತ್ಯಂತ ಬುದ್ಧಿಮತ್ತೆಯಿರುವ ವಿದ್ಯಾರ್ಥಿಯೆಂದು ಅರ್ಥವೇ? ಜೆಇಇಯಲ್ಲಿ ಐವತ್ತು, ನೂರು ಅಥವಾ

ಐನೂರನೆಯ ಸ್ಥಾನ ಪಡೆದವರಲ್ಲಿ ಇರದಂತಹ ಏನೋ ಹೆಚ್ಚುವರಿಯಾದುದನ್ನು ಅಗ್ರಣಿಗಳು ಹೊಂದಿರುತ್ತಾರೆಯೇ? ಉತ್ತರವೆಂದರೆ, ಬುದ್ಧಿಮತ್ತೆ, ಪ್ರತಿಭೆಯನ್ನು ಹೊಂದಿರುವ ಗಣಿತ ಅಥವಾ ಖಗೋಳವಿಜ್ಞಾನದ ಒಲಂಪಿಯಾಡ್‌ಗಳಲ್ಲಿ ಅಪ್ರತಿಮ ಸಾಧನೆ ಮಾಡಿರುವ ಇನ್ನಿತರ ಯುವಜನರೂ ಇದ್ದಿರಬಹುದು. ಐಐಟಿಯಲ್ಲಿ ಅಗ್ರಸ್ಥಾನ ಪಡೆಯುವುದೆಂದರೆ ಅದು ಕಠಿಣ ಪರಿಶ್ರಮ ಮತ್ತು ಚತುರತೆಯ ಸಮ್ಮಿಶ್ರಣ. ಪರೀಕ್ಷೆಯ ಕಠಿಣತೆಯ ಮಟ್ಟ ಏನೇ ಇರಲಿ, ಪರೀಕ್ಷೆಯ ದಿನ ಅಭ್ಯರ್ಥಿಯ ಸಾಧನೆ ಹೇಗಿತ್ತು ಎನ್ನುವುದನ್ನೂ ಅದು ಅವಲಂಬಿಸಿರುತ್ತದೆ. ಒಟ್ಟಾರೆ ಸರಿಯಾದ ಸಿದ್ಧತೆ, ವಿಶೇಷ ಮಾರ್ಗದರ್ಶನಗಳು ಅಗತ್ಯವಾಗಿರುವುದರ ಜೊತೆಗೆ ಅದೃಷ್ಟವೂ ಅವರ ಪರವಾಗಿರಬೇಕಾಗುತ್ತದೆ. ವಾಸ್ತವದಲ್ಲಿ ವೃತ್ತಿಯಲ್ಲಿನ ಅವರ ಪ್ರಗತಿಯು ಕೇವಲ ಐಐಟಿಗಳಲ್ಲಿ ಅವರು ಏನನ್ನು ಕಲಿತರು ಹಾಗೂ ಒಳ್ಳೆಯ ಸಾಧನೆ ಮಾಡಿದರು ಎನ್ನುವುದಷ್ಟನ್ನೇ ಅಲ್ಲದೆ, ಅದರ ನಂತರ ಏನು ಮಾಡಿದರು, ಹೇಗೆ ಮಾಡಿದರು ಎನ್ನುವುದನ್ನೂ ಅವಲಂಬಿಸಿರುತ್ತದೆ.

1966ರಲ್ಲಿ ಅಗ್ರಸ್ಥಾನ ಪಡೆದ ಸುನೀಲ್ ಸಿಂಘಲ್ ಅವರು ಸಂಕ್ಷಿಪ್ತವಾಗಿ ಹೇಳಿದ ಹಾಗೆ–

> 'ಐಐಟಿಯು ಅಗ್ರಣಿಗಳಿಗಷ್ಟೇ ಅಲ್ಲ ಉಳಿದವರಿಗೂ ಕೂಡ ಕಲಿಸುವುದು ಕೇವಲ ಉನ್ನತ ಮಟ್ಟದ ಗಣಿತ ಅಥವಾ ಭೌತವಿಜ್ಞಾನವನ್ನಲ್ಲ. ಸಮಸ್ಯೆಗಳನ್ನು ಹೇಗೆ ಪರಿಹರಿಸುವುದು ಎಂಬುದನ್ನು, ಪ್ರತಿಯೊಂದು ಸಮಸ್ಯೆಯನ್ನೂ ಚಿಕ್ಕ ಚಿಕ್ಕ ಭಾಗಗಳಾಗಿ ವಿಭಜಿಸಿ, ಅವುಗಳನ್ನು ಒಂದೊಂದಾಗಿ ಹೇಗೆ ಪರಿಹರಿಸುವುದು ಎಂಬುದನ್ನು ಕೂಡ ಕಲಿಸುತ್ತದೆ. ನಾನು ಈಗ ಕೆಲಸ ಮಾಡುತ್ತಿರುವುದು ಇದೇ ರೀತಿಯಲ್ಲಿ. ಐಐಟಿ ಎಂದರೆ ಇದೇ. ಐಐಟಿಯಲ್ಲಿ ಯಶಸ್ಸು ಗಳಿಸಲು ವಿದ್ಯಾರ್ಥಿಗಳು ನಡೆಸುವ ಅದೇ ಸಿದ್ಧ ಮಾದರಿಯ ತಯಾರಿಯಿಂದಾಗಿ, ವಿದ್ಯಾರ್ಥಿಗಳ ಗುಣಮಟ್ಟವು ಕಡಿಮೆಯಾಗಿದೆ ಎಂಬುದನ್ನು ಒಪ್ಪುತ್ತಲೇ ಐಐಟಿ ಮದ್ರಾಸ್‌ನ ಮಾಜಿ ನಿರ್ದೇಶಕ ಎಮ್. ಎಸ್.ಅನಂತ್ ಅವರು, 'ನಾನು ಕೋಚಿಂಗ್ ಸೆಂಟರ್‌ಗಳ ಬೋಧಕರಿಂದ ತರಬೇತಿಗೊಳಗಾದ ಮನಸ್ಸುಗಳನ್ನಲ್ಲ, ಬದಲಿಗೆ ಇನ್ನೂ ಎರಕಗೊಂಡಿರದ, ತಾಜಾ ಬುದ್ಧಿಮತ್ತೆಯನ್ನುಳ್ಳ ವಿದ್ಯಾರ್ಥಿಗಳನ್ನು ಎದುರು ನೋಡುತ್ತಿದ್ದೇನೆ. ಕೇವಲ ಪ್ರಶ್ನೆ ಪತ್ರಿಕೆಗಳ ವಿನ್ಯಾಸವನ್ನು ಗುರುತಿಸುವ ಕೌಶಲವನ್ನು ಕರಗತ ಮಾಡಿಕೊಳ್ಳುವುದಕ್ಕಷ್ಟೇ ಕೋಚಿಂಗ್ ತರಗತಿಗಳು ವಿದ್ಯಾರ್ಥಿಗಳಿಗೆ ನೆರವಾಗುತ್ತವೆ. ಇದರಿಂದ ತಾಜಾ ಬುದ್ಧಿಮತ್ತೆಯನ್ನುಳ್ಳ ವಿದ್ಯಾರ್ಥಿಗಳು ಸಿಗುವುದಿಲ್ಲ' ಎಂದಿರುವುದು ವಿಪರ್ಯಾಸ.

ಮಕ್ಕಳನ್ನು ಬೆಳೆಸುವ ವಿಷಯದಲ್ಲಿ, ಮಧ್ಯಮವರ್ಗದ ಆಶೋತ್ತರದ ಗುರಿಯೆಂದರೆ ಪ್ರತಿಷ್ಠೆ, ಶ್ರೇಷ್ಠತೆಯ ಮುದ್ರೆ ಹಾಗೂ ಆರಾಮದಾಯಕ ಜೀವನ

ಶೈಲಿಯ ಭರವಸೆ ನೀಡುವ ಒಳ್ಳೆಯ ವೇತನದ ಉದ್ಯೋಗ. ಇವೆಲ್ಲವೂ ಐಐಟಿಯನ್ನು ಸೇರಿದರೆ ದೊರೆಯುವಂತಹವುಗಳು. ಅಗ್ರಣಿಗಳು ತಮ್ಮ ಕೆಲಸವು ಸದಾ ಸವಾಲಿನಿಂದ ಕೂಡಿದ್ದಾಗಿರಬೇಕೆಂದು ಸ್ಪಷ್ಟವಾಗಿ ಬಯಸುತ್ತಾರೆ ಹಾಗೂ ನಾಗರಿಕ ಸೇವೆಗಳಂತಹ ಉದ್ಯೋಗಗಳಲ್ಲಿ ಇರುವ ಸವಾಲುಗಳು ಅವರು ಇಷ್ಟಪಡುವಂತಹವುಗಳಲ್ಲ. ಅವರು ತಂತ್ರಜ್ಞಾನಕ್ಕೆ ಸಂಬಂಧಿಸಿದ ಉದ್ಯೋಗಗಳನ್ನೇ ಅದರಲ್ಲಿಯೂ ವಿಶೇಷವಾಗಿ ಪಾಶ್ಚಿಮಾತ್ಯ ದೇಶಗಳಲ್ಲಿ ಉದ್ಯೋಗಗಳನ್ನು ಆರಿಸಿಕೊಳ್ಳಲು ಇದೇ ಕಾರಣ. ಅವರಲ್ಲಿ ಬಹಳ ಜನರಿಗೆ, ಭಾರತದಲ್ಲಿ ಅನುಭವಿಸುವ ಅದೇ ಆರ್ಥಿಕ ಹಾಗೂ ಅಧಿಕಾರಶಾಹಿ ಸವಾಲುಗಳನ್ನು ಎದುರಿಸಬೇಕಾದ ಅಗತ್ಯ ಕೂಡ ಇಲ್ಲದಿರುವುದರಿಂದ ಪಾಶ್ಚಿಮಾತ್ಯ ದೇಶಗಳಲ್ಲಿ ನೆಲೆಗೊಳ್ಳುವುದು ಅನುಕೂಲಕರ ಆಯ್ಕೆಯಾಗಿಬಿಡುತ್ತದೆ.

ಅಗ್ರಣಿಗಳ ಸನ್ನಿವೇಶ ಇದಾದರೆ, ಅಗ್ರಣಿಗಳಲ್ಲದ ಇನ್ನಿತರ ಐಐಟಿ ಪದವೀಧರರ ವಿಷಯದಲ್ಲಿ ಏನಾಗಬಹುದು? ಅವರಿಗೆ ಸಂಸ್ಥೆಗಳಲ್ಲಿ ಅತ್ಯಂತ ಮೇಲುಸ್ತರದ ಉದ್ಯೋಗಗಳು ದೊರೆಯುವುದಿಲ್ಲ ಎನ್ನುವುದಂತೂ ನಿಶ್ಚಿತ. ಈ ಹಿನ್ನೆಲೆಯಲ್ಲಿ, ಅವರು ಅಗಾಧ ಪ್ರಮಾಣದ ಸಮಯ, ಶ್ರಮ ಹಾಗೂ ಮೊತ್ತವನ್ನು ತೆತ್ತು, ಭಾರಿ ಉದ್ಯೋಗದ ಬದಲಿಗೆ ಕೇವಲ ಒಳ್ಳೆಯದು ಎನ್ನಬಹುದಾದ ಉದ್ಯೋಗವನ್ನು ಒಪ್ಪಿಕೊಳ್ಳುವುದು ಎಷ್ಟರಮಟ್ಟಿಗೆ ಸಮರ್ಥನೀಯ? ಅಷ್ಟೊಂದು ದೀರ್ಘಕಾಲ ಇಂತಹ ಸ್ಪರ್ಧಾತ್ಮಕ ಪರಿಸರದಲ್ಲಿ ಇದ್ದು ಹೊರಬರುವ ಅವರು ಎಂತಹ ಮೌಲ್ಯವ್ಯವಸ್ಥೆಯನ್ನು ಹೊಂದಿದವರಾಗಿರುತ್ತಾರೆ? ಉದಾಹರಣೆಗೆ, ತಮ್ಮ ಆರಾಮದಾಯಕ ಸೌಕರ್ಯಗಳನ್ನು ತ್ಯಜಿಸದೆ ಅವರು ತಮ್ಮ ಸುತ್ತಲೂ ಇರುವ ಅಷ್ಟೇನೂ ಅದೃಷ್ಟವಂತರಲ್ಲದ ಜನರ ಕುರಿತು ಸೂಕ್ಷ್ಮ ಸಂವೇದನೆಯನ್ನು ಬೆಳೆಸಿಕೊಂಡಾರೆಯೇ? ಐಐಟಿಗಳು ಹಾಗೂ ಅವುಗಳಲ್ಲಿನ ವಿದ್ಯಾರ್ಥಿಗಳಿಗೆ ಕೊಟ್ಟ ಗೌರವಕ್ಕೆ ಪ್ರತಿಯಾಗಿ ಭಾರತೀಯರ ಬದುಕನ್ನು ಸುಧಾರಿಸುವ ಬಯಕೆಯನ್ನು ಹೊಂದಿರುವ ಪ್ರತಿಭಾವಂತರು ಸಾಕಷ್ಟು ಜನ ಇದ್ದಾರೆಯೇ? ಆ ದಿಸೆಯಲ್ಲಿ ಕೆಲಸ ಮಾಡಲು ಅಗತ್ಯವಾದ ಸೂಕ್ತ ತಿಳುವಳಿಕೆ, ಮಾರ್ಗದರ್ಶನ, ತರಬೇತಿಗಳನ್ನು ಹಾಗೂ ಅವಕಾಶಗಳನ್ನು ವ್ಯವಸ್ಥೆಯು ಅವರಿಗೆ ಒದಗಿಸುವುದೇ?

ವ್ಯಕ್ತಿಗತ ಆಶೋತ್ತರಗಳು ವಿಶಾಲ ಸಮಾಜದ ಗೊತ್ತುಗುರಿಗಳೊಡನೆ ಒಂದಾಗಿ ಬೆಳೆಯಬೇಕು ಎನ್ನುವುದು ಮಿತಿಮೀರಿದ ನಿರೀಕ್ಷೆಯೇನಲ್ಲ. ಪರಸ್ಪರ ವಿರುದ್ಧವಾಗಿರುವಂತೆ ತೋರುವ ಈ ಎರಡೂ ಉದ್ದೇಶಗಳನ್ನು ತಾವು ಪ್ರೋತ್ಸಾಹಿಸಲು ಸಾಧ್ಯವೇ ಎಂದು ಪರ್ಯಾಲೋಚಿಸಲು ಐಐಟಿಗಳಂತಹ ಸರ್ವಶ್ರೇಷ್ಠ ಸಂಸ್ಥೆಗಳಿಗೆ ಬಹುಶಃ ಇದು ಸಕಾಲ.

■

ಬಿ ಫಸ್ಟ್, 13-06-2018




**1ನೇ ಫೆಬ್ರವರಿ 2017–** ಇದು ಅತ್ಯಂತ ಆಪ್ಯಾಯಮಾನ ಕ್ಷಣಗಳಲ್ಲೊಂದು. ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ವಿರುದ್ಧದ ಪಂದ್ಯದಲ್ಲಿ ಬೌಲಿಂಗ್ ಮಾಡುತ್ತಿರುವುದು. ದಶಕಗಳ ಕ್ರಿಕೆಟ್ ಆಟ ದೇಹ–ಮನಸ್ಸುಗಳನ್ನು ಉಲ್ಲಾಸದಾಯಕವಾಗಿಸಿದೆಯಲ್ಲದೆ ನೂರಾರು ಸ್ನೇಹಿತರನ್ನು ಕೊಟ್ಟಿದೆ.

ಅನಾರೋಗ್ಯಕರ ಸ್ಪರ್ಧೆಯು ಹೋಲಿಕೆಯನ್ನು ಉತ್ತೇಜಿಸುವುದಾಗಿದ್ದು, ಸಹಕಾರ ಹಾಗೂ ಪರರ ಕುರಿತಾದ ಸೂಕ್ಷ್ಮ ಸಂವೇದನೆಯನ್ನು ಹತ್ತಿಕ್ಕುತ್ತದೆ. ಮಕ್ಕಳ ಜೊತೆ ಆಟ ಆಡುವುದು ಶಿಕ್ಷಕರಿಗೆ ಅವರನ್ನು ಚೆನ್ನಾಗಿ ಅರಿತುಕೊಳ್ಳಲು ನೆರವಾಗುತ್ತದೆ.

# ಬನ್ನಿ, ಆಟ ಆಡೋಣ...

## ಮಕ್ಕಳ ಬೆಳವಣಿಗೆಯಲ್ಲಿ ದೈಹಿಕ ಶಿಕ್ಷಣದ ಪಾತ್ರ

ಇತ್ತೀಚೆಗೆ ಆಡಲಾದ ಕ್ರಿಕೆಟ್ ಪಂದ್ಯವೊಂದರ ಮುಕ್ತಾಯದ ಹಂತವು ಅತ್ಯಂತ ರೋಚಕವಾಗಿತ್ತು. ಗೆಲುವಿನ ಬೆನ್ನಟ್ಟಿದ ತಂಡವು ಇಪ್ಪತ್ತೆರಡು ಎಸೆತಗಳಲ್ಲಿ ಇಪ್ಪತ್ತೆಂಟು ರನ್‌ಗಳನ್ನು ಗಳಿಸಬೇಕಿತ್ತು. ನಂತರ, ಆರು ಎಸೆತಗಳಲ್ಲಿ ನಾಲ್ಕು ರನ್ ಬೇಕಾಯಿತು. ಕೊನೆಯಲ್ಲಿ, ಒಂದು ಎಸೆತದಲ್ಲಿ ಒಂದು ರನ್ ಮಾಡಲೇಬೇಕಿತ್ತು. ಬ್ಯಾಟ್ಸ್‌ಮನ್ ಕೊನೆಯ ಚೆಂಡನ್ನು ತಟ್ಟಿದವನೇ ಓಡತೊಡಗಿದ. ಅವನು ಹೇಗೋ ನಾನ್- ಸ್ಟ್ರೈಕರ್ ತುದಿಯನ್ನು ಮುಟ್ಟಿದ ತಕ್ಷಣ ಅವನ ತಂಡದ ಇತರರು ಜೋರಾಗಿ ಚಪ್ಪಾಳೆ ತಟ್ಟತೊಡಗಿದರು. ಸಂತೋಷಾತಿರೇಕದಲ್ಲಿ ಮೈದಾನದೊಳಕ್ಕೆ ಓಡಿಬಂದು, ತಮ್ಮ ತಂಡದ ಗೆಲುವಿಗೆ ಕಾರಣರಾದ ಇಬ್ಬರು ಧೀರರನ್ನು ಎತ್ತಿ ಸಂಭ್ರಮಿಸುತ್ತ ಮರಳಿ ಪೆವಿಲಿಯನ್ ಒಳಕ್ಕೆ ಮೆರವಣಿಗೆಯಲ್ಲಿ ಕೊಂಡೊಯ್ದರು.

ಇದು ಭಾರತದ ತಂಡವು ಭಾಗವಾಗಿದ್ದ ಯಾವುದೇ ಅಂತರ್‌ರಾಷ್ಟ್ರೀಯ ಪಂದ್ಯದ ದೃಶ್ಯವಾಗಿರಲಿಲ್ಲ. ಬದಲಿಗೆ, ನಮ್ಮ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ತಂಡ ಹಾಗೂ ಬೋಧಕ ವರ್ಗವನ್ನೂ ಒಳಗೊಂಡ ಸಂಸ್ಥೆಯ ಸಿಬ್ಬಂದಿಗಳ ತಂಡದ ನಡುವೆ ನಡೆದ ಹಗಾಹಣೆ ಪಂದ್ಯದ ದೃಶ್ಯವಾಗಿತ್ತು. ಸಿಬ್ಬಂದಿಗಳ ತಂಡದಲ್ಲಿದ್ದವರ ಸರಾಸರಿ ವಯಸ್ಸು ನಲವತ್ತೈದಕ್ಕೂ ಮೇಲ್ಪಟ್ಟಿತ್ತು. ಅದು ವಿದ್ಯಾರ್ಥಿಗಳ ವಯಸ್ಸಿನ ಸುಮಾರು ದುಪ್ಪಟ್ಟಾಗಿತ್ತು. ಆದರೂ ಈ ತಂಡವು

ಸತತ ಎರಡನೆಯ ಬಾರಿಗೆ ಜಯಶಾಲಿಯಾಗುತ್ತಿರುವುದು ಪಂದ್ಯವನ್ನು ಇನ್ನಷ್ಟು ರೋಚಕವಾಗಿಸಿತ್ತು. ಸಿಬ್ಬಂದಿ ಮತ್ತು ವಿದ್ಯಾರ್ಥಿಗಳ ನಡುವಿನ ಈ ವಾರ್ಷಿಕ ಪಂದ್ಯವನ್ನು ವರ್ಷವಿಡೀ ಕುತೂಹಲದಿಂದ ಎದುರು ನೋಡಲಾಗುತ್ತದೆ. ಬೋಧಕ ವರ್ಗದವರಿರುವ ತಂಡವು ದೈಹಿಕ ಆರೋಗ್ಯ ಹಾಗೂ ಶಕ್ತಿ-ಸಾಮರ್ಥ್ಯದ ಸವಾಲನ್ನು ಎದುರಿಸಬೇಕಾಗುತ್ತದೆ ಎನ್ನುವುದು ನಿಜ. ಆದರೆ ಸದಾ ಚೈತನ್ಯದಿಂದ ತುಂಬಿರುವ, ಪ್ರತಿ ವರ್ಷ ಹೊಸರಕ್ತದಿಂದ ಕಂಗೊಳಿಸುವ ವಿದ್ಯಾರ್ಥಿಗಳ ತಂಡವು ನಮ್ಮ ಉತ್ಸಾಹವನ್ನೇನೂ ಕುಗ್ಗಿಸುವುದಿಲ್ಲ.

ಗೆಲುವು, ಸೋಲು, ವ್ಯಕ್ತಿಗತ ಸಾಧನೆ, ವೈಫಲ್ಯಗಳಾಚೆಯೂ ಅತ್ಯಂತ ಮುಖ್ಯವಾಗುವುದೆಂದರೆ, ನಮ್ಮಲ್ಲಿ ಹಲವರು ಸಾಕಷ್ಟು ಪ್ರಾಯ ಮೀರಿದವರಾಗಿದ್ದರೂ ನಾವೆಲ್ಲರೂ ಸೇರಿ, ಆಟವನ್ನು ಅದರ ನಿಜವಾದ ಕ್ರೀಡಾಮನೋಭಾವದಲ್ಲಿ ಆಡುತ್ತೇವೆ, ಉತ್ತಮ ಪ್ರದರ್ಶನ ನೀಡಲು ಪ್ರಯತ್ನಿಸುತ್ತೇವೆ ಎನ್ನುವುದು. ನಂತರ ಕೆಲವು ದಿನಗಳ ತನಕ, ಬೌಲ್ ಮಾಡುವಾಗ ಕಾಡುವ ಕೈನೋವು ಅಥವಾ ಪೀಡಿಸುವ ಗಾಯಗಳಿಂದ ನಾವು ವಿಚಲಿತರಾಗುವುದಿಲ್ಲ. ಏಕೆಂದರೆ, ಆಟದಿಂದ ಸಿಗುವ ಸಂತೋಷವು ಈ ತಾತ್ಕಾಲಿಕ ನೋವಿಗಿಂತ ಎಷ್ಟೋ ಮಿಗಿಲಾದದ್ದು! ಆಟಗಾರರ ನಡುವೆ ಹುಟ್ಟಿಕೊಳ್ಳುವ ಸ್ನೇಹಸಂಬಂಧವು ಆಟದ ಮೈದಾನದಾಚೆಗೂ ವಿಸ್ತರಿಸಿಕೊಳ್ಳುತ್ತದೆ.

ಈ ಚೈತನ್ಯ-ಉತ್ಸಾಹವನ್ನು ಶಾಲೆಗಳಲ್ಲಿ ಹೇಗೆ ತುಂಬುವುದು? ಎನ್ನುವ ಪ್ರಶ್ನೆಗೆ ಇದು ನಮ್ಮನ್ನು ತಂದು ನಿಲ್ಲಿಸುತ್ತದೆ. ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಕ್ರೀಡಾದೇಶವಾಗಿ ಹೊರಹೊಮ್ಮಲು ಸಾಧ್ಯವಾಗುವ ನಿಟ್ಟಿನಲ್ಲಿ 'ಖೇಲೋ ಇಂಡಿಯಾ' ದಂತಹ ಕಾರ್ಯಕ್ರಮಗಳ ಮೂಲಕ ತಳಮಟ್ಟದಲ್ಲಿ ಉತ್ಕೃಷ್ಟ ಕ್ರೀಡಾಪಟುಗಳನ್ನು ತಯಾರು ಮಾಡುವ ಪ್ರಯತ್ನಗಳು ಜಾರಿಯಲ್ಲಿವೆ. ಈ ಪ್ರಯತ್ನಗಳು ಮುಂದುವರೆಯಲೇಬೇಕು. ಅದೇ ವೇಳೆಗೆ ಆರೋಗ್ಯ ಮತ್ತು ದೈಹಿಕ ಚಟುವಟಿಕೆಗಳನ್ನು ಶಾಲಾ ಪಠ್ಯಕ್ರಮದ ಸಂಯೋಜಿತ ಹಾಗೂ ಅವಿಭಾಜ್ಯ ಅಂಗಗಳನ್ನಾಗಿ ಪರಿಗಣಿಸುವ ಅಗತ್ಯವೂ ಇದೆ.

## ಸಮಗ್ರ ಶಾಲಾ ಪಠ್ಯಕ್ರಮವೊಂದರ ಅಗತ್ಯ

ಸಮಗ್ರ ಪಠ್ಯಕ್ರಮವೊಂದನ್ನು ರೂಪಿಸುವ ಆಲೋಚನೆಯೇ ಹಲವಾರು ಸವಾಲುಗಳನ್ನು ಒಡ್ಡುತ್ತದೆ. ಅದು, ದೇಶದಾದ್ಯಂತ ಇರುವ ಶಾಲೆಗಳಲ್ಲಿ ಆಟದ ಮೈದಾನಗಳು ಹಾಗೂ ಕ್ರೀಡಾ ಉಪಕರಣಗಳಂತಹ ಮೂಲಭೂತ ಸೌಕರ್ಯಗಳ ಲಭ್ಯತೆ ಇರಬಹುದು, ಸ್ವಸ್ಥ ಹಾಗೂ ಕ್ರಿಯಾಶೀಲ ಬದುಕಿಗೆ ಅನುಕೂಲಕರವಾದ ವಾತಾವರಣವಿರಬಹುದು, ವೈದ್ಯಕೀಯ ಸೌಲಭ್ಯಗಳು, ತರಬೇತಿ ಪಡೆದ

ದೈಹಿಕ ಶಿಕ್ಷಣ ಮತ್ತು ಕ್ರೀಡಾ ಶಿಕ್ಷಕರ ಸಂಪನ್ಮೂಲ ಸಂಚಯವಿರಬಹುದು. ನಮ್ಮ ದೇಶದ ಶಿಕ್ಷಣ ವ್ಯವಸ್ಥೆಯ ಅಗಾಧತೆ ಹಾಗೂ ವಿವಿಧತೆಗಳ ಸಂದರ್ಭದ ಹಿನ್ನೆಲೆಯಲ್ಲಿ, ಶಾಲಾ ಪ್ರಕ್ರಿಯೆಗೆ ಮಾರ್ಗದರ್ಶನ ನೀಡುವಂತಹ ವ್ಯಾಪಕ ಹಾಗೂ ವಿಶಾಲವಾದ ಪಠ್ಯಕ್ರಮ ವಿಧಾನವನ್ನು ರೂಪಿಸಬಹುದಾಗಿದೆ. ಈ ಕೆಳಗಿನ ಸಿದ್ಧಾಂತಗಳನ್ನೊಳಗೊಂಡ ಇಂಥದ್ದೊಂದು ಪಠ್ಯಕ್ರಮವನ್ನು ವಿಕಸನಗೊಳಿಸುವ ಪ್ರಯತ್ನವನ್ನು ನಮ್ಮ ಸಂಸ್ಥೆಯು ನಡೆಸುತ್ತಿರುವ ಕೆಲವು ಶಾಲೆಗಳಲ್ಲಿ ಮಾಡಲಾಗಿದೆ. ಬೇರೆ ಶಿಕ್ಷಣ ಸಂಸ್ಥೆಗಳಲ್ಲಿ ಇದರ ವಿಭಿನ್ನ ರೂಪಗಳಿರಬಹುದು.

## 1 ಒಳಗೊಳ್ಳುವಿಕೆ

ಆರೋಗ್ಯ ಹಾಗೂ ದೈಹಿಕ ಚಟುವಟಿಕೆಗಳು ಎಲ್ಲಾ ಮಕ್ಕಳಿಗೂ ತಮ್ಮ ಪ್ರತಿಭೆ ತೋರಿಸಲು ಮತ್ತು ಬೆಳೆಸಿಕೊಳ್ಳಲು ಅವಕಾಶವನ್ನು ಒದಗಿಸಿಕೊಡುತ್ತವೆ. ಇದರಿಂದ ಮಕ್ಕಳಿಗೆ ಪ್ರೇರಣೆ ದೊರೆಯುತ್ತದೆ, ಎಲ್ಲರೊಳಗೊಂದಾಗಿ ತೊಡಗಿಕೊಳ್ಳುವ ಮನೋಧರ್ಮ ಬೆಳೆಯುತ್ತದೆ ಮತ್ತು ಅವರ ಆತ್ಮವಿಶ್ವಾಸ ಹೆಚ್ಚುತ್ತದೆ. ಶಿಕ್ಷಕರು ಎಲ್ಲಾ ಮಕ್ಕಳೂ ಗುರುತಿಸಲ್ಪಡುವ ಹಾಗೆ, ಮೆಚ್ಚುಗೆ ಪಡೆಯುವ ಹಾಗೆ ಅವಕಾಶಗಳನ್ನು ನಿರ್ಮಿಸಬಹುದು. ಶ್ರೇಷ್ಠತೆ ಎನ್ನುವುದೊಂದು ಪ್ರಶಂಸಾರ್ಹ ಸಂಗತಿ. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಪಾಲ್ಗೊಳ್ಳುವಿಕೆ ಮುಖ್ಯವಾಗುತ್ತದೆ. ಅದರಲ್ಲಿಯೂ ವಿಶೇಷವಾಗಿ ವಿಶೇಷ ಅಗತ್ಯಗಳನ್ನು ಹೊಂದಿರುವ ಮಕ್ಕಳೂ ಸೇರಿದಂತೆ ವಂಚಿತ ಮತ್ತು ಅಂಚಿಗೆ ತಳ್ಳಲ್ಪಟ್ಟ ಮಕ್ಕಳು ಪಾಲ್ಗೊಳ್ಳುವಂತೆ ಮಾಡುವುದು ಮುಖ್ಯವಾಗುತ್ತದೆ.

## 2 ಗೆಲುವು ಮತ್ತು ಸೋಲು

ಆಟವೊಂದರಲ್ಲಿ ಗೆಲ್ಲುವುದು ಮತ್ತು ಸೋಲುವುದು ವ್ಯಕ್ತಿಗಳ ನಡುವೆ ಪ್ರತಿಷ್ಠೆಯ ಸಂಗತಿಯಾಗಬಾರದು ಮತ್ತು ಅದು ಹೋಲಿಕೆಯನ್ನು ಉತ್ತೇಜಿಸಬಾರದು. ಇದರಿಂದ ವಿದ್ಯಾರ್ಥಿಗಳು ತಾವು ಆಟವನ್ನು ಯಾವ ಮನೋಭಾವದಲ್ಲಿ ಆಡುತ್ತೇವೆ, ಇನ್ನೊಂದು ತಂಡದ ಪ್ರಯತ್ನ, ಪ್ರದರ್ಶನವನ್ನು ಹೇಗೆ ಮೆಚ್ಚುತ್ತೇವೆ ಎನ್ನುವ ವಿಮರ್ಶಾತ್ಮಕ ಪರ್ಯಾಲೋಚನೆ ಮಾಡುವಂತೆ ಆಗಬೇಕು. ಮಕ್ಕಳು ಸೋಲು, ನಿರಾಶೆಗಳನ್ನು ನಿಭಾಯಿಸಲು ಹಾಗೂ ಆಟವನ್ನು ಆನಂದಿಸುವಂತಾಗಲು ಅವರಲ್ಲಿ ಸೂಕ್ಷ್ಮ ಸಂವೇದನೆಗಳು ಬೆಳೆಯಬೇಕು. ಶಾಲೆಯು ಕೇವಲ ಗೆಲುವನ್ನು ಸಂಭ್ರಮಿಸುವುದರ ಬದಲು, ಆದರ ಜೊತೆಜೊತೆಗೇ ಆಟಕ್ಕೆ ಸಂಬಂಧಿಸಿದಂತೆ ಚರ್ಚೆ–ಸಂವಾದಗಳು ಕೂಡ ನಡೆಯಲು ಅನುವು ಮಾಡಿಕೊಟ್ಟಾಗ ಇದು ಸಾಧ್ಯವಾಗುತ್ತದೆ. ಸಾಧಾರಣವಾಗಿ, ಅಂತರ್‌ಶಾಲಾ ಸ್ಪರ್ಧೆಗಳಿಗೆ ಕೆಲವು ವಿದ್ಯಾರ್ಥಿಗಳನ್ನು

ಆಯ್ಕೆ ಮಾಡುವುದು ಉದ್ದೇಶವಾಗಿರುತ್ತದೆ. ಸ್ಪರ್ಧೆಗಳಲ್ಲಿನ ಆಯ್ಕೆ ಪ್ರಕ್ರಿಯೆ ನ್ಯಾಯಸಮ್ಮತವಾಗಿದ್ದು ಪ್ರಜಾತಾಂತ್ರಿಕವೂ ಆಗಿದ್ದಲ್ಲಿ, ಭಾಗವಹಿಸುವ ವಿದ್ಯಾರ್ಥಿಗಳು ಎಲ್ಲವನ್ನೂ ವಿಶಾಲ ದೃಷ್ಟಿಯಿಂದ ನೋಡಲು ಸಾಧ್ಯವಾಗುತ್ತದೆ.

## 3 ತಾರತಮ್ಯ ತಡೆಗಟ್ಟುವಿಕೆ

ಹಲವಾರು ಶಾಲೆಗಳಲ್ಲಿ ದೈಹಿಕ ಶಿಕ್ಷಣ ಚಟುವಟಿಕೆಗಳನ್ನು ನಡೆಸುವಾಗ ಕೆಲವು ಲಿಂಗ ಆಧಾರಿತ ಅಭ್ಯಾಸಗಳು ತಿಳಿಯದೆಯೇ ನುಸುಳಿಬಿಟ್ಟಿರುತ್ತವೆ. ಉದಾಹರಣೆಗೆ, ಹೆಣ್ಣು ಮತ್ತು ಗಂಡು ಮಕ್ಕಳಿಗೆ ಬೇರೆ ಬೇರೆ ಆಟಗಳನ್ನು ಆಡಿಸುವುದು ಅಥವಾ ಬೇರೆ ಬೇರೆ ತಂಡಗಳನ್ನು ರಚಿಸುವುದು. ವ್ಯಾಪಕವಾದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರದಿಂದಾಗಿ ಹುಟ್ಟಿಕೊಳ್ಳುವ ಇಂತಹ ಆಚರಣೆಗಳು ಹೆಚ್ಚಿನ ವೇಳೆ ಸಾಮಾಜಿಕ ತಾರತಮ್ಯಗಳನ್ನು ಎತ್ತಿ ತೋರಿಸುತ್ತವೆ ಮತ್ತು ನಮ್ಮ ಸಂವಿಧಾನದ ಅಶಯಗಳಿಗೆ ವಿರುದ್ಧವಾಗಿವೆ. ಗಂಡು ಮತ್ತು ಹೆಣ್ಣುಮಕ್ಕಳು ತಮ್ಮ ಎಲ್ಲಾ ವಯಸ್ಸಿನಲ್ಲೂ ಒಟ್ಟಿಗೆ ಆಟಗಳನ್ನು ಆಡಬಹುದು. ಶಾಲೆಯಿಂದಾಚೆ ಅಂತರ್‌ಶಾಲಾ ಸ್ಪರ್ಧೆಗಳಲ್ಲಿ ಆಡುವ ಸಂದರ್ಭಗಳನ್ನು ಬಿಟ್ಟು ಉಳಿದಂತೆ ಶಾಲೆಗಳಲ್ಲಿ ಹೆಣ್ಣು ಮತ್ತು ಗಂಡು ಮಕ್ಕಳನ್ನು ಬೇರೆ ಬೇರೆ ತಂಡಗಳನ್ನಾಗಿ ಮಾಡದೇ ಇರುವಂತಹ ಅಥವಾ ದೈಹಿಕ ಸಮಸ್ಯೆಗಳಿಗೆ ತುತ್ತಾಗಿರುವವರನ್ನು ಬೇರೆ ಇಡದಿರುವಂತಹ ಸನ್ನಿವೇಶವನ್ನು ನಿರ್ಮಿಸಬೇಕು.

## 4 ಆರೋಗ್ಯ ಮತ್ತು ದೈಹಿಕ ಶಿಕ್ಷಣಕ್ಕೆ ಸಮಾನ ಸ್ಥಾನಮಾನ

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಶಾಲೆಗಳಲ್ಲಿ ಆರೋಗ್ಯ ಮತ್ತು ದೈಹಿಕ ಶಿಕ್ಷಣದ ಮಹತ್ವವನ್ನು ಗುರುತಿಸುತ್ತದೆ ಮತ್ತು ಪಠ್ಯಕ್ರಮದಲ್ಲಿ ಅವುಗಳಿಗೆ ಸಮಾನವಾಗಿ ಪ್ರಾಮುಖ್ಯತೆಯನ್ನು ಹಾಗೂ ಸ್ಥಾನವನ್ನೂ ನೀಡುತ್ತದೆ. ಅದಕ್ಕನುಗುಣವಾಗಿ, ಅಗತ್ಯ ಮೂಲಭೂತ ಸೌಕರ್ಯಗಳನ್ನು ನಿರ್ಮಿಸುವುದಲ್ಲದೆ ಶಿಕ್ಷಕ ಸಿದ್ಧತಾ ಕಾರ್ಯಕ್ರಮಗಳಲ್ಲಿ ಹಾಗೂ ಶಾಲೆಯ ಕ್ಯಾಲೆಂಡರ್‌ನಲ್ಲಿ ಆರೋಗ್ಯ ಮತ್ತು ದೈಹಿಕ ಚಟುವಟಿಕೆಗಳಿಗೆ ನಮ್ಮ ಶಾಲಾ ಪ್ರಕ್ರಿಯೆಗಳು ಸಮಾನ ಸಮಯವನ್ನು ನೀಡಬೇಕಿದೆ.

## 5 ಪೋಷಕರ ಭಾಗವಹಿಸುವಿಕೆ

ತುಂಬಾ ವಿಭಿನ್ನವಾದ ವಿಧಾನವೊಂದನ್ನು ಹೊಂದಿರುವ ಪಠ್ಯಕ್ರಮವನ್ನು ಆರಂಭಿಸುವಾಗ, ಪೋಷಕರೂ ಕೂಡ ಆಳವಾದ ಅರಿವು ಹಾಗೂ ಸಂವೇದನೆಯನ್ನು ಹೊಂದಿರುವುದು ಅಗತ್ಯ. ಅವರು ಬದಲಾದ ವಿಧಾನವನ್ನು

ತಿಳಿದುಕೊಳ್ಳಬೇಕಾಗುತ್ತದೆ. ಗಂಡು, ಹೆಣ್ಣು ಮಕ್ಕಳೆಲ್ಲ ಸೇರಿಯೇ ಒಟ್ಟಿಗೆ ಏಕೆ ಆಟವಾಡಬೇಕು ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕಿದೆ ಅಥವಾ ನಿರ್ದಿಷ್ಟ ಕ್ರೀಡೆಯೊಂದರಲ್ಲಿ ಮಗುವೊಂದು ಹೊಂದಿರುವ ವೈಯಕ್ತಿಕ ಆಸಕ್ತಿ, ಪ್ರತಿಭೆಯ ಪೋಷಣೆಯು ಏಕೆ ಮತ್ತು ಹೇಗೆ ಶಾಲೆಯ ಆದ್ಯತೆಯಲ್ಲ ಎನ್ನುವುದನ್ನು ಮನಗಾಣಬೇಕಿದೆ. ಶಾಲೆಗಳು ಈ ಸಿದ್ಧಾಂತಗಳನ್ನು ಕಾರ್ಯಗತಗೊಳಿಸುವ ಹಂತದಲ್ಲಿ ಇಂತಹ ಸಂಗತಿಗಳನ್ನು ಕುರಿತಂತೆ ಪೋಷಕರೊಂದಿಗೆ ಚರ್ಚೆಗಳನ್ನು ನಡೆಸುವ ದಿಸೆಯಲ್ಲಿ ಪ್ರಜ್ಞಾಪೂರ್ವಕ ಪ್ರಯತ್ನಗಳನ್ನು ಮಾಡಬೇಕಿದೆ.

## 6 ಶಿಕ್ಷಕರ ಪಾತ್ರ

ಮಕ್ಕಳ ಜೊತೆ ಆಟ ಆಡುವುದು ಶಿಕ್ಷಕರಿಗೆ ಅವರನ್ನು ಚೆನ್ನಾಗಿ ಅರಿತುಕೊಳ್ಳಲು ನೆರವಾಗುತ್ತದೆ. ಈ ರೀತಿಯಾಗಿ, ಆಟವು ಅವರಲ್ಲಿ ನಾವೆಲ್ಲರೂ ಪರಸ್ಪರ ಜೊತೆಗಿದ್ದೇವೆ ಎಂಬ ಭಾವನೆಯನ್ನು, ಬಾಂಧವ್ಯವನ್ನು ಹಾಗೂ ಸೂಕ್ಷ್ಮತೆಯನ್ನು ಹುಟ್ಟು ಹಾಕುತ್ತದೆ. ಜೊತೆಗೆ ಇದು, ದೈಹಿಕ ಶಿಕ್ಷಣದ ಶಿಕ್ಷಕರ ಕುರಿತಾಗಿ ಇರುವ ಹಣೆಪಟ್ಟಿಯನ್ನು ತೆಗೆದು ಹಾಕಬಹುದು ಹಾಗೂ ಶಾಲೆಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ದೊಡ್ಡ ಶಾಲೆಗಳಲ್ಲಿ ಕಂಡುಬರುವ ಸಂಪನ್ಮೂಲ ಸಮಸ್ಯೆಯನ್ನು ನಿಭಾಯಿಸಲು ನೆರವಾಗಬಹುದು.

ಅನಾರೋಗ್ಯಕರ ಸ್ಪರ್ಧೆಯು ಹೋಲಿಕೆಯನ್ನು ಉತ್ತೇಜಿಸುವುದಾಗಿದ್ದು, ಸಹಕಾರ ಹಾಗೂ ಪರರ ಕುರಿತಾದ ಸೂಕ್ಷ್ಮ ಸಂವೇದನೆಯನ್ನು ಹತ್ತಿಕ್ಕುತ್ತದೆ. ಸೋಲುವ ಉದ್ದೇಶದಿಂದ ಯಾರೂ ಆಡುವುದಿಲ್ಲ ಎನ್ನುವುದು ನಿಜ. ಆದರೆ ಮಕ್ಕಳನ್ನು ಕಾಳಜಿ ಮತ್ತು ಸೂಕ್ಷ್ಮಜ್ಞತೆಯುಳ್ಳ ವ್ಯಕ್ತಿಗಳನ್ನಾಗಿ ಬೆಳೆಸುವುದರತ್ತ ನಮ್ಮ ಗಮನವು ಮುಖ್ಯವಾಗಿ ಹರಿಯಬೇಕು.

ಇಲ್ಲಿ ನಿರೂಪಿಸಲಾದ ವಿಚಾರಗಳು ಆರೋಗ್ಯ ಮತ್ತು ದೈಹಿಕ ಶಿಕ್ಷಣಗಳಿಗೆ ಬಹಿರಂಗವಾಗಿ ಒತ್ತು ನೀಡಿರಬಹುದು. ಆದರೆ ಸಮಗ್ರ ವಿಧಾನವು ಮಧ್ಯಾಹ್ನದ ಪೌಷ್ಟಿಕ ಬಿಸಿಯೂಟ, ನಿಯಮಿತವಾದ ಆರೋಗ್ಯ ತಪಾಸಣೆ, ನೈರ್ಮಲ್ಯ ಹಾಗೂ ಮಕ್ಕಳ ಭದ್ರತೆಯಂತಹ ಇನ್ನಿತರ ಸಂಬಂಧಿತ ಕಾರ್ಯಕ್ರಮಗಳನ್ನೂ ಒಳಗೊಳ್ಳುತ್ತದೆ. ಇದು ಮಕ್ಕಳ ದೈಹಿಕ, ಭಾವನಾತ್ಮಕ/ ಮಾನಸಿಕ, ಸಾಮಾಜಿಕ ಹಾಗೂ ಬೌದ್ಧಿಕ ಆಯಾಮಗಳನ್ನುಳ್ಳ ಸರ್ವತೋಮುಖ ಅಭಿವೃದ್ಧಿಯನ್ನು ಉಂಟುಮಾಡುತ್ತದೆ.



ಬಿ.ಫಸ್ಟ್, 07-02-2018



**8ನೇ ಆಗಸ್ಟ್ 2013** – ಯಾದಗಿರಿಯ ಸರ್ಕಾರಿ ಶಾಲೆಯೊಂದರಲ್ಲಿ ಹೆಣ್ಣುಮಕ್ಕಳು ಕಬಡ್ಡಿ ಆಡುತ್ತಿರುವುದು. ಶಾಲೆಗಳಲ್ಲಿ ವಿವಿಧ ಆಟಗಳಲ್ಲಿ ತೊಡಗಲು ಹೆಣ್ಣು ಮತ್ತು ಗಂಡು ಮಕ್ಕಳಿಗೆ ಮೈದಾನವೂ ಸೇರಿದಂತೆ ಅಗತ್ಯ ಭೌತಿಕ ಮತ್ತು ಮಾನಸಿಕ ಸುರಕ್ಷತೆಯ ಪರಿಸರವನ್ನು ನಿರ್ಮಿಸುವುದು ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾದುದು.

'ಭಯ ತುಂಬಿದ ವಾತಾವರಣ'ದ ಪರಿಣಾಮ ಹಾಗೂ ಒತ್ತಡಗಳು ದೀರ್ಘಕಾಲದಲ್ಲಿ ತುಂಬಾ ತೀವ್ರವಾಗುತ್ತವೆ. ಒತ್ತಡವು ದೇಹ ಹಾಗೂ ಮೆದುಳಿಗೆ ಒಳ್ಳೆಯದಲ್ಲ. ಅಂತೆಯೇ, ಶೈಕ್ಷಣಿಕ ಸಾಧನೆಗೂ ಹಾನಿಕಾರಕ. ಶಾಲಾ ಶಿಕ್ಷಣವು ಕಲಿಕೆ ಮತ್ತು ಸಕಾರಾತ್ಮಕವಾದ ಭಾವನಾತ್ಮಕ ಅನುಭವಗಳನ್ನು ಒದಗಿಸುವುದರ ನಡುವೆ ಸಮತೋಲನವನ್ನು ಸಾಧಿಸುವ ಅಗತ್ಯವಿದೆ...

–ಕಮಲಾ.ವಿ.ಮುಕುಂದ

# ದೈಹಿಕ ಶಿಕ್ಷೆಯ ವಿರುದ್ಧ ಸಮರ

ಶೈಕ್ಷಣಿಕ ಸಾಧನೆಯನ್ನು ಉತ್ತಮಪಡಿಸುವ ಹಾದಿಯಲ್ಲಿ ತೆಗೆದುಕೊಳ್ಳಲಾದ ಅಸಹನೀಯ ಕ್ರಮಗಳು ಮಕ್ಕಳ ಘನತೆಯನ್ನು ಉಲ್ಲಂಘಿಸುತ್ತಿಲ್ಲವಷ್ಟೇ? ಮಕ್ಕಳನ್ನು ಶಾಲೆಯಲ್ಲಿ ಹೇಗೆ ನಡೆಸಿಕೊಳ್ಳಲಾಗುತ್ತಿದೆ ಎನ್ನುವ ವಾಸ್ತವಿಕ ಸ್ಥಿತಿಯೊಂದಿಗೆ ಈ ಪ್ರಶ್ನೆಯನ್ನು ಅವಲೋಕಿಸಬೇಕಾಗಿದೆ.

## ಮಕ್ಕಳನ್ನು ಶಾಲೆಯಲ್ಲಿ ಹೇಗೆ ನಡೆಸಿಕೊಳ್ಳಲಾಗುತ್ತದೆ ಎನ್ನುವ ಕುರಿತಾದ ಒಂದು ವಾಸ್ತವಿಕ ಚಿತ್ರಣ

ಇತ್ತೀಚೆಗೆ ನಾವು ಆಯೋಜಿಸಿದ ಕಾರ್ಯಾಗಾರವೊಂದರಲ್ಲಿ ಆನೇಕಲ್ ತಾಲೂಕಿನ ಸರ್ಕಾರಿ ಶಾಲೆಯ ಶಿಕ್ಷಕರೊಡನೆ ಒಡನಾಡುವ ಸಂದರ್ಭ ನನಗೆ ಒದಗಿಬಂದಿತ್ತು. ಅವರು ತಮ್ಮ ಶಾಲೆಗಳಲ್ಲಿ ಇನ್ನಿತರ ಕೆಲವು ವಿಷಯಗಳ ಜೊತೆಗೆ ಪ್ರಾಥಮಿಕ ಹಂತದಲ್ಲಿ ಕನ್ನಡ ಭಾಷೆಯನ್ನು ಕಲಿಸುತ್ತಿದ್ದರು. ಅವರು ತಮ್ಮದೇ ಆದ ಅಭ್ಯಾಸಗಳ ಮೇಲೆ, ನಿರ್ದಿಷ್ಟವಾಗಿ ತಮ್ಮ ತರಗತಿಗಳು ಮಕ್ಕಳಿಗೆ ಭಾವನಾತ್ಮಕ ಸುರಕ್ಷತೆಯನ್ನು ಒದಗಿಸುತ್ತಿವೆಯೇ ಎಂಬುದರ ಬಗ್ಗೆ ಆಲೋಚಿಸಲು ಅನುಕೂಲವಾಗುವಂತೆ ಅಧಿವೇಶನವೊಂದನ್ನು ನಾನು ನಡೆಸಿಕೊಡುತ್ತಿದ್ದೆ. ಚರ್ಚೆಯು ದೈಹಿಕ ಶಿಕ್ಷೆಯ ಕುರಿತಂತೆ ಅವರು ಹೊಂದಿರುವ

ಅವರದೇ ಆದ ನಂಬಿಕೆಯತ್ತ ಹೊರಳಿತು. ಬಹುಬೇಗನೆ ಅದರಿಂದ ಅನೇಕ ಸಂಗತಿಗಳು ಹೊರಬಂದವು.

ಅವರು ತಮ್ಮ ವಿದ್ಯಾರ್ಥಿಗಳನ್ನು ಶಿಸ್ತಿನಲ್ಲಿ ಇಡಲು ದೈಹಿಕ ಶಿಕ್ಷೆಯನ್ನು ಬಳಸುತ್ತಾರೆಯೇ ಎಂಬ ಪ್ರಶ್ನೆ ಎದ್ದಾಗ ಮೊದಮೊದಲಿಗೆ ಅವರು ನಿಸ್ಸಂದೇಹವಾಗಿಯೂ ಅದರ ಇರುವಿಕೆಯನ್ನೇ ಅಲ್ಲಗಳೆದರು. ರಾಜಕೀಯ ದೃಷ್ಟಿಕೋನದಿಂದ ಸರಿಯೆಂಬಂತಹ ನಯವಾದ ಉತ್ತರವನ್ನೇ ಕೊಟ್ಟರು. ಚರ್ಚೆಯನ್ನು ಇನ್ನಷ್ಟು ಆಳಕ್ಕೆ ಒಯ್ದಾಗ ಅವರು ಅದಕ್ಕೆ ವಿರುದ್ಧವಾದ ವಾದವನ್ನು ಮುಂದಿಟ್ಟರು. ಮಕ್ಕಳಿಗೆ ಆಗೀಗ ದೈಹಿಕ ಶಿಕ್ಷೆ ನೀಡದೆ ಕಷ್ಟಕರವಾದ ತರಗತಿಗಳನ್ನು ನಿಭಾಯಿಸಲು ಯಾರಿಗೂ ಸಾಧ್ಯವಿಲ್ಲ ಎಂಬುದು ಅವರ ಅಭಿಪ್ರಾಯವಾಗಿತ್ತು. ಮಕ್ಕಳಿಗೆ ಹೊಡೆಯಲು ಬೆತ್ತದ ಉಪಯೋಗ ಅಥವಾ ಮೌಖಿಕ ದಂಡನೆಯನ್ನು (ಪದೇಪದೇ ಎಚ್ಚರಿಕೆ ನೀಡುವುದು, ಬಯ್ಯುವುದು ಇತ್ಯಾದಿ) ಅವರು ಸಮರ್ಥಿಸಿಕೊಂಡರು. ಮಕ್ಕಳ ಮನೆಯ ಪರಿಸರವು ಶೈಕ್ಷಣಿಕವಾಗಿ ಪ್ರತಿಕೂಲವಾಗಿದೆ, ಇಂತಹ ಮಕ್ಕಳು ಸಾಕಷ್ಟು 'ಕಲಿಕೆಯ ಸಮಯ' ವನ್ನು ಹೊಂದಿರುವುದಿಲ್ಲ. ಆದರೂ ನಿರೀಕ್ಷಿತ ಕಲಿಕೆಯ ಮಟ್ಟವನ್ನು ಮುಟ್ಟುವಂತೆ ಮಾಡಬೇಕು ಎನ್ನುವ ಜವಾಬ್ದಾರಿಯು ಶಿಕ್ಷಕರ ಮೇಲೆ ಹೆಚ್ಚುತ್ತಿದೆ. ಆದ್ದರಿಂದ, ದೈಹಿಕ ಶಿಕ್ಷೆ ನೀಡಬೇಕಾಗುತ್ತದೆ ಎಂದು ಅವರು ಭಾವಿಸಿದ್ದರು. ಶೈಕ್ಷಣಿಕವಾಗಿ ಹಿಂದುಳಿದಿರುವ ಮಕ್ಕಳ ಮೇಲೆ ಸಮಯವನ್ನು ವ್ಯಯಿಸಲು ಶಿಕ್ಷಕರಿಗೆ ಸಾಧ್ಯವೇ ಇಲ್ಲದ ಸನ್ನಿವೇಶವಿದೆ. ಪಠ್ಯಕ್ರಮವೂ ನಿರಂತರವಾಗಿ ಹೆಚ್ಚುತ್ತಲೇ ಹೋಗುತ್ತದೆ. ಜೊತೆಜೊತೆಗೇ ಹಲವಾರು ಆಡಳಿತಾತ್ಮಕ ಕೆಲಸಕಾರ್ಯಗಳನ್ನೂ ನಿರ್ವಹಿಸಬೇಕಾದ ಪರಿಸ್ಥಿತಿಯಿದೆ. ಇಂತಹ ಸಂದರ್ಭದಲ್ಲಿ ಶಿಕ್ಷಣ ಇಲಾಖೆಯ ಅಸಂಖ್ಯಾತ ಮೇಲ್ವಿಚಾರಕರು ಕಲಿಕೆಯ ಪರಿಣಾಮದ ಬಗ್ಗೆ ಅಸೂಕ್ಷ್ಮತೆಯಿಂದ ಪ್ರಶ್ನಿಸುತ್ತಾರೆ. ಅವರ ನಡವಳಿಕೆಯು ಅದಾಗಲೇ ಇರುವ ಶಿಕ್ಷಕರ ನೋವನ್ನು ಇನ್ನಷ್ಟು ಹೆಚ್ಚಿಸಿದೆ.

ಈ ಅನುಭವ ಸಾಲದೇನೋ ಎಂಬಂತೆ, ಇತ್ತೀಚೆಗೆ ಸರ್ಜಾಪುರ ಕ್ಲಸ್ಟರ್‌ನಲ್ಲಿ ಒಳಪ್ರದೇಶದಲ್ಲಿರುವ ಶಾಲೆಗಳಲ್ಲೊಂದಕ್ಕೆ ಹೋದಾಗ, ಅಲ್ಲಿನ ಕ್ರಿಯಾಶೀಲ ಹಾಗೂ ಪ್ರಗತಿಪರ ಮುಖ್ಯೋಪಾಧ್ಯಾಯಿನಿಯೊಬ್ಬರನ್ನು (ಆಶ್ಚರ್ಯಕರವಾದದ್ದೇನೆಂದರೆ, ಅವರು ಇನ್ನೂ ಕೇವಲ ಉಸ್ತುವಾರಿ ಶಿಕ್ಷಕಿಯಾಗಿದ್ದರು!) ಭೇಟಿಯಾದೆ. ಅವರು ಸ್ಥಳೀಯ ಪಂಚಾಯತ್ ಹಾಗೂ ಸಮುದಾಯಗಳಿಂದ ತಮ್ಮ ಶಾಲೆಗೆ ವಿವಿಧ ರೀತಿಯ ಸಂಪನ್ಮೂಲಗಳನ್ನು ಕ್ರೋಢೀಕರಿಸುವಲ್ಲಿ ಅಗಾಧ ಉಪಕ್ರಮಗಳನ್ನು ಕೈಗೊಂಡಿದ್ದಾರೆ. ಅವುಗಳೆಂದರೆ ಹೆಚ್ಚುವರಿ ತರಗತಿ ಕೋಣೆಗಳು, ಶಾಲಾ ಆವರಣದ ಗೋಡೆ, ಬೆಳಗಿನ ಪ್ರಾರ್ಥನೆ ಹಾಗೂ ಸಹಪಠ್ಯ ಚಟುವಟಿಕೆಗಳನ್ನು

ನಡೆಸಲು ಹೊಸದಾಗಿ ಕಾಂಕ್ರೀಟ್ ಹಾಕಿಸಿದ ನೆಲ (ಮಳೆ ಬಂದಾಗ ನೆಲ ಕೆಸರಾಗುವುದನ್ನು ತಪ್ಪಿಸಲು), ಕುಡಿಯುವ ನೀರಿನ ವ್ಯವಸ್ಥೆ, ಹೆಣ್ಣು-ಗಂಡು ಮಕ್ಕಳಿಗೆ ಯೋಗ್ಯವಾದ ಪ್ರತ್ಯೇಕ ಶೌಚಾಲಯಗಳು, ಗಿಡಮರಗಳನ್ನು ನೆಟ್ಟು ಬೆಳೆಸುವುದರ ಮೂಲಕ ಶಾಲಾ ಆವರಣದಲ್ಲಿ ಹಸಿರು ಪರಿಸರವನ್ನು ಸೃಷ್ಟಿಸಿರುವುದು. ಇದೆಲ್ಲದರ ಜೊತೆಗೆ ಶಾಲೆಯ ಪ್ರವೇಶದ್ವಾರದಲ್ಲಿ ಮಹಾತ್ಮಾ ಗಾಂಧೀಜಿಯವರ ಸುಂದರವಾದ ಮೂರ್ತಿಯನ್ನು ಸ್ಥಾಪಿಸಿದ್ದಾರೆ. ಇವೆಲ್ಲ ಸೇರಿ ಆಹ್ಲಾದಕರ ಪರಿಸರವನ್ನು ಸೃಷ್ಟಿಸಿವೆ. ಇದೆಲ್ಲಕ್ಕಿಂತ ಹೆಚ್ಚಾಗಿ, ವಿಶೇಷ ಅಗತ್ಯವಿರುವ ಮಕ್ಕಳಿಗಾಗಿ ಸಂಪೂರ್ಣ ಬೇರೆಯದೇ ಆದ ಕೊಠಡಿಯೊಂದನ್ನು ವೈಯಕ್ತಿಕವಾಗಿ ಅವರು ನಿರ್ಮಿಸಿದ್ದು ಅದರಲ್ಲಿ ನವೀನ ವಿಧಾನದ ಬೋಧನೆ ಮತ್ತು ಕಲಿಕೆಯ ಸಾಮಗ್ರಿಗಳಿವೆ. ಇದು ಅಂತಹ ಮಕ್ಕಳ ಕುರಿತಾದ ಅವರ ಕಾಳಜಿಯನ್ನು ತೋರಿಸುತ್ತದೆ. ಅವರು ಚೈತನ್ಯಶಾಲಿ ಹಾಗೂ ತಮ್ಮ ವೃತ್ತಿಗೆ ತುಂಬಾ ಬದ್ಧರು (ಸ್ನಾತಕೋತ್ತರ ಪದವಿ ಪಡೆದಿದ್ದು ಸದ್ಯಕ್ಕೆ ಕನ್ನಡ ಸಾಹಿತ್ಯದಲ್ಲಿ ಪಿಎಚ್.ಡಿ. ಮಾಡುತ್ತಿದ್ದಾರೆ. ಶೈಕ್ಷಣಿಕ ಒಲವುಗಳನ್ನು ಹೊಂದಿರುವ ಕೆಲವೇ ಕೆಲವು ಶಿಕ್ಷಕರಲ್ಲಿ ಒಬ್ಬರು) ಎನ್ನುವುದರಲ್ಲಿ ಸಂದೇಹವಿರಲಿಲ್ಲ. ಆದರೆ ದೈಹಿಕ ಶಿಕ್ಷೆಯನ್ನು ಅವರು ನೀಡುತ್ತಿದ್ದರೇ ಎಂದು ಅನೌಪಚಾರಿಕವಾಗಿ ಪ್ರಶ್ನಿಸಿದಾಗ ಅವರೂ ಕೂಡ ಯಾವುದೇ ಹಿಂಜರಿಕೆಯಿಲ್ಲದೇ ತಾವು ಹಾಗೆ ಮಾಡುತ್ತಿದ್ದುದಾಗಿ ಒಪ್ಪಿಕೊಂಡರು!

ಶಿಕ್ಷಕರು ಮಕ್ಕಳ ಕೆನ್ನೆಗೆ ಏಟು ನೀಡಿದ ಅಥವಾ ಕಠೋರ ಶಬ್ದಗಳನ್ನು ಉಪಯೋಗಿಸಿ ಬಯ್ದ ಅದೆಷ್ಟೋ ಉದಾಹರಣೆಗಳು ಖಾಸಗಿ ಅಥವಾ ಸರ್ಕಾರಿ ಎನ್ನುವ ಭೇದಭಾವವಿಲ್ಲದೇ ಎಲ್ಲಾ ತರಹದ ಶಾಲೆಗಳಲ್ಲಿಯೂ ಕಂಡುಬಂದಿವೆ.

## ದೈಹಿಕ ಶಿಕ್ಷೆಗಳನ್ನು ನೀಡುವುದರ ಹಿಂದಿನ ಸಮಾಜಶಾಸ್ತ್ರೀಯ ಆಧಾರ

ಕಳೆದ ಕೆಲವು ವಾರಗಳ ಅವಧಿಯಲ್ಲಿ ನಾನು ಒಡನಾಡಿದ ಮತ್ತು ನಡೆಸಿದ ಮಾತುಕತೆಗಳ ಪರಿಣಾಮವಾಗಿ ನನಗೆ ನಿರ್ದಿಷ್ಟವಾಗಿ ತಳಮಟ್ಟದಲ್ಲಿರುವ ಕಟುವಾಸ್ತವವು ಮನದಟ್ಟಾಯಿತು. ಆ ಕಾರಣ, ಶಿಕ್ಷಣತಜ್ಞರಾದ ಪ್ರೊ. ಕೃಷ್ಣಕುಮಾರ್ ಅವರು 2010ರಲ್ಲಿ ಅಂದರೆ, ಶಿಕ್ಷಣ ಹಕ್ಕು ಕಾಯಿದೆ ಸೆಕ್ಷನ್ 17ರ ಅಡಿಯಲ್ಲಿ ದೈಹಿಕ ಶಿಕ್ಷೆಯು ನಿಷೇಧಿಸಲ್ಪಟ್ಟ ಒಂದು ವರ್ಷದ ನಂತರ ಬರೆದ ಲೇಖನವೊಂದರ ಶೀರ್ಷಿಕೆಯು ನೆನಪಾಯಿತು. ಅವರು, 'ನಿಷೇಧವು ಕೇವಲ ಆರಂಭಿಕ ಹೆಜ್ಜೆಯಷ್ಟೇ. ಶಾಲೆಗಳಲ್ಲಿ ದೈಹಿಕ ಶಿಕ್ಷೆ ಇದ್ದೇ ಇರುತ್ತದೆ' ಎಂದು ಮೊದಲೇ ಎಚ್ಚರಿಕೆಯ ಮಾತನ್ನಾಡಿದ್ದರು. ಪ್ರೊ. ಕೃಷ್ಣಕುಮಾರ್ ಅವರು ಸಂಕ್ಷಿಪ್ತವಾಗಿ ಗುರುತಿಸಿರುವಂತೆ, ಶಿಕ್ಷಕರು ಮಕ್ಕಳ ಮೇಲೆ ಉಪಯೋಗಿಸುವ

ದೈಹಿಕ ಬಲವು ಪೋಷಕರು ಹಾಗೂ ಸಮುದಾಯವು ಅವರ ಮೇಲೆ ಹೊರಿಸಿರುವ ನೈತಿಕ ಅಧಿಕಾರದಲ್ಲಿ ಆಳವಾಗಿ ಬೇರೂರಿದೆ. ಹಾಗಾಗಿ ಪ್ರತೀ ಬಾರಿ ವಿದ್ಯಾರ್ಥಿಯೊಬ್ಬ ಶಿಕ್ಷಕರಿಂದ ಏಟು ತಿಂದಾಗಲೂ ಅವನು ಆ ಅಧಿಕಾರವನ್ನು ಮತ್ತಷ್ಟು ಬಲಗೊಳಿಸುತ್ತಿರುತ್ತಾನೆ ಎಂದರ್ಥ.

ನಮ್ಮ ದೇಶದಲ್ಲಿ ಆಳವಾಗಿ ಬೇರೂರಿದ ಸಾಮಾಜಿಕ ಪಿಡುಗುಗಳಲ್ಲಿ ಬಾಲ್ಯ ವಿವಾಹ ಮತ್ತು ಹೆಣ್ಣು ಶಿಶುಹತ್ಯೆಗಳು ಸುಮಾರು ಒಂದು ಶತಮಾನದಷ್ಟು ಹಿಂದೆಯೇ ಕಾನೂನಿನ ಪ್ರಕಾರ ನಿಷೇಧಿಸಲ್ಪಟ್ಟಿವೆ (ಈಗ ಹೆಣ್ಣು ಭ್ರೂಣಹತ್ಯೆಯ ರೂಪದಲ್ಲಿ ಅಸ್ತಿತ್ವದಲ್ಲಿದೆ). ಇವು ಈಗಲೂ ಒಳಗೊಳಗೇ ಅಲ್ಲಲ್ಲಿ ಆಚರಣೆಯಲ್ಲಿ ಉಳಿದುಕೊಂಡು ಬಂದಿವೆ. ಅದನ್ನು ನಡೆಸಿಕೊಂಡು ಹೋಗುವವರು ಖಂಡಿತವಾಗಿಯೂ ಅದನ್ನೊಂದು ಸಾಮಾಜಿಕ ಪಿಡುಗು ಎಂದು ಭಾವಿಸುವುದಿಲ್ಲ. ಇದು ಸಮಾಜ ಹಾಗೂ ಆಡಳಿತ ವ್ಯವಸ್ಥೆಗಳ ನಡುವೆ ಇರುವ ಕಂದಕವನ್ನು ಹಾಗೂ ಸಾಮಾಜಿಕವಾಗಿ ಒಪ್ಪಿತವಾದ ಪಿಡುಗುಗಳನ್ನು ತಡೆಗಟ್ಟುವ ವಿಷಯದಲ್ಲಿ ಸರ್ಕಾರದ ಇಚ್ಛೆಯು ನಡೆಯಲೇಬೇಕೆಂದಿಲ್ಲ ಎಂಬುದನ್ನು ನಮಗೆ ನೆನಪು ಮಾಡಿಕೊಡುತ್ತದೆ.

ದೈಹಿಕ ಶಿಕ್ಷೆಗೆ ಸಾಮಾಜಿಕ ಒಪ್ಪಿಗೆ ಇದೆ ಎನ್ನುವುದು ಬಹುತೇಕವಾಗಿ ತಿಳಿದಿರುವ ಸಂಗತಿ. ಬಾಲ್ಯದ ಅವಧಿಯಲ್ಲಿ ಕಲಿಕೆ ಮತ್ತು ಬೆಳವಣಿಗೆಗಳು ಹೇಗೆ ಉಂಟಾಗುತ್ತವೆ ಎನ್ನುವ ಕುರಿತಾಗಿ ಪುರಾತನ ಪರಿಕಲ್ಪನೆಯಿಂದ ಹೊಮ್ಮಿದ ಸಾಂಸ್ಕೃತಿಕ ಮನ್ನಣೆಯ ಹಿನ್ನೆಲೆ ಇದಕ್ಕಿದೆ. ಮಕ್ಕಳಿಗೆ ಏನೂ ತಿಳಿಯದು ಅಥವಾ ಅವರ ತಿಳುವಳಿಕೆ ಅತ್ಯಲ್ಪ ಪ್ರಮಾಣದ್ದು, ಹಾಗಾಗಿ ಅವರು ಭಾಷೆಯೂ ಸೇರಿದಂತೆ ಎಲ್ಲವನ್ನೂ ಕಲಿಯಲು ವಯಸ್ಕರನ್ನು ಅವಲಂಬಿಸುತ್ತಾರೆ ಎಂಬುದು ಸಾಮಾನ್ಯ ನಂಬಿಕೆ. ಮಕ್ಕಳು ತಪ್ಪುತಪ್ಪಾಗಿ ಕಲಿಯದಂತೆ ಹಾಗೂ ಅವರಿಂದ ತಪ್ಪುಗಳಾಗದಂತೆ ನೋಡಿಕೊಳ್ಳಲು ವಯಸ್ಕರು ನಿಗಾ ವಹಿಸಿ, ಆಗಿಂದಾಗ್ಗೆ ಮಧ್ಯಪ್ರವೇಶ ಮಾಡುವ ಅಗತ್ಯವಿದೆ. ಅದೂ ಅಲ್ಲದೆ ಮಗುವಿಗೆ ಕರ್ತೃತ್ವ ಶಕ್ತಿ ಅಥವಾ ಕಲಿಯಬೇಕು ಎನ್ನುವ ಬಯಕೆ ಸಹಜವಾಗಿ ಒಳಗಿನಿಂದ ಇರುವುದಿಲ್ಲ. ಅದಕ್ಕಾಗಿ ಮಗುವಿನ ಬೆಳವಣಿಗೆಯನ್ನು ಸರಿಯಾದ ಮಾರ್ಗದಲ್ಲಿ ರೂಪಿಸಲು, ಶಿಕ್ಷೆ ನೀಡಬಹುದಾದ ಪರಿಸರದಲ್ಲಿ ಶಿಸ್ತುಬದ್ಧ ಕ್ರಮವನ್ನು ಕೈಗೊಳ್ಳುವುದು ಅತ್ಯಂತ ಅಗತ್ಯ ಎಂದು ನಂಬಲಾಗಿದೆ.

**'ಯಶಸ್ವಿ' ಶಿಕ್ಷಕರಾಗುವಲ್ಲಿನ ವಿಪರ್ಯಾಸ**

ಮತ್ತೊಂದು ಆಳವಾಗಿ ಬೇರೂರಿದ ನಂಬಿಕೆಯೆಂದರೆ, ತಂದೆ ಮತ್ತು ಶಿಕ್ಷಕರ ಪಾತ್ರಗಳ ನಡುವೆ ಬಲವಾದ ಸಂಬಂಧವಿದೆ ಎನ್ನುವುದು. ಮಗುವಿನ

ವ್ಯಕ್ತಿತ್ವವನ್ನು ರೂಪಿಸುವ ತಂದೆಯ, ಸಾಂಪ್ರದಾಯಿಕ ಕಟ್ಟುನಿಟ್ಟಿನ ಪಾತ್ರವನ್ನು ಶಾಲೆಯಲ್ಲಿ ಶಿಕ್ಷಕರು ಅನುಕರಿಸುವುದೇ ಸರಿ ಎಂದು ಭಾವಿಸಲಾಗುತ್ತದೆ. ಪಿತೃಪ್ರಧಾನ ವ್ಯವಸ್ಥೆಯು ರೂಪಿಸಿದ ಶಿಕ್ಷಕಿಯರ ಸಾಮಾಜಿಕ ಅಸ್ತಿತ್ವದ ಸಂದರ್ಭದಲ್ಲಿಯೂ ಇದು ಅನ್ವಯಿಸುತ್ತದೆ. ಪುರುಷರಿಗೆ ಸಂಬಂಧಿಸಿದ ಪಾತ್ರ-ವರ್ತನೆಗೆ ಹೊಂದಿಕೊಳ್ಳುವಂತಿದ್ದಾಗ ಅವರು 'ಯಶಸ್ವಿ' ಶಿಕ್ಷಕರು ಎಂದು ಗುರುತಿಸಲ್ಪಡುತ್ತಾರೆ.

ಶಿಕ್ಷೆಗಳು ಸಾಧಾರಣವಾಗಿ ಶಾಲೆಯ ಸಾಂಸ್ಕೃತಿಕ ಮೌಲ್ಯಗಳ ಭಾಗವಾಗಿರುತ್ತವೆ. ಅವು ಒಂದೋ ನಿರೀಕ್ಷಿತ ವರ್ತನೆಗೆ ಮುಂಚಿತವಾಗಿಯೇ ತೋರಿದ ಪ್ರತಿಕ್ರಿಯೆ-ಗಳಾಗಿರುತ್ತವೆ ಅಥವಾ ಶಿಕ್ಷಕರು ಯಾವ ವರ್ತನೆಯನ್ನು ಅಸಹನೀಯ ಎಂದು ಪರಿಗಣಿಸುತ್ತಾರೋ ಅದಕ್ಕೆ ತೋರಿದ ಹರಿತ ಪ್ರತಿಕ್ರಿಯೆಯಾಗಿರುತ್ತವೆ. ಮೊದಲಿನ ರೀತಿಗೆ ಉದಾಹರಣೆಯೆಂದರೆ, ವಿರಾಮದ ಅವಧಿಯಲ್ಲಿ ಮುಖ್ಯೋಪಾಧ್ಯಾಯರು ಅಥವಾ ಹಿರಿಯ ಶಿಕ್ಷಕರು ಮೆಟ್ಟಿಲುಗಳನ್ನೇರುತ್ತಿರುವಾಗ ವಿದ್ಯಾರ್ಥಿಗಳು ದಡದಡನೆ ಜೋರಾಗಿ ಇಳಿದುಬಂದ ಕಾರಣ ಇನ್ನೇನು ಅವರು ಶಿಕ್ಷಕರಿಗೆ ತಾಕಿ, ಶಿಕ್ಷಕರು ಬಿದ್ದೇಬಿಡುತ್ತಿದ್ದರು ಎನ್ನುವ ಸನ್ನಿವೇಶದಲ್ಲಿ ಕೆಲವು ವಿದ್ಯಾರ್ಥಿಗಳಿಗೆ ಕೆನ್ನೆಗೆ ಏಟು ಕೊಡುವ ಸಾಧ್ಯತೆ. ವಿಶೇಷವಾಗಿ, ದೈಹಿಕ ಶಿಕ್ಷೆಯು ಆ ಶಾಲೆಯಲ್ಲಿ ಆಚರಣೆಯಲ್ಲಿದ್ದಾಗ ಇಂತಹ ಘಟನೆಗಳು ಸಂಭವಿಸುತ್ತವೆ. ಎರಡನೆಯ ರೀತಿಗೆ ಉದಾಹರಣೆಯೆಂದರೆ, ಮಕ್ಕಳು ಮಾತನಾಡುತ್ತಿದ್ದರು ಅಥವಾ ಎದುರುತ್ತರ ನೀಡಿದರು ಎಂಬ ಕಾರಣಕ್ಕಾಗಿ ಶಿಕ್ಷಕರು ಬಯ್ಗುಳ ಅಥವಾ ಏಟಿನ ಮೂಲಕ ಅವರಿಗೆ ನೋವುಂಟಾಗುವಂತೆ ಪ್ರತಿಕ್ರಿಯಿಸುವುದು. ಎರಡನೆಯ ಸನ್ನಿವೇಶದಲ್ಲಿ ಶಿಕ್ಷಕರು, ಮಕ್ಕಳು ಉಪಯೋಗಿಸುವ ಭಾಷೆಯು ಸರಿಯಾದದ್ದಲ್ಲವೆಂದು, ಅವಹೇಳನಕಾರಿಯೆಂದು ಭಾವಿಸುತ್ತಾರೆ. ಆದರೆ ಮಕ್ಕಳು ಬಳಸುವ ಭಾಷೆಯು ಅವರು ಮನೆಯಲ್ಲಿ ಮತ್ತು ನೆರೆಹೊರೆಯಲ್ಲಿ ನೋಡುವ, ಕೇಳುವ ಹಾಗೂ ಮಾಧ್ಯಮಗಳ ಮೂಲಕ ಕಲಿಯುವ ಭಾಷೆಯಾಗಿರುತ್ತದೆ ಎಂಬ ಸಂಗತಿಯನ್ನು ಅವರು ಅರಿತಿರುವುದಿಲ್ಲ, ಮಕ್ಕಳಿಗೆ ಪರ್ಯಾಯ ಮಾದರಿಯೊಂದನ್ನು ತೋರಿಸಿಕೊಡುವುದಿಲ್ಲ.

## ಶಾಲೆಗಳಲ್ಲಿ ಕಂಡುಬಂದ ಗಾಬರಿಗೊಳಿಸುವ ಪ್ರವೃತ್ತಿಗಳು

ಸಂಸತ್ತು, 2007ರಲ್ಲಿ ಕಾಯಿದೆಯೊಂದನ್ನು ತರುವ ಮೂಲಕ ಮಕ್ಕಳ ಹಕ್ಕುಗಳ ರಕ್ಷಣೆ ಕುರಿತಾದ ರಾಷ್ಟ್ರೀಯ ಆಯೋಗ(ಎನ್‌ಸಿಪಿಸಿಆರ್)ವನ್ನು ಹುಟ್ಟುಹಾಕಿತು. ನಮ್ಮ ದೇಶದಲ್ಲಿನ ಮಕ್ಕಳ ಹಕ್ಕುಗಳನ್ನು ರಕ್ಷಿಸುವ, ಪ್ರೋತ್ಸಾಹಿಸುವ ಹಾಗೂ ಸಮರ್ಥಿಸುವ ಉದ್ದೇಶದಿಂದ, ವಿಶೇಷವಾಗಿ 'ಶಾಲೆಗಳಲ್ಲಿ ದೈಹಿಕ

ಶಿಕ್ಷೆಯನ್ನು ನಿರ್ಮೂಲನ ಮಾಡುವುದಕ್ಕಾಗಿ' (ಇದು ಶಾಲೆಗೆ ಹೋಗುವ ಮಕ್ಕಳ ನಿತ್ಯದ ವಾಸ್ತವಿಕ ಚಿತ್ರಣವನ್ನು ನೀಡುತ್ತದೆ) ಈ ಆಯೋಗವನ್ನು ಸ್ಥಾಪಿಲಾಯಿತು. 2009–10 ರಲ್ಲಿ ಈ ಆಯೋಗವು ಕೈಗೊಂಡ ಅಧ್ಯಯನವು ಕೆಲವು ಆಘಾತಕಾರಿ ಅಂಶಗಳನ್ನು ಹೊರಹಾಕಿತು.

- **ಮೊದಲನೆಯದಾಗಿ,** ಏಳು ರಾಜ್ಯಗಳಿಂದ ಒಟ್ಟು 6,632 ಮಕ್ಕಳ ಮಾದರಿಯನ್ನು ಕಲೆಹಾಕಲಾಗಿತ್ತು. ಅವರಲ್ಲಿ ಶೇ.99.86 ಮಕ್ಕಳು ಒಂದಲ್ಲ ಒಂದು ರೀತಿಯ ಶಿಕ್ಷೆಯನ್ನು ಅನುಭವಿಸಿದ್ದರು.
- **ಎರಡನೆಯದಾಗಿ,** ಮಕ್ಕಳು ರಾಜ್ಯ ಸರ್ಕಾರದ, ಕೇಂದ್ರ ಸರ್ಕಾರದ ಅಥವಾ ಖಾಸಗಿ ಶಾಲೆ ಹೀಗೆ ಯಾವುದೇ ಶಾಲೆಗಳಲ್ಲಿ ಓದುತ್ತಿದ್ದರೂ ಕೂಡ ಶಿಕ್ಷೆಗೆ ಒಳಪಡುವ ಅಪಾಯ ಒಂದೇ ತೆರನಾಗಿತ್ತು.
- **ಮೂರನೆಯದಾಗಿ,** ಎಷ್ಟು ಬಾರಿ ಶಿಕ್ಷೆಗೆ ಒಳಗಾಗುತ್ತಾರೆ ಎಂಬುದನ್ನು ನೋಡಿದಾಗ, ವಿವಿಧ ತರಹದ ಶಾಲೆಗಳಲ್ಲಿನ ಗಂಡು ಮತ್ತು ಹೆಣ್ಣುಮಕ್ಕಳ ಅನುಭವಗಳಲ್ಲಿ ಅಂತಹ ವ್ಯತ್ಯಾಸವೇನೂ ಕಂಡುಬರಲಿಲ್ಲ. ಅಧ್ಯಯನದ ವೇಳೆ ಒಂದೇ ದಿನದ ಅಂತರದಲ್ಲಿ ಶೇ. 14 ಗಂಡುಮಕ್ಕಳು ಹಾಗೂ ಶೇ. 10 ಹೆಣ್ಣುಮಕ್ಕಳು ಶಿಕ್ಷೆ ಅನುಭವಿಸಿದ್ದರು. ಶೇ. 20 ಗಂಡುಮಕ್ಕಳು ಹಾಗೂ ಶೇ. 18 ಹೆಣ್ಣುಮಕ್ಕಳು, ದತ್ತಾಂಶವನ್ನು ಸಂಗ್ರಹಿಸಿದ ವಾರದಲ್ಲಿಯೇ ಶಿಕ್ಷೆಯು ಮರುಕಳಿಸಿದುದನ್ನು ನೆನಪಿಸಿಕೊಂಡರು.
- **ನಾಲ್ಕನೆಯದಾಗಿ,** ಅನುಭವಿಸಿದ ಹಾಗೂ ಒಪ್ಪಿಕೊಂಡ ಎಲ್ಲಾ ತರಹದ ಶಿಕ್ಷೆಗಳ ಶ್ರೇಣೀವಾರು ಹಂಚಿಕೆಯು ತೋರಿಸುವ ಹಾಗೆ ಮಾತಿನ ಮೂಲಕ ಮಕ್ಕಳ ಒಳಮನಸ್ಸಿನ ಮೇಲೆ ದಾಳಿ ಮಾಡುವ ಶಿಕ್ಷೆಯ ರೀತಿಯು ಎಲ್ಲಕ್ಕಿಂತ ಮುಂಚೂಣಿ ಸ್ಥಾನದಲ್ಲಿದೆ.

ಶೇ. 81ರಷ್ಟು ಮಕ್ಕಳನ್ನು ಅವರಿಗೆ ಕಲಿಯುವ ಸಾಮರ್ಥ್ಯವೇ ಇಲ್ಲ ಎಂದು ಸಾರಾಸಗಟಾಗಿ ಹೇಳುವುದರ ಮೂಲಕ ತಿರಸ್ಕರಿಸಲಾಗಿತ್ತು. ನಂತರದ ನಾಲ್ಕು ಸ್ಥಾನಗಳನ್ನು ಆಕ್ರಮಿಸಿದ ಶಿಕ್ಷೆಗಳೆಂದರೆ, ಬೆತ್ತದ ಹೊಡೆತ, ಕೆನ್ನೆಗೆ ಏಟು, ಬೆನ್ನಿನ ಮೇಲೆ ಗುದ್ದುವುದು, ಕಿವಿ ಹಿಂಡುವುದು. ಇದರಲ್ಲಿ ನಾಲ್ಕು ಶಿಕ್ಷೆಗಳು, ಶಿಕ್ಷಕರು ತೆಗೆದುಕೊಂಡ ಕ್ರಮದಿಂದಾಗಿ ನೇರವಾಗಿ ನೋವನ್ನು ನೀಡುವಂತಹದ್ದಾಗಿವೆ. ಅತ್ಯಂತ ಕ್ರೂರ ರೂಪದಲ್ಲಿ ದೈಹಿಕ ಆಘಾತವನ್ನುಂಟುಮಾಡುತ್ತವೆ. ಆ ಮೂಲಕ ಮಗುವಿನ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ತೀವ್ರ ಘಾಸಿಯನ್ನುಂಟುಮಾಡುತ್ತವೆ. ಚಿಕ್ಕ ಮಕ್ಕಳೂ ಕೂಡ ಏಕೆ ಇಂತಹ ಕಠಿಣ

ಶಿಕ್ಷೆಗಳಿಗೆ ಒಳಪಡುತ್ತಾರೆ ಎನ್ನುವುದಕ್ಕೆ ಹಲವಾರು ಕಾರಣಗಳಿವೆ. ಅದು 'ಶೈಕ್ಷಣಿಕ'ವಾಗಿರಬಹುದು (ಹೋಂವರ್ಕ್ ಮಾಡಿಲ್ಲ, ತರಗತಿಗೆ ನೋಟ್ ಪುಸ್ತಕ ತಂದಿಲ್ಲ ಅಥವಾ ಪ್ರಶ್ನೆಗೆ ಉತ್ತರಿಸಲು ಸಾಧ್ಯವಾಗಲಿಲ್ಲ). 'ಮಗುವಿಗೆ ಸಹಜವಾದ ವರ್ತನೆ ಮತ್ತು ಅಗತ್ಯವನ್ನು ವ್ಯಕ್ತಪಡಿಸಿದ್ದಕ್ಕಾಗಿ ಇರಬಹುದು' (ಮಾತನಾಡುವುದು, ಗುಟ್ಟಿನಲ್ಲಿ ತಿಂಡಿತಿನಿಸು ಸೇವಿಸುವುದು, ಶೌಚಾಲಯದಲ್ಲಿ ನಿಗದಿಪಡಿಸಿದ್ದಕ್ಕಿಂತ ಹೆಚ್ಚು ಸಮಯ ಕಳೆಯುವುದು) ಅಥವಾ 'ಶಾಲೆಯಲ್ಲಿನ ಕ್ರಮಬದ್ಧತೆಯನ್ನು ಅಸ್ತವ್ಯಸ್ತಗೊಳಿಸುವುದು' (ಸೂಕ್ತ ಸಮವಸ್ತ್ರವನ್ನು ಧರಿಸದೇ ಇರುವುದು, ಶಿಕ್ಷಕರು ಹೇಳಿದ ಸಾಮಗ್ರಿಗಳನ್ನು ತರದೇ ಇರುವುದು ಅಥವಾ ಬೆಳಗಿನ ಪ್ರಾರ್ಥನೆ ಮುಗಿದ ನಂತರ ತರಗತಿಗೆ ತಡವಾಗಿ ತಲುಪುವುದು) ಕೇವಲ 'ನಿರಂಕುಶ' ಅಥವಾ ವಿಲಕ್ಷಣ ಸ್ವಭಾವವೂ ಇರಬಹುದು (ಶಿಕ್ಷಕರಿಗೆ ಸಿಟ್ಟು ಬಂದಾಗ ಅಥವಾ ಯಾವುದೇ ಕಾರಣವಿಲ್ಲದಿದ್ದಾಗಲೂ ಹೊಡೆಯುವುದು).

## ಮಕ್ಕಳನ್ನು ಸಂತೋಷವಾಗಿಡುವುದರ ಹಿಂದಿನ ಆಳವಾದ ತಾರ್ಕಿಕ ವಿವರಣೆ

ಈ 'ಭಯ ತುಂಬಿದ ವಾತಾವರಣ'ದ ಪರಿಣಾಮ ಹಾಗೂ ಒತ್ತಡಗಳು ದೀರ್ಘಕಾಲದಲ್ಲಿ ತುಂಬಾ ತೀವ್ರವಾಗುತ್ತವೆ ಎನ್ನುವುದನ್ನು ಒತ್ತಿ ಹೇಳುವ ಅಗತ್ಯ ಇಲ್ಲ. ಶಿಕ್ಷಣಶಾಸ್ತ್ರಜ್ಞೆ ಹಾಗೂ ಮಕ್ಕಳ ಮನಃಶಾಸ್ತ್ರಜ್ಞೆಯಾದ ಕಮಲಾ.ವಿ.ಮುಕುಂದ ಅವರು ಮಗುವಿನ ಕಲಿಕೆಯ ಮೇಲೆ ಅತ್ಯಂತ ಉತ್ತಮ ರೀತಿಯಲ್ಲಿ ಸಂಶೋಧನೆ ಮಾಡಿ, 'ನೀನಿವತ್ತು ಶಾಲೆಯಲ್ಲಿ ಏನನ್ನು ಕೇಳಿದೆ?' ಎಂಬ ಪುಸ್ತಕವನ್ನು ಬರೆದಿದ್ದಾರೆ. ಈ ಪುಸ್ತಕದಲ್ಲಿ ಅವರು, ಶೈಕ್ಷಣಿಕ ಪರಿಸರದಲ್ಲಿ ವಿದ್ಯಾರ್ಥಿಗಳು ಅನುಭವಿಸುವ ಭಾವನೆಗಳು ವಿದ್ಯಾರ್ಥಿಗಳ ಪ್ರೇರಣೆ, ಉತ್ತೇಜನ, ಸಂವೇದನೆ, ಸಾಧನೆ, ದೈಹಿಕ ಹಾಗೂ ಮಾನಸಿಕ ಆರೋಗ್ಯದಂತಹ ಹಲವಾರು ಅಂಶಗಳನ್ನು ಪ್ರಭಾವಿಸುತ್ತವೆ ಎನ್ನುವುದರ ಮೇಲೆ ಬೆಳಕು ಚೆಲ್ಲುತ್ತಾರೆ. ವಿದ್ಯಾರ್ಥಿಯೊಬ್ಬ ಸಂತೋಷವಾಗಿಲ್ಲದಿದ್ದರೆ, ಚಿಂತೆಗೀಡಾಗಿದ್ದರೆ, ಕೋಪಗೊಂಡಿದ್ದರೆ ಕಲಿಸುವ ಪಾಠದಲ್ಲಿನ ಬಹಳಷ್ಟನ್ನು ಅರ್ಥಮಾಡಿಕೊಳ್ಳಲಾರ.

ಹೋಂವರ್ಕ್ ಮಾಡದೆ ಇರುವುದಕ್ಕೆ ಕಾಡುವ ಶಿಕ್ಷೆಯ ಭಯವು ಶಾಲಾಮಕ್ಕಳ ಒತ್ತಡದ ಪ್ರಮುಖ ಮೂಲ; ಶಾಲಾ ಶಿಕ್ಷಣವು ಕಲಿಕೆ ಮತ್ತು ಸಕಾರಾತ್ಮಕವಾದ ಭಾವನಾತ್ಮಕ ಅನುಭವಗಳನ್ನು ಒದಗಿಸುವುದರ ನಡುವೆ ಸಮತೋಲನವನ್ನು ಸಾಧಿಸುವ ಅಗತ್ಯವಿದೆ ಎಂಬುದರ ಕಡೆಗೆ ಕಮಲಾ ಮುಕುಂದ ಅವರು ನಮ್ಮ ಗಮನವನ್ನು ಸೆಳೆಯುತ್ತಾರೆ. ಒತ್ತಡವು ದೇಹ ಹಾಗೂ ಮೆದುಳಿಗೆ ಒಳ್ಳೆಯದಲ್ಲ, ಅಂತೆಯೇ ಶೈಕ್ಷಣಿಕ ಸಾಧನೆಗೂ ಅದು ಹಾನಿಕಾರಕ

ಎಂಬ ಸ್ಪಷ್ಟ ತೀರ್ಮಾನಕ್ಕೆ ಬರುತ್ತಾರೆ. ಏಕೆಂದರೆ, ಬೆಳವಣಿಗೆ ಹೊಂದುತ್ತಿರುವ ಮೆದುಳಿನ ಮೇಲೆ ನಡೆಸಿದ ಸಂಶೋಧನೆಯ ಪ್ರಕಾರ, ಒತ್ತಡ ಹಾಗೂ ಅದರಿಂದ ಹೆಚ್ಚುವ ಕಾರ್ಟಿಸೋಲ್‌ನ ಮಟ್ಟವು ವಾಸ್ತವದಲ್ಲಿ ಹಿಪ್ಪೋಕ್ಯಾಂಪಸ್‌ನಲ್ಲಿರುವ (ಮೆದುಳಿನ ಮಧ್ಯಭಾಗದಲ್ಲಿರುವ, ಹೊಸ ನೆನಪುಗಳನ್ನು ಸೃಷ್ಟಿಸಲು ಕಾರಣವಾದ ಸಣ್ಣ ರಚನೆ) ಬಹುಮುಖ್ಯ ನರತಂತುಗಳನ್ನು (ನ್ಯೂರಾನ್) ನಾಶಪಡಿಸುತ್ತದೆ. ಆ ಮೂಲಕ ಅನೇಕ ವರ್ಷಗಳ ನಂತರವೂ ಅದು ನೆನಪು ಮತ್ತು ಕಲಿಕೆಯ ಸಾಮರ್ಥ್ಯವನ್ನು ಊನಗೊಳಿಸಬಹುದು.

ಬಾಲ್ಯವೆಂದರೆ ಸಂತೋಷ ಹಾಗೂ ಆರೋಗ್ಯದಿಂದ ಕೂಡಿರಬೇಕು. ಆದರೆ ಕೆಲವು ಶೈಕ್ಷಣಿಕ ಸನ್ನಿವೇಶಗಳ ಜೊತೆಗೆ ಕಠೋರ ಶಿಸ್ತು ಅಥವಾ ಸಮಸ್ಯಾತ್ಮಕ ಸಂಬಂಧಗಳಂತಹ ಕೌಟುಂಬಿಕ ಸಂಕಷ್ಟಗಳು, ದೈಹಿಕ ಶಿಕ್ಷೆ, ಸ್ಪರ್ಧಾತ್ಮಕ ತರಗತಿ, ಪರಿಸರ ಮತ್ತು ನಿರಂತರವಾಗಿ ಇತರ ಸಹಪಾಠಿಗಳೊಂದಿಗೆ ಹೋಲಿಸಿ ನೋಡುವ ಮೌಲ್ಯಮಾಪನಗಳಂತಹ ಶಾಲಾ ಆಚರಣೆಗಳು ಬಾಲ್ಯದ ಹಳಿ ತಪ್ಪಿಸುತ್ತವೆ. ಆದ್ದರಿಂದ, ವಿದ್ಯಾರ್ಥಿಗಳ ಶೈಕ್ಷಣಿಕ ಕಲಿಕೆಗೆ ಕೊಡುವಷ್ಟೇ ಪ್ರಾಮುಖ್ಯತೆಯನ್ನು ಅವರ ಭಾವನಾತ್ಮಕ ಸ್ಥಿತಿಗೂ ಕೊಡಬೇಕೆಂಬ ಸಮಂಜಸ ವಾದವನ್ನು ಕಮಲಾ ಮುಕುಂದ ಮುಂದಿಡುತ್ತಾರೆ. ಮಕ್ಕಳು ಸಂತೋಷವಾಗಿರುವುದರಿಂದ ಅಂತಿಮ ಪರೀಕ್ಷೆಯಲ್ಲಿ ಹೆಚ್ಚಿನ ಅಂಕಗಳು ಬರುತ್ತವೆ ಎಂಬ ಕಾರಣದಿಂದಲ್ಲ, ಬದಲಿಗೆ ಮಕ್ಕಳನ್ನು ಶಾಲೆಯಲ್ಲಿ ಸಂತೋಷವಾಗಿಡಬೇಕೆಂಬ ಗುರಿಯತ್ತಲೇ ನಮ್ಮೆಲ್ಲ ಗಮನವನ್ನೂ ಕೇಂದ್ರೀಕರಿಸಬೇಕು ಎಂದು ಅವರು ಹೇಳುತ್ತಾರೆ.

## ದೀರ್ಘಕಾಲೀನ ಹೋರಾಟ ಜಾರಿಯಲ್ಲಿದೆ

ಕೊನೆಯದಾಗಿ ಹೇಳಬೇಕೆಂದರೆ, ದೈಹಿಕ ಶಿಕ್ಷೆಯನ್ನು ಕಾನೂನಿನ ಪ್ರಕಾರ ನಿಷೇಧಿಸುವುದು ದೀರ್ಘಕಾಲೀನ ಸಾಮಾಜಿಕ ಹೋರಾಟದ ಆರಂಭವಷ್ಟೇ. ಇದಕ್ಕೆ ಎರಡು ಕಾರಣಗಳಿವೆ. ಒಂದು, ಶಿಕ್ಷಕರ ವೃತ್ತಿಗಿರುವ ಕನಿಷ್ಠ ಮಟ್ಟದ ಸ್ಥಾನ-ಮಾನ. ಎರಡು, ಸೇವಾಪೂರ್ವ ಮತ್ತು ಸೇವಾನಿರತ ಕಾರ್ಯಕ್ರಮಗಳ ಮೂಲಕ ತಮ್ಮ ಬೆಳವಣಿಗೆಯನ್ನು ಸಾಧಿಸಲು ಶಿಕ್ಷಕರಿಗಿರುವ ಕಡಿಮೆ ಗುಣಮಟ್ಟದ ಅವಕಾಶಗಳು. ಪರೀಕ್ಷೆಗಳಲ್ಲಿ ಮಕ್ಕಳು ಚೆನ್ನಾಗಿ ಸಾಧನೆ ಮಾಡುವ ನಿಟ್ಟಿನಲ್ಲಿ ಅವರನ್ನು ಸಿದ್ಧಗೊಳಿಸಬೇಕಾದ ಶಿಕ್ಷಕರು ತೀವ್ರ ಒತ್ತಡಕ್ಕೆ ಒಳಗಾಗುತ್ತಾರೆ. ಇದು ಅವರನ್ನು ಶಿಕ್ಷೆ ನೀಡುವಂತೆ ಮಾಡುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ. ಮಗುಸ್ನೇಹಿಯಲ್ಲದ ಇಂತಹ ಆಚರಣೆಗಳಿಗೆ ಸಮಾಜವು ಸುಪ್ತವಾಗಿ ನೀಡುವ ಒಪ್ಪಿಗೆಯು ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸುತ್ತದೆ.

## ನಮ್ಮ ಸಂವಿಧಾನದ ಆಶೋತ್ತರಗಳು ಕನಸುಗಳಾಗಿಯೇ ಉಳಿದುಬಿಡಬಾರದು

ದೀರ್ಘಕಾಲೀನ ಪರಿಹಾರವು ಬಹುಶಃ ಎರಡು ವಿಧದ ಕಾರ್ಯತಂತ್ರಗಳನ್ನು ಅವಲಂಬಿಸಿರುತ್ತದೆ.

**ಮೊದಲನೆಯದಾಗಿ,** ಕಾರ್ಯಾಗಾರಗಳು ಮತ್ತು ಇನ್ನಿತರ ವಿಧಾನಗಳಲ್ಲಿ ವಯಸ್ಕರಿಗೆ ಅನ್ವಯಿಸುವ ಸಿದ್ಧಾಂತಗಳನ್ನು ಬಳಸಿ ಶಿಕ್ಷಕರಿಗಾಗಿ ದೃಷ್ಟಿಕೋನ ನಿರ್ಮಾಣ ಅಧಿವೇಶನಗಳನ್ನು ಕುಶಲತೆಯಿಂದ ರೂಪಿಸುವುದು. ಹೆಚ್ಚಿನ ಸಂದರ್ಭಗಳಲ್ಲಿ ಶಿಕ್ಷಕರ ನಿಜಜೀವನದ ದ್ವಂದ್ವ ಹಾಗೂ ಹತಾಶೆಗಳು ಮೇಲಿನ ಸ್ತರಕ್ಕೆ ಬಾರದೆ ಆಳದಲ್ಲಿಯೇ ಉಳಿದುಬಿಡುತ್ತವೆ. ಮಕ್ಕಳ ಶೈಕ್ಷಣಿಕ ಸಾಧನೆಯಲ್ಲಿನ ಕೊರತೆಗೆ ಸಮರ್ಥನೆಯಾಗಿ ಬಳಕೆಯಾಗುತ್ತವೆ. ಇವುಗಳ ಸುತ್ತ ಚರ್ಚೆ ನಡೆಯಬೇಕಾಗಿರುವುದು ಮುಖ್ಯ. ಅದಕ್ಕೆ ಆಧಾರವಾಗಿರುವ ಶಿಕ್ಷಕರ ಕಲ್ಪನೆಗಳನ್ನು ಕೆಲವು ಮಹತ್ವದ ಪ್ರಶ್ನೆಗಳೊಂದಿಗೆ ಮೇಳೈಸಬೇಕು. ಅವರೊಳಗೇ ಚರ್ಚೆ ನಡೆದು ಆಳವಾದ ಪರ್ಯಾಲೋಚನೆಗಳು ಹೊರಹೊಮ್ಮುವಂತೆ ಅನುಕೂಲಿಸಬೇಕು.

**ಎರಡನೆಯದಾಗಿ,** ಮಕ್ಕಳ ಮೂಲಭೂತ ಘನತೆಯ ಹಕ್ಕಿನ ಕುರಿತಾಗಿ ಪೋಷಕರು ಮತ್ತು ಸಮುದಾಯದ ಸದಸ್ಯರಲ್ಲಿ ಅರಿವು ಮೂಡಿಸಲು ಹಾಗೂ ದೈಹಿಕ ಶಿಕ್ಷೆಯನ್ನು ಸುಪ್ತವಾಗಿ ಒಪ್ಪುವುದರ ದುಷ್ಪರಿಣಾಮಗಳ ಮೇಲೆ ಬೆಳಕು ಚೆಲ್ಲಲು ವ್ಯವಸ್ಥಿತ ರೀತಿಯಲ್ಲಿ ಪ್ರಚಾರಾಂದೋಲನಗಳನ್ನು ಹಮ್ಮಿಕೊಳ್ಳುವುದು. ನಾವು ಒಟ್ಟಾರೆ ಒಂದು ಸಮಾಜವಾಗಿ ಇದನ್ನು ಶ್ರದ್ಧೆಯಿಂದ ಕೈಗೆತ್ತಿಕೊಳ್ಳದಿದ್ದರೆ, ನಮ್ಮ ಸಂವಿಧಾನದಲ್ಲಿ ಸೇರ್ಪಡೆಯಾದ ಅನುಚ್ಛೇದ 39(ಇ)– 'ಮಕ್ಕಳ ಎಳೆಯ ವಯಸ್ಸು ಶೋಷಣೆಗೊಳಗಾಗದಂತೆ ರಾಜ್ಯಾಡಳಿತವು ಹಂತಹಂತವಾಗಿ ಕೆಲಸ ಮಾಡುತ್ತಲೇ ಹೋಗಬೇಕು' ಹಾಗೂ ಅನುಚ್ಛೇದ 39(ಎಫ್)– 'ಮಕ್ಕಳು ಆರೋಗ್ಯಕರ ರೀತಿಯಲ್ಲಿ ಮತ್ತು ಸ್ವತಂತ್ರವಾದ, ಘನತೆಯಿಂದ ಕೂಡಿದ ಸ್ಥಿತಿಯಲ್ಲಿ ಬೆಳವಣಿಗೆ ಹೊಂದುವ ಹಾಗೆ ರಾಜ್ಯಾಡಳಿತವು ಅವಕಾಶ ಮತ್ತು ಸೌಲಭ್ಯಗಳನ್ನು ಹಂತಹಂತವಾಗಿ ಒದಗಿಸಬೇಕು...' –ಇವುಗಳ ಆಶೋತ್ತರಗಳು ಕನಸುಗಳಾಗಿಯೇ ಉಳಿದುಬಿಡುತ್ತವೆ.

■

ಬಿ ಫಸ್ಟ್, 19–09–2016



# ಕಥಾವನ ಭಿತ್ತಿ

ಕಥಾವನದಲ್ಲಿ ಪುಸ್ತಕಗಳ ಓದು ಮತ್ತು ಚಿತ್ರ ಬಿಡಿಸುವುದರಲ್ಲಿ ತಲ್ಲೀನರಾದ ಹೆಣ್ಣುಮಕ್ಕಳು. ಈ ಉತ್ಸವಗಳಲ್ಲಿ ಅನೇಕ ಸೃಜನಾತ್ಮಕ ಚಟುವಟಿಕೆಗಳ ಜೊತೆ ಪುಸ್ತಕ ಪ್ರಕಾಶಕರ ವತಿಯಿಂದ ಸದಭಿರುಚಿಯ ಪುಸ್ತಕಗಳ ಪ್ರದರ್ಶನ ಮತ್ತು ಮಾರಾಟವನ್ನೂ ಏರ್ಪಡಿಸುತ್ತಿರುವುದು ಮಕ್ಕಳಿಗೆ ಓದುವ ಅಭಿರುಚಿಯನ್ನು ಬೆಳೆಸುವಲ್ಲಿ ಸಹಾಯಕವಾಗಿದೆ.





**14ನೇ ನವೆಂಬರ್ 2016 –** ಅತ್ತಿಬೆಲೆಯ ಬಾಲಕರ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಹಮ್ಮಿಕೊಂಡ ಕಥಾವನ ಸಾಹಿತ್ಯೋತ್ಸವದಲ್ಲಿ ಮಕ್ಕಳು ಸ್ವಾರಸ್ಯಕರವಾಗಿ ಕಥೆ ಕೇಳುತ್ತಿರುವ ಚಿತ್ರ. ವರ್ಷಗಳಿಂದ ನಡೆಸಿಕೊಂಡು ಬಂದಿರುವ ಈ ಉತ್ಸವದಲ್ಲಿ ಮಕ್ಕಳು ಕಥೆಯ ಓದು, ಚಿತ್ರರಚನೆ, ಅಭಿನಯ, ಬೊಂಬೆಯಾಟಗಳಂಥ ವಿಭಿನ್ನ ಸಾಹಿತ್ಯಾಧಾರಿತ ಚಟುವಟಿಕೆಗಳಲ್ಲಿ ಪಾಲ್ಗೊಂಡು ಸಮೃದ್ಧ ಭಾಷಾ ವಾತಾವರಣದಲ್ಲಿ ಕಲಿಕೆಯಲ್ಲಿ ತೊಡಗುತ್ತಾರೆ. ಶಿಕ್ಷಕರಿಗೂ ಸಾಹಿತ್ಯವನ್ನು ಆಸ್ವಾದಿಸುವ ಅಧಿವೇಶನಗಳಿರುತ್ತವೆ.

ಶಿಕ್ಷಕರಿಗೆ ಓದುವ ಹವ್ಯಾಸ ಬೆಳೆಸಿಕೊಳ್ಳುವುದು, ಪರಿಣಾಮಕಾರಿಯಾಗಿ ಗ್ರಂಥಾಲಯ ಬಳಸಿಕೊಳ್ಳುವುದು ತುಂಬಾ ಕಷ್ಟವೇ ಎನ್ನಿಸುತ್ತದೆ. ಪಠ್ಯ-ಪುಸ್ತಕಗಳು, ಸಾಹಿತ್ಯ ಎನ್ನುವ ಕೃತಕ ವಿಭಜನೆ ಅವರ ಬೋಧನಾಕ್ರಮದಲ್ಲಿ ಬೇರೂರಿಹೋಗಿದೆ. ವ್ಯವಸ್ಥೆಯಲ್ಲಿನ ಕೆಲಸದ ಒತ್ತಡವೂ ಅವರನ್ನು ಪಠ್ಯಪುಸ್ತಕಗಳಾಚೆ ನೋಡಲಾಗದಂತೆ ಮಾಡಿಬಿಡುತ್ತದೆ.

# ಕಥಾವನ
## ಒಂದು ವಿಶಿಷ್ಟ ಸಾಹಿತ್ಯೋತ್ಸವ

ಕಥೆ ಅಂದರೆ ಯಾರಿಗೆ ಇಷ್ಟವಿಲ್ಲ? ಅವು ಎಲ್ಲರ ಹೃದಯಕ್ಕೂ ಹತ್ತಿರವೇ. ಕಥೆಗಳು ಚಿಕ್ಕವರು, ದೊಡ್ಡವರು ಎಲ್ಲರನ್ನೂ ಆಕರ್ಷಿಸುವ ಸಾಮರ್ಥ್ಯವನ್ನು ಹೊಂದಿವೆ ಹಾಗೂ ಅವರನ್ನು ತುದಿಗಾಲಲ್ಲಿ ನಿಲ್ಲುವಂತೆ ಮಾಡುತ್ತವೆ. ಹಾಗಾಗಿ ಎಲ್ಲರೂ ಕುತೂಹಲ, ಜಿಜ್ಞಾಸೆ ಮತ್ತು ಭಾವಪರವಶತೆಯನ್ನು ಉಂಟುಮಾಡುವ ಕಥೆಗಳನ್ನು ಓದುವುದು ಸಹಜ. ಹೀಗೆ ನಾವು ನಮ್ಮ ಏಕಾಂತದಲ್ಲಿ ನಮ್ಮದೇ ಆದ ಸಂತೋಷವನ್ನು ನಿರ್ಮಿಸಿಕೊಳ್ಳುತ್ತೇವೆ. ಕಥೆಯೊಳಗೆ ಹೊಕ್ಕು, ಕಥಾಹಂದರ ಮತ್ತು ಪಾತ್ರಗಳಿಗೆ ಎದುರಾಗಿ ಭಾಷೆ, ತಂತ್ರ ಮತ್ತು ನಿರೂಪಣಾ ಶೈಲಿಯ ಔಚಿತ್ಯವನ್ನು ಗ್ರಹಿಸುವುದೇ ಒಂದು ಸಂತೋಷಕರ ಹಾಗೂ ಹೃದ್ಯ ಅನುಭವ. ಇಂತಹ ತೊಡಗಿಕೊಳ್ಳುವಿಕೆಯು ಮೊದಲಿಗೆ ಅಜ್ಜಿಯ ಅಥವಾ ಚಂದಮಾಮದ ಕಥೆಗಳಿಂದ ಆರಂಭವಾಗಬಹುದು. ಆದರೆ, ಅದು ನಮ್ಮನ್ನು ಮುಂದೆ ಗಂಭೀರ ಓದಿಗೂ ಹಚ್ಚಬಹುದು. ಒಂದೊಮ್ಮೆ ಪೋಷಕರು ಹಾಗೂ ಶಿಕ್ಷಕರು ಓದಿನ ಹವ್ಯಾಸವನ್ನು ಬೆಳೆಸಿಕೊಳ್ಳಲು ಬೇಕಾದ ಸೂಕ್ತ ಅವಕಾಶವನ್ನು ಮಕ್ಕಳಿಗೆ ತುಂಬಾ ಚಿಕ್ಕ ವಯಸ್ಸಿನಲ್ಲಿಯೇ ಒದಗಿಸಿದರೆ, ಅವರದನ್ನು ಜೀವನಪರ್ಯಂತ ಜತನದಿಂದ ಮುಂದುವರೆಸುವ ಸಂಭವ ಹೆಚ್ಚು.

ಆದಾಗ್ಯೂ ಇಂದಿನ ನಮ್ಮ ಗಡಿಬಿಡಿಯ ಹಾಗೂ ಯಾಂತ್ರಿಕ ಜೀವನ ಶೈಲಿಯುಲ್ಲಿ, ನಿರಂತರವಾಗಿ ದಾಳಿ ಮಾಡುತ್ತಿರುವ ವಿವಿಧ ಆಕರ್ಷಣೆಗಳ

ನಡುವೆ ಪುಸ್ತಕಗಳನ್ನು ಎರವಲು ಪಡೆಯುವ ಅಥವಾ ಖರೀದಿಸುವ ಹಾಗೂ ಓದುವ ಅಭ್ಯಾಸವೇ ಮಕ್ಕಳಲ್ಲಿ ತುಂಬಾ ಕಡಿಮೆಯಾಗುತ್ತಿದೆ ಎಂದು ಮಕ್ಕಳ ಬೆಳವಣಿಗೆಯನ್ನು ಜಾಗರೂಕತೆಯಿಂದ ಗಮನಿಸುತ್ತಿರುವವರು ಗೋಳಾಡುತ್ತಾರೆ. ಮಕ್ಕಳಲ್ಲಿ ಓದುವ ಸಂಸ್ಕೃತಿಯನ್ನು ಬೆಳೆಸಬೇಕಾದ ಶಿಕ್ಷಕರಲ್ಲಿಯೇ ಅದು ಕ್ಷೀಣಿಸುತ್ತಿದೆ (ಭಾಷೆಯನ್ನು ಬೋಧಿಸುವವರೂ ಸೇರಿ) ಎನ್ನುವ ಸಂಗತಿಯು ದಿಗಿಲು ಹುಟ್ಟಿಸುವಂತಹದ್ದು. ಈ ಖೇದಕಾರಿ ಬೆಳವಣಿಗೆಯ ಕಾರಣಗಳನ್ನು ಕಂಡುಹಿಡಿಯುವ ಯಾವುದೇ ಪ್ರಯತ್ನಗಳು ಕಂಡುಬರುತ್ತಿಲ್ಲ. ಜೊತೆಗೆ, ಶಿಕ್ಷಕರಲ್ಲಿ ಓದುವ ಹವ್ಯಾಸವನ್ನು ಹೇಗೆ ರೂಢಿಸಬೇಕು, ಅವರ ಮೂಲಕ ಅದನ್ನು ಹೇಗೆ ವ್ಯವಸ್ಥಿತ ರೀತಿಯಲ್ಲಿ ಮಕ್ಕಳಲ್ಲಿಯೂ ಬೆಳೆಸಬೇಕು ಎನ್ನುವದರ ಕುರಿತು ಸಾಕಷ್ಟು ಪ್ರಯತ್ನಗಳು ನಡೆಯುತ್ತಿಲ್ಲ.

ಶಾಲೆಗಳಲ್ಲಿ ಹಲವಾರು ತುರ್ತು ಹಾಗೂ ಆ ಕ್ಷಣಕ್ಕೆ ನಿಭಾಯಿಸಬೇಕಾದ ಸವಾಲುಗಳಿರುತ್ತವೆ. ಬಹಳಷ್ಟು ಶಿಕ್ಷಕರಿಗೆ ಓದುವ ಹವ್ಯಾಸವನ್ನು ಬೆಳೆಸಿಕೊಳ್ಳುವುದು ಹಾಗೂ ಗ್ರಂಥಾಲಯವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುವುದು ತುಂಬಾ ಕಷ್ಟವೇ ಎನ್ನಿಸುತ್ತದೆ. ಪಠ್ಯಪುಸ್ತಕಗಳು ಹಾಗೂ ಸಾಹಿತ್ಯ ಎನ್ನುವ ಕೃತಕ ವಿಭಜನೆಯು ಅವರ ಬೋಧನಾಕ್ರಮದಲ್ಲಿ ಆಳವಾಗಿ ಬೇರೂರಿಹೋಗಿದೆ. ವ್ಯವಸ್ಥೆಯಲ್ಲಿನ ಕೆಲಸದ ಒತ್ತಡವು ಅವರನ್ನು ಪಠ್ಯಪುಸ್ತಕಗಳಾಚೆ ನೋಡಲಾಗದಂತೆ ಮಾಡಿಬಿಡುತ್ತದೆ. ವಿಶಾಲಮಟ್ಟದ ಸಾಮಾಜಿಕ ಹಾಗೂ ಆರ್ಥಿಕ ವೈಪರೀತ್ಯಗಳು ಅವರ ದೃಷ್ಟಿಕೋನ ಮತ್ತು ಗ್ರಹಿಕೆಯನ್ನು ಪರೀಕ್ಷೆ, ಫಲಿತಾಂಶ ಹಾಗೂ ಸ್ಪರ್ಧಾತ್ಮಕ ಜಗತ್ತಿಗೆ ಮಕ್ಕಳನ್ನು ಸಿದ್ಧಪಡಿಸುವುದಕ್ಕೆ ಸೀಮಿತಗೊಳಿಸಿವೆ. ಅವರು ದೈನಂದಿನ ಬದುಕಿನ ಒತ್ತಡದಲ್ಲಿ ತಮ್ಮ ಅಸ್ತಿತ್ವ, ಗುರುತು ಹಾಗೂ ಸೃಜನಶೀಲತೆಯನ್ನೇ ಕಳೆದುಕೊಳ್ಳುತ್ತಿದ್ದಾರೆ. ಇದರ ಸಾಂಸ್ಕೃತಿಕ ಪರಿಣಾಮವೆಂದರೆ ಮನೆಗಳಲ್ಲಿ, ಶಾಲೆಗಳಲ್ಲಿ ಮತ್ತು ಸಮುದಾಯಗಳಲ್ಲಿ ಸಾಹಿತ್ಯಕ ಒಡನಾಟಕ್ಕೆ ಹಾಗೂ ಖುಷಿಯ ಓದಿಗೆ ಬೇಕಾದ ಪ್ರಶಸ್ತ ವಾತಾವರಣವನ್ನು ನಿರ್ಲಕ್ಷಿಸಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಮಕ್ಕಳ ವಾರ್ಷಿಕ ಸಾಹಿತ್ಯೋತ್ಸವ, 'ಕಥಾವನ'ವನ್ನು ನಮ್ಮ ಸಂಸ್ಥೆಯ ಆಶ್ರಯದಲ್ಲಿ ಕಳೆದ ಐದು ವರ್ಷಗಳಿಂದ ನಡೆಸಿಕೊಂಡು ಬರಲಾಗುತ್ತಿದೆ. ಇದು, ಸಮೃದ್ಧ ಸಾಹಿತ್ಯಿಕ ಅನುಭವವನ್ನು ಹೊಂದಲು ಅನುಕೂಲಕರವಾದ ವಾತಾವರಣವನ್ನು ಒದಗಿಸುವ ಮೂಲಕ ಶಿಕ್ಷಕರು ಮತ್ತು ಮಕ್ಕಳಲ್ಲಿ ಓದುವ ಹವ್ಯಾಸವನ್ನು ಮತ್ತೆ ಚಿಗುರಿಸುವ ಮುಖ್ಯ ವೇದಿಕೆಗಳಲ್ಲಿ ಒಂದು. ಸಾಹಿತ್ಯದಲ್ಲಿ ಆಸಕ್ತಿಯನ್ನು ಹುಟ್ಟಿಸುವುದು, ಓದುವ ಹವ್ಯಾಸವನ್ನು ಬೆಳೆಸುವುದು ಹಾಗೂ ತನ್ನದೇ ಆದ ಸಾಹಿತ್ಯಿಕ ಸಂವೇದನೆಗಳನ್ನು ಬೆಳೆಸಿಕೊಳ್ಳಲು ನೆರವಾಗುವುದು ಇವು ಉತ್ಸವದ

ಮುಖ್ಯ ಉದ್ದೇಶಗಳಲ್ಲಿ ಕೆಲವು. ಗಮನವನ್ನು ಮುಖ್ಯವಾಗಿ ಬೆಂಗಳೂರು ಹಾಗೂ ಸುತ್ತಮುತ್ತಲಿನ ಸರ್ಕಾರಿ ಶಾಲೆಗಳ ಮೇಲೆ ಕೇಂದ್ರೀಕರಿಸಲಾಗಿದೆ. ಬಹುತೇಕವಾಗಿ ಎಲ್ಲ ಕಾರ್ಯಕ್ರಮಗಳನ್ನೂ ಕನ್ನಡದಲ್ಲಿಯೇ ನಡೆಸಲಾಗುತ್ತದೆ. ಇಂದು ನೂರಾರು ಶಾಲೆಗಳಲ್ಲಿ ಕಂಡುಬರುತ್ತಿರುವ ಮತ್ತೊಂದು ಅಂಶವೆಂದರೆ, ಸಾಕಷ್ಟು ಪ್ರಮಾಣದ ಗ್ರಂಥಾಲಯ ಸಂಪನ್ಮೂಲಗಳನ್ನು ಹೊಂದಿದ್ದರೂ ಅವರಿಗೆ ಆ ಸಂಪನ್ಮೂಲಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವುದು ಹೇಗೆ ಎಂಬುದರ ಬಗ್ಗೆ ಸರಿಯಾದ ಮಾರ್ಗದರ್ಶನದ ಕೊರತೆಯಿರುವುದು. ಇತ್ತೀಚೆಗೆ ಅತ್ತಿಬೆಲೆ ಮತ್ತು ಸರ್ಜಾಪುರಗಳ ಸುತ್ತಮುತ್ತ ಆಯೋಜಿಸಲಾಗಿದ್ದ, ಕಥಾವನದ ಸತತ ಐದನೇ ಆವೃತ್ತಿಯಲ್ಲಿ, ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮಕ್ಕಳು ಮತ್ತು ಶಿಕ್ಷಕರಿಬ್ಬರಿಗೂ ಉಪಯುಕ್ತವಾಗುವ ರೀತಿಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

## ದೊಡ್ಡ ಪ್ರಮಾಣದಲ್ಲಿ ನಡೆಯುವ ಮಕ್ಕಳ ಕಾರ್ಯಕ್ರಮ

ಕಳೆದ ತಿಂಗಳು ಅತ್ತಿಬೆಲೆ ಮತ್ತು ಅದರ ಸುತ್ತಮುತ್ತಲಿನ ಸರ್ಕಾರಿ ಶಾಲೆಗಳ ಸುಮಾರು 1100 ಮಕ್ಕಳು, ನಿಜಕ್ಕೂ ನೆನಪಿಟ್ಟುಕೊಳ್ಳುವಂತಹ ಮಕ್ಕಳ ದಿನಾಚರಣೆಯೊಂದರಲ್ಲಿ ಪಾಲ್ಗೊಂಡರು. ವಿವಿಧ ಸಂಪನ್ಮೂಲ ಸಂಸ್ಥೆ ಹಾಗೂ ವ್ಯಕ್ತಿಗಳ ಸಹಯೋಗದಲ್ಲಿ ಸುಮಾರು ಹದಿನೈದು ರೀತಿಯ ಚಟುವಟಿಕೆಗಳನ್ನು ಆಯೋಜಿಸಲಾಗಿತ್ತು. ಸಾಹಿತ್ಯಿಕ ಹಾಗೂ ಸೌಂದರ್ಯಾತ್ಮಕ ಸಂವೇದನೆಗಳನ್ನು ಉತ್ತಮಗೊಳಿಸುವ ಮತ್ತು ಸಂಸ್ಕರಿಸುವ ಗುರಿಯನ್ನು ಹೊಂದಿದ್ದ ಚಟುವಟಿಕೆಗಳಲ್ಲಿ ಅವರು ಮಕ್ಕಳನ್ನು ತೊಡಗಿಸಿದರು. ಅಲ್ಲಿ ತೆರೆದ ಮಳಿಗೆಗಳಲ್ಲಿ ಗುಂಪು ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದ್ದು ಸುಮಾರು ಮೂವತ್ತು ಮಕ್ಕಳನ್ನು ಹೊಂದಿದ್ದ ವಿವಿಧ ಗುಂಪುಗಳು ಅದರಲ್ಲಿ ಭಾಗವಹಿಸಿದವು. ಮಕ್ಕಳಿಗೆಂದು ವಿನ್ಯಾಸಗೊಳಿಸಲಾದ ಚಟುವಟಿಕೆಗಳ ಕುರಿತು ಕೆಲ ವಿವರಣೆಯನ್ನು ನೀಡಿದರೆ, ಅವುಗಳಲ್ಲಿ ಮಕ್ಕಳ ತೊಡಗಿಕೊಳ್ಳುವಿಕೆಯ ಚಿತ್ರಣ ದೊರೆಯುತ್ತದೆ.

- **ಚಿತ್ರಕಥೆ, ಹಾಡು ಮತ್ತು ಸೂತ್ರದ ಗೊಂಬೆಗಳನ್ನು ಬಳಸಿ ಕಥೆ ಹೇಳುವುದು:** ಅಲ್ಲಿನ ಕಥಾಗೋಷ್ಠಿಗಳಲ್ಲಿ ಕಥೆ ಪುಸ್ತಕ, ಹಾಡು ಮತ್ತು ಸೂತ್ರದ ಗೊಂಬೆಗಳೂ ಇದ್ದವು. ಮಕ್ಕಳನ್ನು ಈ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವುದರ ಮೂಲಕ ಸುಗಮಕಾರರು 'ಪಂಚರಂಗಿ' ಎನ್ನುವ ಹಕ್ಕಿಯ ಕಥೆಯನ್ನು ಸೂಕ್ತ ಮುಖಭಾವ, ಹಾವಭಾವ ಹಾಗೂ ಸೂತ್ರದ ಗೊಂಬೆಗಳನ್ನು ಬಳಸಿ ನಿರೂಪಿಸಿದರು. ಮಕ್ಕಳು ಕಥೆಯನ್ನು ಕೇಳಿ ಮುಗಿದ ಮೇಲೆ ಅವರಿಗೆ

ಕೇವಲ ಬಾಹ್ಯ ರೇಖೆಗಳಿರುವ ಹಕ್ಕಿಯ ಚಿತ್ರವೊಂದನ್ನು ಕೊಟ್ಟು ಐದು ಬಣ್ಣಗಳನ್ನು ಬಳಸಿ ಅದಕ್ಕೆ ಬಣ್ಣ ತುಂಬುವಂತೆ ಹೇಳಲಾಯಿತು. ಹಕ್ಕಿಗೆ ಒಂದು ಹೆಸರನ್ನು ಕೊಡುವಂತೆ ಹಾಗೂ ಹಕ್ಕಿ ಎಲ್ಲಿ ವಾಸಿಸುತ್ತದೆ, ಏನನ್ನು ತಿನ್ನುತ್ತದೆ ಇತ್ಯಾದಿಗಳನ್ನು ಉಲ್ಲೇಖಿಸುವ ಸಂಕ್ಷಿಪ್ತ ವಿವರಣೆಯೊಂದನ್ನು ಬರೆಯುವಂತೆ ಕೂಡ ಹೇಳಲಾಗಿತ್ತು. ಮಕ್ಕಳು ಚಟುವಟಿಕೆಯಲ್ಲಿ ತುಂಬಾ ಸಂತೋಷದಿಂದ ತೊಡಗಿಕೊಂಡಂತೆ ಕಂಡರು. ಒಬ್ಬ ಹುಡುಗ ಮತ್ತು ಒಂದು ಮರದ ಕಥೆಯನ್ನೂ ಕೂಡ ಇದೇ ರೀತಿಯಲ್ಲಿ ಹೇಳಲಾಯಿತು. ಕಥೆಯ ಕೊನೆಯಲ್ಲಿ ಮಕ್ಕಳಿಗೆ ಬಿಳಿಯ ಹಾಳೆಗಳನ್ನು ಕೊಡಲಾಯಿತು. ಅವುಗಳಿಗೆ ಹಸಿರು ಬಣ್ಣವನ್ನು ತುಂಬಿ ಮರದ ಆಕಾರದಲ್ಲಿ ಮಡಚಬಹುದಿತ್ತು. ಇದನ್ನೂ ಕೂಡ ಮಕ್ಕಳು ತುಂಬ ಇಷ್ಟಪಟ್ಟರು.

- **ರಂಗ ಚಟುವಟಿಕೆ:** ಮೂವತ್ತು ಮಕ್ಕಳ ಒಂದು ಗುಂಪನ್ನು ಎರಡು ಗುಂಪುಗಳಾಗಿ ವಿಭಜಿಸಲಾಯಿತು. ಎರಡೂ ಗುಂಪುಗಳಿಗೂ ಕಥೆಯೊಂದನ್ನು ಸೂಕ್ತ ಅಭಿವ್ಯಕ್ತಿ ಹಾಗೂ ಅನುವಾದದೊಡನೆ ಓದಿ ಹೇಳಲಾಯಿತು. ಕಥೆಯನ್ನು ಕೇಳಿದ ನಂತರ, ಅದರೊಳಗಿನ ತಮಗಿಷ್ಟದ ಪಾತ್ರಗಳನ್ನು ಅಭಿನಯಿಸಲು ಆರಿಸಿಕೊಳ್ಳುವಂತೆ ಮಕ್ಕಳಿಗೆ ಬಿಡಲಾಯಿತು. ನಂತರ ಅವರಿಗೆ ಆ ಆಯ್ದ ಪಾತ್ರಗಳಿಗೆ ಅಗತ್ಯವಾದ ವೇಷಭೂಷಣಗಳನ್ನು ಹಾಗೂ ಪರಿಕರಗಳನ್ನು ಕೊಡಲಾಯಿತು. ಸುಗಮಕಾರರ ಅಲ್ಪಸ್ವಲ್ಪ ನೆರವಿನೊಂದಿಗೆ ಅವರು ಕಥೆಯನ್ನು ನಾಟಕವಾಗಿ ಅಭಿನಯಿಸಿದರು. ಆರಂಭದಲ್ಲಿ ಸ್ವಲ್ಪ ಸಂಕೋಚ ಹಾಗೂ ಹಿಂಜರಿಕೆಯಿದ್ದರೂ ಅವರು ಅದನ್ನು ಬೇಗನೆ ಗೆದ್ದು ತಮ್ಮ ಪಾತ್ರಗಳನ್ನು ಚೆನ್ನಾಗಿ ಅಭಿನಯಿಸಿದರು. ಮಕ್ಕಳು ಚಟುವಟಿಕೆಯಲ್ಲಿ ಸಂತೋಷದಿಂದ ತೊಡಗಿದ್ದಂತೆ ತೋರಿತು.

- **ಕಥೆ ಕಥೆ ಕಾರಣ:** ಈ ಗುಂಪಿನಲ್ಲಿ ಏಳು ಸದಸ್ಯರಿದ್ದರು. ಅವರು ಮಕ್ಕಳನ್ನು ವಿವಿಧ ರೀತಿಗಳಲ್ಲಿ ತೊಡಗಿಕೊಳ್ಳುವಂತೆ ಮಾಡಿದರು. ಪ್ರಸಿದ್ಧ ಕವಿ ಎಚ್. ಎಸ್. ವೆಂಕಟೇಶಮೂರ್ತಿಯವರು ಬರೆದ ಹಾಡುಗಳನ್ನು ಕಲಾವಿದರು ಇಂಪಾಗಿ ಹಾಡಿದರು ಹಾಗೂ ಮಕ್ಕಳು ಅದನ್ನು ಒಟ್ಟಾಗಿ ಅನುಕರಿಸಿದರು. ರಾಮಾಯಣ ಮತ್ತು ಮಹಾಭಾರತಗಳಿಂದ ತೆಗೆದುಕೊಂಡ ಕಥೆಗಳ ನಿರೂಪಣೆ, ಚಿತ್ರಗಳನ್ನು ನೋಡಿ ಅಭಿನಯದ ಕಥೆಗಳ ರಚನೆ, ಜನಪ್ರಿಯ ಹಾಡುಗಳ ಸಾಹಿತ್ಯವನ್ನು ಬದಲಿಸಿ ಶಿಶುಸ್ನೇಹಿ ಸಾಹಿತ್ಯದ ಅಳವಡಿಕೆ ಇವು ಇನ್ನಿತರ ವಿಧಾನಗಳು. ಮಕ್ಕಳ ಉತ್ಸಾಹ ಮತ್ತು ಚೈತನ್ಯದ ಮಟ್ಟ ಅತ್ಯುತ್ತಮವಾಗಿತ್ತು. ಊಟದ ನಂತರ, ಬಹುತೇಕ ಮಕ್ಕಳನ್ನು ಈ ಗುಂಪು ತೊಡಗಿಸಿಕೊಂಡಿತು.

## ಶಿಕ್ಷಕರಿಗಾಗಿ ಕಾರ್ಯಾಗಾರ

■ **ಓದುಗರಾಗಿ ಶಿಕ್ಷಕರು:** ಶಿಕ್ಷಕರು ಓದಿನ ಕುರಿತಾದ ತಮ್ಮ ಪ್ರೀತಿಯನ್ನು ಮತ್ತೆ ಜೀವಂತಗೊಳಿಸಿಕೊಳ್ಳಲು ಹಾಗೂ ಸಾಹಿತ್ಯವನ್ನು ಅಸ್ವಾದಿಸಲು, ಆ ಕುರಿತು ಚರ್ಚೆಗೆ ಬೇಕಾಗುವ ಕೌಶಲ್ಯವನ್ನು ಹರಿತಗೊಳಿಸಿಕೊಳ್ಳಲು ಅನುವಾಗುವ ನಿಟ್ಟಿನಲ್ಲಿ 'ಓದುಗರಾಗಿ ಶಿಕ್ಷಕರು' ಎಂಬ ವಿಷಯದ ಕುರಿತು ಒಂದು ದಿನದ ಎರಡು ಕಾರ್ಯಾಗಾರಗಳನ್ನು ವಿನ್ಯಾಸಗೊಳಿಸಲಾಗಿತ್ತು. ಒಂದು ಕಾರ್ಯಾಗಾರವು ಇಂಗ್ಲಿಷ್ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ನಡೆದರೆ, ಇನ್ನೊಂದು ಸಂಪೂರ್ಣವಾಗಿ ಕನ್ನಡದಲ್ಲಿಯೇ ಇತ್ತು. ಈ ಅಧಿವೇಶನಗಳು, ಭಾಗವಹಿಸಿದ ಹಲವಾರು ಶಿಕ್ಷಕರು ಹಿಂದೆ ತಾವು ಓದನ್ನು ಇಷ್ಟಪಡುತ್ತಿದ್ದ ಹಾಗೂ ಅದರಲ್ಲಿ ಆನಂದವನ್ನು ಪಡೆಯುತ್ತಿದ್ದ ದಿನಗಳನ್ನು ನೆನಪಿಸಿಕೊಳ್ಳುವಂತೆ ಮಾಡಿದವು. ಅನುಭವಿ ಸಂಪನ್ಮೂಲ ವ್ಯಕ್ತಿಗಳು, ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪ್ರತ್ಯೇಕವಾಗಿ ನಡೆಸಿಕೊಟ್ಟ ಅಧಿವೇಶನಗಳ ಅವಧಿಯಲ್ಲಿ, ಸಣ್ಣ ಸಣ್ಣ ಗುಂಪುಗಳಾಗಿ ಅದರಲ್ಲಿ ಭಾಗವಹಿಸಿದ್ದ ಶಿಕ್ಷಕರು ಆಯಾ ಭಾಷೆಗಳಲ್ಲಿನ ಸಣ್ಣ ಕಥೆಗಳನ್ನು ಓದಿ ಚರ್ಚಿಸಿದರು.

ಕೊರಡ್ಕಲ್ ಶ್ರೀನಿವಾಸರಾವ್ ಅವರು ಬರೆದ 'ಧಣಿಯರ ಸತ್ಯನಾರಾಯಣ' ಎಂಬ ಕನ್ನಡದ ಕಥೆಯನ್ನು ಓದುವುದಕ್ಕೆ ಆರಿಸಿಕೊಳ್ಳಲಾಗಿತ್ತು. 1930ರ ದಶಕದ ಕೊನೆಯ ಭಾಗದಲ್ಲಿ ನಡೆಯುವ ಈ ಕಥೆಯು ಬಡ ರೈತವರ್ಗವು ಹೇಗೆ ಭೂಮಾಲೀಕರ ಶೋಷಣೆಗೆ ಒಳಗಾಗುತ್ತದೆ ಎಂಬುದನ್ನು ಸಶಕ್ತವಾಗಿ ಓಡಿದಿಡುತ್ತದೆ. ಇಂಗ್ಲಿಷ್ ಭಾಷೆಯ ಅಧಿವೇಶನದಲ್ಲಿ ಭಾಗವಹಿಸಿದ್ದವರು ರವೀಂದ್ರನಾಥ ಟಾಗೋರರ 'ದ ಎಕ್ಸರ್‌ಸೈಜ್ ಬುಕ್'ನ್ನು ಓದಿ ಚರ್ಚಿಸಿದರು. ಸಂಪನ್ಮೂಲ ವ್ಯಕ್ತಿಗಳು ಭಾಗವಹಿಸಿದ್ದವರನ್ನು ಚಟುವಟಿಕೆಗಳಲ್ಲಿ ಸೂಕ್ಷ್ಮವಾದ ರೀತಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿದರು. ಇದು ಅವರಿಗೆ ಪಠ್ಯವೊಂದನ್ನು ಸೂಕ್ಷ್ಮವಾಗಿ, ಹತ್ತಿರದಿಂದ ಹೇಗೆ ಓದಬೇಕು ಹಾಗೂ ತಮ್ಮದೇ ಆದ ತೀರ್ಮಾನಗಳಿಗೆ ಹೇಗೆ ಬರಬೇಕು, ಅರ್ಥವಿವರಣೆಗಳನ್ನು ಮಾಡಬೇಕು ಎಂಬುದರ ಕುರಿತು ಮಾರ್ಗದರ್ಶನ ನೀಡಿತು.

ಸಾಹಿತ್ಯದ ಸೌಂದರ್ಯಾತ್ಮಕ ಹಾಗೂ ಸೃಜನಾತ್ಮಕ ಅಂಶಗಳ ಸೂಕ್ಷ್ಮತೆಯನ್ನು ಶೋಧಿಸುವಲ್ಲಿ ಸಾಹಿತ್ಯಿಕ ಗುಂಪು ಚರ್ಚೆಯ ಸಾಮರ್ಥ್ಯವನ್ನು ಚರ್ಚೆಗಳು ಸ್ಪಷ್ಟವಾಗಿ ಹೊರತಂದವು. ಭಾಗವಹಿಸಿದ್ದವರು ಹೊಂದಿದ್ದ ಒಳನೋಟಗಳು ಹಾಗೂ ತಮ್ಮದೇ ಆದ ತೀರ್ಮಾನಗಳಿಗೆ ಬರಲು ಅವರು ಪಠ್ಯವನ್ನು ವಿಶ್ಲೇಷಿಸುವುದಕ್ಕಾಗಿ ಉಪಯೋಗಿಸಿದ ತಂತ್ರಗಳ ರೀತಿಯನ್ನು ನೋಡಿದರೆ

ಬೆರಗಾಗುತ್ತದೆ. ಹುರುಪಿನಿಂದ ಕೂಡಿದ ಆ ಚರ್ಚೆಗಳು, ಸಂತೋಷಭರಿತ ಮತ್ತು ಅರ್ಥಪೂರ್ಣ ಓದು, ರಸಗ್ರಹಣ ಎನ್ನುವುದು ಶಿಕ್ಷಕರ ಮಟ್ಟಿಗೆ ಗತಸಂಗತಿಯಲ್ಲ ಎನ್ನುವುದಕ್ಕೆ ಉತ್ತಮ ಸಾಕ್ಷಿಯಾಗಿದ್ದವು. ಓದಲು ಅವಕಾಶಗಳನ್ನು ಒದಗಿಸಿದರೆ ಹಾಗೂ ಗುಣಮಟ್ಟದ ಸಾಹಿತ್ಯಕ್ಕೆ ಅವರು ತೆರೆದುಕೊಳ್ಳುವಂತೆ ಮಾಡಿದರೆ ಶಿಕ್ಷಕರಲ್ಲಿ ಓದಿನ ಪ್ರೀತಿಯನ್ನು ಮತ್ತು ಸಾಹಿತ್ಯದ ಒಲವನ್ನು ಬೆಳೆಸಲು ಸಾಧ್ಯವಿದೆ, ಅದು ಕಾಲಕ್ರಮೇಣ ಅವರ ತರಗತಿಕೋಣೆಗೂ ಕೂಡ ವಿಸ್ತರಿಸಬಲ್ಲುದು ಎನ್ನುವುದನ್ನು ಇದು ಒತ್ತಿ ಹೇಳುತ್ತದೆ.

**ಶಾಲಾ ಗ್ರಂಥಾಲಯಗಳ ವಿನ್ಯಾಸ ಹಾಗೂ ಬಳಕೆ**

ಗ್ರಂಥಪಾಲನೆಯಲ್ಲಿ ಅನುಭವ ಹೊಂದಿದವರು ನಡೆಸಿಕೊಟ್ಟ ಗ್ರಂಥಾಲಯ ಕಾರ್ಯಾಗಾರವು ಅನೌಪಚಾರಿಕವಾಗಿತ್ತು ಹಾಗೂ ಒಳನೋಟಗಳನ್ನು ಹೊಂದಿತ್ತು. ಗ್ರಂಥಾಲಯದ ಮೂಲಭೂತ ಅಂಶಗಳನ್ನು ದೀರ್ಘವಾಗಿ ಚರ್ಚಿಸಿದ ಗುಂಪಿನಲ್ಲಿ ಲವಲವಿಕೆ ಎದ್ದು ತೋರುತ್ತಿತ್ತು. ಶಿಬಿರಾರ್ಥಿಗಳು ಎತ್ತಿದ ಅನೇಕ ಸಂಗತಿಗಳಲ್ಲಿ, ಚೈತನ್ಯಪೂರ್ಣ ಹಾಗೂ ಪರಿಣಾಮಕಾರಿ ಪುಸ್ತಕ ಸಂಗ್ರಹ, ಅನುಸಂಧಾನ, ಸಂಬಂಧಿತ ವ್ಯಕ್ತಿ, ಪುಸ್ತಕಗಳ ವ್ಯವಸ್ಥಿತ ಜೋಡಣೆ ಹಾಗೂ ಸ್ಥಳಾವಕಾಶ ಎಂಬ ಐದು ಮೂಲಭೂತ ಅಂಶಗಳ ಮೇಲೆ ಗಮನವನ್ನು ಕೇಂದ್ರೀಕರಿಸಲಾಯಿತು. ಗ್ರಂಥಾಲಯವೊಂದನ್ನು ಹೇಗೆ ಓದುಗರಿಗೆ ಆಕರ್ಷಕವಾಗುವ ಹಾಗೆ ರೂಪಿಸಬಹುದು ಎನ್ನುವುದನ್ನು ಆಳವಾಗಿ ಅರ್ಥಮಾಡಿಕೊಳ್ಳುವುದಕ್ಕಾಗಿ ಇವುಗಳಲ್ಲಿ ಪ್ರತಿಯೊಂದು ಅಂಶವನ್ನೂ ವಿವರವಾಗಿ ಚರ್ಚಿಸಲಾಯಿತು.

ಗ್ರಂಥಾಲಯವನ್ನು ತೆರೆಯುವುದು/ಮುಚ್ಚುವುದು, ಪುಸ್ತಕಗಳನ್ನು ವರ್ಗೀಕರಿಸಿ ಆಕರ್ಷಕವಾಗಿ ಜೋಡಿಸಿಡುವುದು, ಗ್ರಂಥಾಲಯದ ಆವರಣವನ್ನು ಮುಕ್ತ ಹಾಗೂ ಮನಸೆಳೆಯುವಂತೆ ಮಾಡಲು ಪೀಠೋಪಕರಣ ಹಾಗೂ ಪುಸ್ತಕಗಳನ್ನು ಸೂಕ್ತ, ಉಚಿತ ಜಾಗದಲ್ಲಿ ಇಡುವುದು ವಾರ್ಷಿಕ ಆಯ-ವ್ಯಯಕ್ಕೆ ಸಂಬಂಧಿಸಿದ ಯೋಜನೆ ತಯಾರಿ ಇತ್ಯಾದಿಗಳು ಸಂಬಂಧಿತ ವ್ಯಕ್ತಿಯು ಮಾಡಬೇಕಾದ ಅಗತ್ಯ ಕಾರ್ಯಗಳು. ತಮ್ಮ ಸಮಯವೆಲ್ಲವೂ ಆಡಳಿತಾತ್ಮಕ/ನೋಂದಣಿ ಕಾರ್ಯದಲ್ಲಿಯೇ ಕಳೆದು ಹೋಗದಂತೆ ಅವರು ಗ್ರಂಥಾಲಯದ ಬಳಕೆಯ ಬಗ್ಗೆ ಓದುಗರಿಗೆ ತಿಳುವಳಿಕೆ ನೀಡಬಹುದು ಹಾಗೂ ಓದುಗರೊಡನೆಯ ಸಂವಾದದ ಮೇಲೆ ಗಮನವನ್ನು ಕೇಂದ್ರೀಕರಿಸಬಹುದು. ಯುವ ಓದುಗರೊಡನೆ ನಲವತ್ತು ನಿಮಿಷಗಳ ಕಾಲವನ್ನು ತಾನು ಹೇಗೆ ಕಳೆಯಬಯಸುತ್ತೇನೆ ಎಂಬುದನ್ನು ಯೋಜಿಸಬಹುದು.

ಸಂಬಂಧಿತ ವ್ಯಕ್ತಿಯ ಅರ್ಥಪೂರ್ಣ ಅನುಸಂಧಾನವು ಓದುಗರನ್ನು ವಿವಿಧ ಚಟುವಟಿಕೆಗಳ ಮೂಲಕ ತೊಡಗಿಸಿಕೊಳ್ಳುವುದು ಹಾಗೂ ಕುತೂಹಲವನ್ನು ಹುಟ್ಟಿಸುವುದು, ಓದನ್ನು ಉತ್ತೇಜಿಸುವ ರೀತಿಯಲ್ಲಿ ಪುಸ್ತಕ ಎರವಲು ಪಡೆಯುವುದು ಮತ್ತು ನಿಭಾಯಿಸುವುದನ್ನು ಒಳಗೊಳ್ಳುತ್ತದೆ. ಪುಸ್ತಕದ ಸಂಗ್ರಹವು ಚೇತೋಹಾರಿಯಾಗಿರಬೇಕು, ಓದುಗರನ್ನು ಆಕರ್ಷಿಸುವಂತೆ ಇರಬೇಕು. ಹೊಸ ಪುಸ್ತಕಗಳನ್ನು ನಿರಂತರವಾಗಿ ಸಂಗ್ರಹಕ್ಕೆ ಸೇರಿಸುತ್ತಿರಬೇಕು. ಸಂಗ್ರಹದಲ್ಲಿ ವಿವಿಧ ಭಾಷೆಯ ಪುಸ್ತಕಗಳೂ ಸೇರಿರಬೇಕು. ಗ್ರಂಥಾಲಯದ ತಾಣವು ಗಾಳಿ-ಬೆಳಕುಗಳು ಚೆನ್ನಾಗಿ ಬರುವಂತೆ ಮುಕ್ತವಾಗಿದ್ದು, ಆರಾಮದಾಯಕ ಆಸನ ವ್ಯವಸ್ಥೆಯನ್ನು ಹೊಂದಿದ್ದು ಓದುಗರನ್ನು ಆಕರ್ಷಿಸಬೇಕು.

ಮಕ್ಕಳನ್ನು ತೊಡಗಿಸುವ ವಿವಿಧ ವಿಧಾನಗಳು ಹಾಗೂ ಮಕ್ಕಳಲ್ಲಿ ಪುಸ್ತಕಗಳ ಬಗ್ಗೆ ಆಸಕ್ತಿ ಮತ್ತು ಕುತೂಹಲವನ್ನು ಹೇಗೆ ಹುಟ್ಟಿಸಬೇಕು ಎನ್ನುವುದರ ಕುರಿತಂತೆ ಚರ್ಚೆ ನಡೆಯಿತು. ಗ್ರಂಥಾಲಯವೆಂದರೆ, ಎದ್ದುಕಾಣುವ ದೊಡ್ಡದಾದ, ಎತ್ತರದ ಛಾವಣಿಯಿರುವ ಕಟ್ಟಡ, ಗೋಡೆಗಳುದ್ದಕ್ಕೂ ಬರೆದ 'ನಿಶ್ಯಬ್ದ' ಎಂಬ ಬರೆಹ, ಇರುಸುಮುರುಸು ಉಂಟುಮಾಡುವ, ಭಯಹುಟ್ಟಿಸುವ ವಾತಾವರಣ ಎಂಬ ಚಿತ್ರವನ್ನು ನಿವಾರಿಸಲು ಈ ಚರ್ಚೆಯು ಯಶಸ್ವಿಯಾಯಿತು. ಗ್ರಂಥಾಲಯವೆಂದರೆ ಶಾಂತ, ನಿಶ್ಯಬ್ದ ತಾಣ ಎಂಬ ಕಲ್ಪನೆ ಬಹುತೇಕವಾಗಿ ಯಾವಾಗಲೂ ಇರುತ್ತಿದ್ದು ಅದು ನಿಜಕ್ಕೂ ಹಾಗೆಯೇ ಇರಬೇಕೇ ಎಂಬುದಾಗಿ ಚರ್ಚಿಸಲಾಯಿತು. ಸುಗಮಕಾರರು, ಅಷ್ಟೇನೂ ಶಾಂತವಲ್ಲದ ಓದಿನ ಗೋಷ್ಠಿಗಳನ್ನು ಸೃಷ್ಟಿಸುವ ಮೂಲಕ ಓದುಗರನ್ನು ತೊಡಗಿಸುವ ಹಾಗೂ ಒಳಗೊಳ್ಳುವ ಅಗತ್ಯವನ್ನು ಒತ್ತಿಹೇಳಿದರು.

ಪ್ರಾಮುಖ್ಯತೆಯ ಅನುಕ್ರಮದಲ್ಲಿ ಸಂಬಂಧಿತ ವ್ಯಕ್ತಿ, ಸಂಗ್ರಹ, ಸಂವಾದ, ವ್ಯವಸ್ಥಿತ ಆಯೋಜನೆ ಹಾಗೂ ಸ್ಥಳಾವಕಾಶದ ಅಂಶಗಳ ಮೇಲೆ ಒತ್ತು ನೀಡಲು ಸುಗಮಕಾರರು ಚಟುವಟಿಕೆಯೊಂದನ್ನು ಬಳಸಿಕೊಂಡರು.

## ಪುಸ್ತಕಗಳ ಆಯ್ಕೆ

ಪುಸ್ತಕವೊಂದು ಪಂಚತಾರಾ ಪುಸ್ತಕ ಎಂದು ಕರೆಯಿಸಿಕೊಳ್ಳಲು ವಸ್ತುವಿಷಯ, ಹಂದರ, ಭಾಷೆ, ತೊಡಗಿಸಿಕೊಳ್ಳುವಿಕೆ, ಪಾತ್ರಗಳು, ಸಂರಚನೆ, ಚಿತ್ರಣ, ವಿನ್ಯಾಸ, ನಿರ್ಮಾಣ, ಮೌಲ್ಯ, ಒಳಗೊಳ್ಳುವಿಕೆ, ಸಂವೇದನಾಪೂರ್ಣತೆ ಹಾಗೂ ವಾಸ್ತವಿಕ ಸ್ವರೂಪ ಮುಂತಾದ ಕೆಲವು ಅಂಶಗಳನ್ನು ಹೊಂದಿರಬೇಕಾಗಿರುತ್ತದೆ. ಕಥೆ ಸುಖಾಂತ್ಯವೇ ಆಗಿರಬೇಕೆಂದೇನೂ ಇಲ್ಲ.

ಮತ್ತಷ್ಟು ವಿವರವಾಗಿಯೂ ಚರ್ಚಿಸಲಾದ ಅಂಶಗಳು ಹೀಗಿವೆ: ಕಥೆಯ ವಸ್ತು ವಿಷಯವು ಮಗುಸ್ನೇಹಿಯಾಗಿರಬೇಕು, ಓದುವ ವ್ಯಕ್ತಿಯು ತನ್ನ ಅನುಭವಗಳನ್ನು ಕುರಿತು ಪರ್ಯಾಲೋಚಿಸುವಂತೆ ಮಾಡಬೇಕು ಹಾಗೂ ತನ್ನನ್ನು ತೊಡಗಿಸಿಕೊಳ್ಳುವಂತಿರಬೇಕು. ಭಾಷೆ ಸರಳವಾಗಿರಬೇಕು, ಲಯಬದ್ಧ-ವಾಗಿರಬೇಕು, ಓದಲು ಸರಾಗವಾಗಿರಬೇಕು ಹಾಗೂ ಅರ್ಥವಾಗುವಂತಿರಬೇಕು, ಉಲ್ಲಾಸ ನೀಡುವಂತಿರಬೇಕು, ಸಹಜವಾಗಿ ಮಾತನಾಡುವ ಭಾಷೆಗೆ ಹತ್ತಿರವಿರಬೇಕು ಹಾಗೂ ಮಗುವಿನ ವಯಸ್ಸಿಗೆ ಸೂಕ್ತವಾಗಿರಬೇಕು.

ಆಯ್ಕೆಯಾದ ಪುಸ್ತಕಗಳು ವಾಸ್ತವಿಕತೆಯಿಂದ ಕೂಡಿದ್ದು, ನಿಷ್ಪಕ್ಷಪಾತಿಯಾಗಿರಬೇಕು (ಉದಾಹರಣೆಗೆ ಲಿಂಗದ ವಿಷಯದಲ್ಲಿ), ಸಮಾಜದಲ್ಲಿನ ವಿವಿಧ ಸಮಸ್ಯೆಗಳ ಕುರಿತು ಸೂಕ್ಷಸಂವೇದನೆಯನ್ನು ಹೊಂದಿದ್ದು, ಅಹಿಂಸಾತ್ಮಕವಾಗಿ, ದೈನಂದಿನ ಜೀವನಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧಿಸಿದ್ದಾಗಿರಬೇಕು ಎಂಬಿತ್ಯಾದಿ ಸಂಗತಿಗಳನ್ನು ತಿಳಿದುಕೊಳ್ಳುವ ಅಗತ್ಯವನ್ನು ಕೂಡ ಒತ್ತಿ ಹೇಳಲಾಯಿತು. ವಿಶೇಷ ಸಾಮರ್ಥ್ಯವಿರುವವರನ್ನು ಸಾಮಾನ್ಯವಾಗಿ ನೋಡುವ ರೀತಿಯನ್ನು ಅನುಸರಿಸದೇ ಶಿಕ್ಷಕರು ಅವರನ್ನು ಕುರಿತಾಗಿ ಸದ್ಯ ಇರುವ ರೂಢಿಗತ ಆಲೋಚನೆಯನ್ನು ಮುರಿಯಲು ನೆರವಾಗಬೇಕು. ಪುಸ್ತಕಗಳಲ್ಲಿನ ವಸ್ತುವಿಷಯವು ಮಕ್ಕಳಿಗೆ ಪುಸ್ತಕದೊಡನೆ ಭಾವನಾತ್ಮಕ ಸಂಬಂಧವನ್ನು ಹೊಂದಲು ಹಾಗೂ ಇತರರ ಅಭಿಪ್ರಾಯವನ್ನು ಗೌರವಿಸುವುದನ್ನು ಕಲಿಯಲು ಸಹಾಯಮಾಡಬೇಕು. ಪುಸ್ತಕಗಳನ್ನು ವಿವಿಧ ಭಾಷೆಗಳಿಗೆ ಅನುವಾದಿಸುವಂತೆ ಹಿರಿಯ ತರಗತಿಗಳಲ್ಲಿ ಓದುತ್ತಿರುವ ಮಕ್ಕಳ ಮನವೊಲಿಸಬಹುದು. ಇದು ಅವರಲ್ಲಿ ತಾವು ಕೂಡ ಕೊಡುಗೆ ನೀಡುತ್ತಿದ್ದೇವೆ ಎಂಬ ಭಾವವನ್ನು ಹುಟ್ಟಿಸುತ್ತದೆ ಹಾಗೂ ಅವರು ಶಾಲಾ ಗ್ರಂಥಾಲಯದ ಭಾಗವಾಗುವಂತೆ ಅವರನ್ನು ಉತ್ತೇಜಿಸುತ್ತದೆ.

ಗ್ರಂಥಾಲಯ ಕಾರ್ಯಾಗಾರವನ್ನು ಆಯೋಜಿಸಲು ಬಹಳಷ್ಟು ಚರ್ಚೆ, ಪರಿಕಲ್ಪಿಸುವಿಕೆ, ಯೋಜನೆ ಹಾಗೂ ಕ್ಷೇತ್ರದಲ್ಲಿನ ಕೆಲಸಗಳು ನಡೆದಿವೆ. ಹೀಗೆ ಕಥಾವನವು ಅನನ್ಯ ರೀತಿಯಲ್ಲಿ ಫಲಪ್ರದವಾಗಿತ್ತು.

■

ಬಿ ಫಸ್ಟ್, 07-12-2016

ಶಾಲೆಯೆಂದರೆ ಕೇವಲ ನಿತ್ಯದ ಬದುಕಿಗೆ
ಬೇಕಾದ ಓದು, ಬರಹ ಹಾಗೂ ಸರಳ
ಲೆಕ್ಕಗಳನ್ನು ಯಾಂತ್ರಿಕವಾಗಿ ಮಾಡುವುದನ್ನು
ಕಲಿಸುವುದಲ್ಲ. ಶಿಕ್ಷಣವು ಕಲಿಯುವವನಿಗೆ
ಆನಂದವನ್ನುಂಟುಮಾಡಬೇಕು.

**– ಕೋಟ ಶಿವರಾಮ ಕಾರಂತ**

# ಒಂದು ಸುಂದರ ಮನಸ್ಸು : ಕಾರಂತರ ಶೈಕ್ಷಣಿಕ ಕಾರ್ಯದತ್ತ ಮರುನೋಟ

ಇಪ್ಪತ್ತನೆಯ ಶತಮಾನವು ಕರಾವಳಿ ಕರ್ನಾಟಕದ ಇಬ್ಬರು ಕಾರಂತರು ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ಲೋಕಕ್ಕೆ ನೀಡಿದ ಅಸಾಧಾರಣ ಕೊಡುಗೆಗೆ ಸಾಕ್ಷಿಯಾಗಿದೆ. ಅವರ ಪ್ರಭಾವವು ಕೇವಲ ಕರ್ನಾಟಕವೊಂದೇ ಅಲ್ಲ, ದೇಶದುದ್ದಗಲಕ್ಕೂ ವ್ಯಾಪಿಸಿದೆ. ಮೊದಲನೆಯವರು ಸುಪ್ರಸಿದ್ಧ ಕೋಟ ಶಿವರಾಮ ಕಾರಂತರು. ಇವರು ಕಾದಂಬರಿಕಾರರಾಗಿ, ನಾಟಕಕಾರರಾಗಿ, ಪರಿಸರವಾದಿಯಾಗಿ, ಯಕ್ಷಗಾನದ ಕಲಾವಿದರಾಗಿ ಮತ್ತು ಸಮಾಜ ಸುಧಾರಕರಾಗಿ ಜಗತ್ತಿಗೆ ಪರಿಚಿತರು. ಎರಡನೆಯವರು, ಅಷ್ಟೇ ಪ್ರಮುಖರಾಗಿದ್ದ ಬಾಬುಕೋಡಿ ವೆಂಕಟರಮಣ ಕಾರಂತ. ಇವರು ಪ್ರಸಿದ್ಧ ರಂಗಕರ್ಮಿ ಹಾಗೂ ಚಲನಚಿತ್ರ ನಿರ್ದೇಶಕ. ಮೊದಲಿನ ಕಾರಂತರು ಒಬ್ಬ ಶಿಕ್ಷಣತಜ್ಞರೂ ಆಗಿದ್ದರು ಎನ್ನುವುದು ಹೆಚ್ಚು ಜನರಿಗೆ ತಿಳಿದಿರದ ಕಾರಣ, ಈ ಬರಹದಲ್ಲಿ ನಾನದನ್ನು ಶೋಧಿಸುವ ಪ್ರಯತ್ನ ಮಾಡುತ್ತಿದ್ದೇನೆ.

ಶಿವರಾಮ ಕಾರಂತರ ಹಲವಾರು ನವೀನ ಶೈಕ್ಷಣಿಕ ಪ್ರಯೋಗಗಳು ಶಾಲಾ ಶಿಕ್ಷಣವನ್ನು ಕುರಿತಾಗಿಯೇ ಇದ್ದವು ಹಾಗೂ ಅವು ಅವರ ಕಾಲಕ್ಕೂ ಸಾಕಷ್ಟು ಮುಂದಿದ್ದವು. ಸರ್ವೋದಯ ಸಾಹಿತ್ಯ ಚಳುವಳಿಗೆ ಸೇರಿದ್ದ ಅವರ ಅನೇಕ ಸಮಕಾಲೀನರು ಕಾಲೇಜು ಶಿಕ್ಷಣ ಪಡೆದವರಾಗಿದ್ದರು ಅಥವಾ ಶಿಕ್ಷಣ

ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದರು. ಆದರೆ, ಕಾರಂತರು ತಮ್ಮ ಹತ್ತೊಂಬತ್ತನೆಯ ವಯಸ್ಸಿನಲ್ಲಿಯೇ ಕಾಲೇಜಿನಿಂದ ಹೊರಬಿದ್ದು ಸಹಜವಾಗಿಯೇ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದರು. ಕಾಲೇಜು ಶಿಕ್ಷಣವನ್ನು ಮುಗಿಸದೇ ಹೋದರೂ ಅವರು ತಮ್ಮ ಜೀವಮಾನವಿಡೀ ಅದ್ಭುತವಾದ ಬೌದ್ಧಿಕ ಸಾಹಸಗಳಲ್ಲಿ ತೊಡಗಿಕೊಂಡರು. ಅವರೊಬ್ಬ ಸ್ವಂತ ಪರಿಶ್ರಮದ ಮೇಲೆ ಬೆಳೆದ ವ್ಯಕ್ತಿ. ಅವರು ಜೀವನೋಪಾಯಕ್ಕಾಗಿ ಎಂದೂ ಯಾವ ಉದ್ಯೋಗವನ್ನೂ ಮಾಡಲಿಲ್ಲ. ರಾಷ್ಟ್ರೀಯ ಭಾವನೆಯಿಂದ ಸ್ಫೂರ್ತಿ ಪಡೆದ ಅವರು 1921ರ ನಂತರದಲ್ಲಿ ಸಮಾಜವನ್ನು ಸುಧಾರಿಸುವ ಕೆಲಸಕ್ಕೆ ತಮ್ಮನ್ನೇ ತಾವು ಮುಡುಪಾಗಿಟ್ಟರು. ಮೂಢನಂಬಿಕೆ, ಅಸ್ಪೃಶ್ಯತೆ, ಮದ್ಯವ್ಯಸನಗಳಂತಹ ಅನಿಷ್ಟಗಳ ನಿವಾರಣೆ, ವಿಧವಾ ವಿವಾಹ ಹಾಗೂ ಮಹಿಳೆಯರ ಅಭಿವೃದ್ಧಿಗಾಗಿ ಪ್ರಯತ್ನ, ಬಡತನ ನಿರ್ಮೂಲನೆ ಹಾಗೂ ಹಳ್ಳಿಗಳ ಸ್ವಚ್ಛತೆ ಮತ್ತು ನೈರ್ಮಲ್ಯದಲ್ಲಿ ಸುಧಾರಣೆ ಇವೇ ಮೊದಲಾದವುಗಳು ಅವರ ಕೆಲಸ ಹಾಗೂ ಬರಹದ ಕೇಂದ್ರಬಿಂದುಗಳಾದವು.

**ಸಾರ್ವಜನಿಕ ಶಿಕ್ಷಣದತ್ತ ಗಮನ**

ಮುಖ್ಯವಾಗಿ, ಅದೇ ಕಾಲಾವಧಿಯಲ್ಲಿ ಅವರ ಗಮನವು ಸಾರ್ವಜನಿಕ ಶಿಕ್ಷಣದತ್ತ ಹರಿಯಿತು. 1930ರ ದಶಕದ ಆರಂಭದಲ್ಲಿ ಅವರು ಶೈಕ್ಷಣಿಕ ಪ್ರಯೋಗಗಳಿಗೆ ಸಂಬಂಧಿಸಿದ ತಮ್ಮ ಕೆಲವು ಕೆಲಸಗಳನ್ನು ಕೈಗೆತ್ತಿಕೊಳ್ಳುವುದಕ್ಕೂ ಮೊದಲು ಅವರಿಗೆ ಕಲಿಯಲು ಇದು ಅಗಾಧವಾದ ಅವಕಾಶವನ್ನು ಒದಗಿಸಿತು. ಶಾಲೆಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ, ಶಿಕ್ಷಣವನ್ನು ಹೇಗೆ ಕೊಡಲಾಗುತ್ತದೆ, ವಿದ್ಯಾರ್ಥಿಗಳು ಯಾವ ರೀತಿಯ ಸವಾಲುಗಳನ್ನು ಎದುರಿಸುತ್ತಿದ್ದಾರೆ ಎನ್ನುವುದನ್ನು ಅರ್ಥಮಾಡಿಕೊಳ್ಳಲು ವ್ಯಾಪಕವಾಗಿ ಓಡಾಡಿದ ಅವರು ಮಂಗಳೂರು, ಪುತ್ತೂರು, ಉಡುಪಿ, ಕುಂದಾಪುರ ಹಾಗೂ ಕಾರ್ಕಳಗಳಲ್ಲಿನ ಹಲವಾರು ಶಾಲೆಗಳಿಗೆ ಭೇಟಿಯಿತ್ತರು. ಇದನ್ನವರು, 'ಸ್ವದೇಶಾಭಿಮಾನಿ' ಎಂಬ ದೈನಿಕ ಪತ್ರಿಕೆಯೊಂದರ ಸಂಪಾದಕರ ಸೂಚನೆಯ ಮೇರೆಗೆ ಕೈಗೊಂಡಿದ್ದರು. ಶಿಕ್ಷಣದ ಕುರಿತಾಗಿ ಕಾರಂತರು ಲೇಖನ ಸರಣಿಯೊಂದನ್ನು ಬರೆಯಬೇಕೆಂದು ಆ ಸಂಪಾದಕರು ಬಯಸಿದ್ದರು. ಶಿಕ್ಷಣಕ್ಕೆ ಸಂಬಂಧಿಸಿದಂತೆ ಕಾರಂತರ ಹಲವಾರು ವಿಚಾರಗಳು ಇಂದಿಗೂ ಚಿಂತನಯೋಗ್ಯವಾಗಿವೆ.

**ಬಾಲವನ**

ಕಾರಂತರು, 1934ರಲ್ಲಿ ಅಂದಿನ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನಲ್ಲಿ 'ಬಾಲವನ' ಎಂಬ ಪರ್ಯಾಯ ಮಾದರಿ ಶಾಲೆಯೊಂದನ್ನು ಆರಂಭಿಸಿದರು. ಇದಕ್ಕೆ ಅವರಿಗೆ ರವೀಂದ್ರನಾಥ ಟಾಗೋರರ ಶಾಂತಿನಿಕೇತನದ ಪರಿಕಲ್ಪನೆಯು

ಸ್ಫೂರ್ತಿಯಾಗಿತ್ತು. ಅವರು, 'ಆಟದ ಮೂಲಕ ಕಲಿ'ಯುವ ವಿಧಾನವನ್ನು ಪರಿಚಯಿಸಿದರು. ಅದೊಂದು ವಸತಿ ಶಾಲೆಯಾಗಿದ್ದು ಅಲ್ಲಿದ್ದ ಅತ್ಯಂತ ಬಡ ಹಾಗೂ ನಿರ್ಗತಿಕ ಮಕ್ಕಳಿಗೆ ಆಹಾರ, ಬಟ್ಟೆ ಮತ್ತು ವಾಸ್ತವ್ಯವನ್ನು ಒದಗಿಸುತ್ತಿತ್ತು. ಮಕ್ಕಳಿಗೆ ಪ್ರಾಣಿ–ಪಕ್ಷಿಗಳ ಜೀವನ ಹೇಗಿರುತ್ತದೆ, ಅವು ಹೇಗೆ ಬದುಕುತ್ತವೆ ಎಂಬುದನ್ನು ಪ್ರತ್ಯಕ್ಷವಾಗಿ ನೋಡಿ ಕಲಿಯಲು ಸಾಧ್ಯವಾಗುವಂತೆ ಶಾಲೆಯ ಆವರಣದ ಒಳಗೇ ಪುಟ್ಟದೊಂದು ಪ್ರಾಣಿಸಂಗ್ರಹಾಲಯವನ್ನು ಅವರು ರೂಪಿಸಿದ್ದರು. ಪಠ್ಯಕ್ರಮದ ಪ್ರಕಾರ, ತರಗತಿ ಕೋಣೆಯ ಕಲಿಕೆ–ಬೋಧನೆ ಎನ್ನುವುದು ಕೇವಲ ಎರಡೇ ಗಂಟೆಗಳ ಕಾಲ ಇರುತ್ತಿತ್ತು. ಉಳಿದ ಸಮಯವನ್ನು ಮಕ್ಕಳು ಕಥೆ ಹೇಳುವುದು, ಹಾಡು ಇತ್ಯಾದಿ ಚಟುವಟಿಕೆಗಳಲ್ಲಿ ಕಳೆಯುತ್ತಿದ್ದರು. ಕೋಳಿ ಸಾಕಣೆಯಂತಹ ವೃತ್ತಿಶಿಕ್ಷಣವನ್ನೂ ಆರಂಭಿಸಲಾಯಿತು. "ಬೇಸಿಗೆ ರಜೆಯಲ್ಲಿ ರಾಜ್ಯದೆಲ್ಲೆಡೆಯಿಂದ ಬಾಲವನಕ್ಕೆ ಬರುತ್ತಿದ್ದ ನೂರಾರು ಮಕ್ಕಳು ಪಕ್ಷಿವೀಕ್ಷಣೆ ಮತ್ತು ಆಟದ ರೈಲುಗಳಿಂದ ಆಕರ್ಷಿತರಾಗುತ್ತಿದ್ದರು. ಆದರೆ ಶಾಲೆಯು ಶಾಂತಿನಿಕೇತನದಂತೆ ತನ್ನ ಕಾಲ ಮೇಲೆ ತಾನು ನಿಲ್ಲಲು ಸಾಧ್ಯವಾಗಲಿಲ್ಲ, ಅಸಡ್ಡೆ, ನಿರ್ಲಕ್ಷ್ಯತನಗಳಿಂದಾಗಿ ಮುಚ್ಚಿಹೋಯಿತು." ಎಂದು ಕನ್ನಡದ ಮತ್ತೊಬ್ಬ ಗೌರವಾನ್ವಿತ ಸಾಹಿತಿ ವಿ.ಸೀತಾರಾಮಯ್ಯ ಹೇಳುತ್ತಾರೆ.

## ಮಕ್ಕಳ ಸರ್ವತೋಮುಖ ಬೆಳವಣಿಗೆ

ಕಾರಂತರು ಮಕ್ಕಳ ಸಮಗ್ರ ಬೆಳವಣಿಗೆಯಲ್ಲಿ ಸ್ಪಷ್ಟ ನಂಬಿಕೆಯುಳ್ಳವರಾಗಿದ್ದರು. ಇದು ಶಾಲಾ ಅವಧಿಯ ಹೊರಗಿನ ಕಲಿಕೆಯ ಅವಕಾಶಗಳನ್ನು ಸೃಷ್ಟಿಸುವ ಅವರ ವಿಧಾನದಲ್ಲಿ ಎದ್ದು ತೋರುತ್ತಿತ್ತು. ಅವರು ಪ್ರೌಢಶಾಲಾ ಮಟ್ಟದಲ್ಲಿ ಸ್ಕೌಟ್ಸ್ ತಂಡಗಳನ್ನು ತಯಾರು ಮಾಡಿ ರಜೆಯ ಅವಧಿಯಲ್ಲಿ ಕುಂದಾಪುರದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ವಿದ್ಯಾರ್ಥಿಗಳಿಗೆ ಸಮಾಜ ಸೇವಾ ಶಿಬಿರಗಳನ್ನು ಆಯೋಜಿಸುತ್ತಿದ್ದರು. ಮಕ್ಕಳಲ್ಲಿ ಕೆಚ್ಚಿನ ಮನೋಧರ್ಮವನ್ನು ಬೆಳೆಸುವುದು, ಅವರು ತಮ್ಮ ನೆರೆಹೊರೆಯಲ್ಲಿನ ನೈಸರ್ಗಿಕ ಪರಿಸರದ ಕುರಿತಾಗಿ ಅರಿವನ್ನು ಬೆಳೆಸಿಕೊಳ್ಳುವುದು, ಸಮುದಾಯ ಬದುಕಿನ ಅನುಭವವನ್ನು ಹೊಂದುವುದು, ಹಳ್ಳಿಗರು ಎದುರಿಸುವ ಕಷ್ಟಕಾರ್ಪಣ್ಯಗಳನ್ನು ನೇರವಾಗಿ ನೋಡಿ ಅರಿಯುವುದು ಇತ್ಯಾದಿಗಳು ಇಂತಹ ಶಿಬಿರಗಳ ಉದ್ದೇಶಗಳಾಗಿದ್ದವು. ಎನ್‌ಸಿಸಿ ಮತ್ತು ಎನ್‌ಎಸ್‌ಎಸ್‌ಗಳ ಅಡಿ ನಡೆಯುತ್ತಿದ್ದ ಚಟುವಟಿಕೆಗಳನ್ನು ಮುಂದೆ ಶೈಕ್ಷಣಿಕ ಪ್ರಕ್ರಿಯೆಯ ಭಾಗವನ್ನಾಗಿ ಮಾಡಲಾಯಿತು. ಆದರೆ ಕಾರಂತರು 1920ರಷ್ಟು ಹಿಂದೆಯೇ ಇವುಗಳನ್ನು ಆರಂಭಿಸಿದ್ದರು. ಹಲವಾರು ಸಾಮಾಜಿಕ ಅನಿಷ್ಟಗಳ ಕುರಿತಂತೆ ಹಳ್ಳಿಗರಲ್ಲಿ ತಿಳುವಳಿಕೆ ಮೂಡಿಸಲು ಅವರು ಮಕ್ಕಳಿಂದ ಬೀದಿನಾಟಕಗಳನ್ನು ಕೂಡ ಆಡಿಸಿದರು. ಈ ಪರಿಣಾಮಕಾರಿ ವಿಧಾನವು

ಮಕ್ಕಳನ್ನು ಸಾಮಾಜಿಕವಾಗಿ ಜವಾಬ್ದಾರಿಯುಳ್ಳ ವ್ಯಕ್ತಿಗಳನ್ನಾಗಿ ಬೆಳೆಸುವ ಅವರ ಸಮಗ್ರದೃಷ್ಟಿಯ ಭಾಗವಾಗಿತ್ತು.

ಕಾರಂತರು ನಡೆಸುತ್ತಿದ್ದ ಮಕ್ಕಳ ಮೇಳ ಹಾಗೂ ಹಬ್ಬಗಳು ಮಕ್ಕಳಲ್ಲಿರುವ ಸುಪ್ತ ಪ್ರತಿಭೆ, ಉತ್ಸಾಹ–ಚೈತನ್ಯ ಹಾಗೂ ಜಿಜ್ಞಾಸೆಗಳನ್ನು ಹೊರತರುವುದಕ್ಕೆಂದೇ ಖ್ಯಾತವಾಗಿದ್ದವು. ಅವು ಮಕ್ಕಳಿಗೆ ವರ್ಣಚಿತ್ರ, ಚಿತ್ರಕಲೆ, ಕಿರುನಾಟಕಗಳು ಹಾಗೂ ಅರ್ಥಪೂರ್ಣ ಸಾಹಿತ್ಯಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಸೃಜನಾತ್ಮಕ ಅವಕಾಶವನ್ನು ಒದಗಿಸುತ್ತಿದ್ದವು. 1930ರ ದಶಕದಲ್ಲಿ, 'ಜಯಕರ್ನಾಟಕ' ಎಂಬ ದೈನಿಕ ವಾರ್ತಾಪತ್ರಿಕೆಯಲ್ಲಿ ಕಾಣಿಸಿಕೊಂಡಿದ್ದ ಕೆಲವೊಂದಿಷ್ಟು ಸುದ್ದಿಗಳು, ಕಾರಂತರು ಇಂತಹ ಕಾರ್ಯಕ್ರಮಗಳ ಸಂದರ್ಭದಲ್ಲಿ ಸ್ವತಃ ಹೇಗೆ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು, ಮಕ್ಕಳೊಂದಿಗೆ ತಾವೂ ಒಬ್ಬರಾಗಿ ಬೆರೆಯುತ್ತಿದ್ದರು ಎನ್ನುವುದನ್ನು ತೋರಿಸುತ್ತವೆ.

**ಪಠ್ಯಪುಸ್ತಕಗಳ ರಚನೆ**

ಕಾರಂತರು ಸಹಪಠ್ಯ ಚಟುವಟಿಕೆಗಳ ಮೇಲೆ ಮಾತ್ರ ಅತಿಯಾದ ಒತ್ತು ನೀಡಿದರು ಎಂಬ ಅಪವಾದಕ್ಕೆ ಈಡಾಗದಂತೆ ಅವರು ಸ್ವತಂತ್ರವಾಗಿ 'ಹೂಗನ್ನಡ ಪಾಠಮಾಲೆ' ಎಂಬ ಶೀರ್ಷಿಕೆಯಡಿಯಲ್ಲಿ ಒಂದರಿಂದ ಎಂಟರವರೆಗಿನ ಎಲ್ಲಾ ತರಗತಿಗಳಿಗೂ ಪಠ್ಯಪುಸ್ತಕಗಳನ್ನು ಬರೆದರು. ಈ ಸರಣಿಯು ಭಾಷೆ, ವಿಜ್ಞಾನ (ಹೆಣ್ಣುಮಕ್ಕಳಿಗೆ ಗೃಹವಿಜ್ಞಾನವೂ ಸೇರಿ), ಇತಿಹಾಸ, ಭೂಗೋಳ ಹಾಗೂ ಸಾಮಾನ್ಯ ಜ್ಞಾನಗಳನ್ನು ಒಳಗೊಂಡಿತ್ತು. ಇದು ಕಾರಂತರ ಅಗಾಧ ಸಾಮರ್ಥ್ಯವನ್ನು ಸಾರುತ್ತದೆ. ಸ್ವತಃ ದೊಡ್ಡ ಸಾಹಿತಿಯಾಗಿದ್ದುದರ ಜೊತೆಗೆ ಅವರಿಗೆ ಭಾಷಾಶಾಸ್ತ್ರ, ಬಾಲ ಮನೋವಿಜ್ಞಾನ, ನೈಸರ್ಗಿಕ ವಿಜ್ಞಾನಗಳ ಮೇಲೆ ಹಿಡಿತವಿತ್ತು. ಇವೆಲ್ಲವುಗಳ ಕಾರಣ ಅವರು ತಾವು ರಚಿಸಿದ ಗ್ರಂಥಗಳಲ್ಲಿ ವ್ಯಾಪಕವಾದ ಜ್ಞಾನ ಮತ್ತು ದೃಷ್ಟಿಕೋನಗಳನ್ನು ಸಂಯೋಜಿಸಲು ಸಾಧ್ಯವಾಯಿತು. ಈ ಪುಸ್ತಕಗಳು ಅಂದು ಮಕ್ಕಳಿಗೆ ನಿಸ್ಸಂದಿಗ್ಧವಾಗಿಯೂ ಪ್ರಸ್ತುತವಾಗಿದ್ದವು ಮತ್ತು ಇಂದಿಗೂ ಕೂಡ ಅವು ಪ್ರಸ್ತುತವಾಗಿವೆ ಎಂದು ಪರಿಗಣಿಸಲ್ಪಟ್ಟಿವೆ.

**ಶಾಲೆ/ಶಿಕ್ಷಕರ ಪಾತ್ರ**

ಕಾರಂತರಿಗೆ ತಮ್ಮ ಕಾಲದ ಶಾಲಾ ಸಂದರ್ಭದ ನಿಕಟ ಪರಿಚಯ ಹಾಗೂ ಅರಿವು ಇದ್ದ ಕಾರಣ ಅವರ ಶೈಕ್ಷಣಿಕ ಬರಹಗಳು ವಸ್ತುನಿಷ್ಠ ಹಾಗೂ ಪ್ರಸ್ತುತವಾಗಿದ್ದವು. ಶೈಕ್ಷಣಿಕ ಗುಣಮಟ್ಟವನ್ನು ಹೆಚ್ಚಿಸುವಲ್ಲಿ ಶಿಕ್ಷಕರ ಪಾತ್ರ ಹಿರಿದು, ಅವರ ತೊಡಗಿಕೊಳ್ಳುವಿಕೆ ಹಾಗೂ ಒಡೆತನವಿಲ್ಲದಿದ್ದರೆ ಅತ್ಯುತ್ತಮವಾದ ಶೈಕ್ಷಣಿಕ ನೀತಿಗಳೂ ಪಠ್ಯಕ್ರಮಗಳೂ ವಿಫಲವಾಗುತ್ತವೆ ಎಂದು ಅವರು ದೃಢವಾಗಿ

ನಂಬಿದ್ದರು. ಶಿಕ್ಷಕರು ಕಲಿಕೆಯಲ್ಲಿ ಹಿಂದಿರುವ ಮಕ್ಕಳ ಮೇಲೆ ನಿರ್ದಿಷ್ಟವಾಗಿ ಗಮನವನ್ನು ಕೇಂದ್ರೀಕರಿಸುವ ಅಗತ್ಯವಿದೆಯೆಂದು ಹೇಳುತ್ತಿದ್ದರು. ನಮ್ಮಂತಹ ಬಡ ರಾಷ್ಟ್ರಗಳಲ್ಲಿ ಮಕ್ಕಳಿಗೆ ವೈಯಕ್ತಿಕ ಗಮನವನ್ನು ನೀಡುವುದು ಅಸಾಧ್ಯವಾದ ಕಾರಣ, ಮಕ್ಕಳ ಅಂತರ್ಗತ ಪ್ರವೃತ್ತಿಗಳನ್ನು ಗುರುತಿಸಿ, ವರ್ಣಚಿತ್ರ, ಹಾಡು, ಕಥೆ ಹೇಳುವುದು ಇತ್ಯಾದಿ ಆಸಕ್ತಿಗನುಗುಣವಾಗಿ ಶಿಕ್ಷಕರು ಮಕ್ಕಳನ್ನು ವಿವಿಧ ಗುಂಪುಗಳಾಗಿ ವಿಭಜಿಸಿ, ಅವರಿಗೆ ತಮ್ಮ ಆಸಕ್ತಿಯನ್ನು ಬೆಳೆಸಿಕೊಳ್ಳಲು ಬೇಕಾದ ಉತ್ತೇಜನವನ್ನು ನೀಡಬೇಕೆಂಬ ನಿಲುವು ಅವರದಾಗಿತ್ತು. ಅದೇ ವೇಳೆಗೆ, ಶಾಲೆಗಳು ಮಕ್ಕಳ ಗುಣಸ್ವಭಾವ, ಅಭಿರುಚಿ ಹಾಗೂ ಸಾಮರ್ಥ್ಯಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಒಂದೇ ತರಹದ ಉತ್ಪನ್ನಗಳನ್ನು ತಯಾರಿಸುವ ಕಾರ್ಖಾನೆಗಳಂತಾಗುವುದು ಅವರಿಗೆ ಇಷ್ಟವಿಲ್ಲದ ಸಂಗತಿಯಾಗಿತ್ತು.

ಕಾರಂತರಿಗೆ ಶಾಲೆಯೆಂದರೆ ಕೇವಲ ನಿತ್ಯದ ಬದುಕಿಗೆ ಬೇಕಾದ ಓದು, ಬರಹ ಹಾಗೂ ಸರಳ ಲೆಕ್ಕಗಳನ್ನು ಯಾಂತ್ರಿಕವಾಗಿ ಮಾಡುವುದನ್ನು ಕಲಿಸುವುದಲ್ಲ. ಶಿಕ್ಷಣವು ಕಲಿಯುವವನಿಗೆ ಆನಂದವನ್ನು ಉಂಟುಮಾಡಬೇಕು. ಎಲ್ಲಕ್ಕಿಂತ ಹೆಚ್ಚಾಗಿ, ವ್ಯಕ್ತಿಯೊಬ್ಬನು ಆ ಆನಂದವನ್ನು ಸಮಾಜದ ಇತರರೊಡನೆ, ತಾನು ಯಾರೊಂದಿಗೆ ನಿಸ್ವಾರ್ಥವಾಗಿ ಬೆರೆಯಬೇಕೋ ಅವರೊಡನೆ ಕಂಡುಕೊಳ್ಳಲು ಹಾಗೂ ಉಪಯುಕ್ತನಾಗಿ ಜೀವಿಸಲು ಸಾಧ್ಯವಾಗಬೇಕು. ಒಮ್ಮೆ ಶಿಕ್ಷಕರು ಮಗುವಿನಲ್ಲಿ ಇರುವ ಸುಪ್ತಸಾಮರ್ಥ್ಯವನ್ನು ಗುರುತಿಸಿದ ಮೇಲೆ, ಅವುಗಳನ್ನು ಈಡೇರಿಸಿಕೊಳ್ಳುವಲ್ಲಿ ಮಗುವಿಗಿರುವ ಅಡೆತಡೆಗಳನ್ನು ನಿವಾರಿಸಬೇಕು. ಮಕ್ಕಳ ಪ್ರತಿಭೆಯು ಸಹಜಗತಿಯಲ್ಲಿ ಅರಳಲು ಅನುವು ಮಾಡಿಕೊಡಬೇಕು. ಕಾರಂತರ ಬಳಿ ಶಿಕ್ಷಕರಿಗೆ ನೀಡಲು ಒಂದು ಸ್ನೇಹಪರ ಸಲಹೆಯಿತ್ತು. ಅದೆಂದರೆ, ಶಿಕ್ಷಕರು ತಮ್ಮನ್ನು ಶಿಕ್ಷಕರೆಂದಲ್ಲ, ಬದಲಿಗೆ ಸ್ವತಃ ನಿರಂತರ ವಿದ್ಯಾರ್ಥಿಯೆಂದು ಪರಿಭಾವಿಸುವುದು. ಕೇವಲ ಹಣಗಳಿಕೆಗೆ ಅಥವಾ ಭೌತಿಕ ಲಾಭಕ್ಕಾಗಿ ಶಿಕ್ಷಕ ವೃತ್ತಿಯನ್ನು ಆಯ್ದುಕೊಳ್ಳಬಾರದು, ಶಿಕ್ಷಕರಾಗುವವರಿಗೆ ಮಕ್ಕಳ ಜೊತೆ ಪ್ರೀತಿಯಿಂದ ಬೆರೆಯುವ, ಅವರೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವ ಸಾಮರ್ಥ್ಯವಿರಬೇಕು.

ಇಂತಹ ದೂರದೃಷ್ಟಿಯಿದ್ದಾಗ ನಮ್ಮ ಇಂದಿನ ಶಾಲೆಗಳು ಅನುಸರಿಸುವ ಉರುಹೊಡೆಯುವ ವಿಧಾನವನ್ನು ಆಧರಿಸಿದ ಕಲಿಕೆ ಹಾಗೂ ಮೌಲ್ಯಮಾಪನ ವ್ಯವಸ್ಥೆಗಳು ಸಂಪೂರ್ಣ ಪುರಾತನ ರೀತಿಯದ್ದಾಗಿ ಕಾಣುತ್ತವೆ. ಅವು ಆದರ್ಶವಾದ ಶೈಕ್ಷಣಿಕ ಆಚರಣೆಗಳೆಂದೆನಿಸುವುದಿಲ್ಲ. ಈ ಸ್ಪಷ್ಟತೆಯ ಹೊರತಾಗಿಯೂ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಸಚಿವಾಲಯವು ಹಲವಾರು ನೀತಿ ನಿರೂಪಕರು ಹಾಗೂ ಶಿಕ್ಷಣತಜ್ಞರ ಒತ್ತಡಕ್ಕೆ ಮಣಿದು

ತಿರೋಗಾಮಿ ಕ್ರಮವೊಂದನ್ನು ಕೈಗೊಂಡಿದೆ ಹಾಗೂ ಐದು ಮತ್ತು ಎಂಟನೆಯ ತರಗತಿಯ ಮಕ್ಕಳನ್ನು ಅನುತ್ತೀರ್ಣಗೊಳಿಸಬಹುದಾದ ನಿಯಮವನ್ನು ತರುವ ಮೂಲಕ ಗಡಿಯಾರವು ಹಿಂದಕ್ಕೋಡುವಂತೆ ಮಾಡಿದೆ.

## ಮಕ್ಕಳೊಂದಿಗೆ ಅನುಸಂಧಾನ

ಮಕ್ಕಳೊಂದಿಗೆ ತೊಡಗಿಕೊಳ್ಳುವ ಕಾರಂತರ ರೀತಿ ಅನನ್ಯವಾಗಿತ್ತು. ಜನಪ್ರಿಯ ಕನ್ನಡ ವಾರಪತ್ರಿಕೆ ತರಂಗದಲ್ಲಿ ನಿರಂತರವಾಗಿ ಒಂಬತ್ತು ವರ್ಷಗಳ ಕಾಲ ಪ್ರಕಟವಾದ 'ಬಾಲವನದಲ್ಲಿ ಕಾರಂತಜ್ಜ' ಎಂಬ ಹೆಸರಿನ ಅಂಕಣದಲ್ಲಿ ಅವರು ಮೂರರಿಂದ ಹದಿನೈದರ ವಯೋಮಾನದ ಮಕ್ಕಳ ಕುತೂಹಲಕಾರಿ ಪ್ರಶ್ನೆಗಳಿಗೆ ನೇರವಾಗಿ ಉತ್ತರಿಸುತ್ತಿದ್ದರು. ಪ್ರಶ್ನೆಗಳು ವಿಜ್ಞಾನ, ಸಾಮಾಜಿಕ ನಡವಳಿಕೆ, ಸಸ್ಯ ಮತ್ತು ಪ್ರಾಣಿ ಸಂಕುಲ, ಸಾಹಿತ್ಯ ಇತ್ಯಾದಿ ಎಲ್ಲಾ ಸಂಗತಿಗಳಿಗೂ ಸಂಬಂಧಿಸಿದ್ದಾಗಿರುತ್ತಿದ್ದವು. ಕಾರಂತರ ಅದ್ಭುತವಾದ ಬಹುಮುಖ ಕೌಶಲವು ಪಾಲಕರು ಮತ್ತು ಶಿಕ್ಷಕರಿಬ್ಬರಿಗೂ ಮಾದರಿಯಾಗಿದೆ. ಉದಾಹರಣೆಗೆ, ಅವರ ಅನುಸಂಧಾನದ ಕೆಲವು ಪ್ರಶ್ನೆ ಮತ್ತು ಉತ್ತರಗಳು ಹೀಗಿವೆ:

(ಅ) **ಹಕ್ಕಿಯೊಂದರ ರೆಕ್ಕೆ ವಿಮಾನಕ್ಕೆ ಬಡಿದರೆ ವಿಮಾನವು ಸುಟ್ಟು ಹೋಗುತ್ತದೆ ಎನ್ನಲಾಗುತ್ತದೆ. ಹೌದೇ?**

– ಇಲ್ಲ, ಹಾಗಿಲ್ಲವೇ ಇಲ್ಲ. ವಿಮಾನದ ಎಂಜಿನ್ನಿನ ಬಾಯಿಗೆ ಬಂದು ಹೊಡೆಯುವ ಹಕ್ಕಿಯು ಎಂಜಿನ್ನಿಗೆ ಹಾನಿಯನ್ನುಂಟು ಮಾಡುತ್ತದೆ. ಅದಕ್ಕೆ ಬದಲಾಗಿ, ಹಕ್ಕಿಯು ವಿಮಾನದ ರೆಕ್ಕೆಗಳ ಮುಂಭಾಗದ ಸಂಪರ್ಕಕ್ಕೆ ಬಂದರೆ, ಆಗ ವಿಮಾನದ ರೆಕ್ಕೆಗಳು ಮುರಿದು ಹೋಗಬಹುದು ಹಾಗೂ ಹಾರಾಟ ಕಷ್ಟವಾಗಬಹುದು.

(ಬ) **ನಮ್ಮ ದೇಹದಲ್ಲಿನ ಗಾಯಗೊಂಡ ಭಾಗವು ಚಿಕಿತ್ಸೆಗೊಳಪಡದಿದ್ದಲ್ಲಿ ಅದರಲ್ಲಿ ಏಕೆ ಕೀವು ತುಂಬಿಕೊಳ್ಳುತ್ತದೆ?**

– ಹೊರಗಿನ ಧೂಳು ಮತ್ತು ಗಾಳಿಯ ಮೂಲಕ ಗಾಯವಾದ ಭಾಗದಲ್ಲಿ ಬ್ಯಾಕ್ಟೀರಿಯಾಗಳು (ಸೂಕ್ಷ್ಮಾಣುಗಳು) ಪ್ರವೇಶಿಸುವುದರಿಂದ ಹೀಗೆ ಆಗುತ್ತದೆ.

(ಕ) **ಕಾಮನಬಿಲ್ಲು ಮಳೆಗಾಲದಲ್ಲಿ ಮಾತ್ರ ಏಕೆ ಕಾಣಿಸಿಕೊಳ್ಳುತ್ತದೆ? ಬೇಸಿಗೆಯಲ್ಲಿ ಏಕಿಲ್ಲ?**

– ಕಾಮನಬಿಲ್ಲನ್ನು ನೋಡಲು ನಮಗೆ ಸೂರ್ಯನ ಬೆಳಕಿನ ಅಗತ್ಯವಿದೆ. ಸೂರ್ಯನ ಬೆಳಕು ಮಳೆಹನಿಗಳ

ಮೂಲಕ ಹಾದುಹೋದಾಗ ಬಿಳಿಯ ಬಣ್ಣದ ಬೆಳಕು ಏಳು ಬಣ್ಣಗಳಾಗಿ ವಿಭಜಿತವಾಗುತ್ತದೆ. ಆ ಮೂಲಕ ಕಾಮನಬಿಲ್ಲನ್ನು ಉಂಟುಮಾಡುತ್ತದೆ. ಬೇಸಿಗೆಯಲ್ಲಿಯೂ ಕೂಡ ಮೋಡಗಳು ನೇರವಾಗಿ ಸೂರ್ಯನಿಗೆದುರಾಗಿ ಬಂದಾಗ ಕಾಮನಬಿಲ್ಲನ್ನು ಕಾಣಲು ಸಾಧ್ಯ.

## ಮಕ್ಕಳ ಸಾಹಿತ್ಯಕ್ಕೆ ಕೊಡುಗೆ

ಶಿವರಾಮ ಕಾರಂತರನ್ನು ಕುರಿತು ಅವರು ಮಕ್ಕಳೊಂದಿಗೆ ಹಾಗೂ ಮಕ್ಕಳಿಗಾಗಿ ಮಾಡಿದ ಕಾರ್ಯಗಳ ಸಂದರ್ಭದಲ್ಲಿ ಮಾತನಾಡುವಾಗ ಅವರು ಮಕ್ಕಳ ಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ಉಲ್ಲೇಖಿಸದೆ ಇರಲು ಸಾಧ್ಯವಿಲ್ಲ. ಅವರು ಸಂಪೂರ್ಣ ಮಕ್ಕಳಿಗಾಗಿಯೇ ಬರೆದ ಹನ್ನೊಂದು ಪುಸ್ತಕಗಳಲ್ಲದೇ 'ಬಾಲ ಪ್ರಪಂಚ' ಎಂಬ ಹೆಸರಿನಲ್ಲಿ ಮೂರು ಸಂಪುಟಗಳನ್ನು ಹೊಂದಿರುವ ಮಕ್ಕಳ ವಿಶ್ವಕೋಶವನ್ನು ಹೊರತಂದಿದ್ದಾರೆ. ಜೊತೆಗೆ, ಅವರು ಸಂಶೋಧನೆ ಮಾಡಿ ಬರೆದ 'ವಿಜ್ಞಾನ ಪ್ರಪಂಚ' ಎಂಬ ಹೆಸರಿನ ವಿಜ್ಞಾನ ವಿಶ್ವಕೋಶವು ಅವರಲ್ಲಿದ್ದ ಅಪರೂಪದ ಸ್ವಂತಿಕೆ ಹಾಗೂ ಬಹುಮುಖ ಕೌಶಲವನ್ನು ತೋರಿಸುತ್ತದೆ. ಇದು ಸಾಹಿತ್ಯ ಕ್ಷೇತ್ರದಲ್ಲಿರುವ ಹಲವರಲ್ಲಿ ಕಾಣದ ವಿರಳ ಗುಣ.

## ಜಾಗತಿಕ ದೃಷ್ಟಿ

ಮನುಷ್ಯ ಪ್ರಯತ್ನದ ಕುರಿತಾಗಿ ಮಾತನಾಡುತ್ತ ಕಾರಂತರು ಹೇಳಿದ್ದರು, 'ಬ್ರಹ್ಮಾಂಡಕ್ಕಿಂತ ಯಾರೂ ದೊಡ್ಡವರಲ್ಲ. ಅಗಾಧವಾದ ವಿಶ್ವದಲ್ಲಿ ತನ್ನ ಸೀಮಿತತೆಯನ್ನು ಮನುಷ್ಯ ಅರ್ಥಮಾಡಿಕೊಳ್ಳಬೇಕು. ತಾನು ಕೊಡುವುದಕ್ಕಿಂತ ಬದುಕಿನಿಂದ ತನಗೆ ಸಿಕ್ಕಿರುವುದು ಎಷ್ಟೋ ಪಾಲು ಹೆಚ್ಚು ಎನ್ನುವುದನ್ನು ಯಾವುದೇ ಬುದ್ಧಿವಂತ ವ್ಯಕ್ತಿಯೂ ಅರ್ಥಮಾಡಿಕೊಳ್ಳಬಲ್ಲ. ಈ ಅರಿವು ಅವನನ್ನು ವಿನೀತನನ್ನಾಗಿಸಬೇಕು. ತನ್ನ ಸುತ್ತಲೂ ಇರುವ ಪ್ರತಿಯೊಂದರ ಕುರಿತು ಕುತೂಹಲವುಳ್ಳವನನ್ನಾಗಿಸಬೇಕು. ಪ್ರತಿಯೊಂದನ್ನೂ ತಿಳಿದುಕೊಳ್ಳುವುದರ, ಹಂಚಿಕೊಳ್ಳುವುದರ ಮೂಲಕ ಬದುಕನ್ನು ಇನ್ನಷ್ಟು ಸಮೃದ್ಧಗೊಳಿಸಿಕೊಳ್ಳುವುದರ ಮೂಲಕ ಜೀವನದಲ್ಲಿ ಸಂತೃಪ್ತಿಯನ್ನು ಕಾಣಬೇಕು.' ಕಾರಂತರ ಜಾಗತಿಕ ದೃಷ್ಟಿಯು ಉನ್ನತವಾದುದು. ನಾವು ಇಂದು ಬೆಳೆಸಿಕೊಳ್ಳಬೇಕಾದ ದೃಷ್ಟಿಕೋನ ಇದೇ.

■

ಬಿ ಫಸ್ಟ್, 01-09-2017



**25ನೇ ಸೆಪ್ಟೆಂಬರ್ 2014–** ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಬಿಜಾಸ್‌ಪುರ, ಲಕ್ಷ್ಮೀಪುರ ಕ್ಲಸ್ಟರ್, ಶೋರಾಪುರ ಬ್ಲಾಕ್‌ನಲ್ಲಿ ನಡೆಯುತ್ತಿರುವ ಬೆಳಗಿನ ಪ್ರಾರ್ಥನಾ ಸಭೆ. ಇದು ಶಾಲಾ ಪ್ರಕ್ರಿಯೆಗಳ ಮುಖ್ಯವಾದೊಂದು ಭಾಗವಾಗಿದ್ದು ಮಕ್ಕಳ ಪ್ರತಿಭೆಯ ಅನಾವರಣಕ್ಕೆ ಹಾಗೂ ಅವರ ಸಮಗ್ರ ಬೆಳವಣಿಗೆಗೆ ಪೂರಕವಾಗಿ ಮಕ್ಕಳಿಂದಲೇ ಆಯೋಜಿಸಬಹುದಾದ ಚಟುವಟಿಕೆಗಳನ್ನು ಹೊಂದಿರುತ್ತದೆ. ಹಿರಿಯ ವಿದ್ಯಾರ್ಥಿಗಳು ಸಕ್ರಿಯವಾಗಿರುವ ಈ ಶಾಲೆಯಲ್ಲಿ ಹೈದರಾಬಾದ್ (ಕಲ್ಯಾಣ) ಕರ್ನಾಟಕ ಅಭಿವೃದ್ಧಿ ಮಂಡಲಿ ಹೊಸ ತರಗತಿ ಕೋಣೆಗಳನ್ನು ಕಟ್ಟಿಸಿದ್ದು, ಮಕ್ಕಳ ಪ್ರವೇಶಾತಿ ಪ್ರಮಾಣ ಹೆಚ್ಚಿರುವುದು ಉತ್ತಮ ಬೆಳವಣಿಗೆ.

# ಭಾಗ 2

# ಶೈಕ್ಷಣಿಕ ನೀತಿ ನಿರೂಪಣೆ ಮತ್ತು ಆಡಳಿತ



ಶಿಕ್ಷಣದ ಧ್ಯೇಯೋದ್ದೇಶಗಳನ್ನು ಈಡೇರಿಸಬೇಕಾದರೆ, ಶಿಕ್ಷಕರು ಹಾಗೂ ಅವರ ಮುಖ್ಯ ಕಾರ್ಯವಾದ ಬೋಧನೆಗೆ ಪ್ರಧಾನವಾದ ಸ್ಥಾನವನ್ನು ಕೊಡಲೇಬೇಕು. ಎಲ್ಲ ಅಧಿಕಾರಿಗಳಲ್ಲಿಯೂ ತಾವು ಸುಗಮಕಾರರು, ಶಿಕ್ಷಕರಿಗೆ ತಮ್ಮ ಪಾತ್ರವನ್ನು ನಿರ್ವಹಿಸುವಲ್ಲಿ ಬೆಂಬಲ ನೀಡುವುದಕ್ಕೆ ತಾವು ಇರುವುದು ಎಂಬ ಸ್ಪಷ್ಟತೆ ಇರಬೇಕು.

# ನಮ್ಮ ಶಿಕ್ಷಕರಿಗೆ ಸ್ವಲ್ಪ ಬಿಡುಗಡೆ ನೀಡಬೇಕಿದೆ

ಕೆಲವು ವರ್ಷಗಳಿಂದ ನನಗೆ ಪರಿಚಿತರಾಗಿರುವ, ಮಧ್ಯ ಕರ್ನಾಟಕದ ಭಾಗಕ್ಕೆ ಸೇರಿದ ಕ್ಷೇತ್ರ ಶಿಕ್ಷಣಾಧಿಕಾರಿ(ಬಿಇಓ)ಯೊಬ್ಬರು ಇತ್ತೀಚೆಗೆ ಕರೆ ಮಾಡಿದ್ದರು. ನಾವು ಆಯೋಜಿಸುತ್ತಿರುವ ವಿಚಾರ ಸಂಕಿರಣವೊಂದಕ್ಕೆ ಅವರು ಕಳುಹಿಸಿದ್ದ ಸಾರ ಲೇಖನವು ತಲುಪಿದೆಯೋ ಇಲ್ಲವೋ ಎನ್ನುವುದನ್ನು ವಿಚಾರಿಸಲು ಮಾಡಿದ ಕರೆ ಅದಾಗಿತ್ತು. ಆದರೆ ಕಾರ್ಯರಂಗದಲ್ಲಿ ಕೆಲಸಗಳು ಹೇಗೆ ನಡೆಯುತ್ತಿವೆ ಎನ್ನುವುದರ ಬಗ್ಗೆ ಕೆಲಕಾಲ ಹರಟಲು ನಾವು ಈ ಸಂದರ್ಭವನ್ನು ಉಪಯೋಗಿಸಿಕೊಂಡೆವು. ಡಯಟ್‌ನಲ್ಲಿ ಹಿರಿಯ ಉಪನ್ಯಾಸಕರಾಗಿದ್ದ ಈ ಮಹಿಳೆ ಎಂಟು ತಿಂಗಳುಗಳ ಹಿಂದಷ್ಟೇ ಬಿಇಓ ಆಗಿ ಅಧಿಕಾರ ವಹಿಸಿಕೊಂಡಿದ್ದರು. ಆರಂಭದಲ್ಲಿ ತಮ್ಮ ಸುತ್ತಮುತ್ತಲಿನ ಜನರು ಹೊಂದಿದ್ದ ಸಂದೇಹವನ್ನು ತಾನು ಹೇಗೆ ಎದುರಿಸಿದೆ ಹಾಗೂ ತನ್ನ ಹೊಸ ಪಾತ್ರದಲ್ಲಿ ನೆಲೆಗೊಂಡೆ ಎನ್ನುವುದನ್ನು ಆತ್ಮವಿಶ್ವಾಸದಿಂದ ವಿವರಿಸಿದರು. ಈ ಮೊದಲು ತಾವು ನಿರ್ವಹಿಸಿದ ಶೈಕ್ಷಣಿಕ ಪಾತ್ರವು ಬಿಇಓ ಆಗಿ ಕೆಲಸ ಮಾಡಲು ತಮಗೆ ಹೇಗೆ ನೆರವಾಗುತ್ತಿದೆ ಎನ್ನುವುದರ ಕುರಿತು ಅವರದೇ ಪರ್ಯಾಲೋಚನೆಯು ಗಮನಾರ್ಹವಾಗಿತ್ತು.

ಬಿಇಓ ಆಗಿ ಅಧಿಕಾರ ವಹಿಸಿಕೊಂಡ ಮೇಲೆ ಅವರು ದೃಢವಾಗಿ ಅನುಸರಿಸಲು ಆರಂಭಿಸಿದ ಎರಡು ವಿಶಿಷ್ಟ ಆಚರಣೆಗಳು ತಾಲ್ಲೂಕಿನಲ್ಲಿರುವ

ಶಿಕ್ಷಕರು ಹಾಗೂ ಇತರ ಸಹೋದ್ಯೋಗಿಗಳಿಗೆ ಒಂದು ಸ್ಪಷ್ಟ ಸಂದೇಶವನ್ನು ನೀಡಿತು.

ಒಂದು, ಅವರು ಯಾವಾಗ ಯಾವುದೇ ಶಾಲೆಗೆ ಭೇಟಿ ನೀಡಲಿ, ಒಂದು ಅಥವಾ ಎರಡು ತರಗತಿಕೋಣೆಗಳಿಗೆ ಹೋಗಿ, ಅಲ್ಲಿ ನಡೆಯುವುದೆಲ್ಲವನ್ನೂ ಗಮನಿಸುತ್ತ ಹಿಂದಿನ ಸಾಲಿನಲ್ಲಿ ಮಾತನಾಡದೆ ಕುಳಿತಿರುತ್ತಿದ್ದರು. ಎರಡು, ಶೌಚಾಲಯ, ಕುಡಿಯುವ ನೀರು ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಹೇಗೆ ನಿರ್ವಹಿಸಲಾಗುತ್ತಿದೆ ಎಂಬುದನ್ನು ಪರಿಶೀಲಿಸಲು ಅವರು ಶಾಲೆಯ ಸುತ್ತಲೂ ಓಡಾಡಿ ಬರುತ್ತಿದ್ದರು.

ಕಳೆದ ಕೆಲ ಸಮಯದಿಂದ ಈಚೆಗೆ ಸ್ವಚ್ಛ ಮಾಡಲು ಬಳಸುವ ಫಿನೈಲ್‌ನ್ನು ಶಾಲೆಗಳಲ್ಲಿ ಹೆಚ್ಚೆಚ್ಚು ಕೊಂಡುಕೊಳ್ಳಲಾಗುತ್ತಿದೆ ಎನ್ನುವ ಮಾತು ಎಲ್ಲೆಡೆ ಹರಡಿದೆ ಎಂದು ತಮಾಷೆಯಾಗಿ ಹೇಳಿದರು. ತಮ್ಮನ್ನು ಭೇಟಿಯಾಗಲು ಬಯಸುವ ಯಾರಿಗೇ ಆದರೂ ಸುಲಭವಾಗಿ ಸಿಗುತ್ತಿದ್ದರು. ತಮ್ಮ ಅಧಿಕಾರವನ್ನು ಎಲ್ಲಿಯೂ ಪ್ರದರ್ಶಿಸುತ್ತಿರಲಿಲ್ಲ. ಎಲ್ಲಕ್ಕಿಂತ ಮುಖ್ಯವಾದದ್ದು, ಅವರು ತಮ್ಮ ಬ್ಲಾಕ್‌ನಲ್ಲಿ ಎಲ್ಲ ಮಕ್ಕಳಿಗೂ ಕಲಿಯಲು ಹಾಗೂ ಶಿಕ್ಷಕರಿಗೆ ಕಲಿಸಲು ಅನುಕೂಲಕರ ವಾತಾವರಣವನ್ನು ನಿರ್ಮಿಸುವುದರ ಮೇಲೆ ಗಮನವನ್ನು ಕೇಂದ್ರೀಕರಿಸುತ್ತಿದ್ದಾರೆ. ಅದೇ ವೇಳೆಗೆ, ಕೆಲಸದ ಬಗ್ಗೆ ಆಲಸ್ಯದ ಮನೋಭಾವವನ್ನು ಹೊಂದಿರುವವರಿಗೆ ಕೂಡ ಅವರೊಂದು ನಿಷ್ಠುರವಾದ ಸಂದೇಶವನ್ನು ರವಾನಿಸಿದ್ದರು.

ಹಿಂದಿನ ವರ್ಷ ಇದೇ ವೇಳೆಗೆ, ಶಿಕ್ಷಣ ಇಲಾಖೆಯಲ್ಲಿರುವ ಇನ್ನೊಬ್ಬ ಸ್ನೇಹಿತರನ್ನು ಬಿಇಓ ಹುದ್ದೆಯಿಂದ ಮಲೆನಾಡು ಪ್ರದೇಶದಲ್ಲಿರುವ ಡಯಟ್‌ಗಳಲ್ಲೊಂದಕ್ಕೆ ಬೋಧಕರ ಹುದ್ದೆಗೆ ವರ್ಗಾಯಿಸಲಾಯಿತು. ಹುದ್ದೆ ಯಾವುದೇ ಇರಲಿ, ಅವರು ಯಾವಾಗಲೂ ಸರ್ಕಾರಿ ಶಾಲೆಗಳನ್ನು ಹೇಗೆ ಬಲಪಡಿಸಬೇಕು ಎನ್ನುವುದರ ಕುರಿತೇ ಯೋಚಿಸುತ್ತಿದ್ದರು ಹಾಗೂ ಇದಕ್ಕೆ ಸಂಬಂಧಿಸಿ, ವೃತ್ತಿಯಲ್ಲಿನ ತಮ್ಮ ಸಹೋದ್ಯೋಗಿಗಳಿಂದ ಹೊಸ ವಿಚಾರಗಳನ್ನು ಪಡೆದುಕೊಳ್ಳಲು ಉತ್ಸುಕರಾಗಿದ್ದರು.

ಇವು ಶಾಲೆಗಳಲ್ಲಿ ಕೆಲವು ನಿರ್ದಿಷ್ಟ ಶೈಕ್ಷಣಿಕ ಅಭ್ಯಾಸ-ಆಚರಣೆಗಳನ್ನು ಸುಧಾರಿಸುವುದರ ಕುರಿತಾಗಿರುತ್ತಿದ್ದವು ಅಥವಾ ಕಿರಿಯ ಪ್ರಾಥಮಿಕ ಹಂತದಲ್ಲಿ ಕಡಿಮೆ ಇರುವ ಮಕ್ಕಳ ಕಲಿಕಾಮಟ್ಟವನ್ನು ಏರಿಸುವುದರ ಕುರಿತಾಗಿರುತ್ತಿದ್ದವು ಅಥವಾ ಪ್ರೌಢಶಾಲಾ ಮಟ್ಟದಲ್ಲಿ ವಿಜ್ಞಾನ ಮತ್ತು ಇಂಗ್ಲಿಷ್ ವಿಷಯಗಳಿಗೆ ಸಂಬಂಧಿಸಿದಂತೆ ಮಕ್ಕಳ ಸಾಮರ್ಥ್ಯವನ್ನು ಸುಧಾರಿಸುವುದಾಗಿದ್ದಿರಬಹುದು. ತಾವು ಬಿಇಓ ಆಗಿದ್ದಾಗ, ಎಲ್ಲಾ ಭಾಗೀದಾರರೊಡನೆ ಧನಾತ್ಮಕ

ಸಂಬಂಧವೊಂದನ್ನು ಬೆಸೆಯುವುದರ ಮೂಲಕ ತಮ್ಮ ಬ್ಲಾಕ್‌ನಲ್ಲಿ ಉಲ್ಲಾಸಮಯ ವಾತಾವರಣವನ್ನು ನಿರ್ಮಿಸಲು ಅವರು ಶ್ರಮಿಸಿದರು. ಚಿಕ್ಕದಾದರೂ ನವೀನ ಆಚರಣೆಯನ್ನು ಜಾರಿಗೊಳಿಸುವುದರ ಮೂಲಕ ಮತ್ತು ತಮ್ಮ ಮಕ್ಕಳನ್ನು ಖಾಸಗಿ ಶಾಲೆಗಳಿಂದ ಮರಳಿ ಸರ್ಕಾರಿ ಶಾಲೆಗಳಿಗೆ ಕರೆತರಲು ಪೋಷಕರನ್ನು ಪ್ರೇರೇಪಿಸುವುದರ ಮೂಲಕ ಹಲವಾರು ಪೋಷಕರ ವಿಶ್ವಾಸವನ್ನು ಪುನಃಸ್ಥಾಪಿಸುವಲ್ಲಿ ಯಶಸ್ವಿಯಾದರು.

2017ರಲ್ಲಿ ರಾಜ್ಯದಾದ್ಯಂತ ಕ್ಷೇತ್ರ ಮಟ್ಟದ ಇನ್ನೂರೈವತ್ತು ಅಧಿಕಾರಿಗಳನ್ನು ವರ್ಗಾವಣೆ ಮಾಡಲಾಗಿದ್ದು ಇದು ಶಿಕ್ಷಣ ಇಲಾಖೆಯಲ್ಲಿ ನಡೆದ ಅತ್ಯಂತ ದೊಡ್ಡ ಪ್ರಮಾಣದ ಆಡಳಿತಾತ್ಮಕ ಮರುಸಂಯೋಜನಾ ಕ್ರಮವೆನ್ನುವುದು ಸ್ಪಷ್ಟವಾಗಿತ್ತು. ಇವರಿಬ್ಬರದು ಅದರಲ್ಲಿನ ಕೇವಲ ಎರಡು ಉದಾಹರಣೆಗಳು ಅಷ್ಟೇ. ಶೈಕ್ಷಣಿಕ ಒಲವುಳ್ಳವರಾಗಿದ್ದೂ ಆ ತನಕ ಇಂತಹ ಹುದ್ದೆಗಳಲ್ಲಿ ಕೆಲಸ ಮಾಡಲು ಸಾಧ್ಯವಾಗಿರದ ಅನೇಕ ಅಧಿಕಾರಿಗಳಿಗೆ ಮೊದಲ ಬಾರಿಗೆ ಈ ಪ್ರಮುಖ ಹುದ್ದೆಗಳನ್ನು ಪಡೆಯಲು ಅವಕಾಶವನ್ನು ಇದು ತೆರೆದಿಟ್ಟಿತು. ಕೆಲಮಟ್ಟಿಗೆ ವಿರೋಧ ವ್ಯಕ್ತವಾದರೂ ಕೂಡ ಸರ್ಕಾರವು ಮೂರು ವರ್ಷಗಳ ಸೇವಾವಧಿಯ ನಂತರ ಬ್ಲಾಕ್ ಮತ್ತು ಜಿಲ್ಲಾಮಟ್ಟದ ಎಲ್ಲಾ ಅಧಿಕಾರಿಗಳನ್ನು ವರ್ಗಾಯಿಸುವ ನಿಯಮವನ್ನು ಕಟ್ಟುನಿಟ್ಟಾಗಿ ಕಾರ್ಯಗತಗೊಳಿಸಿತು.

ಬಿಇಓಗಳಿಗೆ ತಮ್ಮ ಬ್ಲಾಕ್‌ಗಳಲ್ಲಿ ಶಿಕ್ಷಣದ ಗುಣಮಟ್ಟ ಮತ್ತು ಸಮತೆಯನ್ನು ಸುಧಾರಿಸಲು ಗಮನಾರ್ಹ ಮಟ್ಟದ ಸ್ವಾಯತ್ತತೆಯಿರುತ್ತದೆ. ಬ್ಲಾಕ್ (ಕ್ಷೇತ್ರ) ಎನ್ನುವುದು ಶೈಕ್ಷಣಿಕ ಆಡಳಿತದ ಉದ್ದೇಶದಿಂದ ರಚಿಸಲಾದ, ಜಿಲ್ಲೆಗಿಂತ ಸಣ್ಣ ಭೌಗೋಳಿಕ (ಚಿಕ್ಕ ಉಪ-ಜಿಲ್ಲಾ) ಪ್ರದೇಶ. ಬ್ಲಾಕ್ ಕಚೇರಿಗಳ ಮೂಲಕ ಇದಕ್ಕೆ ಸಂಬಂಧಿಸಿದ ಯೋಜನೆಗಳನ್ನು ಮಾಡಲಾಗುತ್ತದೆ ಹಾಗೂ ಕಾರ್ಯಗತಗೊಳಿಸಲಾಗುತ್ತದೆ. ಸರ್ಕಾರಿ, ಅನುದಾನಿತ ಹಾಗೂ ಅನುದಾನರಹಿತ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳೆಲ್ಲವೂ ಸೇರಿದಂತೆ ಸರಾಸರಿ ಮುನ್ನೂರರಿಂದ ನಾನೂರು ಶಾಲೆಗಳನ್ನು ಪ್ರತಿಯೊಂದು ಬ್ಲಾಕ್ ಒಳಗೊಂಡಿರುತ್ತದೆ.

ತಮ್ಮ ಬ್ಲಾಕ್‌ನಲ್ಲಿರುವ ಎಲ್ಲ ಶಾಲೆಗಳೂ ಶಿಕ್ಷಣ ಹಕ್ಕು ಕಾಯ್ದೆಯ ನಿಯಮಗಳಿಗೆ ಬದ್ಧವಾಗಿ ನಡೆದುಕೊಳ್ಳುವಂತೆ ಮಾಡುವ ಅಧಿಕಾರ ವ್ಯಾಪ್ತಿ ಇವರಿಗಿರುತ್ತದೆ. ಇದರರ್ಥ, ಆರ್ಥಿಕವಾಗಿ ದುರ್ಬಲ ಹಾಗೂ ಅವಕಾಶ ವಂಚಿತ ವರ್ಗಕ್ಕೆ ಸೇರಿದ ಮಕ್ಕಳಿಗೆ ನೆರೆಹೊರೆಯಲ್ಲಿನ ಅನುದಾನರಹಿತ ಖಾಸಗಿ ಶಾಲೆಗಳು ಶೇ.25 ಮೀಸಲಾತಿಯನ್ನು ನೀಡಬೇಕು ಎಂದು ಹೇಳುವ ಶಿಕ್ಷಣ ಹಕ್ಕು ಕಾಯ್ದೆಯ ಸೆ. 12 (1) (c) ಅಧಿನಿಯಮವನ್ನೂ ಮೀರಿ ಕೆಲಸ ಮಾಡುವುದು. ಜೊತೆಗೆ, ಆ ಪ್ರದೇಶದ ವ್ಯಾಪ್ತಿಯಲ್ಲಿರುವ ಎಲ್ಲ ಮಕ್ಕಳಿಗೂ ಸಾರ್ವತ್ರಿಕ ಪ್ರವೇಶಾವಕಾಶ,

ಆರೋಗ್ಯ, ಭದ್ರತೆ ಹಾಗೂ ಸುರಕ್ಷತೆ, ಗುಣಮಟ್ಟದ ಹಾಗೂ ಸಮತೆಯ ಶಿಕ್ಷಣದಂತಹ ಇನ್ನಿತರ ಪ್ರಮುಖ ಸೌಲಭ್ಯಗಳು ಜಾರಿಯಾಗುವ ನಿಟ್ಟಿನಲ್ಲಿ ಹೆಚ್ಚಿನ ಕಾರ್ಯಗಳನ್ನು ಮಾಡುವುದು. ಇದಕ್ಕಾಗಿ, ಶಾಲಾ ಅಭಿವೃದ್ಧಿ ಹಾಗೂ ಉಸ್ತುವಾರಿ ಸಮಿತಿಗಳು, ಚುನಾಯಿತ ಪ್ರತಿನಿಧಿಗಳು ಹಾಗೂ ಸಮುದಾಯವೂ ಸೇರಿದಂತೆ ಎಲ್ಲಾ ಭಾಗೀದಾರರನ್ನೂ ತೊಡಗಿಸಿಕೊಂಡು, ತಂಡವನ್ನು ಸಬಲೀಕರಿಸುವುದರ ಮೂಲಕ ತಮ್ಮ ಬ್ಲಾಕ್‌ಗೆ ಸಂಬಂಧಿಸಿದಂತೆ ದೀರ್ಘಕಾಲಿಕ ಕಾಣ್ಕೆಯೊಂದನ್ನು ಬಿಇಓಗಳು ಅಭಿವೃದ್ಧಿಪಡಿಸಬೇಕಾಗುತ್ತದೆ.

ಸಾರ್ವತ್ರಿಕ ಪ್ರವೇಶಾವಕಾಶ ಹಾಗೂ ಮಕ್ಕಳು ಶಾಲೆಯಲ್ಲಿ ಉಳಿಯುವಂತೆ ಮಾಡುವ ನಿಟ್ಟಿನಲ್ಲಿ ಅವರು ಕೆಲಸ ಮಾಡಬೇಕಾಗುತ್ತದೆ. ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಸುಧಾರಿಸುವ, ಶಿಕ್ಷಕರ ಸಾಮರ್ಥ್ಯವನ್ನು ಹೆಚ್ಚಿಸುವ ದಿಸೆಯಲ್ಲಿ ಕಾರ್ಯೋನ್ಮುಖರಾಗಬೇಕಾಗುತ್ತದೆ. ವಿಶೇಷವಾಗಿ ದೂರದ ಮತ್ತು ಒಳನಾಡಿನ ಶಾಲೆಗಳಲ್ಲಿ ಕ್ರಮತಪ್ಪಿದ ವಿದ್ಯಾರ್ಥಿ ಶಿಕ್ಷಕ ಅನುಪಾತವನ್ನು ಸರಿಪಡಿಸುವತ್ತ ಗಮನಹರಿಸಿ, ಮಕ್ಕಳ ಕಲಿಕೆಯನ್ನು ಹೆಚ್ಚಿಸಬೇಕಿದೆ. ಆಗಾಗ ಈ ಧ್ಯೇಯೋದ್ದೇಶಗಳ ಪರಿಣಾಮಕಾರಿ ಮೇಲ್ವಿಚಾರಣೆ ಹಾಗೂ ಅನುಷ್ಠಾನಗಳಿಗೆ ಒತ್ತು ನೀಡಬೇಕಿದ್ದು ತೀವ್ರ ಸ್ವರೂಪದ ಅಂತರಗಳಿರುವಲ್ಲಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಬೇಕಿರುತ್ತದೆ.

ಬ್ಲಾಕ್ ಮಟ್ಟದಲ್ಲಿ ಬದಲಾವಣೆಗಳನ್ನು ತರಲು ಬಿಇಓಗಳು ಪರಿಣಾಮಕಾರಿ ಅಧಿಕಾರಿಗಳಾಗಿದ್ದಾರೆ. ಜೊತೆಗೆ ಅವರ ಮೇಲಿರುವ ಆಡಳಿತಾತ್ಮಕ ಹೊಣೆಗಳು ಬ್ಲಾಕ್‌ನ ಶೈಕ್ಷಣಿಕ ಮಟ್ಟವನ್ನು ಬಲಪಡಿಸುವ ಸಾಧನಗಳಾಗಿವೆ. ಹಾಗಿದ್ದರೂ ಕೂಡ ಹಲವು ಬಾರಿ ಅವರು ಭಾರಿ ಕೆಲಸ ಕಾರ್ಯಗಳ ಜಂಜಾಟದಲ್ಲಿ ಸಿಕ್ಕಿಕೊಂಡು, ಬಹಳಷ್ಟನ್ನು ಮಾಡಲು ಹೋಗಿ ಘನವಾದದ್ದೇನನ್ನೂ ಮಾಡಿಮುಗಿಸದೆ ಇರುವುದೂ ಇದೆ.

ಕೆಲವು ವರ್ಷಗಳ ಹಿಂದೆ ಪಕ್ಕದ ಜಿಲ್ಲೆಯ ಇನ್ನೊಬ್ಬ ಪ್ರಾಮಾಣಿಕ ಬಿಇಓ ಅವರೊಡನೆ ನಡೆದ ಮಾತುಕತೆ ನೆನಪಾಗುತ್ತಿದೆ. ಅವರಿಗೆ ದಿನಚರಿಯನ್ನು ಬರೆದಿಡುವ ಅಭ್ಯಾಸವಿತ್ತು. ಅವರ ಸಮಯದ ಸುಮಾರು ಮೂರನೆಯ ಎರಡು ಭಾಗವು ಹಲವರೊಡನೆ ದೂರವಾಣಿಯಲ್ಲಿ ಮಾತನಾಡಲು ಅಥವಾ ಸಭೆಗಳಲ್ಲಿ ಭಾಗವಹಿಸುವುದರಲ್ಲಿಯೇ ಕಳೆದುಹೋಗುತ್ತಿತ್ತು.

ಸಾಧಾರಣವಾಗಿ, ತಮ್ಮ ಕ್ಷೇತ್ರದಲ್ಲಿ ಬಿಡುವಿಲ್ಲದಂತೆ ಓಡಾಡಿ, ಹಲವಾರು ಸಭೆಗಳಲ್ಲಿ ಭಾಗವಹಿಸಿದ ನಂತರ ಅವರು ತಮ್ಮ ಕಚೇರಿಯನ್ನು ತಲುಪುತ್ತಿದ್ದುದು ಸಂಜೆ ಸುಮಾರು ನಾಲ್ಕು ಗಂಟೆಗಷ್ಟೇ. ಅಷ್ಟು ಹೊತ್ತಿಗೆ, ಬಾಕಿ ಉಳಿದ ಕಾಗದ ಪತ್ರಗಳ

ಕೆಲಸವು ಅವರಿಗಾಗಿ ಕಾಯುತ್ತಿತ್ತು. ಇದೆಲ್ಲದರಿಂದ ಅವರಿಗೆ ಸಂತೋಷವೇನೂ ಆಗುತ್ತಿರಲಿಲ್ಲ. ಆದರೆ ಆ ಒತ್ತಡದ ದಿನಚರಿಯಿಂದ ಹೊರಬರಲೂ ಆಗುತ್ತಿರಲಿಲ್ಲ. ಇಷ್ಟವಿಲ್ಲದಿದ್ದರೂ ಹಲವಾರು ಸಂಗತಿಗಳು ಬಂದು ಅವರಿಗೆದುರಾಗುತ್ತಿದ್ದವು. ರಾಜಕೀಯ ನೇತಾರರೂ ಸೇರಿದಂತೆ ಹಲವಾರು ಜನರು ಅವರ ಮೇಲಿಟ್ಟಿದ್ದ ನಿರೀಕ್ಷೆಗಳನ್ನು ಅವರು ಚಾತುರ್ಯದಿಂದ ನಿಭಾಯಿಸಬೇಕಾಗಿತ್ತು.

ಶಿಕ್ಷಣದ ಧ್ಯೇಯೋದ್ದೇಶಗಳನ್ನು ಈಡೇರಿಸಬೇಕಾದರೆ, ಶಿಕ್ಷಕರು ಹಾಗೂ ಅವರ ಮುಖ್ಯ ಕಾರ್ಯವಾದ ಬೋಧನೆಗೆ ಪ್ರಧಾನ ಸ್ಥಾನವನ್ನು ಕೊಡಲೇಬೇಕು. ರಾಜ್ಯದಿಂದ ಹಿಡಿದು ಬ್ಲಾಕ್ ಹಾಗೂ ಕ್ಲಸ್ಟರ್ ಮಟ್ಟದವರೆಗೂ ಶೈಕ್ಷಣಿಕ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವ ಎಲ್ಲ ಅಧಿಕಾರಿಗಳಲ್ಲಿಯೂ ತಾವು ಸುಗಮಕಾರರು, ಶಿಕ್ಷಕರಿಗೆ ತಮ್ಮ ಪಾತ್ರವನ್ನು ನಿರ್ವಹಿಸುವಲ್ಲಿ ಬೆಂಬಲ ನೀಡುವುದಕ್ಕೆ ಮಾತ್ರ ತಾವು ಇರುವುದು ಎಂಬ ಸ್ಪಷ್ಟತೆ ಮೂಡಬೇಕು. ಇಂತಹ ಹುದ್ದೆಗಳಿಗೆ ಸೂಕ್ತವಾದ ಜನರನ್ನು ಆಯ್ಕೆ ಮಾಡುವುದರಿಂದ ಹಾಗೂ ಅವರಿಗೆ ಕಾರ್ಯ ನಿರ್ವಹಿಸಲು ಸ್ವಾತಂತ್ರ್ಯವನ್ನು ನೀಡುವುದರಿಂದ ಎಲ್ಲಾ ಮಕ್ಕಳಿಗೂ ಗುಣಮಟ್ಟದ ಶಿಕ್ಷಣವನ್ನು ನೀಡುವುದಕ್ಕೆ ತುಂಬಾ ಸಹಾಯವಾಗುತ್ತದೆ.

■

(ಬಿ ಫಸ್ಟ್, 16–03–2018)



ಶಿಕ್ಷಣ ವ್ಯವಸ್ಥೆಯಲ್ಲಿ ಬಿಆರ್‌ಸಿ ಮತ್ತು ಸಿಆರ್‌ಸಿಗಳ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ಕೆಲವು ಮುಖ್ಯ ಪ್ರಶ್ನೆಗಳನ್ನು ಎತ್ತುವುದು ಅನಿವಾರ್ಯ. ಈ ಹುದ್ದೆಗಳ ಇರುವಿಕೆಯಿಂದ ವ್ಯವಸ್ಥೆಯು ಯಾವ ಲಾಭವನ್ನು ಪಡೆಯಲು ಬಯಸುತ್ತದೆ? ಅವರು ಇಲ್ಲದಿದ್ದರೂ ಕೂಡ ಯಾರಿಗಾದರೂ ನಷ್ಟವಾಗುತ್ತದೆಯೇ?

# ಹಾಡು ಹೊಗಳಿಕೆಗಳಿಲ್ಲದ ನಮ್ಮ ಶಿಕ್ಷಣ ವ್ಯವಸ್ಥೆಯ ಅಜ್ಞಾತ ಕಾಲಾಳುಗಳು

ಅದು 2011ರ ಜೂನ್ ತಿಂಗಳು. ನವದೆಹಲಿಯ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಶಾಲಾ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆಯು ರಚಿಸಿದ ಸಮಿತಿಯೊಂದು ಜಿಲ್ಲಾ ಮಟ್ಟದಿಂದ ಕೆಳಗೆ ಬಿಆರ್‌ಸಿ ಹಾಗೂ ಸಿಆರ್‌ಸಿಗಳನ್ನು ಬಲಪಡಿಸುವುದಕ್ಕಾಗಿ ಮತ್ತು ಪುನಶ್ಚೇತನಗೊಳಿಸುವುದಕ್ಕಾಗಿ ಮಾರ್ಗಸೂಚಿಯೊಂದನ್ನು ಸಿದ್ಧಪಡಿಸಿತ್ತು. ಬಿಆರ್‌ಸಿ ಮತ್ತು ಸಿಆರ್‌ಸಿಗಳು ಇಲ್ಲದಿದ್ದರೆ ಯಾರಿಗೆ ನಷ್ಟವಾಗುತ್ತದೆ ಎಂಬ ವಿಚಾರ ಪ್ರಚೋದಕ ಪ್ರಶ್ನೆಯನ್ನು ತನ್ನ ಕರಡು ವರದಿಯಲ್ಲಿ ಮುಂದಿಟ್ಟಿತ್ತು. ಈ ಪ್ರಶ್ನೆಯು ಇಂದಿಗೂ ಉಚಿತ ಮತ್ತು ಪ್ರಸ್ತುತವಾಗಿದೆ.

ವರದಿಯು ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಯೊಬ್ಬರ ಸಾಧಾರಣ ದಿನವೊಂದನ್ನು ಕಣ್ಣಿಗೆ ಕಟ್ಟುವ ಹಾಗೆ ಸವಿವರವಾಗಿ ಹಿಡಿದಿಟ್ಟಿದೆ. ಇಂತಹ ಸಂಪನ್ಮೂಲ ವ್ಯಕ್ತಿಗಳಲ್ಲಿ ಅನೇಕರು ಹೇಗೆ ಕಾರ್ಯ ನಿರ್ವಹಿಸುತ್ತಿದ್ದಾರೆ ಎನ್ನುವುದನ್ನು ಇದು ಪ್ರಾತಿನಿಧಿಕ ರೂಪದಲ್ಲಿ ಸಂಕ್ಷಿಪ್ತವಾಗಿ ನಿರೂಪಿಸುತ್ತದೆ. ಬೆಳಗ್ಗೆ ಒಂಬತ್ತೂವರೆಗೆ ತರಗತಿಯೊಂದನ್ನು ಪರಿವೀಕ್ಷಿಸುವ ಮೂಲಕ ದಿನವನ್ನು ಆರಂಭಿಸಲು ಸಿಆರ್‌ಪಿಯೊಬ್ಬರು ಶಾಲೆಯೊಂದಕ್ಕೆ ತೆರಳುತ್ತಾರೆ. ಹತ್ತು ಗಂಟೆಗೆ ತನ್ನ ಪರಿವೀಕ್ಷಣಾ ಹಾಳೆಗಳನ್ನು ತೆಗೆದುಕೊಂಡು ತರಗತಿಕೋಣೆಯನ್ನು ಪ್ರವೇಶಿಸುತ್ತಾರೆ. ಅವರು

ಹೋಗಿ ತರಗತಿಯ ಹಿಂಭಾಗದಲ್ಲಿ ಕುಳಿತುಕೊಳ್ಳುವುದನ್ನು ವಿದ್ಯಾರ್ಥಿಗಳು ನೋಡುತ್ತಾರೆ. ಮುಂದಿನ ಇಪ್ಪತ್ತೈದು ನಿಮಿಷಗಳ ಕಾಲ, ಶಿಕ್ಷಕರು ತರಗತಿಗೆ ವಿವಿಧ ರೀತಿಯ 'ನಾಮಪದ'ಗಳನ್ನು ಕಲಿಸುವುದನ್ನು ಅವರು ವೀಕ್ಷಿಸುತ್ತಾರೆ. ನಂತರ ಮತ್ತೊಂದು ತರಗತಿಗೆ ಹೋಗಿ ರೇಖಾಗಣಿತ ಕುರಿತಂತೆ ಹಾಳೆಗಳನ್ನು ಭರ್ತಿಮಾಡುತ್ತಾರೆ. ಮತ್ತೆ ಇಪ್ಪತ್ತೈದು ನಿಮಿಷಗಳ ನಂತರ ಅವರು, 'ಬೆಳಕಿನ ಗುಣಲಕ್ಷಣಗಳನ್ನು' ಕುರಿತಾಗಿ ಪಾಠ ನಡೆಯುತ್ತಿರುವ ಇನ್ನೊಂದು ತರಗತಿಗೆ ಹೋಗಿ, ಅಲ್ಲಿಯೂ ಹಾಳೆಗಳನ್ನು ತುಂಬುತ್ತಾರೆ. ಈ ಮೂರೂ ಅವಧಿಗಳ ಸಮಯದಲ್ಲಿ ಶಿಕ್ಷಕರು ಆಗಾಗ ಅವರತ್ತ ಆತಂಕದಿಂದ ನೋಡುವುದನ್ನು ಮಕ್ಕಳು ಗಮನಿಸುತ್ತಾರೆ. ಹನ್ನೊಂದೂವರೆಗೆ ಸಂಪನ್ಮೂಲ ವ್ಯಕ್ತಿಯು ಗೋಡೆಗಳೆಲ್ಲ ಸುಸ್ಥಿತಿಯಲ್ಲಿವೆಯೇ, ಶೌಚಾಲಯಗಳು ಕೆಲಸ ಮಾಡುತ್ತಿವೆಯೇ ಇತ್ಯಾದಿಗಳನ್ನು ತಪಾಸಣೆ ಮಾಡಲು ಶಾಲೆಯ ಸುತ್ತಲೂ ಚುರುಕಾಗಿ ಓಡಾಡುತ್ತಾರೆ. ಹನ್ನೊಂದೂ ಮುಕ್ಕಾಲಿಗೆ ಅವರು ಮುಖ್ಯ ಶಿಕ್ಷಕರ ಕೋಣೆಯೊಳಗೆ ಹೋಗಿ, ಕಳೆದ ಕೆಲವು ದಿನಗಳಲ್ಲಿ ವಿದ್ಯಾರ್ಥಿಗಳ ಹಾಜರಾತಿ ಹೇಗಿತ್ತು ಎನ್ನುವುದನ್ನು ನೋಡಲು ಹಾಜರಾತಿ ಪುಸ್ತಕವನ್ನು ತೆಗೆದುಕೊಳ್ಳುತ್ತಾರೆ. ಅದರಲ್ಲಿನ ಅಂಕಿ-ಸಂಖ್ಯೆಗಳನ್ನು ಬರೆದುಕೊಳ್ಳಲು ಅವರಿಗೆ ಸ್ವಲ್ಪ ಸಮಯ ಹಿಡಿಯುತ್ತದೆ.

ಸುಮಾರು ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿಗೆ, ಎಸ್‌ಡಿಎಮ್‌ಸಿ ಸಭೆಗೆ ಹೋಗಲು ಅವರಿಗಾಗಲೇ ತಡವಾಗಿದೆ. ಹೋಗುತ್ತಿರುವಾಗಲೇ, ಹನ್ನೆರಡೂ ಕಾಲಿಗೆ ಮಧ್ಯಾಹ್ನ ಬಿಸಿಯೂಟ ಕಾರ್ಯಕ್ರಮ(ಎಂಡಿಎಂ)ದ ಕುರಿತಾಗಿ ಕೆಲವು ಅಂಕಿ-ಸಂಖ್ಯೆಗಳನ್ನು ಶಾಲೆಗಳಿಂದ ಸಂಗ್ರಹಿಸಿ, ಅಂದೇ ಮಧ್ಯಾಹ್ನ ತ್ವರಿತವಾಗಿ ಕಳಿಸುವಂತೆ ಬಿಆರ್‌ಸಿಯಿಂದ ಅವರಿಗೊಂದು ಕರೆ ಬರುತ್ತದೆ. ಹನ್ನೆರಡೂವರೆಗೆ ಅವರು ಎಸ್‌ಡಿಎಮ್‌ಸಿ ಸಭೆಯಲ್ಲಿ ಭಾಗವಹಿಸಿದರೂ ಅವರ ಮನಸ್ಸಿನಲ್ಲಿ ಆ ದಿನದ ತರಗತಿಕೋಣೆ ಪರಿವೀಕ್ಷಣೆಯೇ ಇನ್ನೂ ಅನುರಣಿಸುತ್ತಿರುತ್ತದೆ. ಒಂದು ನಿರ್ದಿಷ್ಟ ಬೋಧನಾ-ಕಲಿಕಾ ಸಾಮಗ್ರಿಯನ್ನು ಬಳಸುವುದರ ಮೂಲಕ ರೇಖಾಗಣಿತವನ್ನು ಇನ್ನೂ ಉತ್ತಮವಾಗಿ ಪಾಠ ಮಾಡಬಹುದಿತ್ತು ಎಂದು ಅವರಿಗೆ ಅನ್ನಿಸುತ್ತದೆ. ಸಂಬಂಧಿಸಿದ ಶಿಕ್ಷಕರಿಗೆ ನೆನಪಿಸಲು ಟಿಪ್ಪಣಿಯೊಂದನ್ನು ಅವರು ಮಾಡಿಟ್ಟುಕೊಳ್ಳುತ್ತಾರೆ. ಆದರೆ ಮತ್ತೆ ಅಲ್ಲಿಗೆ ಯಾವಾಗ ಹೋಗುತ್ತೇನೆ ಎಂಬುದು ಅವರಿಗೆ ಖಚಿತವಿಲ್ಲ. ಎಸ್‌ಡಿಎಮ್‌ಸಿ ಯು ರಜೆಯ ಮೇಲೆ ಹೋಗಲಿರುವ ಶಿಕ್ಷಕರೊಬ್ಬರ ಜಾಗದಲ್ಲಿ ಬದಲಿ ವ್ಯವಸ್ಥೆ ಮಾಡುವ ಕುರಿತು ಚರ್ಚೆ ನಡೆಸುತ್ತದೆ. ತಮ್ಮಲ್ಲಿನ ಒಬ್ಬ ಶಿಕ್ಷಕರ ಸೇವೆಯನ್ನು, ಈ ರಜಾ ಅವಧಿಯಲ್ಲಿ ಅವು ಹೇಗೆ ಒದಗಿಸಬಹುದು ಎನ್ನುವುದನ್ನು ತಿಳಿದುಕೊಳ್ಳಲು ಸಿಆರ್‌ಪಿಯು ಕ್ಲಸ್ಟರ್‌ನಲ್ಲಿರುವ ಇನ್ನಿತರ ಶಾಲೆಗಳಿಂದ ಮಾಹಿತಿ ಪಡೆಯಲು

ಟಿಪ್ಪಣಿಯೊಂದನ್ನು ಸಿದ್ಧಪಡಿಸುತ್ತಾರೆ. ಎರಡು ಗಂಟೆಗೆ, ವಿಶೇಷ ಅಗತ್ಯವಿರುವ ಮಕ್ಕಳ ಕುರಿತಂತೆ ಹೊಸ ಅಂಕಿಅಂಶಗಳ ಮಾದರಿಯನ್ನು ತೆಗೆದುಕೊಳ್ಳಲು ಅವರು ಎಂಟು ಕಿಲೋಮೀಟರ್ ದೂರದಲ್ಲಿರುವ ಬಿಆರ್‌ಸಿಗೆ ಭೇಟಿ ನೀಡುತ್ತಾರೆ. ಬ್ಲಾಕ್‌ನಲ್ಲಿರುವ ಸಂಪನ್ಮೂಲ ವ್ಯಕ್ತಿಯೊಬ್ಬರು ಅವರಿಗೆ ಸುತ್ತೋಲೆಯನ್ನು ತೋರಿಸಿ, ಅಂಕಿ–ಸಂಖ್ಯೆಗಳನ್ನು ತುಂಬಬೇಕಾದ ನಮೂನೆಗಳನ್ನು ವಿವರಿಸುತ್ತಾರೆ. ಎರಡೂ ಮುಕ್ಕಾಲಿನಿಂದ ನಾಲ್ಕೂವರೆಯವರೆಗಿನ ಅವಧಿಯಲ್ಲಿ ನಾಲ್ಕು ಬೇರೆ ಬೇರೆ ಶಾಲೆಗಳಿಗೆ ಭೇಟಿಕೊಟ್ಟು ಸಂಬಂಧಿಸಿದ ಶಿಕ್ಷಕರಿಗೆ ಅವರ ಶಾಲೆಯಲ್ಲಿನ ಮಕ್ಕಳ ಕುರಿತಾಗಿ ಏನೇನು ಮಾಹಿತಿ ಸಂಗ್ರಹಿಸಬೇಕೆಂದು ಹೇಳುತ್ತಾರೆ. ಶಿಕ್ಷಕರಿಗೆ ಈ ಹೊಸ ಅಂಕಿ–ಸಂಖ್ಯೆಗಳ ಬಗ್ಗೆ ಯಾವ ಸಂತೋಷವೂ ಆಗಲಿಲ್ಲ ಎನ್ನುವುದು ಸ್ಪಷ್ಟವಾಗಿತ್ತು. ಆದರೆ ಅವರಿಗೆ ಹೇಗೆ ಪ್ರತಿಸ್ಪಂದಿಸಬೇಕು ಎನ್ನುವುದು ತಿಳಿಯದಾಗಿತ್ತು. ಈ ಹೊಸ ಅಂಕಿ–ಸಂಖ್ಯೆಗಳನ್ನು 'ಏಕೆ' ತರಿಸಿಕೊಳ್ಳಲಾಗುತ್ತಿದೆ ಮತ್ತು ಇದು ಏನನ್ನಾದರೂ ಹೇಗೆ ಬದಲಾಯಿಸುತ್ತದೆ ಎನ್ನುವುದು ತಿಳಿಯದೇ ಇರುವುದರಿಂದ ಇಲಾಖೆಯನ್ನು ದೂಷಿಸುತ್ತಾರೆ. ಸಂಜೆ ಐದೂವರೆಗೆ ದಿನ ಮುಗಿದು ಮನೆಗೆ ಮರಳಿದಾಗ, ಅಂದಿನ ದಿನ ತನಗೆ ಬಿಡುವೇ ಇರಲಿಲ್ಲವೆಂದು ಭಾವಿಸುತ್ತಲೇ ತನ್ನ ಕ್ಲಸ್ಟರ್‌ನಲ್ಲಿ ಶಿಕ್ಷಣವನ್ನು ಉತ್ತಮಗೊಳಿಸಲು ತನ್ನ ಕೊಡುಗೆ ನಿಜಕ್ಕೂ ಏನಿದ್ದಿರಬಹುದು ಎಂದು ವಿಸ್ಮಯಪಡುತ್ತಾರೆ.

**ಈ ಸಂಪನ್ಮೂಲ ವ್ಯಕ್ತಿಗಳು ಸಂತೋಷವಾಗಿದ್ದಾರೆಯೇ?**

ದೇಶದುದ್ದಗಲಕ್ಕೂ ಇರುವ ಸಾವಿರಾರು ಬಿಆರ್‌ಪಿ ಮತ್ತು ಸಿಆರ್‌ಪಿಗಳು ತಮ್ಮ ಸೇವಾವಧಿಯುದ್ದಕ್ಕೂ ಮೇಲಿನ ಕಥನದಲ್ಲಿರುವ ಸಿಆರ್‌ಪಿಯಂತೆಯೇ ಭಾವಿಸುತ್ತಿರಬಹುದು – ಪ್ರತಿಯೊಂದು ಶಾಲೆ ಹಾಗೂ ಶಾಲಾ ಶಿಕ್ಷಕರನ್ನೂ ತಲುಪುವ ಸರ್ಕಾರದ ಪ್ರಯತ್ನವನ್ನು ಪ್ರತಿನಿಧಿಸಲು ಸರಿಸುಮಾರು ಒಂದು ಲಕ್ಷ ಇಪ್ಪತ್ತು ಸಾವಿರಕ್ಕೂ ಹೆಚ್ಚಿನ ಸಂಪನ್ಮೂಲ ವ್ಯಕ್ತಿಗಳಿದ್ದು ಅವರು ಪ್ರತಿನಿತ್ಯ ಶಾಲೆಗಳಿರುವ ಸ್ಥಳಕ್ಕೆ ಭೇಟಿ ನೀಡುತ್ತಿದ್ದಾರೆ. ಸಿಆರ್‌ಪಿ ಮತ್ತು ಬಿಆರ್‌ಪಿಗಳ ಸಂತೃಪ್ತಿಯ ಮಟ್ಟವನ್ನು ಅರಿಯುವ ದಿಸೆಯಲ್ಲಿ ಒಂದು ಅಧ್ಯಯನವನ್ನು ನಡೆಸಲಾಯಿತು. ಶೈಕ್ಷಣಿಕ ಮತ್ತು ಆಡಳಿತಾತ್ಮಕ ಕಾರ್ಯಗಳ ನಡುವಿನ ಸಮತೋಲನ, ಕೌಶಲದ ಬಳಕೆಯ ಮಟ್ಟ, ಕೆಲಸದ ಸ್ಥಿತಿಗತಿ, ಭೌತಿಕ ಸೌಲಭ್ಯಗಳು, ವೇತನಮಟ್ಟ ಮತ್ತು ಉದ್ಯೋಗ ತೃಪ್ತಿಯ ಮಟ್ಟ ಇತ್ಯಾದಿ ತಮ್ಮ ಉದ್ಯೋಗಕ್ಕೆ ಪ್ರಸ್ತುತವಾದ ಹಲವಾರು ಮುಖ್ಯ ಮಾನದಂಡಗಳಿಗೆ ಸಂಬಂಧಿಸಿದಂತೆ (ಮೂಲ; ನಯನತಾರಾ ಮತ್ತು ಇತರರು 2010) ಈ ಸಂಪನ್ಮೂಲ ವ್ಯಕ್ತಿಗಳು ತಾವೇ ಅಸಮಾಧಾನ ಹೊಂದಿರುವುದನ್ನು ಈ ಅಧ್ಯಯನವು ಸೂಚಿಸಿತು. ಈ ಸಿಆರ್‌ಪಿ ಮತ್ತು ಬಿಆರ್‌ಪಿಗಳು ಅಸಮಾಧಾನ ಮತ್ತು ನಿರಾಶೆಯ

ಸ್ಥಿತಿಯಲ್ಲಿರಲು ಹಲವಾರು ಕಾರಣಗಳಿವೆ. ಹತ್ತು ಹಲವು ಕಾರ್ಯಕ್ರಮ, ಸನ್ನಿವೇಶಗಳಿಗೆ ಅವರು ತಕ್ಷಣ ಪ್ರತಿಸ್ಪಂದಿಸಬೇಕೆಂದು ನಿರೀಕ್ಷಿಸಲಾಗುತ್ತದೆ. ಇದಕ್ಕಾಗಿ ಅವರು ವಿವಿಧ ಆದ್ಯತೆಗಳ ನಡುವೆ ಜಗ್ಗಾಡಬೇಕಾಗುತ್ತದೆ. ಆದ್ದರಿಂದ, ಶಾಲೆಗಳ ಒಟ್ಟಾರೆ ಸುಧಾರಣೆಯ ದೂರದೃಷ್ಟಿಗೆ ಅಗತ್ಯವಾದ ಗಮನ ನೀಡುವಲ್ಲಿ ಮತ್ತು ಸಮಗ್ರತೆಯನ್ನು ಸಾಧಿಸುವಲ್ಲಿ ಅವರು ವಿಫಲರಾಗುತ್ತಾರೆ. ಬಹುತೇಕ ಪ್ರತಿಯೊಂದು ಕಾರ್ಯಕ್ರಮವೂ ಈ ಅಜ್ಞಾತ ಕಾಲಾಳುಗಳ ಮೇಲೆ ಇನ್ನಷ್ಟು ನಿರೀಕ್ಷೆಗಳನ್ನು ಹೊರಿಸುತ್ತದೆ. ತಮ್ಮಿಂದ ಏನನ್ನು ನಿರೀಕ್ಷಿಸಲಾಗುತ್ತದೆಯೋ ಅದಕ್ಕೆ ತಕ್ಕ ಸಲಹೆ-ಸೂಚನೆ ಮತ್ತು ಬೆಂಬಲಗಳು ಸದಾ ಸಿಗುವುದಿಲ್ಲ ಎಂದು ಅವರಿಗೆ ಅನ್ನಿಸುತ್ತದೆ. ಅದೇ ರೀತಿ, ಶೈಕ್ಷಣಿಕ ಅಧಿಕಾರಿಗಳಲ್ಲಿ ಸಿಆರ್‌ಸಿ ಮತ್ತು ಬಿಆರ್‌ಸಿ ಸಾಂಸ್ಥಿಕ ವ್ಯವಸ್ಥೆಗಳು ನಿರರ್ಥಕ ಎಂಬ ಗ್ರಹಿಕೆಯೂ ವ್ಯಾಪಕವಾಗಿ ಇದೆ.

**ಕೇಳಬೇಕಾದ ಪ್ರಶ್ನೆಗಳು**

ಆದ್ದರಿಂದ, ಶಿಕ್ಷಣ ವ್ಯವಸ್ಥೆಯಲ್ಲಿ ಬಿಆರ್‌ಸಿ ಮತ್ತು ಸಿಆರ್‌ಸಿಗಳ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ಕೆಲವು ಮುಖ್ಯ ಪ್ರಶ್ನೆಗಳನ್ನು ಎತ್ತುವುದು ಅನಿವಾರ್ಯವಾಗುತ್ತದೆ. ಅವು ಏಕೆ ಇವೆ? ಅವುಗಳ ಇರುವಿಕೆಯಿಂದ ವ್ಯವಸ್ಥೆಯು ಯಾವ ಲಾಭವನ್ನು ಪಡೆಯಲು ಬಯಸುತ್ತದೆ? ಆಡಳಿತ ವಲಯದಲ್ಲಿ ಅವು ತಮ್ಮ ನಿಜವಾದ ಪ್ರತಿನಿಧಿಗಳೆಂದು ಶಾಲೆಗಳು ಮತ್ತು ಶಿಕ್ಷಕರು ಭಾವಿಸಿದ್ದಾರೆಯೇ? ತಾವು ನಿಯಮಿತವಾಗಿ ಒಡನಾಡುವ ನಲವತ್ತರಿಂದ ಐವತ್ತು ಶಿಕ್ಷಕರಿಗೆ ಅವರು ಮಾರ್ಗದರ್ಶನ ನೀಡಬಲ್ಲರೇ? ಅವರು ಇಲ್ಲದಿದ್ದರೂ ಕೂಡ ಯಾರಿಗಾದರೂ ನಷ್ಟವಾಗುತ್ತದೆಯೇ?

**ಐತಿಹಾಸಿಕ ನೋಟ**

ಈ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸುವ ಮೊದಲು, ಸಂಪನ್ಮೂಲ ವ್ಯಕ್ತಿಗಳ ಪಾತ್ರವನ್ನು ಮೊದಲಿಗೆ ಏಕೆ ಸೃಷ್ಟಿಸಲಾಯಿತು ಹಾಗೂ ಕಾಲಾಂತರದಲ್ಲಿ ಅವು ಹೇಗೆ ಬೆಳೆದು ಬಂದವು ಎನ್ನುವುದನ್ನು ತಿಳಿಯಲು ಒಂದು ಸಂಕ್ಷಿಪ್ತವಾದ ಐತಿಹಾಸಿಕ ನೋಟದ ಅಗತ್ಯವಿದೆ. ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಲು ಮತ್ತು ಸುಧಾರಿಸಲು ಶೈಕ್ಷಣಿಕ ಸಂರಚನೆಗಳನ್ನು ಸೃಷ್ಟಿಸುವ ಅಗತ್ಯವಿತ್ತು. ಅಂತಹ ಒಂದು ಶೈಕ್ಷಣಿಕ ಸಂರಚನೆಯ ಸಾಧನವಾಗಿ ಬಿಆರ್‌ಸಿ ಮತ್ತು ಸಿಆರ್‌ಸಿಗಳನ್ನು ದೇಶದುದ್ದಗಲಕ್ಕೂ ದೊಡ್ಡ ಪ್ರಮಾಣದಲ್ಲಿ ಆರಂಭಿಸಲಾಯಿತು. ಆರಂಭದಲ್ಲಿ ಅವುಗಳನ್ನು ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮದಡಿ (ಡಿಪಿಇಪಿ) ಸ್ಥಾಪಿಸಲಾಯಿತು ಮತ್ತು ಹಂತಹಂತವಾಗಿ ಆಯ್ದ ಜಿಲ್ಲೆಗಳಲ್ಲಿ ಜಾರಿಗೊಳಿಸಲಾಯಿತು. ನಂತರ ಸರ್ವ ಶಿಕ್ಷಾ ಅಭಿಯಾನದ ಮೂಲಕ ಅವುಗಳನ್ನು

ವಿಸ್ತರಿಸಲಾಯಿತು. ಡಿಪಿಇಪಿ ಅವಧಿಯಲ್ಲಿ ಬಿಆರ್‌ಸಿ ಮತ್ತು ಸಿಆರ್‌ಸಿಗಳು ಮುಖ್ಯವಾಗಿ ಪ್ರಾಥಮಿಕ ಶಾಲಾ ಶಿಕ್ಷಕರ ಬೋಧನಾ ವಿಧಾನದ ಆಚರಣೆಗಳನ್ನು ಮರುರೂಪಿಸಲು, ಶಿಕ್ಷಣದಿಂದ ಹೊರಗುಳಿದ ವರ್ಗಗಳ ಮಕ್ಕಳನ್ನು ಕುರಿತು ಶಿಕ್ಷಕರು ಸಂವೇದನೆಯನ್ನು ಬೆಳೆಸಿಕೊಳ್ಳುವಂತೆ ಮಾಡಲು ಹಾಗೂ ಕಲಿಕೆಯನ್ನು ಹೆಚ್ಚು ಉಲ್ಲಾಸಭರಿತ ಕ್ರಿಯೆಯನ್ನಾಗಿ ಮಾಡಲು ಶಿಕ್ಷಕರಿಗೆ ತರಬೇತಿ ನೀಡುವುದರ ಮೇಲೆ ಗಮನವನ್ನು ಕೇಂದ್ರೀಕರಿಸಿದ್ದವು. ಹಣಕಾಸಿನ ಬಳಕೆಯ ಮೇಲ್ವಿಚಾರಣೆ ಮಾಡಲು ಕ್ಷೇತ್ರದಿಂದ ಮಾಹಿತಿಯನ್ನು ಕಲೆಹಾಕುವುದು ಆಗ ಬಿಆರ್‌ಪಿ ಮತ್ತು ಸಿಆರ್‌ಪಿಗಳ ಮತ್ತೊಂದು ಮುಖ್ಯ ಪಾತ್ರವಾಗಿತ್ತು. ಆದರೆ ಡಯಟ್‌ಗಳು ಈ ಸಂಪನ್ಮೂಲ ವ್ಯಕ್ತಿಗಳ ಸಂಬಂಧವಿರಿಸಿಕೊಳ್ಳದ ಕಾರಣ ವ್ಯಾಪಕವಾದ ಶಿಕ್ಷಣ ವ್ಯವಸ್ಥೆಯು ಅವರ ಕೆಲಸವನ್ನು ವ್ಯವಸ್ಥೆಯ ಭಾಗವಾಗಿ ನೋಡಲಿಲ್ಲ. ಅಲ್ಲದೆ ಅದನ್ನು ಸೀಮಿತವಾದದ್ದು ಹಾಗೂ ಸಮಯ ನಿರ್ಬಂಧಿತವಾದದ್ದು ಎಂದು ಪರಿಗಣಿಸಿತು. ಮುಂದೆ ಸರ್ವ ಶಿಕ್ಷಣ ಅಭಿಯಾನವು ಈ ಕೇಂದ್ರಗಳನ್ನು ವಿಸ್ತೃತ ವ್ಯವಸ್ಥೆ ಹಾಗೂ ರಾಜ್ಯ ಸಂಸ್ಥೆಗಳೊಡನೆ ಸಮ್ಮಿಳಿತಗೊಳಿಸಿತು. ಆ ಮೂಲಕ ಶಾಲಾ ಸುಧಾರಣಾ ಪ್ರಯತ್ನಗಳ ವ್ಯಾಪ್ತಿಯನ್ನು ವಿಸ್ತರಿಸಿತು. ವಾರ್ಷಿಕ ಯೋಜನೆ ಹಾಗೂ ಸಾಧನೆಯ ಅವಲೋಕನದ ಪ್ರಕ್ರಿಯೆಗಳು ಬ್ಲಾಕ್ ಮತ್ತು ಜಿಲ್ಲಾಮಟ್ಟಗಳಿಂದ ಸಿದ್ಧವಾಗಿ ಬರಬೇಕಾಗುತ್ತದೆ. ಈ ಪ್ರಕ್ರಿಯೆಗಳನ್ನು ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಕ್ರೋಡೀಕರಿಸುವ ಪ್ರಯತ್ನವು ಬೃಹತ್ ಪ್ರಮಾಣದ ಕೆಲಸ. ಮೂಲಭೂತ ಸೌಕರ್ಯಗಳ ಅಗತ್ಯ, ಶೈಕ್ಷಣಿಕ ಗುಣಮಟ್ಟಗಳೆರಡನ್ನೂ (ಪಠ್ಯಕ್ರಮ ಮತ್ತು ಬೋಧನಾ ವಿಧಾನ) ಅದು ಒಳಗೊಳ್ಳುತ್ತದೆ. ಜೊತೆಗೆ, ಶಾಲೆಯಲ್ಲಿ ಮಕ್ಕಳ ದಾಖಲಾತಿ ಪ್ರಮಾಣ ಹಾಗೂ ಅವರನ್ನು ಉಳಿಸಿಕೊಳ್ಳುವುದರ ಮೇಲೆ ಒತ್ತು ನೀಡುವುದಲ್ಲದೇ ಸಮತೆಯ ಬಗೆಗಿನ ಕಾಳಜಿಗಳನ್ನೂ ಒಳಗೊಳ್ಳುತ್ತದೆ. ಈ ಶೈಕ್ಷಣಿಕ ಜಿಲ್ಲಾ ಮಾಹಿತಿ ವ್ಯವಸ್ಥೆ(ಡಿಐಎಸ್‌ಇ)ಯ ಸೇರ್ಪಡೆ ಹಾಗೂ ಗುಣಮಟ್ಟ ಮೇಲ್ವಿಚಾರಣೆಯ ಪ್ರಯತ್ನಗಳ ಮೇಲಿನ ಗಮನವು ಅಂಕಿ-ಅಂಶಗಳ ಅಗತ್ಯವನ್ನು ದೊಡ್ಡ ಪ್ರಮಾಣದಲ್ಲಿ ಹೆಚ್ಚಿಸಿದೆ. ಈ ಶೈಕ್ಷಣಿಕ ಸಂಸ್ಥೆಗಳು ನಿರ್ದಿಷ್ಟ ನೆಲೆಯಲ್ಲಿ ಹೆಚ್ಚು ಗಮನ ಹರಿಸುವ ನಿಟ್ಟಿನಲ್ಲಿ ಕೆಲವು ಪ್ರಯತ್ನಗಳು ನಡೆದಿವೆ.

ಶಿಕ್ಷಣ ಹಕ್ಕು ಕಾಯ್ದೆಯು ದೇಶದಲ್ಲಿನ ಪ್ರತಿಯೊಂದು ಮಗುವಿಗೂ ಶಿಕ್ಷಣವನ್ನು ನೀಡುವ ಪ್ರಕ್ರಿಯೆ ಹಾಗೂ ಅದರ ಫಲಿತಗಳಿಗೆ ಸಂಬಂಧಿಸಿದಂತೆ ಗುಣಮಟ್ಟವನ್ನು ತರುವುದಕ್ಕೆ ಬದ್ಧವಾಗಿದೆ. ಇದಕ್ಕಾಗಿ ಸರ್ವ ಶಿಕ್ಷಣ ಅಭಿಯಾನವು ಆರಂಭಿಸಿದ ಶಾಲಾ ಸುಧಾರಣೆಯ ಪ್ರಕ್ರಿಯೆಗಳನ್ನು ರಾಜ್ಯಾಡಳಿತವು ಮುಂದುವರೆಸಬೇಕಿದೆ ಹಾಗೂ ಅದನ್ನು ತೀವ್ರಗೊಳಿಸಬೇಕಿದೆ. ಮೊದಲು ಪ್ರಾಥಮಿಕ ಶಾಲೆಗಳತ್ತ ಮಾತ್ರ ತಮ್ಮ ಗಮನ ಹರಿಸುತ್ತಿದ್ದ ಬಿಆರ್‌ಸಿ

ಮತ್ತು ಸಿಆರ್‌ಸಿ ಸಂಸ್ಥೆಗಳು (ವಾಸ್ತವದಲ್ಲಿ, ಅವು ಪ್ರಾಥಮಿಕ ಶಾಲೆಗಳನ್ನಷ್ಟೇ ಕೇಂದ್ರವಾಗಿರಿಸಿಕೊಂಡಿದ್ದವು) ಈಗ ಪ್ರೌಢಶಾಲೆಗಳನ್ನೂ ತಮ್ಮ ವ್ಯಾಪ್ತಿಯೊಳಗೆ ಒಳಗೊಳ್ಳಬೇಕೆಂದು ನಿರೀಕ್ಷಿಸಲಾಗಿದೆ.

### ನೆಲಸ್ತರದ ಕ್ಷೇತ್ರದಲ್ಲಿನ ಸವಾಲುಗಳು

ಈ ಸಂಪನ್ಮೂಲ ವ್ಯಕ್ತಿಗಳು ತಮ್ಮ ಪಾತ್ರಗಳನ್ನು ಹೇಗೆ ನಿರ್ವಹಿಸುತ್ತಿದ್ದಾರೆ ಎಂಬುದನ್ನು ನಿಕಟವಾಗಿ ಗಮನಿಸಿದಾಗ ಅವರು ಕೆಲಸ ಮಾಡುವ ಕ್ಷೇತ್ರದಲ್ಲಿನ ಬಹಳಷ್ಟು ಸವಾಲುಗಳು ಎದ್ದು ತೋರುತ್ತವೆ.

- ಹಲವಾರು ತರಹದ ಅಂಕಿ-ಸಂಖ್ಯೆಗಳನ್ನು, ಮಾಹಿತಿಗಳನ್ನು ನೂರಾರು ನಮೂನೆಗಳಲ್ಲಿ ಕಲೆಹಾಕುವುದರಲ್ಲಿ ಹಾಗೂ ಕ್ರೋಡೀಕರಿಸುವುದರಲ್ಲಿ, ಅವುಗಳನ್ನು ಶಾಲೆಯಿಂದ ಕ್ಲಸ್ಟರ್ ಮತ್ತು ಬ್ಲಾಕ್‌ಗಳಿಗೆ ಹಾಗೂ ಬ್ಲಾಕ್ ಮತ್ತು ಕ್ಲಸ್ಟರ್‌ಗಳಿಂದ ತಿರುಗಿ ಶಾಲೆಗಳಿಗೆ ದಾಟಿಸುವ ಕೆಲಸದಲ್ಲಿ ಅವರು ಅಗಾಧ ಪ್ರಮಾಣದ ಸಮಯವನ್ನು ವ್ಯಯಿಸುತ್ತಾರೆ. ಎಷ್ಟೋ ಬಾರಿ ಈ ಮಾಹಿತಿಗಳು ಹೇಗೆ ಬಳಸಲ್ಪಡುತ್ತವೆ ಎಂಬ ಅರಿವೂ ಅವರಿಗೆ ಇರುವುದಿಲ್ಲ. ಅವರು ಸಂಗ್ರಹಿಸುವ ಮಾಹಿತಿಯ ಪ್ರಮಾಣವು ಅಗಾಧವಾಗಿರುತ್ತದೆ. ಜೊತೆಗೆ, ಈ ಸಂಗ್ರಹಿತ ಅಂಕಿ-ಅಂಶಗಳು ಸುವ್ಯವಸ್ಥಿತವಾಗಿರದ ಕಾರಣ ಪ್ರಕ್ರಿಯೆಯನ್ನು ಮತ್ತೆ ಮತ್ತೆ ಕೈಗೊಳ್ಳಬೇಕಾಗುತ್ತದೆ.
- ಪೂರ್ವತಯಾರಿ ಮಾಡಿಕೊಂಡು ಹಾಗೂ ಯೋಜನೆಗಳನ್ನು ಸಿದ್ಧಪಡಿಸಿಕೊಂಡು ಶಾಲೆಗಳಿಗೆ, ತರಗತಿಗಳಿಗೆ ಭೇಟಿ ನೀಡುವವರು ಕೇವಲ ಕೆಲವೇ ಕೆಲವು ಬಿಆರ್‌ಪಿ ಮತ್ತು ಸಿಆರ್‌ಪಿಗಳು. ಬಹಳಷ್ಟು ಬಾರಿ ಪಠ್ಯಪುಸ್ತಕಗಳಲ್ಲಿರುವ ಸೀಮಿತ ಮಾಹಿತಿಗಳನ್ನು ಆಧರಿಸಿಯೇ ಭೇಟಿ ನೀಡುತ್ತಾರೆ. ಅವರು ಮತ್ತೆ ಯಾವಾಗ ಭೇಟಿ ನೀಡುತ್ತಾರೆ ಎನ್ನುವುದು ಶಿಕ್ಷಕರಿಗಾಗಲಿ ಸ್ವಯಂ ಸಂಪನ್ಮೂಲ ವ್ಯಕ್ತಿಗಳಿಗಾಗಲಿ ತಿಳಿದಿರುವುದಿಲ್ಲ. ಆದ್ದರಿಂದ ಅವರು ಎಷ್ಟು ಬಾರಿ ಬರುತ್ತಾರೆ, ಎಷ್ಟು ಸಮಯ ಇರುತ್ತಾರೆ ಎನ್ನುವುದು ಅನಿಶ್ಚಿತವೇ ಆಗಿರುತ್ತದೆ. ಶಿಕ್ಷಕರಿಗೆ ಗುಣಮಟ್ಟದ ಹಿಮ್ಮಾಹಿತಿಯನ್ನು ನೀಡುವ ಯಾವುದೇ ಸಮರ್ಪಕ ಪ್ರಕ್ರಿಯೆ ಇಲ್ಲ.
- ಸಂಪನ್ಮೂಲ ವ್ಯಕ್ತಿಗಳಲ್ಲಿ ಅನೇಕರು ಸಾಕಷ್ಟು ಪ್ರಮಾಣದ ವಿಷಯಜ್ಞಾನವನ್ನು ಹೊಂದಿರುವುದಿಲ್ಲ. ಆದ್ದರಿಂದ, ವೈಯಕ್ತಿಕವಾಗಿ

ಒಳ್ಳೆಯ ಮಾದರಿ ಪಾಠವನ್ನು ಮಾಡಿತೋರಿಸಲು ಮತ್ತು ಶಿಕ್ಷಕರ ನಿಜವಾದ ಶೈಕ್ಷಣಿಕ ಅಗತ್ಯಗಳನ್ನು ಪೂರೈಸಲು ಅಸಮರ್ಥರಾಗಿದ್ದಾರೆ.

- ಬಿಆರ್‌ಸಿಗಳು ಶಿಕ್ಷಕರಿಗೆ ಅಗತ್ಯವಾದ ಹಾಗೂ ಪ್ರಸ್ತುತವಾದ ತರಬೇತಿ ಕಾರ್ಯಕ್ರಮಗಳನ್ನು ವಿನ್ಯಾಸಗೊಳಿಸಿ, ಆಯೋಜಿಸಬೇಕು ಎಂದು ನಿರೀಕ್ಷಿಸಲಾಗುತ್ತದೆ. ಆದರೆ ಅವು ಹಾಗೆ ಮಾಡುವ ಪರಿಸ್ಥಿತಿಯಲ್ಲಿ ಇಲ್ಲ. ಉತ್ತಮ ಹಾಗೂ ತಜ್ಞ ಸಂಪನ್ಮೂಲ ವ್ಯಕ್ತಿಗಳ ಕೊರತೆ, ಶಿಕ್ಷಕರ ತರಬೇತಿಗೆ ನಿರ್ದಿಷ್ಟ ಮಾನದಂಡವಿಲ್ಲದೆ ಆಯ್ಕೆ ಮಾಡುವುದು, ಕಳಪೆ ಮಟ್ಟದ ವಿಷಯಜ್ಞಾನ, ಏಕತಾನತೆಯ ರೀತಿಯಲ್ಲಿ ಮೇಲಿನ ಹಂತದಿಂದ ಕೆಳಗಿನವರೆಗೆ ಹರಿದುಬರುವ ತರಬೇತಿಯ ವಿಧಾನ, ತಜ್ಞರನ್ನು ಕರೆತರಲು ಆಗದಿರುವುದು ಇತ್ಯಾದಿ ಕಾರಣಗಳಿಂದಾಗಿ ತರಬೇತಿಯ ಗುಣಮಟ್ಟದಲ್ಲಿ ತುಂಬಾ ರಾಜಿ ಮಾಡಿಕೊಳ್ಳಲಾಗಿದೆ. ಆಯವ್ಯಯದಲ್ಲಿ ಹಣಕಾಸಿನ ಹಂಚಿಕೆಯು ಅಪೇಕ್ಷಿತ ಮಟ್ಟದಲ್ಲಿ ಇಲ್ಲ. ಆದ್ದರಿಂದ ತರಬೇತಿ ನಡೆಯುವ ತಾಣಗಳು ಸುವ್ಯವಸ್ಥಿತವಾಗಿ ಇರುವುದಿಲ್ಲ. ಜೊತೆಗೆ ಸೂಕ್ತ ಕಲಿಕೆಯ ವಾತಾವರಣ ಇಲ್ಲದಿರುವುದು ಸಮಸ್ಯೆಯ ತೀವ್ರತೆಯನ್ನು ಇಮ್ಮಡಿಗೊಳಿಸಿದೆ. ಶಿಕ್ಷಕರ ತರಬೇತಿಗಳು ತರಗತಿ ಪ್ರಕ್ರಿಯೆಗಳಿಗೆ ನೇರವಾಗಿ ಸಂಬಂಧ ಹೊಂದಿಲ್ಲದಿರುವುದು ಪ್ರಮುಖ ಸಮಸ್ಯೆ.

- ಕರ್ನಾಟಕದಲ್ಲಿ ಇತ್ತೀಚಿನ ವರ್ಷಗಳಲ್ಲಿ ಮಾಡಲಾದ ಸಂಪನ್ಮೂಲ ವ್ಯಕ್ತಿಗಳ ಆಯ್ಕೆಯು ತುಂಬಾ ಚೆನ್ನಾಗಿದೆ. ಈ ಶೈಕ್ಷಣಿಕ ಪಾತ್ರವನ್ನು ನಿರ್ವಹಿಸಲು ಅತ್ಯುತ್ತಮ ಶಿಕ್ಷಕರನ್ನು ಗುರುತಿಸಲು ತಕ್ಕ ಪ್ರಕ್ರಿಯೆಯನ್ನು ಅಳವಡಿಸಲು ಸಾಧ್ಯವಾಗಿದೆ. ಆದಾಗ್ಯೂ ಈ ಸಂಪನ್ಮೂಲ ವ್ಯಕ್ತಿಗಳು ತಮ್ಮ ವ್ಯಾಪ್ತಿಯ ಕ್ಷೇತ್ರಗಳಲ್ಲಿ ಗುಣಮಟ್ಟವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಅರ್ಥಪೂರ್ಣ ಕೊಡುಗೆಗಳನ್ನು ನೀಡಲು ಸಾಧ್ಯವಾಗುವಂತೆ ಅವರ ಸೇವಾವಧಿಯನ್ನು ಮೂರರಿಂದ ಐದು ವರ್ಷಕ್ಕೆ ಹೆಚ್ಚಿಸುವ ಅಗತ್ಯವಿದೆ.

- ಸಂಪನ್ಮೂಲ ವ್ಯಕ್ತಿಗಳ ಸಾಮರ್ಥ್ಯಾಭಿವೃದ್ಧಿಯು ತುಂಬಾ ಸೀಮಿತವಾದದ್ದು. ಈ ಸಂಪನ್ಮೂಲ ವ್ಯಕ್ತಿಗಳನ್ನೊಳಗೊಂಡ ಸಮೂಹದ ಸಾಮರ್ಥ್ಯ ನಿರ್ಮಾಣಕ್ಕೆ ಸಂದರ್ಭೋಚಿತವಾದ ಒಂದು ರಾಜ್ಯವ್ಯಾಪಿ ವಿಧಾನವನ್ನು ಪರಿಕಲ್ಪಿಸುವ ಹಾಗೂ ವಿನ್ಯಾಸಗೊಳಿಸುವ ಅಗತ್ಯವಿದೆ.

- ಸಾಧಾರಣವಾಗಿ ಸಿಆರ್‌ಸಿಗಳು ಜೀರ್ಣಾವಸ್ಥೆಯಲ್ಲಿವೆ. ಅಲ್ಲಿ ಸಭೆಗಳನ್ನು ನಡೆಸುವುದಕ್ಕೆ ಆಗುತ್ತಿಲ್ಲ. ಬಿಆರ್‌ಸಿಗಳು ಹೆಚ್ಚಿನ ಬಾರಿ ಖಾಲಿ ಇರುವ

ಕಚೇರಿ ಜಾಗಗಳಾಗಿದ್ದು ಎಲ್ಲ ಸಿಬ್ಬಂದಿಗಳೂ ಹಿಡಿಸುವಷ್ಟು ಸ್ಥಳಾವಕಾಶ ಅಲ್ಲಿರುವುದಿಲ್ಲ. ಈ ಎರಡೂ ಕೇಂದ್ರಗಳಲ್ಲಿಯೂ ಅಗತ್ಯ ಪ್ರಮಾಣದ ಪುಸ್ತಕಗಳಿಲ್ಲ, ಪ್ರಯೋಗಾಲಯಗಳಿಲ್ಲ, ಬೋಧನಾ ಮತ್ತು ಕಲಿಕಾ ಸಾಮಗ್ರಿಗಳಿಲ್ಲ ಹಾಗೂ ಶಿಕ್ಷಕರ ನಡುವೆ ಅನುಕೂಲಕರ ಸಂವಾದಗಳು ನಡೆಯಲು ಬೇಕಾದ ಇನ್ನಿತರ ಕನಿಷ್ಠ ಮೂಲಭೂತ ಸೌಕರ್ಯಗಳು ಇರುವುದಿಲ್ಲ.

- ರಾಜ್ಯ, ಜಿಲ್ಲೆ ಮತ್ತು ಬ್ಲಾಕ್ ಮಟ್ಟಗಳಲ್ಲಿ ಸಮಾನ ದೃಷ್ಟಿಕೋನವೊಂದನ್ನು ತಳೆಯುವ ನಿಟ್ಟಿನಲ್ಲಿ ಸಮನ್ವಯದ ಕೊರತೆಯಿದೆ. ಸಮನ್ವಯ ಹಾಗೂ ಮೇಲುಸ್ತುವಾರಿಗಳು ಯೋಜನೆಯ ತುರ್ತು ಹಾಗೂ ರಾಜ್ಯಾಡಳಿತದ ಬೇಡಿಕೆಗಳಿಗೆ ಸೀಮಿತವಾಗಿವೆ.
- ಈ ಸಂಪನ್ಮೂಲ ಸಂಚಯದ ಕಾರ್ಯವು ಅಗಾಧವಾದದ್ದು ಹಾಗೂ ಕಾರ್ಯಸಾಧುವಲ್ಲದ್ದು. ಆದ್ದರಿಂದ ಶಿಕ್ಷಕರು ಈ ಕಾರ್ಯವನ್ನು ತುಂಬಾ ಒತ್ತಡದಲ್ಲಿ ನಿಭಾಯಿಸಬೇಕಾದ ಸನ್ನಿವೇಶವಿದೆ. ಸಿಆರ್‌ಪಿಯೊಬ್ಬರು ಭೇಟಿಕೊಡಬೇಕಾದ ಹಾಗೂ ಮೇಲುಸ್ತುವಾರಿ ವಹಿಸಬೇಕಾದ ಹೆಚ್ಚಿನ ಸಂಖ್ಯೆಯ ಶಾಲೆಗಳು ಹಾಗೂ ಒಟ್ಟೊಟ್ಟಿಗೇ ನಿರ್ವಹಿಸಬೇಕಾದ ವಿವಿಧ ರೀತಿಯ ಜವಾಬ್ದಾರಿಗಳು ಅವರು ನಿರ್ವಹಿಸಬೇಕಾದ ಪಾತ್ರಕ್ಕೆ ತುಂಬಾ ಸವಾಲನ್ನೊಡ್ಡುತ್ತವೆ. ಅವರು ಪ್ರಾಥಮಿಕ ಮತ್ತು ಪ್ರೌಢ ಹಂತದುದ್ದಗಲಕ್ಕೂ ಬಹುಹಂತದ ತರಗತಿಗಳನ್ನುಳ್ಳ ಬಹುಭಾಷಿಕ ಶಾಲೆಗಳ ಮೇಲುಸ್ತುವಾರಿಯನ್ನು ಮಾಡಬೇಕಾಗುತ್ತದೆ, ಅವುಗಳಿಗೆ ಬೆಂಬಲವನ್ನು ನೀಡಬೇಕಾಗುತ್ತದೆ.
- ಹೆಚ್ಚಿನ ಸಂದರ್ಭಗಳಲ್ಲಿ, ಈ ಸಂಪನ್ಮೂಲ ವ್ಯಕ್ತಿಗಳು ಕಡಿಮೆ ಪ್ರಯಾಣ ಭತ್ಯೆ ಹಾಗೂ ನಿರ್ವಹಣಾ ಭತ್ಯೆಗಳನ್ನು ಪಡೆಯುತ್ತಿರುತ್ತಾರೆ. ಆದರೂ ತಮ್ಮದೇ ದ್ವಿಚಕ್ರವಾಹನಗಳಲ್ಲಿ ಶಾಲೆಗಳಿಗೆ ನಿಯಮಿತವಾಗಿ ನಿರ್ದಿಷ್ಟ ಬಾರಿ ಭೇಟಿ ನೀಡುವಂತೆ ನಿರೀಕ್ಷಿಸಲಾಗುತ್ತದೆ.

## ಆದ್ಯತೆಯನ್ನು ನಿಗದಿಪಡಿಸಿಕೊಳ್ಳುವ ಅಗತ್ಯ

ಸಿಆರ್‌ಪಿ ಮತ್ತು ಬಿಆರ್‌ಪಿಗಳ ಪಾತ್ರಗಳು ನಿಜವಾಗಿಯೂ ಪ್ರಾಮುಖ್ಯತೆ ಪಡೆದುಕೊಳ್ಳುವಂತಾಗಲು, ಅವರು ತಮಗಿರುವ ವ್ಯವಸ್ಥೆಯ ಬೆಂಬಲದ ಜೊತೆಗೆ ತಮ್ಮ ಪಾತ್ರವನ್ನು ಸಂಪೂರ್ಣ ಅರಿತು, ಅದರ ಮೂಲಭೂತ ಅವಶ್ಯಕತೆಗಳ ಮೇಲೆ ಗಮನವನ್ನು ಕೇಂದ್ರೀಕರಿಸಬೇಕು:

ಸಂಪನ್ಮೂಲ ಕೇಂದ್ರಗಳನ್ನು ಬಲಗೊಳಿಸುವ ನಿಟ್ಟಿನಲ್ಲಿ ಸಮಿತಿಯೊಂದು ಕರಡು ಮಾರ್ಗದರ್ಶಿ ಸೂತ್ರಗಳನ್ನು ಸಲ್ಲಿಸಿತು. ಅದರಲ್ಲಿ ಸಿಆರ್‌ಪಿಗಳಿಗಾಗಿ ನಾಲ್ಕು ಅಂತರ್‌ಸಂಬಂಧಿತ ಮಾರ್ಗಗಳನ್ನು ಸೂಚಿಸಲಾಗಿದೆ. ಅವುಗಳತ್ತ ಇನ್ನೊಮ್ಮೆ ದೃಷ್ಟಿಹರಿಸುವ ಮೂಲಕ ಇಂದಿನ ಸಂದರ್ಭದಲ್ಲಿಯೂ ಕೂಡ ಅವು ಪ್ರಸ್ತುತವಾಗಿವೆಯೇ ಎಂಬುದನ್ನು ಪರ್ಯಾಲೋಚಿಸುವುದು ಒಳ್ಳೆಯದು.

ಅ. **ಶಾಲಾ ಶೈಕ್ಷಣಿಕ ಸಮನ್ವಯ:** ಸಂಪನ್ಮೂಲ ವ್ಯಕ್ತಿಗಳು ಪ್ರತಿಯೊಂದು ಶಾಲೆಯೊಡನೆಯೂ ನಿಕಟವಾಗಿ ಕೆಲಸ ಮಾಡುತ್ತಾರೆ ಮತ್ತು ಆ ಶಾಲೆಯ ಶೈಕ್ಷಣಿಕ ಯೋಜನೆ ಮತ್ತು ಪ್ರಕ್ರಿಯೆಗಳು ಸಮರ್ಪಕವಾಗಿ ನಡೆಯುವಂತೆ ಬೆಂಬಲ ನೀಡುತ್ತಾರೆ. ಶಿಕ್ಷಕರ ಅಗತ್ಯವನ್ನು ಆಧರಿಸಿದ ತರಬೇತಿ, ಸಾಕಷ್ಟು ಸಂಖ್ಯೆಯಲ್ಲಿ ಶಿಕ್ಷಕರನ್ನು ನಿಯೋಜಿಸುವುದು ಹಾಗೂ ಎಲ್ಲಾ ಮಕ್ಕಳ ಕಲಿಕೆಯ ಮಟ್ಟವನ್ನು ವಿಶೇಷವಾಗಿ ಗಮನದಲ್ಲಿರಿಸಿಕೊಂಡು ಶಿಕ್ಷಕರ ಅಗತ್ಯಗಳನ್ನು ಪೂರೈಸುವ ನಿಟ್ಟಿನಲ್ಲಿ ಬೆಂಬಲ ನೀಡುವುದೂ ಸೇರಿದಂತೆ ನಿಯಮಿತವಾದ ಸಿದ್ಧತೆ, ಪಠ್ಯಕ್ರಮ ಪರಿಶೀಲನೆ, ಮೌಲ್ಯಮಾಪನ ಕಾರ್ಯಗಳನ್ನು ಒಳಗೊಳ್ಳಬೇಕು.

ಆ. **ಸಮುದಾಯದೊಂದಿಗೆ ಸಮತೆ ಸಾಧಿಸಲು ಬೆಂಬಲ:** ಶಿಕ್ಷಣ ಹಕ್ಕು ಕಾಯ್ದೆಯು ಒತ್ತಿ ಹೇಳಿರುವ ಹಾಗೆ, ಸಮುದಾಯದ ಒಡೆತನ ಮತ್ತು ಬೆಂಬಲದಿಂದಷ್ಟೇ ಶಾಲೆಗಳಲ್ಲಿ ಸಮತೆಯ ಆಯಾಮವನ್ನು ಸಾಧಿಸುವುದು ಸಾಧ್ಯ. ಅದು ಸಮಾಜದ ವಂಚಿತ ವರ್ಗಗಳಿಗೆ, ಅನುಕೂಲಕರ ವಾತಾವರಣವನ್ನು ಸೃಷ್ಟಿಸುವುದನ್ನು ಒಳಗೊಂಡಿದೆ. ಶಾಲೆಗಳ ಒಳಗೆ ಹಾಗೂ ಹೊರಗೆ ಸಾಮಾಜಿಕ ಸಮತೆಯನ್ನು ಸುಧಾರಿಸಲು ಸಂಪನ್ಮೂಲ ವ್ಯಕ್ತಿಗಳು ಸಮುದಾಯದೊಂದಿಗೆ ಕೆಲಸ ಮಾಡಬೇಕಿದೆ.

ಇ. **ಮೇಲುಸ್ತುವಾರಿ:** ಸಂಪನ್ಮೂಲ ವ್ಯಕ್ತಿಯು ಶಾಲೆಗೆ ಸಂಬಂಧಿಸಿದ ಕೆಲಸ–ಕಾರ್ಯಗಳಲ್ಲಿ ಅವುಗಳ ಎಲ್ಲಾ ಆಯಾಮಗಳಲ್ಲಿಯೂ ಬೆಂಬಲ ನೀಡುವ ಒಬ್ಬ ಮಾರ್ಗದರ್ಶಿಯಾಗಿ, ಸಲಹೆಗಾರರಾಗಿ ಕಾರ್ಯ ನಿರ್ವಹಿಸುತ್ತಾರೆ. ಮೇಲುಸ್ತುವಾರಿಯ ಮೂಲಕ ಶೈಕ್ಷಣಿಕ ನೀತಿಗಳು ಹಾಗೂ ಕಾರ್ಯಕ್ರಮಗಳು ಅನುಷ್ಠಾನಗೊಳ್ಳುವಂತೆ ಹಾಗೂ ಅದೇ ವೇಳೆಗೆ, ಬೋಧನೆ ಮತ್ತು ಕಲಿಕೆಗಳು ನಡೆಯುವಂತೆ ಅದನ್ನು ನೋಡಿಕೊಳ್ಳುವ ವ್ಯವಸ್ಥೆಯು ಜಾಗರೂಕವಾಗಿರಲು ಸಾಧ್ಯವಾಗುವಂತೆ, ಪರಿಣಾಮಕಾರಿಯಾಗಿ ಮೇಲ್ವಿಚಾರಣೆ ಮಾಡುವ ಗುರಿಯನ್ನು ಅವರು ಹೊಂದಿರುತ್ತಾರೆ.

ಈ. **ಆಡಳಿತಾತ್ಮಕ ಬೆಂಬಲ:** ಇಲ್ಲಿ ಶಾಲೆಗಳು ಬೋಧನೆಯ ಮೇಲೆ ಗಮನವನ್ನು ಕೇಂದ್ರೀಕರಿಸಲು ನೆರವಾಗುವ ನಿಟ್ಟಿನಲ್ಲಿ ದಾಖಲೆಗಳನ್ನು

ನಿರ್ವಹಿಸುವ ಮತ್ತು ಆಡಳಿತಾತ್ಮಕ ಕೆಲಸಗಳಲ್ಲಿ ಅವು ಅತ್ಯಂತ ಕಡಿಮೆ ಸಮಯವನ್ನು ವ್ಯಯಿಸುವ ಹಾಗೆ ಮಾಡುವುದರತ್ತ ಒತ್ತನ್ನು ನೀಡಬೇಕಿದೆ. ಹೀಗೆ, ಬೋಧನೆಗೆ ಹೊರತಾದ ಶಿಕ್ಷಕರ ಮೇಲಿನ ಕೆಲಸಗಳನ್ನು ಕಡಿಮೆ ಮಾಡುವುದು ಹಾಗೂ ಶೈಕ್ಷಣಿಕ ಕೆಲಸ ಕಾರ್ಯಗಳ ಮೇಲೆ ಸ್ಪಷ್ಟವಾಗಿ ಒತ್ತು ನೀಡುವುದು ಅಗತ್ಯ. ಜೊತೆಗೇ ಪ್ರಸ್ತುತ ಹಾಗೂ ಸಕಾಲಿಕ ಅಂಕಿ-ಸಂಖ್ಯೆಗಳ ಮಾಹಿತಿಗಳನ್ನು ವ್ಯವಸ್ಥಿತ ರೀತಿಯಲ್ಲಿ ಒದಗಿಸಿ, ಸೂಕ್ತ ನಿರ್ಧಾರಗಳನ್ನು ಕೈಗೊಳ್ಳಲು ನೆರವಾಗುವಂತೆ ಅಗಾಧವಾದ ರಾಜ್ಯಾಡಳಿತ ವ್ಯವಸ್ಥೆಯ ಅಗತ್ಯಗಳನ್ನು ಈಡೇರಿಸಬೇಕಾಗುತ್ತದೆ.

## ಬಿಆರ್‌ಸಿಗಳ ಪಾತ್ರದ ತಾರ್ಕಿಕತೆ

ಸಿಆರ್‌ಪಿಗಳಿಗೆ ನಿರ್ದಿಷ್ಟ ವಿಧಾನಗಳನ್ನು ನೆಲಸ್ತರದಲ್ಲಿ ಜಾರಿಗೊಳಿಸಲು ವ್ಯವಸ್ಥೆಯ ನಿರಂತರ ಬೆಂಬಲದ ಹಾಗೂ ಮಾರ್ಗದರ್ಶನದ ಅಗತ್ಯವಿತ್ತು. ಹಾಗಾಗಿ, ಬಿಆರ್‌ಪಿಗಳ ಪಾತ್ರವು ಅಸ್ತಿತ್ವಕ್ಕೆ ಬಂದಿತು. ಇದರಿಂದ ಶಾಲೆ ಹಾಗೂ ಸಮುದಾಯಗಳೊಂದಿಗೆ ಸಕ್ರಿಯವಾಗಿ ಕಾರ್ಯನಿರ್ವಹಿಸಲು ಸಿಆರ್‌ಪಿಗಳಿಗೆ ಸಾಧ್ಯವಾಗುತ್ತದೆ. ಬಿಆರ್‌ಸಿ ಸಮನ್ವಯಕಾರರು ಸಿಆರ್‌ಪಿಗಳ ಕೆಲಸಕಾರ್ಯಗಳನ್ನು ಬೆಂಬಲಿಸುತ್ತಾರೆ, ಸುಗಮಗೊಳಿಸುತ್ತಾರೆ, ಮೌಲ್ಯಮಾಪನ ಮಾಡುತ್ತಾರೆ, ಬಿಇಓ ಮತ್ತು ಕ್ಲಸ್ಟರ್‌ಗಳ ನಡುವಿನ ಕೆಲಸ-ಕಾರ್ಯಗಳ ನಡುವೆ ಯಾವುದೇ ಆಡಳಿತಾತ್ಮಕ ಅಡೆತಡೆಗಳನ್ನು ಪರಿಹರಿಸುವುದಕ್ಕಾಗಿ ಸಂಪರ್ಕ ಏರ್ಪಡಿಸುತ್ತಾರೆ, ಸಾಮರ್ಥ್ಯಾಭಿವೃದ್ಧಿಗಾಗಿ ಮತ್ತು ಸಂಶೋಧನಾ ಕಾರ್ಯವನ್ನು ನಡೆಸುವುದಕ್ಕಾಗಿ ಡಯಟ್, ವಿಶ್ವವಿದ್ಯಾಲಯಗಳು ಹಾಗೂ ಸರ್ಕಾರೇತರ ಸಂಘಸಂಸ್ಥೆಗಳ ನಡುವೆ ಸಂಪರ್ಕಜಾಲವನ್ನು ಸೃಷ್ಟಿಸುತ್ತಾರೆ.

## ಅವರು ತಮ್ಮ ಸಾಮರ್ಥ್ಯವನ್ನು ಸಾಕಾರಗೊಳಿಸಿಕೊಳ್ಳುತ್ತಾರೆಯೇ?

ಶೈಕ್ಷಣಿಕ ವ್ಯವಸ್ಥೆಯಲ್ಲಿ ಧನಾತ್ಮಕ ಬದಲಾವಣೆಗಳನ್ನು ತರುವಲ್ಲಿ ಸಂಪನ್ಮೂಲ ವ್ಯಕ್ತಿಗಳ ಪಾತ್ರಕ್ಕಿರುವ ಸಾಮರ್ಥ್ಯವು ಅಗಾಧವಾದುದು. ವ್ಯವಸ್ಥೆಯು ಅವರಿಂದ ಅವಾಸ್ತವಿಕ ಫಲಿತಗಳನ್ನು ನಿರೀಕ್ಷಿಸುವುದನ್ನು ನಿಲ್ಲಿಸಿದರೆ ಹಾಗೂ ಅವರ ಆದ್ಯತೆಯ ಧ್ಯೇಯೋದ್ದೇಶಗಳ ಮೇಲೆ ಗಮನವನ್ನು ಕೇಂದ್ರೀಕರಿಸಲು ಅನುವು ಮಾಡಿಕೊಟ್ಟರೆ ಮಾತ್ರ ಅವರು ತಮ್ಮ ಸಾಮರ್ಥ್ಯವನ್ನು ಅರಿತು ಸಾಕಾರಗೊಳಿಸಿಕೊಳ್ಳಬಲ್ಲರು ಎಂಬ ಭರವಸೆಯನ್ನು ಕಾಣಬಹುದು.

■

ಬಿ ಫಸ್ಟ್, 24-08-2016

ಸಾರ್ವಜನಿಕರಿಗೆ 'ಅಭಿವೃದ್ಧಿ' ಎನ್ನುವುದು
ಎಲ್ಲಿಯವರೆಗೆ ಆದ್ಯತೆಯಾಗುವುದಿಲ್ಲವೋ ಅಲ್ಲಿಯವರೆಗೆ
ರಾಜಕೀಯ ವರ್ಗವು ಶಿಕ್ಷಣವನ್ನು ಅಸಡ್ಡೆಯಿಂದಲೇ
ನೋಡುವುದನ್ನು ಮುಂದುವರೆಸುತ್ತದೆ. ಗುಣಮಟ್ಟದ
ಶಿಕ್ಷಣವು ಸಾರ್ವತ್ರೀಕರಣವಾಗಬೇಕಿದ್ದು, ಅದು
ಚುನಾವಣೆಯ ಮುಖ್ಯ ವಿಷಯವೂ ಆಗಬೇಕು.

# ನ್ಯಾಯೋಚಿತ ಅಧಿಕಾರಾವಧಿ

## ಉನ್ನತ ಮಟ್ಟದ ಸರಕಾರಿ ಅಧಿಕಾರಿಗಳು ಹೊಂದಿರಬೇಕಾದ ಅಗತ್ಯ

ಲಾಭಾಕಾಂಕ್ಷೆಯಿಲ್ಲದೆ ಪ್ರಾಥಮಿಕ ಹಂತದ ಸಾರ್ವಜನಿಕ ಶಾಲೆಗಳ ಶಿಕ್ಷಣದ ಗುಣಮಟ್ಟ ಹಾಗೂ ಸಮತೆಯಂತಹ ಮೌಲ್ಯಗಳಿಗೆ ಸಂಬಂಧಿಸಿದಂತೆ ಸುಧಾರಣೆಗಳನ್ನು ತರುವ ನಿಟ್ಟಿನಲ್ಲಿ ಗಮನವನ್ನು ಕೇಂದ್ರೀಕರಿಸಿ ಕರ್ನಾಟಕದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಯೊಂದರ ಮುಖ್ಯಸ್ಥರಲ್ಲೊಬ್ಬನಾಗಿ ರಾಜ್ಯ ಸರ್ಕಾರದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆಯೊಂದಿಗೆ ಅದರಲ್ಲಿಯೂ ನಿರ್ದಿಷ್ಟವಾಗಿ ಭಾರತೀಯ ಆಡಳಿತಾತ್ಮಕ ಸೇವೆ(ಐಎಎಸ್)ಯ ಶ್ರೇಣಿಗೆ ಸೇರಿದ ಉನ್ನತ ಮಟ್ಟದ ಅಧಿಕಾರಿಗಳೊಡನೆ ನಿಕಟವಾಗಿ ಕೆಲಸ ಮಾಡುವ ಸಂದರ್ಭ ನನಗೆ ಒದಗಿ ಬಂದಿತ್ತು.

ಕಳೆದ ದಶಕದಲ್ಲಿ ಶಿಕ್ಷಣ ಇಲಾಖೆಯಲ್ಲಿನ ಮೂರು ಅತ್ಯಂತ ಪ್ರಮುಖ ಹಾಗೂ ಉನ್ನತ ಮಟ್ಟದ ಆಡಳಿತಾತ್ಮಕ ಹುದ್ದೆಗಳಾದ ಪ್ರಧಾನ ಕಾರ್ಯದರ್ಶಿ– ಪ್ರಾಥಮಿಕ, ಪ್ರೌಢ ಮತ್ತು ವಯಸ್ಕರ ಶಿಕ್ಷಣ ಇಲಾಖೆ, ಆಯುಕ್ತರು– ಸಾರ್ವಜನಿಕ ಶಿಕ್ಷಣ ಇಲಾಖೆ, ರಾಜ್ಯ ಯೋಜನಾ ನಿರ್ದೇಶಕರು – ರಾಷ್ಟ್ರೀಯ ಮಾಧ್ಯಮಿಕ ಮತ್ತು ಸರ್ವ ಶಿಕ್ಷಣ ಅಭಿಯಾನ (ಈಗ ಸಮಗ್ರ ಶಿಕ್ಷಣ ಅಭಿಯಾನ) ಇವರುಗಳ ಅಧಿಕಾರಾವಧಿಯ ನಿಕಟ ವಿಶ್ಲೇಷಣೆಯು ಹಲವಾರು ಕುತೂಹಲಕಾರಿ ಒಳನೋಟಗಳನ್ನೊದಗಿಸುತ್ತದೆ. ಕಳೆದ ಹನ್ನೊಂದು ವರ್ಷಗಳಲ್ಲಿ, ಎಂಟು

ಕಾರ್ಯದರ್ಶಿಗಳು, ಹದಿನಾಲ್ಕು ಆಯುಕ್ತರು ಹಾಗೂ ಹದಿನೈದು ರಾಜ್ಯ ಯೋಜನಾ ನಿರ್ದೇಶಕರು ಆಗಿ ಹೋಗಿದ್ದಾರೆ. ಇದರರ್ಥ, ಅಧಿಕಾರಿಗಳು ಈ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುವ ಸರಾಸರಿ ಅವಧಿಯು ಕಾರ್ಯದರ್ಶಿಗಳಿಗೆ ಒಂದು ವರ್ಷ ನಾಲ್ಕು ತಿಂಗಳು, ಆಯುಕ್ತರು ಹಾಗೂ ರಾಜ್ಯ ಯೋಜನಾ ನಿರ್ದೇಶಕರಿಗೆ ತಲಾ ಹನ್ನೊಂದು ತಿಂಗಳು ಆಗಿದೆ. ಕಾರ್ಯದರ್ಶಿಯಾಗಿ ಯಾವುದೇ ಅಧಿಕಾರಿಯು ಕಾರ್ಯ ನಿರ್ವಹಿಸಿದ ಅತಿ ದೀರ್ಘ ಅವಧಿಯು ಮೂರು ವರ್ಷ ಆರು ತಿಂಗಳು ಆಗಿದ್ದರೆ, ಇನ್ನಿಬ್ಬರ ಹುದ್ದೆಯ ವಿಷಯಕ್ಕೆ ಬಂದಾಗ ಇದು ಒಂದು ವರ್ಷ ಒಂಬತ್ತು ತಿಂಗಳಾಗಿದೆ. ಈ ಮೂರೂ ಹುದ್ದೆಗಳಲ್ಲಿ ಯಾವುದೇ ಒಂದರಲ್ಲಿ ಅಧಿಕಾರಿಯೊಬ್ಬ ಕಾರ್ಯ ನಿರ್ವಹಿಸಿದ ಅತ್ಯಂತ ಕಡಿಮೆ ಅವಧಿಯು ಕೇವಲ ಒಂದು ತಿಂಗಳು ಆಗಿದ್ದು ಇದು ಅತ್ಯಂತ ಹಾಸ್ಯಾಸ್ಪದ ಎನ್ನುವ ಮಟ್ಟದ್ದಾಗಿದೆ.

ದೀರ್ಘ ಅಧಿಕಾರಾವಧಿಯೊಂದೇ ಉತ್ತಮ ಆಡಳಿತವನ್ನು ನೀಡಬಲ್ಲದು ಎಂದು ಖಚಿತವಾಗಿ ಸಾಧಿಸಿ ತೋರಿಸಲಾಗುವುದಿಲ್ಲ. ಆದರೆ ರಾಜ್ಯದ ರಾಜಧಾನಿಯಾದ ಬೆಂಗಳೂರು ಹಾಗೂ ಈಶಾನ್ಯ ಕರ್ನಾಟಕದ ಅತ್ಯಂತ ಅವಕಾಶವಂಚಿತ ಭಾಗಗಳೂ ಸೇರಿದಂತೆ ರಾಜ್ಯದ ಹತ್ತು ಜಿಲ್ಲೆಗಳಲ್ಲಿ ಕೆಲಸ ಮಾಡಿದ ನಮ್ಮ ಅನುಭವಗಳು ಹೇಳುವುದೇನೆಂದರೆ, ಉನ್ನತ ಮಟ್ಟದ ಶೈಕ್ಷಣಿಕ ಆಡಳಿತ ವ್ಯವಸ್ಥೆಯಲ್ಲಿ ಪದೇ ಪದೇ ಆಗುವ ಬದಲಾವಣೆಗಳಿಂದಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು, ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣ ಹಕ್ಕು ಕಾಯಿದೆ ಮುಂತಾದ ನೀತಿನಿರೂಪಣಾ ದಸ್ತಾವೇಜುಗಳಲ್ಲಿ ಪ್ರತಿಪಾದಿಸಲ್ಪಟ್ಟ, ಗುಣಮಟ್ಟ ಹಾಗೂ ಸಮತೆಗೆ ಸಂಬಂಧಿಸಿದ ಧ್ಯೇಯೋದ್ದೇಶಗಳು ಈಡೇರಲು ಕನಿಷ್ಠ ನಾಲ್ಕು ಕಾರಣಗಳಿಂದಾಗಿ ತೊಡಕಾಗುತ್ತದೆ. ಈ ನಾಲ್ಕು ಕಾರಣಗಳನ್ನು ವಿವರವಾಗಿ ವಿಶ್ಲೇಷಿಸಲಾಗಿದೆ.

**1** ಶಿಕ್ಷಣ ಇಲಾಖೆಯು ರಾಜ್ಯದಲ್ಲಿನ ಸರ್ಕಾರಿ ಇಲಾಖೆಗಳಲ್ಲಿಯೇ ಅತ್ಯಂತ ದೊಡ್ಡ ಹಾಗೂ ಸಂಕೀರ್ಣ ಇಲಾಖೆಯಾಗಿದ್ದು, ಅತ್ಯಂತ ಬುದ್ಧಿವಂತ ಅಧಿಕಾರಿಗೂ ಕೂಡ ಇಲಾಖೆಯ ಚಟುವಟಿಕೆಗಳು, ಕಾರ್ಯಕ್ರಮಗಳು ಮತ್ತು ಯೋಜನೆಗಳ ಗಾತ್ರ ಹಾಗೂ ವ್ಯಾಪಕತೆಯನ್ನು ಅರ್ಥ ಮಾಡಿಕೊಳ್ಳಲು ಕನಿಷ್ಠ ಆರು ತಿಂಗಳುಗಳ ಸಮಯ ಬೇಕಾಗುತ್ತದೆ. ತಮ್ಮ ಕೆಲಸಕಾರ್ಯಗಳಿಗೆ ಬೆಂಬಲವಾಗಿ ನಿಲ್ಲುವ ಎರಡನೆಯ ಹಂತದ ಅಧಿಕಾರಿಗಳು ಹಾಗೂ ತಮ್ಮ ಜೊತೆಗೆ ಕೆಲಸ ಮಾಡುವ ಇನ್ನಿತರ ಸಿಬ್ಬಂದಿ ವರ್ಗದ ಪರಿಚಯವನ್ನು ಸಾಕಷ್ಟು ಚೆನ್ನಾಗಿಯೇ ಮಾಡಿಕೊಳ್ಳಬೇಕಾಗುತ್ತದೆ. ಈ ಎಲ್ಲ

ವಿಷಯಗಳ ಬಗ್ಗೆ ಸ್ವ-ಅರಿವನ್ನು ಮೂಡಿಸಿಕೊಳ್ಳುವುದರ ಜೊತೆಗೆ, ತಾವು ಪರಿಹರಿಸಬೇಕಾದ ಪ್ರಮುಖ ಸಮಸ್ಯೆಗಳ ಆದ್ಯತೆಯನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಕಚೇರಿಯ ಸಿಬ್ಬಂದಿಗಳೂ ಕೂಡ ಇವರ ಕಾರ್ಯವೈಖರಿ ಹಾಗೂ ಗತಿಗೆ ಒಗ್ಗಿಕೊಳ್ಳಬೇಕಾಗುತ್ತದೆ. ಇಡೀ ಆಡಳಿತ ಯಂತ್ರವು ಸಂವೇದನಾಶೀಲತೆಯನ್ನು ಹಾಗೂ ಧನಾತ್ಮಕ ಕಾಯಕ-ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಪ್ರಬಲ ಹಾಗೂ ಮಾರ್ಗದರ್ಶಕ ನಾಯಕತ್ವದ ಜೊತೆಗೆ ಬದ್ಧ, ಪ್ರೇರಿತ ಹಾಗೂ ಸ್ಪಂದನಶೀಲ ತಂಡವಿದ್ದಾಗ ಮಾತ್ರ ಇದು ಸಾಧ್ಯ. ಸಮರ್ಪಣಾ ಭಾವವಿರುವ ಇಂತಹ ತಂಡ ಕಟ್ಟಲು ಸಾಕಷ್ಟು ಸಮಯ ಹಿಡಿಯುತ್ತದೆ.

2 ಕಾರ್ಯಕ್ಷೇತ್ರದಲ್ಲಿ ಏನಾಗುತ್ತಿದೆ ಎಂಬುದನ್ನು ವಾಸ್ತವಿಕ ನೆಲೆಯಲ್ಲಿ ಅರ್ಥೈಸಿಕೊಳ್ಳಲು ಈ ಅಧಿಕಾರಿಗಳಿಗೆ ಸಾಧ್ಯವಾಗಬೇಕು. ಇಲಾಖೆಯ ಸಮಸ್ಯೆಗಳು ಹಾಗೂ ಸವಾಲುಗಳ ಕುರಿತು ತಮ್ಮ ಕೈಕೆಳಗಿನ ಎರಡನೆಯ ಹಂತದ ಅಧಿಕಾರಿಗಳಿಂದ ತಿಳಿದುಕೊಂಡರಷ್ಟೇ ಸಾಕಾಗುವುದಿಲ್ಲ. ತಾವೇ ಜಿಲ್ಲೆಗಳಲ್ಲಿ ಓಡಾಡಿ ಶಾಲೆಗಳಿಗೆ ಭೇಟಿಯಿತ್ತು ಅಲ್ಲಿನ ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆ, ಮಕ್ಕಳ ಸಾಮಾಜಿಕ-ಆರ್ಥಿಕ ಸ್ಥಿತಿಗತಿ, ಶಿಕ್ಷಕರು ಎದುರಿಸುತ್ತಿರುವ ಸವಾಲುಗಳು, ಪಾಲಕರು ಮತ್ತು ಇನ್ನಿತರ ಭಾಗೀದಾರರ ನಿರೀಕ್ಷೆಗಳು, ಶಾಲಾ ಅಭಿವೃದ್ಧಿ ಉಸ್ತುವಾರಿ ಸಮಿತಿ ಮತ್ತು ಒಟ್ಟಾರೆ ಸಮುದಾಯದ ಪಾತ್ರಗಳನ್ನು ಅರ್ಥ ಮಾಡಿಕೊಳ್ಳಲು ಸಾಕಷ್ಟು ಸಮಯವನ್ನು ತೊಡಗಿಸಬೇಕಾಗುತ್ತದೆ. ಮಕ್ಕಳ ಕಲಿಕೆಗೆ ಅನುಕೂಲಕರವಾದ ವಾತಾವರಣವನ್ನು ನಿರ್ಮಿಸುವಲ್ಲಿ ಶಿಕ್ಷಕರು ಮತ್ತು ಪೋಷಕರ ಅಗತ್ಯಗಳಿಗೆ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಅಧಿಕಾರಿಗಳು ಎಷ್ಟರ ಮಟ್ಟಿಗೆ ಸ್ಪಂದಿಸುತ್ತಿದ್ದಾರೆ ಎಂಬುದರ ಬಗ್ಗೆಯೂ ಇಂತಹ ಭೇಟಿಗಳು ಅವರಿಗೆ ನೇರ ಅರಿವನ್ನು ಮೂಡಿಸುತ್ತವೆ.

3 ಇಲಾಖೆಯಲ್ಲಿಯೇ ಲಭ್ಯವಿರುವ ಒಟ್ಟಾರೆ ಶಕ್ತಿಯನ್ನು, ಅದರಲ್ಲಿಯೂ ಜನರ ಸಾಮರ್ಥ್ಯಗಳನ್ನು ಅವರು ಅಳೆಯಬೇಕಾಗುತ್ತದೆ. ಅಲ್ಲದೆ ಹೊರಗಿನ ಯಾವ ವ್ಯಕ್ತಿಗಳು ಹಾಗೂ ಸರ್ಕಾರೇತರ ಸಂಘ-ಸಂಸ್ಥೆಗಳು ಇಲಾಖೆಗೆ ಸಹಯೋಗ ನೀಡುತ್ತಿವೆ ಮತ್ತು ಇನ್ನಿತರ ಯಾವ ತಜ್ಞರಿಂದ ಯಾವ ಬಗೆಯ ನೆರವನ್ನು ಪಡೆಯುವ ಅಗತ್ಯವಿದೆ ಎಂಬುದನ್ನೂ ತಿಳಿದುಕೊಂಡಿರಬೇಕಾಗುತ್ತದೆ. ತಮ್ಮ ವ್ಯಾಪ್ತಿಯಲ್ಲಿ ಲಭ್ಯವಿರುವ ಎಲ್ಲ ಬಗೆಯ ಸಂಪನ್ಮೂಲಗಳ ಬಗ್ಗೆ ಅರ್ಥಪೂರ್ಣ ಚಿತ್ರಣವನ್ನು ಮೂಡಿಸಿಕೊಳ್ಳಬೇಕಾಗುತ್ತದೆ. ಯೋಜನೆಗಳ ಚಾಲನೆಗೆ

ಸ್ಪಷ್ಟ ದಿಕ್ಕನ್ನು ರೂಪಿಸಲು ಹಾಗೂ ಸಮರ್ಪಕ ರೀತಿಯಲ್ಲಿ ಅವುಗಳನ್ನು ಕಾರ್ಯಗತಗೊಳಿಸಲು ಇದರಿಂದ ಬಹಳ ಅನುಕೂಲವಾಗುತ್ತದೆ.

4 ಇವು ಸಾರ್ವಜನಿಕ ಕ್ಷೇತ್ರದ ಹುದ್ದೆಗಳಾದ್ದರಿಂದ ಅಧಿಕಾರಿಗಳು ತಮಗೆ ಸಂಬಂಧಪಟ್ಟ, ರಾಜಕೀಯ ಮೇಲಧಿಕಾರ ಹೊಂದಿರುವ ಚುನಾಯಿತ ಪ್ರತಿನಿಧಿಗಳೊಂದಿಗೆ ನಿರಂತರ ಸಂಪರ್ಕವಿರಿಸಿಕೊಳ್ಳಬೇಕಾಗುತ್ತದೆ. ಸಂಬಂಧಿಸಿದ ಸಚಿವರೊಂದಿಗೆ ನಿಕಟವಾಗಿ ಕಾರ್ಯ ನಿರ್ವಹಿಸ ಬೇಕಾಗುತ್ತದೆ. ಅಲ್ಲದೇ ಶಾಸಕರು, ವಿಧಾನ ಪರಿಷತ್ತಿನ ಸದಸ್ಯರು, ಲೋಕಸಭಾ ಸದಸ್ಯರು, ವಿರೋಧ ಪಕ್ಷದ ಮುಖಂಡರುಗಳ ಜೊತೆ ಹಾಗೂ ಇನ್ನಿತರ ಜನಪ್ರತಿನಿಧಿಗಳೊಡನೆ ಒಡನಾಡಬೇಕಾಗುತ್ತದೆ. ಸಾರ್ವಜನಿಕರು, ಮಾಧ್ಯಮ ಪ್ರತಿನಿಧಿಗಳು ಹಾಗೂ ಪೌರ ಸಂಘಟನೆಗಳ ಜೊತೆಗೆ ಕೂಡ ಅವರು ಆಗಿಂದಾಗ್ಗೆ ವ್ಯವಹರಿಸಬೇಕಾಗುತ್ತದೆ. ಹೀಗೆ ರಾಜಕಾರಣಿಗಳೊಂದಿಗೆ ವ್ಯವಹರಿಸುವಾಗ ಸರಿಯಾದ ರೀತಿಯ ಸಂಬಂಧವನ್ನಿರಿಸಿಕೊಂಡು ತಟಸ್ಥ ಧೋರಣೆಯಿಂದ ನಿರ್ಭಯವಾಗಿ, ಯಾವುದೇ ಆಮಿಷಗಳಿಗೆ ಬಲಿಯಾಗದೆ ನಿಷ್ಪಕ್ಷಪಾತ ರೀತಿಯಲ್ಲಿ ಕಾರ್ಯನಿರ್ವಹಿಸುವರೆಂಬ ನಿರೀಕ್ಷೆಯನ್ನು ಈ ಅಧಿಕಾರಿಗಳ ಮೇಲಿರಿಸಲಾಗುತ್ತದೆ. ಅವರು ಸಾರ್ವಜನಿಕರಿಗೆ, ನಾಗರಿಕ ಸಂಘಟನೆಗಳಿಗೆ ಹಾಗೂ ಮಾಧ್ಯಮಗಳಿಗೆ ಸಮರ್ಪಕವಾದ ವೇಳೆಯನ್ನು ಮೀಸಲಿರಿಸಬೇಕಾಗಿದ್ದು, ತಮ್ಮನ್ನು ಸಂಪರ್ಕಿಸಲು ಬರುವವರಿಗೆ ತಮ್ಮ ಕಚೇರಿಯಲ್ಲಿ ಮುಕ್ತ ವಾತಾವರಣವನ್ನು ನಿರ್ಮಿಸಬೇಕಾಗುತ್ತದೆ. ಇದನ್ನು ಜಾರಿಗೊಳಿಸಲು ಸೂಕ್ತ ವ್ಯವಸ್ಥೆಯನ್ನು ಅವರು ಅಳವಡಿಸಬೇಕಾಗಿದ್ದು ಅದಕ್ಕೆ ತಕ್ಕ ಸಮಯವನ್ನು ನೀಡಬೇಕಾಗುತ್ತದೆ.

ಮೇಲಿನ ಅಂಕಿ-ಅಂಶಗಳೇ ಸಾರುವಂತೆ ಎಲ್ಲವನ್ನೂ ಕ್ರಮಬದ್ಧಗೊಳಿಸಲು ಬೇಕಾದ ಕನಿಷ್ಠ ಸಮಯವನ್ನೂ ಅಧಿಕಾರಿಗಳಿಗೆ ನೀಡದೆ ಅವರನ್ನು ಪದೇ ಪದೇ ವರ್ಗಾವಣೆಗೆ ಗುರಿಪಡಿಸಲಾಗುತ್ತದೆ. ಇಂತಹ ಗೊತ್ತುಗುರಿಯಿಲ್ಲದ ಬದಲಾವಣೆಗಳಿಗೆ ಬಹಳಷ್ಟು ಬಾರಿ ಅಭಿವೃದ್ಧಿಗೆ ಸಂಬಂಧಿಸಿರದ ಕಾರಣಗಳೇ ಇರುತ್ತವೆ. ಉದಾಹರಣೆಗೆ, ಇನ್ನಿತರ ಪ್ರಬಲ ಸಚಿವಾಲಯಗಳಲ್ಲಿನ ಹುದ್ದೆಗಳಿಗೆ ಹೋಲಿಸಿದರೆ ಈ ಹುದ್ದೆಗಳು ಹೆಚ್ಚು ಅಪೇಕ್ಷಣೀಯವಲ್ಲ. ಅಷ್ಟು ಆಕರ್ಷಕವಲ್ಲವೆಂಬ ಭಾವನೆ ಅಥವಾ ಸ್ವಜನ ಪಕ್ಷಪಾತವು ಕಾರಣವಾಗಬಹುದು. ಬದ್ಧತೆಯನ್ನು ಹೊಂದಿರುವ ಅಧಿಕಾರಿಗಳನ್ನು ಇನ್ನಿತರ ಪ್ರಮುಖ ಇಲಾಖೆಗಳಿಗೆ ನಿಯೋಜಿಸಬಹುದು. ಅಧಿಕಾರಿಗಳಲ್ಲಿ ಅನೇಕರು ಕೆಲವು ಕಾಲ ಕೇಂದ್ರ ಸರ್ಕಾರದ

ಇಲಾಖೆಗಳಲ್ಲೊಂದರಲ್ಲಿ ಕಾರ್ಯ ನಿರ್ವಹಿಸುವುದಕ್ಕೆ ಆದ್ಯತೆ ವ್ಯಕ್ತಪಡಿಸಬಹುದು. ಹೀಗೆ ಈ ಕಾರಣಗಳ ವ್ಯಾಪ್ತಿ ದೊಡ್ಡದು.

ಒಟ್ಟಾರೆ ಸಾರ್ವಜನಿಕರಿಗೆ 'ಅಭಿವೃದ್ಧಿ' ಎನ್ನುವುದು ಎಲ್ಲಿಯವರೆಗೆ ಆದ್ಯತೆಯಾಗುವುದಿಲ್ಲವೋ ಅಲ್ಲಿಯವರೆಗೆ ರಾಜಕೀಯ ವರ್ಗವು ಶಿಕ್ಷಣವನ್ನು ಅಸಡ್ಡೆಯಿಂದಲೇ ನೋಡುವುದನ್ನು ಮುಂದುವರೆಸುತ್ತದೆ (ಒಳ್ಳೆಯ ಉದ್ದೇಶವನ್ನು ಹೊಂದಿದ್ದು ಶಿಕ್ಷಣದ ಧ್ಯೇಯೋದ್ದೇಶಗಳಿಗೆ ಬದ್ಧರಾಗಿದ್ದರೂ ಈಗಿರುವ ಶಿಕ್ಷಣ ಸಚಿವರಿಗೆ ಸಂಪುಟದಲ್ಲಿ ಕೇವಲ ರಾಜ್ಯ ಸಚಿವ ದರ್ಜೆಯ ಸ್ಥಾನವನ್ನು ನೀಡಿರುವುದನ್ನು ನೋಡಿದರೆ ಅದು ಕೇವಲ ಕಾಕತಾಳೀಯ ಎನ್ನಲಾಗದು). ವಾರ್ಷಿಕ ಮುಂಗಡಪತ್ರದಲ್ಲಿ ಶಿಕ್ಷಣಕ್ಕಾಗಿ ಅತ್ಯಲ್ಪ ಮೊತ್ತವನ್ನು ನಿಗದಿ ಪಡಿಸುವುದು, ಅಧಿಕಾರಿಗಳನ್ನು ಪದೇಪದೇ ಬದಲಾಯಿಸುವುದು ಇವು ಪರಿಹರಿಸಬೇಕಾದ ದೊಡ್ಡ ಅಸ್ವಸ್ಥತೆಯ ರೋಗಲಕ್ಷಣಗಳಲ್ಲಿ ಕೆಲವಷ್ಟೇ. ನಿರ್ದಿಷ್ಟವಾಗಿ ಹೇಳಬೇಕೆಂದರೆ, ಎಲ್ಲ ಮಕ್ಕಳಿಗೂ ಲಭ್ಯವಾಗುವ ಹಾಗೆ ಗುಣಮಟ್ಟದ ಶಿಕ್ಷಣವು ಸಾರ್ವತ್ರೀಕರಣವಾಗಬೇಕಿದ್ದು ಅದು ಚುನಾವಣೆಯ ಮುಖ್ಯ ವಿಷಯವೂ ಆಗಬೇಕು. ಇಲ್ಲದಿದ್ದರೆ, ಶಿಕ್ಷಣ ಇಲಾಖೆಯನ್ನು ಅಸಡ್ಡೆಯಿಂದ ನೋಡುವ ಸದ್ಯದ ಪರಿಪಾಠವು ಅನಿವಾರ್ಯವಾಗಿ ಮುಂದುವರೆಯುತ್ತದೆ.

ಮುಂಬರುವ ದಿನಗಳಲ್ಲಿ ಶಿಕ್ಷಣಕ್ಕೆ ಸಲ್ಲಬೇಕಾದ ಪಾಲನ್ನು ಯಥಾಯೋಗ್ಯವಾಗಿ ನೀಡುವಂತೆ ನೀತಿನಿರೂಪಕರ ಮೇಲೆ ಸಾಕಷ್ಟು ಒತ್ತಡವನ್ನು ತರಲು ಸಾಧ್ಯವಾಗುವುದೆಂದು ಆಶಿಸೋಣ. ಅದರಲ್ಲಿಯೂ ವಿಶೇಷವಾಗಿ, ರಾಷ್ಟ್ರೀಯ ಹಾಗೂ ರಾಜ್ಯ ಮಟ್ಟಗಳೆರಡರಲ್ಲಿಯೂ ರೂಪುಗೊಳ್ಳುತ್ತಿರುವ ಹೊಸ ಶಿಕ್ಷಣ ನೀತಿಯ ಇಂದಿನ ಸಂದರ್ಭದಲ್ಲಿ, ಮುಂಬರುವ ದಶಕದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯ ಸಮಕ್ಕೆ ಏರಿಸುವುದಕ್ಕಾಗಿ ಸರ್ಕಾರಗಳು ಮಾನವ ಬಂಡವಾಳದ ಮೇಲೆ ಹೆಚ್ಚಿನ ಹೂಡಿಕೆಯನ್ನು ಮಾಡುತ್ತವೆ ಎಂಬ ಬಹುದೊಡ್ಡ ನಿರೀಕ್ಷೆಯಿದೆ. ಶಿಕ್ಷಣದ ಹಕ್ಕು ಕಾಯಿದೆ ಮತ್ತು ಇತ್ತೀಚೆಗೆ ವಿಶ್ವಸಂಸ್ಥೆಯಿಂದ ಅಂಗೀಕರಿಸಲ್ಪಟ್ಟ ಸುಸ್ಥಿರ ಅಭಿವೃದ್ಧಿ ಧ್ಯೇಯೋದ್ದೇಶಗಳೆರಡೂ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವನ್ನು ಎಂಟು ವರ್ಷಗಳವರೆಗೆ ಕೊಡುವ ಭರವಸೆಯನ್ನು ನೀಡುತ್ತವೆ. ಆದರೆ ಇವೆರಡರ ಗುರಿಯನ್ನೂ ಮೀರಿ, ಎಲ್ಲಾ ಮಕ್ಕಳಿಗೂ ಹನ್ನೆರಡು ವರ್ಷಗಳ ಅವಧಿಯ ಗುಣಮಟ್ಟದ ಶಾಲಾ ಶಿಕ್ಷಣವನ್ನು ಕೊಡುವ ನಿಟ್ಟಿನಲ್ಲಿ ತನ್ನ ಬದ್ಧತೆಯನ್ನು ಮೆರೆಯುವ ಮೂಲಕ ಕರ್ನಾಟಕವು ದೇಶದಲ್ಲಿಯೇ ಮಾದರಿ ರಾಜ್ಯವಾಗಲು ಇದು ಸೂಕ್ತ ಸಮಯ.

■ ಬಿ ಫಸ್ಟ್, 18-03-2016

ತರಗತಿಕೋಣೆಯಿಂದ ಹೊರಗುಳಿಯುವುದಕ್ಕೆ ಶಿಕ್ಷಕರ 'ಕರ್ತವ್ಯ ಲೋಪ'ವೇ ಮುಖ್ಯ ಕಾರಣವಲ್ಲ. ಶಿಕ್ಷಣ ವ್ಯವಸ್ಥೆಯು ಅವರ ಮೇಲೆ ಹೊರಿಸುವ ಅನೇಕ ಶಿಕ್ಷಣೇತರ ಜವಾಬ್ದಾರಿಗಳೂ ಇವೆ. ಶಿಕ್ಷಕರ ದಿನನಿತ್ಯದ ವಾಸ್ತವಗಳನ್ನು ನಿರ್ಲಕ್ಷಿಸಿ, ಅಸುರಕ್ಷಿತ ವಾತಾವರಣವನ್ನು ನಿರ್ಮಿಸುವ ಅರ್ಥಹೀನ 'ಉತ್ತರದಾಯಿತ್ವದ' ಕ್ರಮಗಳನ್ನು ಕೂಡಲೇ ಕೈಬಿಡಬೇಕು.

# ಸರ್ಕಾರಿ ಶಾಲಾ ಶಿಕ್ಷಕರ ಗೈರುಹಾಜರಾತಿಯ ಸತ್ಯಾಸತ್ಯತೆ

## ಪ್ರಚಲಿತ ನಿರೂಪಣೆಗಳು ಬಿಂಬಿಸುತ್ತಿರುವ ಅರೆಸತ್ಯಗಳು

ಇತ್ತೀಚಿನ ವರ್ಷಗಳಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಕರ ಗೈರುಹಾಜರಾತಿಯ ಪ್ರಮಾಣವು ಉಲ್ಬಣಿಸುತ್ತಿರುವ ಕುರಿತು ವಿಸ್ತೃತ ಮಟ್ಟದ ಚರ್ಚೆಗಳಾಗುತ್ತಿವೆ. ಅವು ಶಿಕ್ಷಣಾಸಕ್ತರ, ಅದರಲ್ಲೂ ಮುಖ್ಯವಾಗಿ ನೀತಿ ನಿರೂಪಕರ ಮತ್ತು ಸಂಶೋಧಕರ ಗಮನವನ್ನು ಸೆಳೆದಿವೆ.

ಈ ವಿಷಯದ ಬಗೆಗಿನ ಬಹುತೇಕ ಎಲ್ಲ ಪ್ರಚಲಿತ ನಿರೂಪಣೆಗಳೂ ಸರ್ಕಾರಿ ಶಾಲಾ ವ್ಯವಸ್ಥೆಯ ದೌರ್ಬಲ್ಯಗಳಿಗೆ ಶಿಕ್ಷಕರ ಗೈರುಹಾಜರಾತಿಯೇ ಮೂಲ ಕಾರಣವೆಂಬ ವಾದವನ್ನು ಮುಂದಿರಿಸಿ ಶಿಕ್ಷಕರ ಮೇಲೆ ಗೂಬೆ ಕೂರಿಸುವ ಯತ್ನಗಳನ್ನು ಮಾಡುತ್ತಿವೆ. ಅಲ್ಲದೆ ಈ ಜ್ವಲಂತ ಸಮಸ್ಯೆಗೆ ಪರಿಹಾರೋಪಾಯವಾಗಿ ಶಿಕ್ಷಕರನ್ನು ನಿಯಂತ್ರಣಕ್ಕೊಳಪಡಿಸಬೇಕೆಂಬ ಆಲೋಚನೆಗಳು ಆಡಳಿತಾತ್ಮಕ ವಲಯಗಳಲ್ಲಿ ಗರಿಗೆದರುತ್ತಿರುವುದು ಕಳವಳಕಾರಿ ಬೆಳವಣಿಗೆಯಾಗಿದೆ. ಕೇಂದ್ರ ಸರ್ಕಾರದ 2016–17ರ ಆರ್ಥಿಕ ಸಮೀಕ್ಷೆಯಲ್ಲಿ ಶಿಕ್ಷಕರ ಗೈರುಹಾಜರಾತಿಯ ಮೇಲೆ ಕಡಿವಾಣ ಹಾಕಲು ಬಯೋಮೆಟ್ರಿಕ್ ವ್ಯವಸ್ಥೆಯನ್ನು ಅಳವಡಿಸಬೇಕೆಂದು ಮಾಡಿರುವ ಪ್ರಸ್ತಾವನೆಯು ಈ ವಾದಕ್ಕೆ ಪುಷ್ಟಿ ನೀಡುತ್ತದೆ.

**ಹೊಸ ಅಧ್ಯಯನ ಹೇಳುವುದೇನು?**

ನಮ್ಮ ಸಂಸ್ಥೆಯು ಸುಮಾರು ಎರಡು ದಶಕಗಳಿಂದಲೂ ಸರ್ಕಾರಿ ಶಾಲಾ ಶಿಕ್ಷಣವ್ಯವಸ್ಥೆಯೊಂದಿಗೆ ತಳಹಂತದಲ್ಲಿ ತೊಡಗಿಸಿಕೊಂಡಿದೆ. ಶಿಕ್ಷಕರ ಗೈರುಹಾಜರಾತಿಯನ್ನು ಸೂಕ್ಷ್ಮವಾಗಿ ಅರಿಯುವ ಮತ್ತು ಈ ಬಗೆಗಿನ ವಾಸ್ತವ ಸ್ಥಿತಿಯ ಮೇಲೆ ಬೆಳಕು ಚೆಲ್ಲುವ ಉದ್ದೇಶದಿಂದ ನಮ್ಮ ಸಂಸ್ಥೆಯು ಭಾರತದ ಐದು ರಾಜ್ಯಗಳಲ್ಲಿ ಅಂದರೆ ಕರ್ನಾಟಕ, ಛತ್ತೀಸ್‌ಗಢ, ಮಧ್ಯಪ್ರದೇಶ, ರಾಜಸ್ತಾನ ಮತ್ತು ಉತ್ತರಾಖಂಡಗಳಲ್ಲಿ ಕಾರ್ಯೋನ್ಮುಖವಾಗಿದೆ. ಅತಿ ಹಿಂದುಳಿದ ಭಾಗಗಳಿಗೆ ಸೇರಿದ 619 ಗ್ರಾಮೀಣ ಶಾಲೆಗಳ 2861 ಶಿಕ್ಷಕರನ್ನೊಳಗೊಳ್ಳುವ ಹಾಗೆ ವಿಸ್ತೃತ ಸಂಶೋಧನೆಯೊಂದನ್ನು ಮಾರ್ಚ್ 2017ರಲ್ಲಿ ಕೈಗೊಂಡಿತ್ತು.

**ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಪ್ರಶ್ನೆಗಳು**

(1) ಸರ್ಕಾರಿ ಶಾಲೆಗಳಲ್ಲಿನ ಶಿಕ್ಷಕರ ಗೈರುಹಾಜರಾತಿಗೆ ಇರುವ ಮುಖ್ಯ ಕಾರಣಗಳೇನು?

(2) ಶಿಕ್ಷಕರ ಗೈರುಹಾಜರಾತಿಯ ಪ್ರಮಾಣವೆಷ್ಟು?

**ಸಂಶೋಧನೆಯಿಂದ ಹೊರಹೊಮ್ಮಿದ ಮುಖ್ಯಾಂಶಗಳು:**

ಪ್ರಚಲಿತ ನಿರೂಪಣೆಗಳು ಬಿಂಬಿಸಿರುವ ಅಂಶಗಳಿಗಿಂತ ವ್ಯತಿರಿಕ್ತವಾದ ವಾಸ್ತವಾಂಶಗಳನ್ನು ಈ ಸಂಶೋಧನಾ ವರದಿಯು ಹೊರಹಾಕಿದೆ.

(ಅ) ಶಿಕ್ಷಕರ ಗೈರುಹಾಜರಾತಿಯ ಒಟ್ಟಾರೆ ಪ್ರಮಾಣ ಶೇ. 18.9ರಷ್ಟಿದ್ದು ಅದರಲ್ಲಿ 'ಕಾರಣರಹಿತ ಗೈರುಹಾಜರಾತಿ'ಯ ಪ್ರಮಾಣ ಕೇವಲ ಶೇ.2.5ರಷ್ಟಿದೆ.

(ಆ) ತರಗತಿಗಳಲ್ಲಿ ಶಿಕ್ಷಕರ ಅನುಪಸ್ಥಿತಿಗೆ ಇರುವ ಇನ್ನಿತರ ಪ್ರಮುಖ ಕಾರಣಗಳು ಮತ್ತು ಅವುಗಳಿಗೆ ಸಂಬಂಧಿಸಿದ ಶೇಕಡಾವಾರು ಪ್ರಮಾಣ ಹೀಗಿವೆ:

| | |
|---|---|
| **ಶೇ. 9.1** | **ಶೇ.3.8** |
| ಶಿಕ್ಷಕರು ಪಡೆಯುವ ನ್ಯಾಯಯುತ (ಸಾಂದರ್ಭಿಕ, ವೈದ್ಯಕೀಯ) ರಜೆಗಳು | ಅಧಿಕೃತ ಶೈಕ್ಷಣಿಕ ಕರ್ತವ್ಯಗಳು (ತಾತ್ಕಾಲಿಕವಾಗಿ ಬೇರೆ ಶಾಲೆಗೆ ನಿಯೋಜಿಸಲ್ಪಡುವುದು, ತರಬೇತಿಗಳು ಮತ್ತು ಸಮೂಹ ಸಮಾಲೋಚನಾ ಸಭೆಗಳಲ್ಲಿ ಭಾಗವಹಿಸುವುದು, ಇತ್ಯಾದಿ) |

| ಶೇ.2.1 | ಶೇ.2.5 | ಶೇ.0.9 |
|---|---|---|
| ಇತರ ಅಧಿಕೃತ ಆಡಳಿತಾತ್ಮಕ ಕರ್ತವ್ಯಗಳು (ಬಿಸಿಯೂಟ, ವಿಶೇಷ ಅಗತ್ಯಗಳನ್ನುಳ್ಳ ಮಕ್ಕಳ ಕುರಿತಾದ ಮಾಹಿತಿ ಸಂಗ್ರಹ, ಇಲಾಖೆಯ ಹಲವು ಯೋಜನೆಗಳ ಅನುಷ್ಠಾನ ಮುಂತಾದವು) | ಶಿಕ್ಷಕರ 'ಕಾರಣರಹಿತ ಗೈರುಹಾಜರಾತಿ' ಪ್ರಮಾಣ | ಇಲಾಖೆಯ ಇತರ ಅಧಿಕೃತ ಕರ್ತವ್ಯಗಳು (ಚುನಾವಣೆ ಕರ್ತವ್ಯ, ಆರೋಗ್ಯ ಮತ್ತು ಇತರ ಇಲಾಖೆಗಳ ಕರ್ತವ್ಯಗಳು, ಪಂಚಾಯಿತಿ ಸಭೆಗಳು, ಇತ್ಯಾದಿ) |

(ಇ) ಇದರಿಂದ ಸ್ಪಷ್ಟವಾಗಿ ನಮಗೆ ತಿಳಿದು ಬರುವ ಒಳನೋಟವೇನೆಂದರೆ, ತರಗತಿಕೋಣೆಯಿಂದ ಹೊರಗುಳಿಯುವುದಕ್ಕೆ ಶಿಕ್ಷಕರ 'ಕರ್ತವ್ಯ ಲೋಪ'ವೇ ಮುಖ್ಯ ಕಾರಣವಲ್ಲ. ಶಿಕ್ಷಣ ವ್ಯವಸ್ಥೆಯು ಅವರ ಮೇಲೆ ಹೊರಿಸುವ ಅನೇಕ ಶಿಕ್ಷಣೇತರ ಜವಾಬ್ದಾರಿಗಳೂ ಇವೆ.

(ಈ) ಆಗಿಂದಾಗ್ಗೆ ಶಿಕ್ಷಕರು ನ್ಯಾಯಯುತ ಕಾರಣಗಳಿಗಾಗಿ ತರಗತಿಗಳ ಪಾಠ-ಪ್ರವಚನಗಳಿಂದ ದೂರವುಳಿಯುವ ಅನಿವಾರ್ಯತೆಯಿದೆ. ಶಿಕ್ಷಕರು ವಿನಾಕಾರಣ ಗೈರುಹಾಜರಾಗುತ್ತಿದ್ದಾರೆಂಬ ಸಿದ್ಧ ಪಡಿಯಚ್ಚಿನ ಚಿತ್ರವನ್ನು ಮೂಡಿಸಿ, ವಿಸ್ತೃತವಾಗಿ ಅದನ್ನೇ ಸತ್ಯವೆಂದು ಬಿಂಬಿಸುತ್ತಿರುವುದು ಶಿಕ್ಷಕರನ್ನು ಅವಮಾನಿಸಿದಂತೆಯೇ ಸರಿ.

(ಉ) ಈ ಚಿತ್ರಣಕ್ಕೆ ತೀರ ವಿಭಿನ್ನವಾಗಿ, ಎಷ್ಟೋ ಬಾರಿ ಶಿಕ್ಷಕರು ಪ್ರತಿಕೂಲ ಸವಾಲುಗಳ ನಡುವೆಯೂ ಬದ್ಧತೆಯಿಂದ ತಮ್ಮ ಕೆಲಸ ನಿರ್ವಹಿಸುತ್ತಿದ್ದಾರೆ. ಸಾಮಾಜಿಕವಾಗಿ ಅವಕಾಶವಂಚಿತ, ಪ್ರತ್ಯೇಕಿಸಲ್ಪಟ್ಟ ಸಮುದಾಯಗಳ ಮಕ್ಕಳ ಅಗತ್ಯಗಳು ಮತ್ತು ಸಾಂದರ್ಭಿಕ ಹಿನ್ನೆಲೆಗಳನ್ನರಿತು ಅವರ ಏಳ್ಗೆಗೆ ಸಂವೇದನಾಶೀಲತೆಯಿಂದ ಸ್ಪಂದಿಸುತ್ತಿದ್ದಾರೆ. ಶಾಲೆಗಳಲ್ಲಿ ಮಗುಸ್ನೇಹಿ ವಾತಾವರಣವನ್ನು ನಿರ್ಮಿಸಿ, ತಮ್ಮ ವಿದ್ಯಾರ್ಥಿಗಳನ್ನು ಸಮಾಜದಲ್ಲಿ ಅಪೇಕ್ಷಿತ ಮನುಷ್ಯರನ್ನಾಗಿ ರೂಪಿಸಬೇಕೆಂಬ ಸ್ಪಷ್ಟ ಶೈಕ್ಷಣಿಕ ಪರಿಕಲ್ಪನೆಯನ್ನು ಹೊಂದಿದ್ದಾರೆ.

### ಗುಣಾತ್ಮಕ ಅಂಶಗಳ ಮಹತ್ವ

ಸಂಶೋಧನೆಯ ಉದ್ದೇಶವು ಕೇವಲ ಸಂಖ್ಯಾಶಾಸ್ತ್ರದ ಆಯಾಮದ ಮೇಲಷ್ಟೇ ಅಧ್ಯಯನವನ್ನು ಕೇಂದ್ರೀಕರಿಸುವುದಾಗಿರಲಿಲ್ಲ. ಜನಾಂಗಶಾಸ್ತ್ರೀಯ (ಎಥ್ನೋಗ್ರಫಿ) ವಿಧಾನವನ್ನು ಬಳಸಿ ಆಯ್ದ ಕೆಲವು ಶಿಕ್ಷಕರ ಕುರಿತಾದ

ಅಧ್ಯಯನವನ್ನು ಗುಣಾತ್ಮಕ ನೆಲೆಯಲ್ಲಿ ಕೈಗೊಳ್ಳಲಾಯಿತು, ಶಾಲಾ ಅವಧಿಯಲ್ಲಿ ಶಿಕ್ಷಕರು ತಮ್ಮ ಹಾಜರಾತಿಯನ್ನು ಹೇಗೆ ನಿರ್ವಹಿಸುತ್ತಾರೆ? ಅವರು ಬೋಧನೆಯಲ್ಲಿ ತೊಡಗಿಕೊಳ್ಳದ ಸಮಯದಲ್ಲೂ ಶೈಕ್ಷಣಿಕ ಗುಣಮಟ್ಟವನ್ನು ಹೇಗೆ ಕಾಯ್ದಿರಿಸಿಕೊಳ್ಳುತ್ತಾರೆ? ದೈನಂದಿನ ಸವಾಲುಗಳನ್ನು ಅವರು ಹೇಗೆ ಎದುರಿಸುತ್ತಾರೆ? ಎಂಬ ಈ ಅಂಶಗಳ ಬಗ್ಗೆಯೂ ಪ್ರತ್ಯಕ್ಷವಾಗಿ ನೋಡಿ ತಿಳಿಯುವುದು ಆ ಸಂಶೋಧನೆಯ ಉದ್ದೇಶವಾಗಿತ್ತು. ಪ್ರಚಲಿತ ಚರ್ಚೆಗಳು ಸಂಪೂರ್ಣವಾಗಿ ನಿರ್ಲಕ್ಷಿಸಿರುವ, ಆದರೆ ಶಿಕ್ಷಕರ ವೃತ್ತಿ ನಿರ್ವಹಣೆಗೆ ಪ್ರೇರಕ ಶಕ್ತಿಯಾಗಿರುವ 'ಸ್ವಾಯತ್ತತೆ'ಯನ್ನು ನಮ್ಮ ಸಂಶೋಧಕರು ಗುರುತಿಸಿದರು. ಇದರಿಂದ, ಶಿಕ್ಷಕರೊಂದಿಗೆ ನಡೆಸಿದ ಪ್ರಕರಣ ಅಧ್ಯಯನ(ಕೇಸ್ ಸ್ಟಡೀಸ್)ಗಳಲ್ಲಿ ಅಗತ್ಯವಾಗಿದ್ದ ಪೂರಕ ವಾತಾವರಣವು ಸೃಷ್ಟಿಯಾಯಿತು.

**ಅಂತಿಮ ಮಾತು:**

ಲಕ್ಷಾಂತರ ಶಿಕ್ಷಕರು, ತಮ್ಮ ಅನೇಕ ವೈಯಕ್ತಿಕ ಅನನುಕೂಲತೆಗಳು, ಸಾಂದರ್ಭಿಕ ಸವಾಲುಗಳು, ವ್ಯವಸ್ಥೆಯ ಕಾರಣದಿಂದುಂಟಾಗುವ ಸಂಕಷ್ಟಗಳ ನಡುವೆಯೂ ವೃತ್ತಿ ಪ್ರೀತಿ ಮತ್ತು ಬದ್ಧತೆಯಿಂದ ತೊಡಗಿಸಿಕೊಂಡಿರುತ್ತಾರೆ. ಅವರ ದಿನನಿತ್ಯದ ವಾಸ್ತವಗಳನ್ನು ನಿರ್ಲಕ್ಷಿಸಿ, ಅಸುರಕ್ಷಿತ ವಾತಾವರಣವನ್ನು ನಿರ್ಮಿಸುವ ಅರ್ಥಹೀನ 'ಉತ್ತರದಾಯಿತ್ವದ' ಕ್ರಮಗಳನ್ನು ಕೂಡಲೇ ಕೈಬಿಡಬೇಕು. ಶಿಕ್ಷಣ ವ್ಯವಸ್ಥೆಯನ್ನು ಸುಧಾರಿಸುವ ಮತ್ತು ದೂರಗಾಮಿ ಕ್ರಮಗಳನ್ನು ಕೈಗೊಳ್ಳುವ ನಿಟ್ಟಿನಲ್ಲಿ ನೀತಿನಿರೂಪಕರು ಮತ್ತು ಶಿಕ್ಷಣ ಇಲಾಖೆ ಮುಂದಾಗಬೇಕಾಗಿದೆ.

ಸೇವಾಪೂರ್ವ ಶಿಕ್ಷಕರ ತರಬೇತಿಯನ್ನು ಬಲಪಡಿಸುವುದು. ಕಡಿಮೆ ಶಿಕ್ಷಕರಿರುವ ಶಾಲೆಗಳಿಗೆ ಆದ್ಯತೆಯ ಮೇಲೆ ಶಿಕ್ಷಕರನ್ನು ನಿಯೋಜಿಸುವುದು, ಶಿಕ್ಷಕರಿಗೆ ಶೈಕ್ಷಣಿಕ ಬೆಂಬಲವನ್ನೊದಗಿಸಲು ಇರುವ ಸಾಂಸ್ಥಿಕ ವ್ಯವಸ್ಥೆಗಳನ್ನು ಗಟ್ಟಿಗೊಳಿಸುವುದು, ಶೈಕ್ಷಣಿಕವಲ್ಲದ ಹೊರೆಯನ್ನು ಕಡಿಮೆ ಮಾಡುವುದು, ಶಿಕ್ಷಕರು ಮಾಡುವ ಒಳ್ಳೆಯ ಕೆಲಸಗಳಿಗೆ ಪ್ರೋತ್ಸಾಹಿಸಿ, ಅವರ ವೃತ್ತಿ ಬೆಳವಣಿಗೆಗೆ ವಿಪುಲ ಅವಕಾಶಗಳನ್ನೊದಗಿಸುವುದು – ಇವು ಶೈಕ್ಷಣಿಕ ಸುಧಾರಣೆಗೆ ಆದ್ಯತೆಯ ಮೇಲೆ ಗಮನ ನೀಡಬೇಕಾದ ಅಂಶಗಳು.

■

ಪ್ರಜಾವಾಣಿ, 23–10–2017

ಅತ್ಯಂತ ಪ್ರಜ್ಞಾವಂತ ವ್ಯಕ್ತಿಯೆಂದರೆ ನನ್ನ ದರ್ಜಿ.
ಏಕೆಂದರೆ, ಪ್ರತಿ ಬಾರಿ ಹೋದಾಗಲೂ ಹೊಸದಾಗಿ
ನನ್ನ ಅಳತೆಯನ್ನು ತೆಗೆದುಕೊಳ್ಳುವುದು ಅವನೊಬ್ಬನೇ.

– ಜಾರ್ಜ್ ಬರ್ನಾರ್ಡ್ ಶಾ

# ಶಿಕ್ಷಕರ ಸಂಘಗಳು ಹಾಗೂ ಅಗತ್ಯ ಪರಿವರ್ತನೆ

ಕಳೆದ ವರ್ಷ ಮಂಡ್ಯ ಜಿಲ್ಲೆಯ ಎಂಟು ಶೈಕ್ಷಣಿಕ ಬ್ಲಾಕ್‌ಗಳಲ್ಲಿನ ಒಂದರಲ್ಲಿ ಶಿಕ್ಷಕರ ಕಲಿಕಾ ಕೇಂದ್ರವನ್ನು ಆರಂಭಿಸುವ ಉದ್ದೇಶದಿಂದ ಹಮ್ಮಿಕೊಂಡಿದ್ದ ಸಮಾರಂಭದ ಭಾಗವಾಗಲು ನನ್ನನ್ನು ಆಹ್ವಾನಿಸಿಲಾಗಿತ್ತು. ನಾನು, ಡಯಟ್ ಪ್ರಾಂಶುಪಾಲರು, ಕ್ಷೇತ್ರ ಶಿಕ್ಷಣಾಧಿಕಾರಿ(ಬಿಇಓ), ಸರ್ಕಾರಿ ನೌಕರರ ಸಂಘದ ಜಿಲ್ಲಾಧ್ಯಕ್ಷರೂ ಆಗಿರುವ ರಾಜ್ಯ ಶಿಕ್ಷಕರ ಸಂಘದ ಉಪಾಧ್ಯಕ್ಷರು, ತಾಲ್ಲೂಕು ಶಿಕ್ಷಕ ಸಂಘದ ಅಧ್ಯಕ್ಷರು ಹಾಗೂ ನನ್ನ ಸಹೋದ್ಯೋಗಿ, ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಜಿಲ್ಲಾ ಸಂಸ್ಥೆಯ ಮುಖ್ಯಸ್ಥರಾದ ಉಮೇಶ್ ಪಾದೆ ಅವರೊಂದಿಗೆ ಕುಳಿತಿದ್ದೆ. ಮುಂಬರುವ ದಿನಗಳಲ್ಲಿ ಶಿಕ್ಷಕರು ತಮ್ಮ ನಿರಂತರ ವೃತ್ತಿಪರ ಅಭಿವೃದ್ಧಿಗೆ ಆ ಕಲಿಕಾ ಕೇಂದ್ರವನ್ನು ಹೇಗೆ ಬಳಸಿಕೊಳ್ಳಬಹುದು ಎನ್ನುವುದನ್ನು ತಿಳಿಸಿಕೊಡುವುದಕ್ಕೂ ಈ ಸಂದರ್ಭವನ್ನು ಉಪಯೋಗಿಸಿಕೊಳ್ಳುತ್ತಿದ್ದ ಕಾರಣ, ಕಾರ್ಯಕ್ರಮವನ್ನು ಆಯೋಜಿಸಲಾದ ಕ್ಷೇತ್ರ ಸಂಪನ್ಮೂಲ ಕೇಂದ್ರದ ಆವರಣದಲ್ಲಿ ನೂರಕ್ಕೂ ಹೆಚ್ಚು ಶಿಕ್ಷಕರು ಸೇರಿದ್ದರು.

ಶಿಕ್ಷಕರಲ್ಲೊಬ್ಬರು ಮುಂದೆ ಬಂದು ಆಹ್ವಾನಿತರನ್ನು ಸ್ವಾಗತಿಸಲು ಹಾಗೂ ಸಭೆಯ ಉದ್ದೇಶವನ್ನು ವಿವರಿಸಲು ತೊಡಗಿದ ಕೂಡಲೇ ರಾಜ್ಯ ಶಿಕ್ಷಕರ ಸಂಘದ ಪ್ರಬಲ ಉಪಾಧ್ಯಕ್ಷರು ನನ್ನ ಎಡಕ್ಕೆ ಕುಳಿತಿದ್ದ ಬಿಇಓ ಅವರನ್ನು

ಶಿಷ್ಟಾಚಾರ ಪಾಲಿಸಲಿಲ್ಲವೆಂದು ತರಾಟೆಗೆ ತೆಗೆದುಕೊಂಡರು ಹಾಗೂ ಸಮಾರಂಭವನ್ನು ಬಿಟ್ಟು ಹೊರನಡೆಯುವುದಾಗಿ ಸ್ಪಷ್ಟ ಮತ್ತು ದೃಢವಾದ ದನಿಯಲ್ಲಿ ಬೆದರಿಸಿದರು. ಇದರಿಂದ ಆಗಬಹುದಾದ ತೀವ್ರ ಮುಜುಗರವನ್ನು ತಪ್ಪಿಸಲು, ಬಿಇಓ ಅವರು ನಿಜಕ್ಕೂ ಆ ಮುಖಂಡರಲ್ಲಿ ಕ್ಷಮೆಕೋರಿ ಮುಂದೆ ಇಂತಹ ತಪ್ಪುಗಳು ಆಗುವುದಿಲ್ಲವೆಂಬ ಪ್ರಾಮಾಣಿಕ ಭರವಸೆಯನ್ನು ನೀಡಿ ಸಮಾಧಾನಪಡಿಸಬೇಕಾಯಿತು. ವೇದಿಕೆಯಲ್ಲಿ ನಡೆಯುತ್ತಿದ್ದುದನ್ನು ಅರಿಯದ ಶಿಕ್ಷಕಿಯು ವಿನೀತಳಾಗಿ ತನ್ನ ಮಾತನ್ನು ಮುಂದುವರೆಸಿದ್ದಂತೆಯೇ, ಅವರಿಬ್ಬರ ಮಧ್ಯೆ ಏನು ನಡೆಯುತ್ತಿದೆ ಎನ್ನುವುದನ್ನು (ಅಸಹಾಯಕರಾಗಿದ್ದ ಡಯಟ್ ಪ್ರಾಂಶುಪಾಲರ ಜೊತೆಗೆ ಅವರಿಬ್ಬರ ಮಧ್ಯೆಯೇ ನನ್ನನ್ನು ಕೂರಿಸಿದ್ದು ವಿಪರ್ಯಾಸ. –ಲೇ.) ನಾನು ಆ ಕೂಡಲೇ ಗ್ರಹಿಸಿದೆ. ಎಲ್ಲರ ಅರಿವಿಗೂ ಬರುವ ಹಾಗೆ ಸಂಘದ ಅಧ್ಯಕ್ಷರು ಸಿಟ್ಟಿಗೊಳಗಾಗಿದ್ದು ಎರಡು ಕಾರಣಗಳಿಂದಾಗಿ; ಮೊದಲನೆಯದು, ಬಿಇಓ ಅವರು ಸ್ವತಃ ಸ್ವಾಗತ ಭಾಷಣ ಮಾಡಲಿಲ್ಲ ಎನ್ನುವುದು, ಎರಡನೆಯದು, ಶಿಕ್ಷಕಿಯು ಭಾಷಣದ ಆರಂಭದಲ್ಲಿಯೇ ಬಹುಶಃ ಡಯಟ್ ಪ್ರಾಂಶುಪಾಲರನ್ನು ಸ್ವಾಗತಿಸಿದ ಕೂಡಲೇ ತಮ್ಮನ್ನು ಸ್ವಾಗತಿಸಲಿಲ್ಲ ಎನ್ನುವುದು.

ಆನಂತರದಲ್ಲಿ ಇಡೀ ಕಾರ್ಯಕ್ರಮವು ಸುಗಮವಾಗಿ ನಡೆಯಿತು. ಆದರೆ, ಮೇಲಿನ ಘಟನೆಯು ನನಗೆ ಈ ಮೊದಲು ಕೈಗಾರಿಕೋದ್ಯಮದಲ್ಲಿ ನಾನು ಕೆಲಸ ಮಾಡುತ್ತಿದ್ದಾಗ ನನಗಾದ ಅನುಭವಗಳನ್ನು ನೆನಪಿಗೆ ತಂದಿತು. ಅಲ್ಲಿ, ಕಾರ್ಮಿಕ ಸಂಘಟನೆಗಳ ನಾಯಕರು ತಮ್ಮ ಅನುಯಾಯಿಗಳ ಮುಂದೆ ಪ್ರತಿಷ್ಠೆಯನ್ನು ಮೆರೆಯಲು ಇದೇ ರೀತಿ ಉತ್ಪಾದನಾ ವಿಭಾಗದ ಮುಖ್ಯಸ್ಥರು ಹಾಗೂ ಅಲ್ಲಿನ ವ್ಯವಸ್ಥಾಪಕರ ಮೇಲೆ ತಮ್ಮ ಪ್ರಭಾವವನ್ನು ತೋರಿಸುತ್ತಿದ್ದರು.

ರಾಜ್ಯದ ಒಟ್ಟು ಐದು ಲಕ್ಷ ನಲವತ್ತು ಸಾವಿರ ಸರ್ಕಾರಿ ಉದ್ಯೋಗಿಗಳಲ್ಲಿ ಎರಡು ಲಕ್ಷ ಇಪ್ಪತ್ತು ಸಾವಿರದಷ್ಟು ದೊಡ್ಡ ಪ್ರಮಾಣದಲ್ಲಿ ಶಿಕ್ಷಕರೇ ಇದ್ದಾರೆ (ಸರಿಸುಮಾರು ಶೇ. 40ಕ್ಕೂ ಹೆಚ್ಚು) ಎನ್ನುವ ಸಂಗತಿಯು ಕರ್ನಾಟಕದಲ್ಲಿ ಶಿಕ್ಷಕರ ಸಂಘಗಳು ಸರ್ಕಾರಿ ಉದ್ಯೋಗಿಗಳ ಮೇಲೆ ಹೊಂದಿರುವ ಹಿಡಿತವನ್ನು ತೋರಿಸುತ್ತದೆ. ಅವು ಬಹುದೊಡ್ಡ ಸಂಖ್ಯೆಯ ಮತದಾರ ವರ್ಗವನ್ನು ಹೊಂದಿರುವುದರಿಂದ ಹಾಗೂ ಅಭಿಪ್ರಾಯ ರೂಪಿಸಬಲ್ಲ ಪ್ರಭಾವಿ ಗುಂಪಾಗಿ ಇರುವುದರಿಂದ ಎಲ್ಲಾ ರಾಜಕೀಯ ಪಕ್ಷಗಳೂ ಅವುಗಳ ಬಗ್ಗೆ ಜಾಗರೂಕವಾಗಿ ಇರುತ್ತವೆ. ಕಳೆದ ಕೆಲವು ವರ್ಷಗಳಲ್ಲಿ ಶಿಕ್ಷಕರ ಸಂಘಗಳು ಆಡಳಿತ ವ್ಯವಸ್ಥೆ–ಯೊಳಗಿನ ದೌರ್ಬಲ್ಯದ ಲಾಭವನ್ನು ಪಡೆದು, ನೇರವಾಗಿ ಅಂತಹ ಹಲವಾರು ರಾಜಕೀಯ ಪಕ್ಷಗಳ ಆಶ್ರಯದಲ್ಲಿ ಬಹುಶಃ ಮತ್ತಷ್ಟು ಪ್ರಬಲವಾಗಿ ಬೆಳೆದಿವೆ.

ತಾಲ್ಲೂಕು ಮಟ್ಟದಲ್ಲಿಯೂ ಕೂಡ ಪ್ರಾಥಮಿಕ, ಪ್ರೌಢ ಹಾಗೂ ಪದವಿ-ಪೂರ್ವ ಮಟ್ಟದ ಶಿಕ್ಷಕರ ಅಗತ್ಯಗಳನ್ನು ಪ್ರತ್ಯೇಕವಾಗಿ ಪೂರೈಸುವ ಹಲವಾರು ಶಿಕ್ಷಕರ ಒಕ್ಕೂಟಗಳಿವೆ. ಮುಖ್ಯ ಶಿಕ್ಷಕರ ಸಂಘವು ಈ ಶಿಕ್ಷಕರ ಸಂಘಗಳಿಂದ ವಿಭಿನ್ನವಾದ ತನ್ನ ಗುರುತನ್ನು ಹಾಗೆಯೇ ಉಳಿಸಿಕೊಂಡಿದೆ. ತಾಲ್ಲೂಕೊಂದರಲ್ಲಿ ಶಿಕ್ಷಕರ ಸಂಘದ ಒಟ್ಟು ಸದಸ್ಯತ್ವ ಸರಿಸುಮಾರು ಏಳರಿಂದ ಎಂಟು ನೂರು ಇದ್ದರೆ, ಐದು ತಾಲ್ಲೂಕುಗಳಿರುವ ಜಿಲ್ಲೆಯೊಂದರಲ್ಲಿ ಈ ಸಂಖ್ಯೆಯು ನಾಲ್ಕು ಸಾವಿರದವರೆಗೂ ಹೋಗುತ್ತದೆ.

ಈ ಸಂಘಗಳಲ್ಲಿರುವ ಸರಿಸುಮಾರು ಶೇ. 15–20 ಸದಸ್ಯರು 'ರಾಜಕೀಯವಾಗಿ ಸಕ್ರಿಯರು'. ಅವರು ತಮ್ಮ ಮುಖಂಡರುಗಳ ನಿಕಟ ಅನುಯಾಯಿಗಳಾಗಿ ಇರುವುದೊಂದೇ ಅಲ್ಲ, ಅವರ ಮುಖಂಡರು ತೆಗೆದು ಕೊಳ್ಳುವ ನಿರ್ಧಾರ, ಕ್ರಮಗಳ ಮೇಲೂ ಅಗಾಧ ಮಟ್ಟದ ಪ್ರಭಾವವನ್ನು ಬೀರುವಂತಹವರು. ಜವಾಬ್ದಾರಿಗಳನ್ನು ಒಳಗೊಂಡ ಅನುಸೂಚಿತ ಪಟ್ಟಿಯು ಹಗುರವಾಗಿರಬೇಕೆಂದು ಹಾಗೂ ನೀತಿ-ನಿಯಮಗಳನ್ನು ರೂಪಿಸುವುದರಲ್ಲಿ ಹೆಚ್ಚಿನ ಅವಕಾಶ, ಮಾನ್ಯತೆ ಇರಬೇಕೆಂದು ಹೋರಾಡುವುದರ ಜೊತೆಗೆ ವರ್ಗಾವಣೆ, ಸ್ಥಳ ನಿಯುಕ್ತಿ, ನಿಯೋಜನೆ, ಅತಿಥಿ ಶಿಕ್ಷಕರ ನೇಮಕಾತಿ ಇತ್ಯಾದಿ ಸರ್ಕಾರದ ಕಡೆಯಿಂದ ಆಗಬೇಕಾದ ಯಾವುದೇ ಕೆಲಸವಿರಲಿ ಅದನ್ನು ಈ ಮುಖಂಡರ ಮೂಲಕ ಮಾಡಿಸಿಕೊಳ್ಳುವುದಕ್ಕೆ ಅವರು ಆಯಕಟ್ಟಿನ ಜಾಗಗಳಲ್ಲಿ ಇರುತ್ತಾರೆ. ಸದ್ಯದ ತಾಲ್ಲೂಕು ಮಟ್ಟದ ಹದಿನೈದು-ಇಪ್ಪತ್ತು ಪದಾಧಿಕಾರಿಗಳಲ್ಲದೆ ಕೆಲವು ಮಾಜಿ ಪದಾಧಿಕಾರಿಗಳೂ ಸೇರಿ ವ್ಯವಸ್ಥೆಯಲ್ಲಿ ತಮಗಿರುವ ಪ್ರಬಲ ಹಾಗೂ ಅನುಕೂಲಕರ ಸ್ಥಾನಮಾನಗಳ ಲಾಭವನ್ನು ಪಡೆದುಕೊಳ್ಳುತ್ತಾರೆ ಹಾಗೂ ತಮ್ಮತಮ್ಮ ಶಾಲೆಗಳಲ್ಲಿ ನಿಯಮಿತವಾಗಿ ಕಲಿಸುವ ಕೆಲಸದಿಂದ ತಪ್ಪಿಸಿಕೊಳ್ಳುತ್ತಾರೆ. ಇದರಿಂದ ಸರ್ಕಾರವು ಅವರನ್ನು ಯಾವ ಉದ್ದೇಶಕ್ಕಾಗಿ ಉದ್ಯೋಗದಲ್ಲಿ ನೇಮಿಸಿಕೊಂಡಿದೆಯೋ ಆ ಉದ್ದೇಶವನ್ನೇ ನಿರರ್ಥಕಗೊಳಿಸಿದಂತಾಗುತ್ತದೆ. ತಮ್ಮನ್ನು ನಿಯುಕ್ತಿಗೊಳಿಸಲಾದ ಶಾಲೆಗಳಿಂದಲೂ ಆಗಾಗ ಕಣ್ಮರೆಯಾಗುವ ಅವರು ಬಿಇಓ, ಬಿಆರ್‌ಸಿ ಮತ್ತಿತರ ಶಿಕ್ಷಣ ಅಧಿಕಾರಿಗಳ ಕಚೇರಿಗಳ ಸುತ್ತಮುತ್ತ ಕೆಲಸವಿಲ್ಲದೆ ಸುತ್ತಾಡಿಕೊಂಡಿರುತ್ತಾರೆ ಅಥವಾ ಜಾಗರೂಕ ಕಾವಲುಗಾರರಂತೆ ತೋರ್ಪಡಿಸಿಕೊಳ್ಳುತ್ತ ಪದಾಧಿಕಾರಿಗಳೊಂದಿಗೆ ಸದಾ ಅಲೆದಾಡುತ್ತಿರುತ್ತಾರೆ. ಹೀಗೆ ಮಕ್ಕಳಿಗೆ ಪಾಠ ಮಾಡಬೇಕಾದ ತಮ್ಮ ಹೊಣೆಯನ್ನು ಬೇರೆ ಶಿಕ್ಷಕರ ಮೇಲೆ ಹಾಕಿ, ತಮ್ಮದೇ ಶಾಲೆಯನ್ನು ಒಬ್ಬರೇ ಶಿಕ್ಷಕರಿರುವ ಅಥವಾ ಇಬ್ಬರು ಶಿಕ್ಷಕರಿರುವ ಶಾಲೆಯನ್ನಾಗಿ ಮಾಡಿಬಿಡುತ್ತಾರೆ.

ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಅಧಿಕಾರಿಗಳು ಶೈಕ್ಷಣಿಕ ಆಡಳಿತಕ್ಕೆ ಸಂಬಂಧಿಸಿದಂತೆ ಎಲ್ಲಾ ಮಹತ್ವದ ಸಂಗತಿಗಳಿಗೂ ತಮ್ಮನ್ನು ಕಂಡು ವಿಶ್ವಾಸಕ್ಕೆ ತೆಗೆದುಕೊಂಡು ಸಲಹೆ ಪಡೆಯಬೇಕೆಂದು ಈ ಮುಖಂಡರು ನಿರೀಕ್ಷಿಸುತ್ತಾರೆ. ಆ ಅಧಿಕಾರಿಗಳೋ ಇವರ ಉಸಾಬರಿಯೇ ಬೇಡವೆಂದು ಹಾಗೂ ತಮ್ಮ ದೈನಂದಿನ ಕೆಲಸಕಾರ್ಯಗಳು ಹದಗೆಡುವುದು ಬೇಡವೆಂದು ಅವರನ್ನು ತುಂಬಾ ಎಚ್ಚರಿಕೆಯಿಂದಲೇ ನೋಡಿಕೊಳ್ಳುತ್ತಾರೆ.

ರಾಜ್ಯಮಟ್ಟದಲ್ಲಿ ಶಿಕ್ಷಕ ಸಂಘದ ಮುಖಂಡರು ಶಿಕ್ಷಣ ಮಂತ್ರಿ ಮತ್ತು ಹಿರಿಯ ಸರ್ಕಾರಿ ಅಧಿಕಾರಿಗಳ ನಿಕಟ ಸಂಪರ್ಕದಲ್ಲಿದ್ದು ಆಗಿಂದಾಗ್ಗೆ ಶಿಕ್ಷಕ ಸಮುದಾಯದ ಪರವಾಗಿ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುತ್ತಲೇ ಇರುತ್ತಾರೆ. ತಮ್ಮ ರಾಜಕೀಯ ಒಡನಾಟ ಹಾಗೂ ಪ್ರಭಾವದಿಂದಾಗಿ ಅಧಿಕಾರದ ಕೇಂದ್ರ ಸ್ಥಳಗಳಲ್ಲಿ ಪ್ರತಿಷ್ಠೆ, ಗೌರವಗಳು ಸಿಗಬೇಕು ಎಂದು ಒತ್ತಾಯಿಸುತ್ತಾರೆ ಹಾಗೂ ಪಡೆದುಕೊಳ್ಳುತ್ತಾರೆ. ಆ ಮೂಲಕ ತಮ್ಮ ಮಾತು ನಡೆಯುವುದನ್ನು ಖಚಿತಪಡಿಸಿಕೊಳ್ಳುತ್ತಾರೆ.

ಹಾಗಿದ್ದರೂ ಅವರು ಕೈಗೆತ್ತಿಕೊಳ್ಳುವ ಸಮಸ್ಯೆಗಳು ಯಾವ ರೀತಿಯವು ಎನ್ನುವುದರತ್ತ ಸುಮ್ಮನೆ ಕಣ್ಣು ಹಾಯಿಸಿದರೆ ಸಾಕು, ಶಿಕ್ಷಣವನ್ನು ಕುರಿತು ಪ್ರಾಮಾಣಿಕ ಕಳಕಳಿ ಇರುವ ಯಾರಿಗೇ ಆದರೂ ನಿರಾಶೆಯಾಗುವುದು ನಿಜ. ಅವರು ಹೆಚ್ಚಾಗಿ ಶಿಕ್ಷಕರ ಸೌಲಭ್ಯಗಳು ಹಾಗೂ ಸೇವೆಯ ಸ್ಥಿತಿಗತಿಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುತ್ತಾರೆ. ಸರಿಯಾಗಿ ವಿಚಾರ ಮಾಡುವ ಯಾವುದೇ ವ್ಯಕ್ತಿಗೂ ಶಿಕ್ಷಕರ ವೃತ್ತಿಪರ ಅಸ್ಮಿತೆಯು ರಕ್ಷಿಸಲ್ಪಡಬೇಕು ಎನ್ನುವ ಅವರ ಉದ್ದೇಶದ ಕುರಿತು ಯಾವುದೇ ಗಂಭೀರ ಆಕ್ಷೇಪವಿರಲಾರದು. ಆದರೆ ಅವರು ತಮ್ಮ 'ಇಲ್ಲಿ ಮತ್ತು ಈಗ' ಎಂಬ ಸೀಮಿತ, ಸ್ವಕೇಂದ್ರಿತ ದೃಷ್ಟಿಕೋನದ ಆಚೆ ನೋಡುವುದಿಲ್ಲ ಎಂಬುದರ ಕುರಿತು ಆಕ್ಷೇಪವಿದೆ.

ಶಿಕ್ಷಣದ ಗುಣಮಟ್ಟದ ಮೇಲೆ ಪರಿಣಾಮ ಬೀರುವಂತಹ ಯಾವುದೇ ಗಂಭೀರ ಚರ್ಚೆಗಳಲ್ಲಿ ಶಿಕ್ಷಕ ಸಂಘಗಳು ಭಾಗವಹಿಸುವುದೇ ಅಪರೂಪ. ಉದಾಹರಣೆಗೆ, ಇತ್ತೀಚಿಗೆ ಕೆಲ ಸಮಯದ ಹಿಂದಷ್ಟೆ ಸಂಘಗಳು ಒಂದರಿಂದ ಮೂರನೆಯ ತರಗತಿಯಲ್ಲಿರುವ ನಲಿ-ಕಲಿ ವಿಧಾನವನ್ನು ಪುನರಾವಲೋಕಿಸುವುದರ ಪರವಾಗಿ ತೀವ್ರವಾಗಿ ವಾದಿಸಿದವು. ಅದಕ್ಕೆ ಕಾರಣ, ಈ ವಿಧಾನವು ಕಿರಿಯ ಪ್ರಾಥಮಿಕ ಶಾಲೆಗಳ ಶಿಕ್ಷಕರ ಮೇಲೆ ಹೆಚ್ಚುವರಿ ಭಾರವನ್ನು ಹೊರಿಸುತ್ತದೆ ಎನ್ನುವುದು. ತರಗತಿಕೋಣೆಗಳಲ್ಲಿ ಶಿಕ್ಷಕರು ಎದುರಿಸುತ್ತಿರುವ ನಿಜವಾದ ಸವಾಲುಗಳೇನು, ಶಿಕ್ಷಕರು ಪರಿಣಾಮಕಾರಿಯಾಗಿ ಬೋಧನೆಯಲ್ಲಿ ಈ ವಿಧಾನವನ್ನು ಬಳಸಲು

ಪ್ರಸ್ತುತ ಜಾರಿಯಲ್ಲಿರುವ ಪ್ರಕ್ರಿಯೆಗಳು ಸಹಾಯಕಾರಿಯಾಗಿವೆಯೇ, ಬೋಧನೆ ಮತ್ತು ಕಲಿಕೆಯ ಸಾಮಗ್ರಿಗಳು ಸಾಕಷ್ಟು ಪ್ರಮಾಣದಲ್ಲಿ ಸರಿಯಾದ ಸಮಯಕ್ಕೆ ಎಲ್ಲಾ ಶಾಲೆಗಳನ್ನೂ ತಲುಪುತ್ತಿವೆಯೇ, ಶಿಕ್ಷಕರಿಗೆ ಯಾವುದೇ ತರಹದ ಪುನರ್‌ಮನನ ತರಬೇತಿ (Refresher Training) ಹಾಗೂ ಶಾಲೆಗಳಲ್ಲಿ ಅವರಿಗೆ ಹೆಚ್ಚುವರಿ ಶೈಕ್ಷಣಿಕ ಬೆಂಬಲದ ಅಗತ್ಯವಿದೆಯೇ ಅಥವಾ ಈಗಾಗಲೇ ಇರುವ ಶೈಕ್ಷಣಿಕ ಬೆಂಬಲ ವ್ಯವಸ್ಥೆಯು ತನ್ನ ಉದ್ದೇಶಗಳಿಗನುಸಾರ ಸಾಕಷ್ಟು ಉತ್ತಮವಾಗಿ ಕೆಲಸ ಮಾಡುತ್ತಿದೆಯೇ ಇತ್ಯಾದಿಗಳನ್ನು ಅರ್ಥಮಾಡಿ ಕೊಳ್ಳುವುದರತ್ತ ಕೆಲವು ಹೆಜ್ಜೆಗಳನ್ನು ಮುಂದೆ ಇಟ್ಟಿದ್ದರೆ ಅದು ಹೆಚ್ಚು ರಚನಾತ್ಮಕ ವಿಧಾನವಾಗುತ್ತಿತ್ತು.

ದೀರ್ಘಕಾಲದಲ್ಲಿ ಶಿಕ್ಷಣದ ಗುಣಮಟ್ಟದ ಮೇಲೆ ಪರಿಣಾಮ ಬೀರುವ ಹಲವಾರು ಪ್ರಮುಖ ಅಂಶಗಳ ಬಗ್ಗೆ ಸಂಘಗಳು ದುರ್ದೈವವಶಾತ್ ಉದಾಸೀನ ಧೋರಣೆಯನ್ನು ತಳೆದಿವೆ. ಉದಾಹರಣೆಗೆ, ಹೊಸ ಶಿಕ್ಷಣ ನೀತಿಗೆ ಸಂಬಂಧಿಸಿದಂತೆ ತಮ್ಮ ವಿಚಾರ ಮತ್ತು ಚಿಂತನೆಗಳ ಮೂಲಕ ಕೊಡುಗೆ ನೀಡುವುದಾಗಿರಬಹುದು, ಪ್ರತಿಯೊಂದು ತರಗತಿಗೆ ಕನಿಷ್ಠ ಒಬ್ಬರು ಶಿಕ್ಷಕರನ್ನು ನಿಯೋಜಿಸುವ ಹಾಗೆ ಖಾಲಿ ಬಿದ್ದಿರುವ ಶಿಕ್ಷಕರ ಹುದ್ದೆಗಳನ್ನು ಭರ್ತಿ ಮಾಡುವಂತೆ ಸರ್ಕಾರವನ್ನು ಆಗ್ರಹಪಡಿಸುವುದಾಗಿರಬಹುದು, ಮಕ್ಕಳಿಗೆ ಅನುಕೂಲಕರವಾದ ಕಲಿಕೆಯ ವಾತಾವರಣವನ್ನು ಒದಗಿಸುವ ನಿಟ್ಟಿನಲ್ಲಿ ನೆರೆಹೊರೆಯ ಶಾಲೆಗಳನ್ನು ವಿಲೀನಗೊಳಿಸುವಂತೆ ಸರ್ಕಾರದ ಮೇಲೆ ಒತ್ತಡ ಹೇರುವುದಾಗಿರಬಹುದು, ಸೇವಾನಿರತ ಶಿಕ್ಷಕರ ತರಬೇತಿಯ ಗುಣಮಟ್ಟವನ್ನು ಸುಧಾರಿಸುವುದಕ್ಕಾಗಿ ಅಥವಾ ಶಾಲಾ ಶಿಕ್ಷಣಕ್ಕಾಗಿ ಆಯವ್ಯಯದಲ್ಲಿ ಹೆಚ್ಚಿನ ಹಣಕಾಸಿನ ಹಂಚಿಕೆಗಾಗಿ ಬೇಡಿಕೆ ಇಡುವುದಾಗಿರಬಹುದು – ಇಂತಹ ವಿಚಾರಗಳಲ್ಲಿ ಶಿಕ್ಷಕರ ಸಂಘಗಳು ಸರ್ಕಾರದ ನೀತಿನಿರೂಪಣೆಗಳಲ್ಲಿ ಸಕಾರಾತ್ಮಕ ಬದಲಾವಣೆಗಳನ್ನು ತರುವ ನಿಟ್ಟಿನಲ್ಲಿ ಸಕ್ರಿಯ ಪಾತ್ರವನ್ನು ವಹಿಸಬೇಕಾದ ಅಗತ್ಯವಿದೆ.

ಇಂದಿನ ಸನ್ನಿವೇಶದಲ್ಲಿ ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ದಾಖಲಾತಿಯು ಕಡಿಮೆಯಾಗುತ್ತಿರುವುದನ್ನು ತಡೆಯುವ ಹಾಗೂ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಪೋಷಕರ ಮತ್ತು ಸಮುದಾಯದ ವಿಶ್ವಾಸವನ್ನು ಮರುಸ್ಥಾಪನೆ ಮಾಡುವ ವಿಷಯದಲ್ಲಿ ಶಿಕ್ಷಕರ ಸಂಘಗಳ ನೈತಿಕ ಹೊಣೆಗಾರಿಕೆಯು ಹಿಂದೆಂದಿಗಿಂತಲೂ ಹೆಚ್ಚಿದೆ.

ನೊಬೆಲ್ ಪುರಸ್ಕೃತ ಅರ್ಥಶಾಸ್ತ್ರಜ್ಞ ಅಮರ್ತ್ಯ ಸೇನ್ ಅವರು, ದೇಶದ ಸಾಮಾಜಿಕ–ಆರ್ಥಿಕ ಸಂರಚನೆಗಳಲ್ಲಿ ಅಪೇಕ್ಷಿತ ಬದಲಾವಣೆಗಳನ್ನು ತರುವಲ್ಲಿ

ಇಂತಹ ಸಂಘಗಳ ಕ್ರಿಯಾಶೀಲ ಪಾತ್ರವನ್ನು ಬಹಳ ಕಾಲದಿಂದ ಸಮರ್ಥಿಸುತ್ತಲೇ ಬಂದಿದ್ದಾರೆ. ಪಶ್ಚಿಮ ಬಂಗಾಳದಲ್ಲಿ ಅವರು ನೊಬೆಲ್ ಪ್ರಶಸ್ತಿಯ ಹಣವನ್ನು ಉಪಯೋಗಿಸಿ, ಸ್ಥಾಪಿಸಿದ ಪ್ರತೀಚಿ ಟ್ರಸ್ಟ್ ಎಂಬ ಸಂಸ್ಥೆಯು ಅಂಚಿಗೆ ನೂಕಲ್ಪಟ್ಟ ಸಮುದಾಯಗಳಿಗೆ ಶಿಕ್ಷಣ ಮತ್ತು ಆರೋಗ್ಯ ಸೌಲಭ್ಯಗಳು ಸಿಗುವ ಅವಕಾಶಗಳನ್ನು ಹೆಚ್ಚಿಸುವ ಕಾರ್ಯದಲ್ಲಿ ನಿರತವಾಗಿದ್ದು ಈ ಧ್ಯೇಯೋದ್ದೇಶದಲ್ಲಿ ಶಿಕ್ಷಕರ ಸಂಘಗಳನ್ನು ತೊಡಗಿಸಿಕೊಂಡಿದೆ.

ಅಗಸ್ಟ್ 2008ರಲ್ಲಿ ಸಂಸತ್ತಿನ ಕೇಂದ್ರೀಯ ಭವನದಲ್ಲಿ ಹಿರೇನ್ ಮುಖರ್ಜಿ ಸ್ಮರಣಾರ್ಥವಾಗಿ ಆಯೋಜಿಸಿದ್ದ ಉದ್ಘಾಟನಾ ಉಪನ್ಯಾಸವನ್ನು ನೀಡುತ್ತ ಸೇನ್ ಅವರು, ಇಡೀ ಕಾರ್ಮಿಕ ಶಕ್ತಿಯಲ್ಲಿ ಸಂಘಟಿತ ಕ್ಷೇತ್ರದ ಕಾರ್ಮಿಕರ ಕೇವಲ ಚಿಕ್ಕದೊಂದು ಭಾಗವು ಸಂಘಗಳ ಸದಸ್ಯತ್ವ ಹೊಂದಿದ್ದರೂ ಕೂಡ ಆರೋಗ್ಯ, ಶಿಕ್ಷಣ, ಅಂಚೆ, ರೈಲ್ವೆ ಹಾಗೂ ಇನ್ನಿತರ ಹಲವಾರು ಸೇವಾ ಕ್ಷೇತ್ರಗಳುದ್ದಕ್ಕೂ ವ್ಯಾಪಿಸಿರುವ ಈ ಸಂಘಟನೆಗಳ ಚಟುವಟಿಕೆಗಳು ಬಹುತೇಕ ಎಲ್ಲರ ಬದುಕಿನ ಮೇಲೂ ಪರಿಣಾಮ ಬೀರುತ್ತವೆ ಎನ್ನುವ ಅಂಶವನ್ನು ಎತ್ತಿ ತೋರಿಸಿದರು.

ಸೇನ್ ಅವರ ಪ್ರಕಾರ, ಸಂಘಗಳು ಕಿರಿಕಿರಿ ಉಂಟುಮಾಡುತ್ತವೆ ಎನ್ನುವ ಕಾರಣಕ್ಕೆ ಅವುಗಳ ಬಗ್ಗೆ ಎಲ್ಲರಿಗೂ ಗೊತ್ತಾಗುವ ಹಾಗೆ ಅಸಡ್ಡೆಯನ್ನು ತೋರುವುದು ಸರಿಯಲ್ಲ ಅಥವಾ ಯಾವ ಬದಲಾವಣೆಯೂ ಅನಗತ್ಯ ಎನ್ನುವ ಹಾಗೆ ಅವುಗಳನ್ನು ತುಂಬಾ ಸಂಭಾವಿತ ರೀತಿಯಲ್ಲಿ ನಡೆಸಿಕೊಳ್ಳುವುದೂ ಸರಿಯಲ್ಲ. ಕೇವಲ ಸೀಮಿತ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ, ಪಕ್ಷಪಾತಿ ಧೋರಣೆಯನ್ನು ತಾಳಿರುವ ಕಾವಲು ಪಡೆಯಂತೆಯೂ ಅವುಗಳನ್ನು ನಡೆಸಿಕೊಳ್ಳಬಾರದು. ಬದಲಿಗೆ, ಅವು ಸಂಯೋಜಕ ಪಾತ್ರವನ್ನು ನಿರ್ವಹಿಸುವ ರೀತಿಯಲ್ಲಿ ರಚನಾತ್ಮಕ ಸಹಯೋಗವೊಂದು ನಿರ್ಮಾಣವಾಗಬೇಕೆಂದು ಸೇನ್ ವಾದಿಸಿದರು. ಸಂಘಗಳ ರಚನಾತ್ಮಕ ಸಾಮರ್ಥ್ಯವನ್ನು ಸರಿಯಾಗಿಯೇ ಗುರುತಿಸಿದ ಸೇನ್ ಅವರು, ಈ ತರಹದಲ್ಲಿ ಮಾರ್ಪಾಡುಗಳನ್ನು ತರುವುದು ಸಂಘಟಿತ ಕಾರ್ಮಿಕ ಪಡೆಯ ಸಾರ್ವಜನಿಕ ಜವಾಬ್ದಾರಿ ಎಂದು ಹೇಳಿದರು.

ಹೆಚ್ಚಿನ ಮಟ್ಟದ ಗೈರುಹಾಜರಿಯ ಪ್ರಮಾಣ, ಖಾಸಗಿ ಪಾಠದ ಮೇಲಿನ ಅವಲಂಬನೆ, ಬೋಧನೆಯ ವಸ್ತುವಿಷಯಗಳಿಗೆ ಮತ್ತು ಪಾಠ ಮಾಡುವ ಶೈಲಿಗೆ ಹೆಚ್ಚಿನ ಒತ್ತು ನೀಡಬೇಕಾದ ಅಗತ್ಯ ಹಾಗೂ ಪಾಲಕ-ಶಿಕ್ಷಕ ಸಭೆಗಳಲ್ಲಿ ನಡೆಯುವ ನಿಯಮಿತ ಚರ್ಚೆಗಳ ಹಿನ್ನೆಲೆಯಲ್ಲಿ ಬೋಧನೆಯ ಹೊಣೆಯನ್ನು ನಿರ್ಲಕ್ಷಿಸುವುದು ಬಡ ಮತ್ತು ಅವಕಾಶ ವಂಚಿತ ಮಕ್ಕಳ ಶಾಲಾ ಶಿಕ್ಷಣದ ಮೇಲೆ ಗಹನವಾದ ಪರಿಣಾಮವನ್ನು ಬೀರುತ್ತದೆ. ಶಿಕ್ಷಕರ ಸಂಘಟನೆಗಳನ್ನು ಯಶಸ್ವಿಯಾಗಿ ತೊಡಗಿಸಿಕೊಳ್ಳುವುದರ ಮೂಲಕ ಈ ಸಮಸ್ಯೆಗಳಿಗೆ ಕೆಲಮಟ್ಟಿಗೆ

ಪರಿಹಾರಗಳನ್ನು ಕಂಡುಹಿಡಿಯಲು ಪ್ರಯತ್ನಿಸಲಾಗಿದ್ದು ಇದರಲ್ಲಿ ಭಾಗಶಃ ಯಶಸ್ಸು ಲಭಿಸಿದೆ.

ಕಾಯಕ ಸಂಸ್ಕೃತಿಯಲ್ಲಿ ಸುಧಾರಣೆಗಳನ್ನು ತರುವಲ್ಲಿ ಹಾಗೂ ಶಿಕ್ಷಕರಲ್ಲಿ ಸಾಮಾಜಿಕ ಬದ್ಧತೆ ಮತ್ತು ವಿಶಾಲವಾದ ದೃಷ್ಟಿಕೋನವನ್ನು ಬೆಳೆಸುವುದರ ಜೊತೆಗೆ ಹೊಣೆಗಾರಿಕೆಯನ್ನು ರೂಢಿಸುವಲ್ಲಿ ಸಂಘಟನೆಗಳ ಪಾತ್ರ ಹಿರಿದು. ಸಾರ್ವಜನಿಕ ಕ್ಷೇತ್ರದುದ್ದಗಲಕ್ಕೂ ಕಾರ್ಯನಿರ್ವಹಣೆಯಲ್ಲಿ ಧನಾತ್ಮಕ ಬದಲಾವಣೆಗಳನ್ನು ತರುವುದಕ್ಕೆ ಒಕ್ಕೂಟಗಳ ಸಕ್ರಿಯ ಸಹಕಾರವನ್ನು ಪಡೆಯುವುದು ಅತ್ಯಂತ ದೊಡ್ಡ ಸವಾಲಾಗಿದೆ. ಹಾಗಿದ್ದರೂ ಪಶ್ಚಿಮ ಬಂಗಾಳದಲ್ಲಿ ಈವರೆಗಿನ ಖಾಸಗಿ ಶಾಲಾ ಶಿಕ್ಷಕರ ಸಂಘಟನೆಗಳಲ್ಲಿಯೇ ಅತ್ಯಂತ ದೊಡ್ಡದಾದ ಅಖಿಲ ಬಂಗಾಳ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ(ಸಿಪಿಐ-ಎಂ ನ ಅಂಗಸಂಸ್ಥೆ)ದೊಡನೆ ಕೆಲಸ ಮಾಡಿದ ಪ್ರತೀಚಿ ಟ್ರಸ್ಟ್‌ನ ಅನುಭವಗಳನ್ನು ನೋಡಿದರೆ ಇದು ನಿಜಕ್ಕೂ ಸಾಧ್ಯ ಎನ್ನಿಸುತ್ತದೆ.

ಬರ್ನಾರ್ಡ್ ಶಾ ಹೇಳಿದ್ದರು, 'ಅತ್ಯಂತ ಪ್ರಜ್ಞಾವಂತ ವ್ಯಕ್ತಿಯೆಂದರೆ ನನ್ನ ದರ್ಜಿ. ಏಕೆಂದರೆ, ಪ್ರತಿ ಬಾರಿ ಹೋದಾಗಲೂ ಹೊಸದಾಗಿ ನನ್ನ ಅಳತೆಯನ್ನು ತೆಗೆದುಕೊಳ್ಳುವುದು ಅವನೊಬ್ಬನೇ.' ಬಹುಶಃ ಶಿಕ್ಷಕರ ಸಂಘಗಳು ರಾಷ್ಟ್ರದ ಪುನರ್ನಿರ್ಮಾಣದಲ್ಲಿ ತಮ್ಮ ಪಾತ್ರ ಏನಾಗಿರಬೇಕು ಎಂಬುದರ ಕುರಿತು ಗಾಢವಾಗಿ ಚಿಂತಿಸಬೇಕಾದ ಕಾಲ ಇದು.

■

ಬಿ ಫಸ್ಟ್, 23-07-2016

ಖಾಸಗಿ ಶಾಲೆಗಳು ಪರ್ಯಾಯ ಅವಕಾಶವೊಂದನ್ನು ಒದಗಿಸುತ್ತವೆ ಎಂದರೂ ಕೂಡ ಜಗತ್ತಿನ ಬಹಳಷ್ಟು ದೇಶಗಳಲ್ಲಿ ಶೈಕ್ಷಣಿಕ ಪರಿವರ್ತನೆಯ ಕಾರ್ಯಕ್ಕೆ ಸಂಬಂಧಿಸಿದಂತೆ ಸರ್ಕಾರಿ ಶಾಲೆಗಳು ವಹಿಸಬೇಕಾದ ಮತ್ತು ವಹಿಸಿದ ಪಾತ್ರವನ್ನು ಯಾವುದೇ ರೀತಿಯಲ್ಲಿಯೂ ಅವು ವಹಿಸಲಾರವು.

**– ಜೀನ್ ಡ್ರೇಜ್ ಮತ್ತು ಅಮರ್ತ್ಯ ಸೇನ್**

# ಸಾರ್ವಜನಿಕ ಶಿಕ್ಷಣದ ನಿರ್ಲಕ್ಷ್ಯ ಸಲ್ಲದು

ಇತ್ತೀಚೆಗೆ ನೆಲಮಂಗಲದ ಬಳಿ ಇರುವ ಅಡಕಿಮಾರನಹಳ್ಳಿಯ ಮೊರಾರ್ಜಿ ದೇಸಾಯಿ ವಸತಿ ಶಾಲೆ ಮತ್ತು ಪದವಿಪೂರ್ವ ವಿಜ್ಞಾನ ಕಾಲೇಜಿಗೆ ಭೇಟಿ ನೀಡುವ ಸಂದರ್ಭ ಬಂದಿತ್ತು. ಹತ್ತು ಎಕರೆಯಷ್ಟು ವಿಶಾಲವಾದ ಆವರಣದಲ್ಲಿ ಆರನೆಯ ತರಗತಿಯಿಂದ ಪದವಿಪೂರ್ವ ಹಂತದವರೆಗೆ ಸುಮಾರು ಮುನ್ನೂರೈವತ್ತು ಹೆಣ್ಣು ಮತ್ತು ಗಂಡು ಮಕ್ಕಳು ಅಲ್ಲಿ ಓದುತ್ತಿದ್ದರು. ಕರ್ನಾಟಕದಾದ್ಯಂತ ಇರುವ ಇಂತಹ ಶಾಲೆಗಳ ಇಪ್ಪತ್ತು ಪ್ರಾಂಶುಪಾಲರುಗಳು ಹಾಗೂ ಶಿಕ್ಷಕರಿಗೆಂದು ಆಯೋಜಿಸಲಾಗಿದ್ದ ಎರಡು ದಿನಗಳ ಕಾರ್ಯಾಗಾರದಲ್ಲಿ ನಾವು ಸುಗಮಕಾರರಾಗಿ ಕಾರ್ಯ ನಿರ್ವಹಿಸಬೇಕಿದ್ದ ಕಾರಣ, ಅಂದಿನ ರಾತ್ರಿ ನನ್ನ ಸಹೋದ್ಯೋಗಿ ಉಮಾಶಂಕರ್ ಪೆರಿಯೋಡಿ ಮತ್ತು ನಾನು ಶಾಲಾ ಆವರಣದಲ್ಲಿಯೇ ಉಳಿದಿದ್ದೆವು. ಇದು, ಈ ಸಾರ್ವಜನಿಕ ವಸತಿ ಶಾಲೆಗಳ ಗುಣಮಟ್ಟ ಮತ್ತು ಸಮತ್ವವನ್ನು ಬಲಪಡಿಸುವ ನಿಟ್ಟಿನಲ್ಲಿ ಸಮಾಜ ಕಲ್ಯಾಣ ಇಲಾಖೆಯು ನಮ್ಮ ಸಂಸ್ಥೆಯ ಸಹಯೋಗದಲ್ಲಿ ಕೈಗೊಂಡ ಪ್ರಯತ್ನದ ಭಾಗವಾಗಿತ್ತು. ಮುಂದಿನ ಕೆಲವು ವರ್ಷಗಳವರೆಗೆ ಅನುಸರಿಬೇಕಾದ ಮಾರ್ಗನಕ್ಷೆಯೊಂದನ್ನು ರೂಪಿಸಲು ರಚಿಸಿದ ಕೇಂದ್ರ ತಂಡವೊಂದರ ಭಾಗವಾಗುವಂತೆ ಅವರನ್ನು ಆಹ್ವಾನಿಸಲಾಗಿತ್ತು.

ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ (ಕೆಆರ್‌ಇಐಎಸ್) ಈ ಕಾರ್ಯಾಗಾರವನ್ನು ಆಯೋಜಿಸಿತ್ತು. ಈ ಸಂಸ್ಥೆಯನ್ನು ಕರ್ನಾಟಕ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯಡಿಯಲ್ಲಿ ಸ್ಥಾಪಿಸಲಾಗಿದೆ. ಇದು, ಕೇಂದ್ರ ಸರ್ಕಾರವು ನಡೆಸುವ ಜವಾಹರ್ ನವೋದಯ ವಿದ್ಯಾಲಯಗಳ ಮಾದರಿಯಲ್ಲಿಯೇ ಕಾರ್ಯ ನಿರ್ವಹಿಸುತ್ತದೆ. ಕರ್ನಾಟಕದಲ್ಲಿ ಪರಿಶಿಷ್ಟ ಜಾತಿ/ಜನಾಂಗ, ಹಿಂದುಳಿದ ವರ್ಗ ಮತ್ತು ಬುಡಕಟ್ಟು ಸಮುದಾಯಗಳ ಅವಕಾಶವಂಚಿತ ವಿದ್ಯಾರ್ಥಿಗಳಿಗೆಂದು ಇಂತಹ ಸುಮಾರು ಆರುನೂರಾ ಮೂವತ್ತು ವಸತಿ ಶಾಲೆಗಳನ್ನು ಇದು ನಡೆಸುತ್ತಿದೆ. ಸುಮಾರು ಒಂದು ಲಕ್ಷ ಇಪ್ಪತ್ತು ಸಾವಿರ ಮಕ್ಕಳು ಅತ್ಯಂತ ಮಹತ್ವದ ಈ ಸಾಮಾಜಿಕ ಬದ್ಧತೆಯ ಕಾರ್ಯಯೋಜನೆಯ ಪ್ರಯೋಜನವನ್ನು ಪಡೆಯುತ್ತಿದ್ದಾರೆ. ಇದು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯು ನಡೆಸುತ್ತಿರುವ ವಸತಿ ಶಾಲೆಗಳಿಗೆ ಹೊರತಾಗಿದೆ. ವಿದ್ಯಾರ್ಥಿಗಳ ದಾಖಲಾತಿ ಪ್ರಕ್ರಿಯೆಯು ಆರನೆಯ ತರಗತಿಯ ಮಕ್ಕಳಿಗೆ ಪ್ರವೇಶ ಪರೀಕ್ಷೆಯನ್ನು ಒಳಗೊಂಡಿದೆ. ಆನಂತರದಲ್ಲಿ ಕೌನ್ಸೆಲಿಂಗ್ ಮೂಲಕ ಪದವಿಪೂರ್ವ ಮೊದಲನೆಯ ವರ್ಷದ ವಿದ್ಯಾರ್ಥಿಗಳಿಗೆ ಎಸ್‌ಎಸ್‌ಎಲ್‌ಸಿಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ದಾಖಲಾತಿ ನೀಡಲಾಗುತ್ತದೆ.

ನಮಗೆ ಅಲ್ಲಿನ ಆವರಣದಲ್ಲಿ ಮೆಚ್ಚತಕ್ಕ ಸಾಕಷ್ಟು ಸಂಗತಿಗಳು ಕಂಡುಬಂದವು. ಬೇರೆ ಬೇರೆ ಸ್ಥಳಗಳಲ್ಲಿ ನಿರ್ವಹಣೆಯ ಗುಣಮಟ್ಟ ಹಾಗೂ ನಿರ್ವಹಣೆಯ ವಿಧಾನಗಳಲ್ಲಿನ ವ್ಯತ್ಯಾಸದಿಂದಾಗಿ ಅವು ಬೇರೆಬೇರೆಯಾಗಿದ್ದರೂ ಕೂಡ ಈ ವಸತಿ ಸೌಕರ್ಯವಿರುವ ಸಂಸ್ಥೆಗಳನ್ನು ಹೇಗೆ ನಡೆಸಲಾಗುತ್ತದೆ ಎಂಬುದರ ಸ್ಥೂಲ ಕಲ್ಪನೆ ನಮಗೆ ಸಿಕ್ಕಿತು. ಆವರಣದಲ್ಲಿ ಬಹುತೇಕ ಎಲ್ಲಾ ಮೂಲಭೂತ ಸೌಲಭ್ಯಗಳೂ ಇದ್ದವು. ಸುತ್ತಲೂ ಗೋಡೆ, ರಕ್ಷಣಾ ಸಿಬ್ಬಂದಿಗಳಿರುವ ಸುರಕ್ಷಿತ ಆವರಣ, ವಾಹನಗಳು ಓಡಾಡಬಹುದಾದ ರಸ್ತೆಗಳು, ಗಂಡು ಮತ್ತು ಹೆಣ್ಣುಮಕ್ಕಳಿಗೆ ಪ್ರತ್ಯೇಕವಾದ ಸಾಮೂಹಿಕ ಮಲಗುವ ಕೋಣೆಗಳಿರುವ ವಸತಿನಿಲಯಗಳು, ಸಾಕಷ್ಟು ಸ್ವಚ್ಛವಾಗಿರುವ, ನೀರು ಮತ್ತು ಬೆಳಕಿಗೆ ಸೌರಶಕ್ತಿಯನ್ನು ಬಳಸುವ ಶೌಚಾಲಯಗಳು ಹಾಗೂ ಸ್ನಾನದ ಕೋಣೆಗಳು, ಅಗತ್ಯವಿರುವ ಎಲ್ಲಾ ಪಾತ್ರೆಪಡಗಗಳಿರುವ, ಸ್ಟೀಲ್ ಮೇಜು ಹಾಗೂ ಮಡಿಸಿಡಬಹುದಾದ ಆಸನಗಳನ್ನು ಹೊಂದಿರುವ, ಶುದ್ಧವಾದ ರೀತಿಯಲ್ಲಿ ಅಡುಗೆ ಮಾಡಿ ಬಡಿಸುವ ಅಡುಗೆಮನೆ ಮತ್ತು ಊಟದ ಮನೆಗಳು, ಬಹುತೇಕ ಎಲ್ಲಾ ಹೊರಾಂಗಣ ಆಟಗಳನ್ನೂ ಆಡಬಹುದಾದ ಆಟದ ಮೈದಾನ, ಗ್ರಂಥಾಲಯ, ಕಂಪ್ಯೂಟರ್ ಲ್ಯಾಬ್ ಮತ್ತು ತರಬೇತಿ ಕೋಣೆ, ಪ್ರಥಮ ಚಿಕಿತ್ಸಾ ಸೌಲಭ್ಯ, ಶಿಕ್ಷಕರು ಮತ್ತು ಇನ್ನಿತರ ಸಿಬ್ಬಂದಿಗಳ ಕುಟುಂಬಗಳಿಗೆ ಎಲ್ಲಾ ಸೌಕರ್ಯಗಳಿರುವ ವಸತಿಗಳು ಹೀಗೆ

ಎಲ್ಲವೂ ಅಲ್ಲಿದ್ದವು. ಸಿಬ್ಬಂದಿಗಳ ವಿಚಾರಕ್ಕೆ ಬಂದರೆ, ಇವುಗಳಲ್ಲಿ ಪ್ರತಿಯೊಂದು ಶಾಲೆಯೂ ವಿಜ್ಞಾನ, ಗಣಿತ, ಭಾಷೆಗಳು, ಕಂಪ್ಯೂಟರ್ ಸೈನ್ಸ್, ದೈಹಿಕ ಶಿಕ್ಷಣ, ಕಲೆ ಮತ್ತು ಸಂಗೀತ ವಿಷಯಗಳಲ್ಲಿ ಅರ್ಹತೆಯುಳ್ಳ ಶಿಕ್ಷಕರನ್ನು ಹೊಂದಿದೆ. ಅಡುಗೆಯವರು, ಶುಶ್ರೂಷಕಿ, ವಾರ್ಡನ್, ಕಚೇರಿ ಗುಮಾಸ್ತ ಮತ್ತು ಸ್ವಚ್ಛತಾ ಸಿಬ್ಬಂದಿಗಳು ಸೇರಿದಂತೆ ಸುಮಾರು ಇಪ್ಪತ್ತರಿಂದ ಇಪ್ಪತ್ತೈದು ಸಹಾಯಕ ಸಿಬ್ಬಂದಿಗಳಿದ್ದಾರೆ. ಈ ಶಾಲೆಗಳಲ್ಲಿ ಪದವಿಪೂರ್ವ ಮಟ್ಟದಲ್ಲಿ ಕೇವಲ ವಿಜ್ಞಾನ ವಿಭಾಗವೊಂದೇ ಇರುತ್ತದೆ. ಇನ್ನಿತರ ಸರ್ಕಾರಿ ಶಾಲೆಗಳ ಮಕ್ಕಳಂತೆ ಈ ಶಾಲೆಗಳಲ್ಲಿ ಓದುವ ಮಕ್ಕಳಿಗೂ ಪಠ್ಯಪುಸ್ತಕ, ಸಮವಸ್ತ್ರ ಹಾಗೂ ಇತರ ಅಗತ್ಯ ವಸ್ತುಗಳನ್ನು ನೀಡಲಾಗುತ್ತದೆ.

ಈ ವಸತಿ ಶಾಲೆಗಳು ಕಳೆದ ಕೆಲವು ವರ್ಷಗಳಿಂದ ಎಸ್‌ಎಸ್‌ಎಲ್‌ಸಿ ವಾರ್ಷಿಕ ಪರೀಕ್ಷೆಗಳಲ್ಲಿ ನಿರಂತರವಾಗಿ ಉತ್ತಮ ಸಾಧನೆಯನ್ನು ತೋರಿಸುತ್ತಾ ಬಂದಿದ್ದಾರೆ. ಶೇಕಡಾವಾರು ತೇರ್ಗಡೆಯು ಸುಮಾರು ಶೇ. 95 ಇದೆ. ಇದು ಸುಮಾರು ಶೇ. 80ರಷ್ಟಿರುವ ರಾಜ್ಯ ಸರಾಸರಿ ಮಟ್ಟಕ್ಕಿಂತ ಎಷ್ಟೋ ಮೇಲಿದೆ.

ಈ ಶಾಲೆಗಳು ಹಲವಾರು ಪ್ರಗತಿಪರ ಸಾಧನೆಗಳನ್ನು ಮಾಡಿ ತೋರಿಸಿವೆ. ಆದರೆ ಅಷ್ಟೇ ಸವಾಲುಗಳನ್ನೂ ಎದುರಿಸುತ್ತಿವೆ ಎನ್ನುವುದು ಸ್ಪಷ್ಟ. ಅವುಗಳಲ್ಲಿ ಕೆಲವು ಹೀಗಿವೆ:

- ಶಿಕ್ಷಣ ಇಲಾಖೆಯ ಸಂರಚನಾ ವ್ಯವಸ್ಥೆಯನ್ನು ನೋಡಿದರೆ, ಅದು ರಾಜ್ಯ ಮಟ್ಟದಲ್ಲಿ ಡಿಎಸ್‌ಇಆರ್‌ಟಿ, ಜಿಲ್ಲಾ ಮಟ್ಟದಲ್ಲಿ ಡಯಟ್‌ಗಳು ಹಾಗೂ ಶಾಲೆಗಳಿಗೆ ನಿಕಟವಾಗಿ ಕ್ಷೇತ್ರ ಸಂಪನ್ಮೂಲ ಕೇಂದ್ರ ಮತ್ತು ಸಮೂಹ ಸಂಪನ್ಮೂಲ ಕೇಂದ್ರಗಳನ್ನು ಹೊಂದಿದೆ. ಜೊತೆಗೆ ಈ ಎಲ್ಲಾ ಮಟ್ಟಗಳಲ್ಲಿಯೂ ಅದರ ಆಡಳಿತಾತ್ಮಕ ವ್ಯವಸ್ಥೆಗಳಿವೆ. ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವು ಪ್ರಶಂಸಾರ್ಹ ರೀತಿಯಲ್ಲಿ ಕಾರ್ಯನಿರ್ವಹಿಸುತ್ತ, ಆಡಳಿತ ವಿಷಯದಲ್ಲಿ ಮುಂದಾಳತ್ವ ವಹಿಸಿದೆ. ಆದರೆ ಸಮಾಜ ಕಲ್ಯಾಣ ಇಲಾಖೆಯು ಯಾವುದೇ ಸ್ಥಾಪಿತ ಶೈಕ್ಷಣಿಕ ಸಂರಚನಾ ವ್ಯವಸ್ಥೆಯನ್ನು ಹೊಂದಿಲ್ಲ.
- ಶಿಕ್ಷಕರ ಮತ್ತು ಪ್ರಾಂಶುಪಾಲರುಗಳ ವೃತ್ತಿಪರ ಅಭಿವೃದ್ಧಿಯನ್ನು ನಿರಂತರವಾಗಿ ಕೈಗೊಳ್ಳಲು ಅವಕಾಶಗಳು ಸಾಕಷ್ಟಿಲ್ಲ. ಅವರಲ್ಲಿ ಬಹುತೇಕ ಎಲ್ಲರೂ ಅರ್ಹತೆಯುಳ್ಳವರಾಗಿದ್ದಾರೆ ಮತ್ತು ಬದ್ಧತೆಯನ್ನು ಹೊಂದಿದ್ದಾರೆ.

- ಗ್ರಂಥಾಲಯ ಮತ್ತು ಪ್ರಯೋಗಾಲಯಗಳು ಅಷ್ಟೊಂದು ಸುಸಜ್ಜಿತ-ವಾಗಿಲ್ಲದ ಕಾರಣ ಅವುಗಳ ಬಳಕೆಯೂ ಪರಿಣಾಮಕಾರಿಯಾಗಿ ಆಗುತ್ತಿಲ್ಲ. ಈ ಕೆಲವು ವಿಭಾಗಗಳಲ್ಲಿ ಸಿಬ್ಬಂದಿಯ ಕೊರತೆಯೂ ಇದೆ.
- ಶಾಲಾ ಅವಧಿಗೂ ಮುನ್ನ ಹಾಗೂ ನಂತರದಲ್ಲಿನ ಅನೌಪಚಾರಿಕ ಸಮಯ ಮತ್ತು ಸ್ಥಳದ ಬಳಕೆಯ ಅವಕಾಶವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡಿಲ್ಲ. ಪ್ರಜಾತಾಂತ್ರಿಕ ಮೌಲ್ಯಗಳ ಮೂಲಕ ಮುಕ್ತ ಚಿಂತನೆ ಮತ್ತು ಮಾನವೀಯ ಅಂತಃಕರಣಗಳನ್ನು ಹೊಂದಿರುವ ರೀತಿಯಲ್ಲಿ ಮಕ್ಕಳ ಸಮಗ್ರ ಬೆಳವಣಿಗೆಯಾಗುವಂತೆ ಹಾಗೂ ಹದಿಹರೆಯದ ಮಕ್ಕಳು ತಮ್ಮ ಬೆಳೆಯುವ ವಯಸ್ಸಿಗೆ ಸಹಜವಾದ ಸವಾಲುಗಳನ್ನು ಎದುರಿಸಲು ನೆರವಾಗುವ ನಿಟ್ಟಿನಲ್ಲಿ ಈ ಸಮಯ ಮತ್ತು ಸ್ಥಳಗಳನ್ನು ಬಳಸಿಕೊಳ್ಳಬೇಕು.
- ಕ್ರೀಡೆ, ಆಟೋಟಗಳು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಂತಹ ಸಹಪಠ್ಯ ಚಟುವಟಿಕೆಗಳಲ್ಲಿ ಭಾಗವಹಿಸಲು ಮಕ್ಕಳಿಗೆ ಸಾಕಷ್ಟು ವೇದಿಕೆಗಳಿಲ್ಲ. ಶಿಕ್ಷಣ ಇಲಾಖೆಯು ನಡೆಸುವ ಕಾರ್ಯಕ್ರಮಗಳಲ್ಲಿ ಅವರು ಭಾಗವಹಿಸಿದರೂ ಕೂಡ ತಮ್ಮ ಮಕ್ಕಳಿಗೆ ಸಾಕಷ್ಟು ಅವಕಾಶಗಳು ಲಭ್ಯವಿಲ್ಲ ಎಂಬ ವಿಷಾದ ಸಿಬ್ಬಂದಿಗಳಿಗಿದೆ.
- ಪ್ರೌಢ ಹಾಗೂ ಪದವಿಪೂರ್ವ ಮಟ್ಟದ ವಿದ್ಯಾರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಹೆಚ್ಚು ಸಿದ್ಧತೆ ನಡೆಸಲು ಆಗುವುದಿಲ್ಲ.
- ಬಹುತೇಕ ಎಲ್ಲ ಶೈಕ್ಷಣಿಕ ವಿಶ್ಲೇಷಣೆ, ಮೌಲ್ಯಮಾಪನಗಳೂ ಎಸ್‌ಎಸ್‌ಎಲ್‌ಸಿಯ ಶೇಕಡಾವಾರು ತೇರ್ಗಡೆಯನ್ನು ಹೆಚ್ಚಿಸುವುದರ ಸುತ್ತ ಮಾತ್ರ ಸುತ್ತುತ್ತವೆ.

ಹಲವಾರು ಸವಾಲುಗಳು ಈ ವಸತಿಶಾಲೆಗಳಿಗಷ್ಟೇ ವಿಶಿಷ್ಟವಾದುವುಗಳಲ್ಲ. ಅವು ಎಲ್ಲಾ ತರಹದ ಆಡಳಿತ ವ್ಯವಸ್ಥೆಗಳನ್ನು ಹೊಂದಿರುವ ಶಾಲೆಗಳಿಗೂ ಸಾಮಾನ್ಯವಾಗಿವೆ. ಈ ಸಂಸ್ಥೆಗಳು ಕಾಲಕ್ರಮೇಣ ಅಂತಹ ಹಲವಾರು ಸಮಸ್ಯೆಗಳನ್ನು ಆದ್ಯತೆಯ ಮೇರೆಗೆ, ನಿರ್ದಿಷ್ಟ ಕಾಲಮಿತಿಯಲ್ಲಿ ಬಗೆಹರಿಸಿಕೊಳ್ಳುವುದು ನಿಜಕ್ಕೂ ದೊಡ್ಡ ಸಂಗತಿಯೇ. ಶಿಕ್ಷಕರ ಸಾಮರ್ಥ್ಯಾಭಿವೃದ್ಧಿ, ಸಹಪಠ್ಯ ಚಟುವಟಿಕೆಗಳು, ಶಾಲೆಗಳಿಗೆ ಶೈಕ್ಷಣಿಕ ಮಾರ್ಗದರ್ಶನ ಹಾಗೂ ಬೆಂಬಲವನ್ನು ನೀಡುವುದು ಇತ್ಯಾದಿ ಕೆಲವು ಸವಾಲುಗಳನ್ನು ಶಾಲೆಗಳು ಹಾಗೂ ಸಮಾಜ ಕಲ್ಯಾಣ ಇಲಾಖೆಗಳ ನಡುವಿನ ಉತ್ತಮ ಯೋಜನೆ ಹಾಗೂ ಸಹಯೋಗದ ಮೂಲಕ ಬಗೆಹರಿಸಿಕೊಳ್ಳಬಹುದು.

ಸಮಾಜದ ಅತ್ಯಂತ ಹಿಂದುಳಿದ ಮತ್ತು ಅವಕಾಶವಂಚಿತ ವರ್ಗಗಳಿಗೆ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸುವುದರಲ್ಲಿ ರಾಜ್ಯವು ಮಹತ್ವದ ಪಾತ್ರವನ್ನು ವಹಿಸುತ್ತಿದೆ ಎನ್ನುವುದನ್ನು ಹೆಚ್ಚು ಮುಖ್ಯವಾಗಿ ಗುರುತಿಸಬೇಕಾಗಿದೆ. ಸರ್ಕಾರವು ತನ್ನ ಅಗಾಧವಾದ ಸಂಕೀರ್ಣ ಸಾಂಸ್ಥಿಕ ವ್ಯವಸ್ಥೆಯ ಮೂಲಕ ಇಂತಹ ಮಹತ್ವದ ಸಾಮಾಜಿಕ ಬದ್ಧತೆಯನ್ನು ನಿರ್ವಹಿಸುವ ಪಾತ್ರ ವಹಿಸದಿದ್ದಲ್ಲಿ, ಲಕ್ಷಾಂತರ ಯುವಜನರು ಬಹುಶಃ ಅಭಿವೃದ್ಧಿಯ ಫಲದ ಭಾಗವನ್ನು ಎಂದೆಂದಿಗೂ ಸವಿಯಲಾಗದೇ ಹಿಂದೆಯೇ ಉಳಿದುಬಿಡುತ್ತಿದ್ದರು. ದೇಶವು ಸಾಮಾಜಿಕವಾಗಿಯೂ ಆರ್ಥಿಕವಾಗಿಯೂ ಇನ್ನಷ್ಟು ಹೆಚ್ಚು ದುರ್ಬಲವಾಗಿ ಇರುತ್ತಿತ್ತು.

ಜೀನ್ ಡ್ರೇಜ್ ಮತ್ತು ಅಮರ್ತ್ಯ ಸೇನ್‌ರವರು ತಮ್ಮ ಪುಸ್ತಕ, 'ಆ್ಯನ್ ಅನ್‌ಸರ್ಟನ್ ಗ್ಲೋರಿ – ಇಂಡಿಯಾ ಅಂಡ್ ಇಟ್ಸ್ ಕಾಂಟ್ರಡಿಕ್ಷನ್ಸ್'ನಲ್ಲಿ (2014, ಪೆಂಗ್ವಿನ್ ಬುಕ್ಸ್) ಶಿಕ್ಷಣದ ಮೂಲಕ ಸಾಮಾಜಿಕ ಅಸಮತೆಯನ್ನು ನಿವಾರಿಸುವಲ್ಲಿ ಸರ್ಕಾರದ ಪಾತ್ರವು ಅತ್ಯಂತ ಪ್ರಮುಖ ಎಂಬುದನ್ನು ಎತ್ತಿತೋರಿಸಿದ್ದಾರೆ. 'ಖಾಸಗಿ ಶಾಲೆಗಳು ಪರ್ಯಾಯ ಅವಕಾಶವೊಂದನ್ನು ಒದಗಿಸುತ್ತವೆ ಎಂದರೂ ಕೂಡ ಜಗತ್ತಿನ ಬಹಳಷ್ಟು ದೇಶಗಳಲ್ಲಿ ಶೈಕ್ಷಣಿಕ ಪರಿವರ್ತನೆಯ ಕಾರ್ಯಕ್ಕೆ ಸಂಬಂಧಿಸಿದಂತೆ ಸರ್ಕಾರಿ ಶಾಲೆಗಳು ವಹಿಸಬೇಕಾದ ಮತ್ತು ವಹಿಸಿದ ಪಾತ್ರವನ್ನು ಯಾವುದೇ ರೀತಿಯಲ್ಲಿಯೂ ಅವು ವಹಿಸಲಾರವು' ಎಂದು ಅವರು ಬಲವಾಗಿ ವಾದಿಸಿದ್ದು ಸರಿಯಾಗಿಯೇ ಇದೆ. ಇದು ವಿಶೇಷವಾಗಿ ಭಾರತದಲ್ಲಿನ ಅಸಾಧಾರಣ ಮಟ್ಟದ ವೈವಿಧ್ಯತೆಯ ಸಂದರ್ಭದಲ್ಲಿಯೂ ಸೂಕ್ತವಾಗಿದೆ.

ಈ ವಿಚಿತ್ರವಾದ ಸವಾಲನ್ನು ಕುರಿತು ಡ್ರೇಜ್ ಮತ್ತು ಸೇನ್ ಬರೆಯುತ್ತಾರೆ–

> 'ತಮ್ಮ ಆರಂಭಿಕ ಶಾಲಾದಿನಗಳಿಂದ ಹಿಡಿದು ನಿರ್ದಿಷ್ಟ ವಿಷಯದಲ್ಲಿ ವಿಶೇಷ ಪರಿಣತಿಯನ್ನು ಪಡೆದುಕೊಳ್ಳುವ ಉನ್ನತ ಹಂತದ ಶಿಕ್ಷಣದ ತನಕ ವಿದ್ಯಾರ್ಥಿಗಳು ಪಡೆಯುವ ಸೌಲಭ್ಯಗಳು ತುಂಬಾ ವಿಭಿನ್ನವಾಗಿರುತ್ತವೆ... ಸಮಾಜದಲ್ಲಿನ 'ಸವಲತ್ತುಗಳಿರುವ ಹಾಗೂ ಇಲ್ಲದಿರುವವರ' ನಡುವಿನ ಸಾಮಾನ್ಯ ವಿಭಜನೆಯನ್ನು ಅನುಸರಿಸಿ, ಭಾರತದಲ್ಲಿನ ಶೈಕ್ಷಣಿಕ ವ್ಯವಸ್ಥೆಯು ದೊಡ್ಡದಾದ ಆ ಗುಂಪಿನಲ್ಲಿ ಕೆಲವು ಯುವಜನರಿಗೆ ಉತ್ಕೃಷ್ಟ ಶಿಕ್ಷಣವು ಸಿಗುವಂತೆ ಮಾಡುತ್ತಿದೆ ಎಂದೆನಿಸುತ್ತದೆ. ಆಯ್ಕೆ ಮಾಡುವಾಗ ಯಾರೊಬ್ಬನನ್ನೂ ವ್ಯವಸ್ಥಿತವಾಗಿ ಹೊರಗಿಡುವ ರೀತಿಯಲ್ಲಿ ಪ್ರಯತ್ನವನ್ನು ಮಾಡಿರುವುದಿಲ್ಲ. ಆದರೂ ಜಾತಿ, ವರ್ಗ, ಲಿಂಗ, ಸ್ಥಳ ಹಾಗೂ ಸಾಮಾಜಿಕ ಅನುಕೂಲತೆಗಳಿಗೆ

ಸಂಬಂಧಿಸಿದಂತೆ ಆರ್ಥಿಕ ಹಾಗೂ ಸಾಮಾಜಿಕ ಅಸಮಾನತೆಗಳಿಂದ ಉಂಟಾದ ತಾರತಮ್ಯಗಳಿಂದಲೇ ಅವರು ಹೊರಗುಳಿಯುತ್ತಾರೆ. ದಕ್ಷತೆ ಮತ್ತು ಸಮತೆ ಈ ಎರಡೂ ಪರಿಗಣನೆಗಳನ್ನು ಒಳಗೊಂಡ ದೃಷ್ಟಿಕೋನದಿಂದ ನೋಡಿದರೆ, ದೇಶವು ಕೆಲವರ ಮೇಲೆ ಅಸಾಧಾರಣ ರೀತಿಯಲ್ಲಿ ಗಮನವನ್ನು ಕೇಂದ್ರೀಕರಿಸುವುದರ ಮೂಲಕ, ಬಹುಸಂಖ್ಯೆಯ ಭಾರತೀಯರನ್ನು ಕಡೆಗಣಿಸುತ್ತಿದೆ. ಆ ಮೂಲಕ ಬಹಳಷ್ಟನ್ನು ಕಳೆದುಕೊಳ್ಳುತ್ತಿದೆ ಎಂಬುದನ್ನು ನಾವು ತುಂಬಾ ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು...'

ಒಂದಾದ ನಂತರ ಒಂದರಂತೆ ಬಂದ ಸರ್ಕಾರಗಳು ಶಿಕ್ಷಣ ಕ್ಷೇತ್ರವನ್ನು ಯಾವ ಮಟ್ಟಕ್ಕೆ ನಿರ್ಲಕ್ಷಿಸಿವೆಯೆನ್ನುವುದನ್ನು ಅವು ಆಯವ್ಯಯ ಪತ್ರದಲ್ಲಿ ಶಿಕ್ಷಣಕ್ಕಾಗಿ ಕೊಡಮಾಡಿದ ನಿಕೃಷ್ಟ ಮೊತ್ತದ ಹಣಕಾಸನ್ನು ನೋಡಿ ತಿಳಿಯಬಹುದು. ಕೊಠಾರಿ ಆಯೋಗವು (1964–66) ಅದು ಕನಿಷ್ಠ ಶೇ. 6 ಆಗಿರಬೇಕೆಂದು ಶಿಫಾರಸ್ಸು ಮಾಡಿದ್ದರೂ ಶಿಕ್ಷಣಕ್ಕೆ ಸಂಬಂಧಿಸಿದಂತೆ 2017–18ರಲ್ಲಿ ಕೇಂದ್ರ ಸರ್ಕಾರವು ನೀಡಿದ ವಾರ್ಷಿಕ ಹಣಕಾಸಿನ ಮೊತ್ತವು ಒಟ್ಟು ರಾಷ್ಟ್ರೀಯ ಆದಾಯ(ಜಿಡಿಪಿ)ದ ಸುಮಾರು ಶೇ. 3.8 ಮಾತ್ರ ಆಗಿತ್ತು. ತೀವ್ರ ತರಹದ ಈ ನಿರ್ಲಕ್ಷವು ಅದಾಗಲೇ ಪೂರ್ವಪ್ರಾಥಮಿಕದಿಂದ ಪ್ರೌಢ ಹಂತದವರೆಗಿನ ಶಿಕ್ಷಣ ಸಾರ್ವತ್ರೀಕರಣದ ಮೇಲೆ ಅಗಾಧ ಪರಿಣಾಮವನ್ನು ಬೀರಿದೆ. ಹೀಗೆ, ಶಿಕ್ಷಣ ಹಕ್ಕು ಕಾಯ್ದೆಯು ಜಾರಿಗೊಂಡು ಇಷ್ಟು ವರ್ಷಗಳ ನಂತರವೂ ಕೇವಲ ಶೇ. 9.5 ಶಾಲೆಗಳು ಮಾತ್ರ ಕಾಯ್ದೆಯ ನಿಯಮಗಳನ್ನು ಅನುಸರಿಸುತ್ತಿವೆ. ಶಿಕ್ಷಣದ ಗುಣಮಟ್ಟವು ತೀವ್ರವಾಗಿ ಕುಂಠಿತಗೊಂಡಿದೆ. ಐದು ಲಕ್ಷಕ್ಕೂ ಹೆಚ್ಚು ಶಿಕ್ಷಕ ಹುದ್ದೆಗಳು ಖಾಲಿಬಿದ್ದಿವೆ ಹಾಗೂ ಇನ್ನು ಆರು ಲಕ್ಷ ನಲವತ್ತು ಸಾವಿರ ಶಿಕ್ಷಕರು ತರಬೇತಿಯಿಲ್ಲದವರಾಗಿದ್ದಾರೆ. ಶೇ. 10 ಶಾಲೆಗಳಲ್ಲಿ ಒಬ್ಬರೇ ಶಿಕ್ಷಕರಿದ್ದಾರೆ. ಶೇ. 30 ಶಾಲೆಗಳಲ್ಲಿ ಹೆಣ್ಣುಮಕ್ಕಳ ಶೌಚಾಲಯಗಳು ಕೆಲಸ ಮಾಡುತ್ತಿಲ್ಲ. ಶೇ. 20 ಶಾಲೆಗಳಲ್ಲಿ ಇನ್ನೂ ಸುರಕ್ಷಿತವಾದ ಕುಡಿಯುವ ನೀರಿನ ಕೊರತೆಯಿದೆ. ದೇಶವು 2015ರ ಹೊತ್ತಿಗೆ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಸಾಧಿಸುವ ಗುರಿಯನ್ನು ಹೊಂದಿತ್ತು. ಆದರೆ ಆ ಗಡುವನ್ನು ತಪ್ಪಿಸಿಕೊಂಡಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಗುಣಮಟ್ಟದ ಸಾರ್ವತ್ರಿಕ ಶಿಕ್ಷಣವನ್ನು ಸಾಧಿಸಬೇಕು ಎಂದಾದಲ್ಲಿ ಚರ್ಚಿಸಲೇಬೇಕಾದ, ಶಿಕ್ಷಣಸಂಬಂಧಿ ಸಮಸ್ಯೆಗಳ ದೊಡ್ಡ ಪಟ್ಟಿಯೇ ಇದೆ. ಶೈಕ್ಷಣಿಕ ಪರಿವರ್ತನೆಗಳನ್ನು ತರುವಲ್ಲಿ ರಾಜ್ಯದ ಸಂಪನ್ಮೂಲಗಳನ್ನು ಹೆಚ್ಚು ಬಳಸಬೇಕೆಂದು ಖ್ಯಾತ ಅರ್ಥಶಾಸ್ತ್ರಜ್ಞ ಆ್ಯಡಮ್ ಸ್ಮಿತ್ ಇನ್ನೂರು ವರ್ಷಗಳ

ಹಿಂದೆಯೇ ಪ್ರತಿಪಾದಿಸಿದ್ದ. 'ಶಿಕ್ಷಣದಿಂದ ಒದಗಬಹುದಾದ ಅತ್ಯಂತ ಪ್ರಮುಖ ಪ್ರಯೋಜನವನ್ನು ಪಡೆದುಕೊಳ್ಳುವ ಅವಶ್ಯಕತೆಯಿದೆ. ಅದಕ್ಕಾಗಿ ಸಾರ್ವಜನಿಕ ವಲಯವು ಸಣ್ಣದೊಂದು ಮೊತ್ತವನ್ನು ವ್ಯಯಿಸಬಹುದು, ಬಹುತೇಕ ಇಡೀ ಜನಸಮುದಾಯವು ಅದನ್ನು ಭರಿಸುವಂತೆ ಉತ್ತೇಜಿಸಬಹುದು ಅಥವಾ ಅವರ ಮೇಲೆ ಅದನ್ನು ವಿಧಿಸಬಹುದು' ಎಂದು ಆತ ಹೇಳಿದ್ದ.

ಇಂದು ಹಲವಾರು ಅಭಿವೃದ್ಧಿಪರ ಚಿಂತಕರು ಖಾಸಗೀಕರಣವನ್ನು ಪ್ರಬಲವಾಗಿ ಪ್ರತಿಪಾದಿಸುತ್ತಿದ್ದಾರೆ. ವಿಶೇಷವಾಗಿ ಈ ಸಂದರ್ಭದಲ್ಲಿ, ಸಾರ್ವಜನಿಕ ವ್ಯವಸ್ಥೆಯಲ್ಲಿನ ನಮ್ಮ ನಂಬಿಕೆಯನ್ನು ಮರುಸ್ಥಾಪಿಸಿಕೊಳ್ಳುವುದು ಅತ್ಯಂತ ಮುಖ್ಯವಾಗಿದೆ. ಸಾರ್ವಜನಿಕ ಚರ್ಚೆಗಳಲ್ಲಿ ಶಾಲಾ ಶಿಕ್ಷಣವನ್ನು ಮರುರೂಪಿಸುವುದಕ್ಕೆ ಹಾಗೂ ಉತ್ತಮ ಗುಣಮಟ್ಟದ ಶಿಕ್ಷಣವು ಭಾರತದ ಮಕ್ಕಳೆಲ್ಲರಿಗೂ ದೊರಕುವುದಕ್ಕೆ ಹೆಚ್ಚು ಗಮನ ನೀಡುವುದು ಅತ್ಯಂತ ಅಗತ್ಯವಾಗಿದೆ.

■

ಬಿ ಫಸ್ಟ್, 06-04-2017



**31ನೇ ಡಿಸೆಂಬರ್ 2012–** ಈ ಚಿತ್ರ ಅಜೀಂ ಪ್ರೇಮ್‌ಜಿ ಫೌಂಡೇಷನ್ ಕರ್ನಾಟಕದಲ್ಲಿ ರಾಜ್ಯದ ಹತ್ತು ಜಿಲ್ಲಾ ಸಂಸ್ಥೆಗಳ ಮೂಲಕ ತನ್ನ ಕೆಲಸ ಕಾರ್ಯಗಳನ್ನು ವಿಸ್ತರಿಸುವ ನಿಟ್ಟಿನಲ್ಲಿ ಶಿಕ್ಷಣ ಇಲಾಖೆಯೊಂದಿಗೆ ಮಾಡಿಕೊಂಡ ಒಡಂಬಡಿಕೆಯ ಸಂದರ್ಭದ್ದು. ಆಗಿನ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರಾದ ವಿಶ್ವೇಶ್ವರ ಹೆಗಡೆ ಕಾಗೇರಿ, ಶಿಕ್ಷಣ ಇಲಾಖೆಯ ಕಾರ್ಯದರ್ಶಿ ಕುಮಾರ್ ನಾಯಕ್, ಆಯುಕ್ತರಾದ ಉಮಾಶಂಕರ್, ಎಸ್‌ಎಸ್‌ಎ ಯೋಜನಾ ನಿರ್ದೇಶಕ ವಿಪುಲ್ ಬನ್ಸಾಲ್, ಆರ್‌ಎಂಎಸ್‌ಎ ನಿರ್ದೇಶಕ ಬೇಗ್ ಅಲ್ಲದೆ ನಮ್ಮ ಸಂಸ್ಥೆಯ ಸಿಇಓಗಳಾದ ದಿಲೀಪ್ ರಂಜೇಕರ್, ಅನುರಾಗ್ ಬೆಹಾರ್, ಸಿಓಓ ಎಸ್. ಗಿರಿಧರ್ ಅವರುಗಳೊಂದಿಗೆ.

ಎಷ್ಟೇ ಕಡಿಮೆ ಸಂಖ್ಯೆಯ ಮಕ್ಕಳಿದ್ದರೂ ಕಿರಿಯ ಪ್ರಾಥಮಿಕ ಹಂತದಲ್ಲಿ ತರಗತಿಗೊಬ್ಬರಂತೆ ಶಿಕ್ಷಕರಿಲ್ಲದಿದ್ದಲ್ಲಿ ಮಕ್ಕಳ ಕಲಿಕೆ ಖಂಡಿತ ತೃಪ್ತಿಕರವಾಗಿ ಆಗದು. ಭವಿಷ್ಯದ ಮಾನವ ಸಂಪನ್ಮೂಲವು ಶಾಲೆಗಳಲ್ಲಿ ರೂಪುಗೊಳ್ಳುವುದರಿಂದ, ಹಣಕಾಸು ಸಂಪನ್ಮೂಲದ ಹೊರೆಯನ್ನೇ ಮುಂದಿಟ್ಟುಕೊಂಡು ಅಗತ್ಯ ಸಂಖ್ಯೆಯ ಶಿಕ್ಷಕರನ್ನು ನಿಯೋಜಿಸದೇ ಇರುವುದು ಅತ್ಯಂತ ಸಂಕುಚಿತ ನಿಲುವಾಗುತ್ತದೆ.

# ಈಶಾನ್ಯ ಕರ್ನಾಟಕ – ಸಮಗ್ರ ಶೈಕ್ಷಣಿಕ ಯೋಜನೆಯ ಅಗತ್ಯ

ಶೈಕ್ಷಣಿಕವಾಗಿ ಹಿಂದುಳಿದಿರುವ ಈಶಾನ್ಯ ಕರ್ನಾಟಕದ ಎಂಟು ಜಿಲ್ಲೆಗಳ ಸ್ಥಿತಿಗತಿಯನ್ನು ಅವಲೋಕಿಸೋಣ. ಅಲ್ಲಿನ ಸರ್ಕಾರಿ ಶಾಲೆಗಳಿಗೆ ಒದಗಿರುವ ಅವಜ್ಞೆಯ ನೋಟವು ಮೇಲ್ನೋಟಕ್ಕೆ ರಾಜ್ಯದ ಇತರೆಡೆಗಳಂತೆಯೇ ಇದೆ. ಆದರೆ ಇಲ್ಲಿನ ಕೆಲವು ಭಾಗಗಳಲ್ಲಿ ಇನ್ನೂ ಜಾರಿಯಲ್ಲಿರುವ ಬಾಲ್ಯವಿವಾಹ ಪದ್ಧತಿಯು ಮಕ್ಕಳು ಶಿಕ್ಷಣ ಪೂರೈಸುವುದಕ್ಕೆ ಅಡ್ಡಗಾಲಾಗಿದೆ. ಕೆಲಸಕ್ಕಾಗಿ ನಗರ ಪ್ರದೇಶಗಳಿಗೆ ಪೋಷಕರು ಗುಳೆ ಹೋಗುವುದರಿಂದ ಅವರ ಮಕ್ಕಳು ಶಾಲೆಯಿಂದ ಹೊರಗುಳಿಯುವಂತಾಗಿದೆ. ದಾಖಲಾತಿ ಆಂದೋಲನಗಳ ಭರಾಟೆಯ ನಡುವೆಯೂ ಇಂತಹ ಮಕ್ಕಳು ಶಿಕ್ಷಣದಿಂದ ವಂಚಿತರಾಗದಂತೆ ಮಾಡಲು ಸಾಧ್ಯವಾಗುತ್ತಿಲ್ಲ. ಅಲ್ಲಿನ ಸರ್ಕಾರಿ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳ ಪ್ರಮಾಣವು ವಿದ್ಯಾರ್ಥಿಗಳ ದಾಖಲಾತಿಯ ಮೇಲೆ ನೇರ ಪರಿಣಾಮ ಬೀರಿದೆ. ಇದೇ ವೇಳೆಗೆ, ಅನುದಾನಿತ ಮತ್ತು ಅನುದಾನರಹಿತ ಶಾಲೆಗಳಲ್ಲಿ ಮಕ್ಕಳ ದಾಖಲಾತಿ ಪ್ರಮಾಣದಲ್ಲಿ ಏರಿಕೆ ಕಂಡುಬರುತ್ತದೆ.

ಸರ್ಕಾರಿ ಶಾಲೆಗಳಲ್ಲಿ ಸಾಮಾನ್ಯವಾಗಿರುವ ಶಿಕ್ಷಕರ ಕೊರತೆ ಮತ್ತು ಮಕ್ಕಳ ದಾಖಲಾತಿ ಇಳಿಕೆಗೆ ಸಂಬಂಧಿಸಿದ ಅಂಕಿ–ಅಂಶಗಳು ಶಿಕ್ಷಣ ವ್ಯವಸ್ಥೆಯು ಸದ್ಯಕ್ಕೆ ಅನುಭವಿಸುತ್ತಿರುವ ವ್ಯಾಧಿಯ ಮೇಲುಸ್ತರದ ಲಕ್ಷಣಗಳು ಮಾತ್ರ.

ಮೂಲದಲ್ಲಿ ಪರಿಹಾರಗಳನ್ನು ಕಂಡುಹಿಡಿಯದಿದ್ದರೆ ಈ ವ್ಯಾಧಿ ಇಡೀ ವ್ಯವಸ್ಥೆಗೆ ಮಾರಕವಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಹೀಗಾಗಿ ರಾಜ್ಯದ ಸರ್ಕಾರಿ ಶಾಲೆಗಳ ಸುಧಾರಣೆಯನ್ನು ದೂರಗಾಮಿ ದೃಷ್ಟಿಕೋನದಿಂದ ಪರಿಗಣಿಸಬೇಕಾಗಿದೆ. ಇಂಥ ಕ್ರಮಗಳು ಸರ್ಕಾರಿ ಶಾಲಾ ವ್ಯವಸ್ಥೆಯ ಬಗ್ಗೆ ಪೋಷಕರು ಹಾಗೂ ಸಾರ್ವಜನಿಕರಲ್ಲಿ ಸದಭಿಪ್ರಾಯ ರೂಪಿಸುವಲ್ಲಿ, ಬ್ರ್ಯಾಂಡ್ ಇಮೇಜನ್ನು ಮೂಡಿಸುವಲ್ಲಿ ನೆರವಾಗಬಹುದು.

ಖಾಸಗಿ ಶಾಲೆಗಳು ನಾಯಿಕೊಡೆಗಳಂತೆ ಎಲ್ಲ ಕಡೆ ಹುಟ್ಟಿಕೊಂಡಿರುವ ರೀತಿಯಲ್ಲಿಯೇ ಪ್ರಸ್ತುತ ಎಲ್ಲ ಜಿಲ್ಲೆಗಳಲ್ಲಿ ಖಾಸಗಿ ಶಿಶುವಿಹಾರಗಳು ಸಹ ತಲೆಯೆತ್ತಿವೆ. ಅಂಗನವಾಡಿ ಕೇಂದ್ರಗಳಿದ್ದರೂ ಮೂರು ವರ್ಷವೂ ತುಂಬದ ಎಳೆಯ ಕೂಸುಗಳನ್ನು ಈ ಶಿಶುವಿಹಾರಗಳಿಗೆ ಸೇರಿಸುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ. ಇದಕ್ಕೆ ಕಾರಣ ಅಂಗನವಾಡಿಗಳಲ್ಲಿ ಮಕ್ಕಳ ಆರಂಭಿಕ ಹಂತದ ಶಿಕ್ಷಣಕ್ಕೆ ಯಾವುದೇ ಒತ್ತು ನೀಡದಿರುವುದು. ಖಾಸಗಿ ಶಿಶುವಿಹಾರಗಳಲ್ಲಿ ಅಕ್ಷರ ಕಲಿಕೆ, ಹಾಡು, ನೃತ್ಯದ ಮೂಲಕ ಲವಲವಿಕೆಯ ವಾತಾವರಣವನ್ನು ಮೂಡಿಸುವ ಪ್ರಯತ್ನವು ಹೆಚ್ಚಿನ ಮಟ್ಟಿಗೆ ನಡೆಯುತ್ತದೆ.

ಹೀಗೆ ಶಿಶುವಿಹಾರದ ಮೂಲಕ ಚೇತೋಹಾರಿ ನಡೆ–ನುಡಿ ಬೆಳೆಸಿಕೊಂಡ ಮಕ್ಕಳನ್ನು ಒಂದನೆಯ ತರಗತಿಗೆ ಸರ್ಕಾರಿ ಶಾಲೆಗೆ ಸೇರಿಸುವ ಆಲೋಚನೆ ಪೋಷಕರಿಗೆ ಬರುತ್ತದೆ ಎಂದುಕೊಳ್ಳುವುದು ಭ್ರಮೆಯಾಗುತ್ತದೆ. ಅಂಗನವಾಡಿ ಕೇಂದ್ರಗಳನ್ನು ಪುನರ್‌ರೂಪಿಸಿ ಶಿಕ್ಷಣದ ಜವಾಬ್ದಾರಿಯನ್ನು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಿಂದ ಬೇರ್ಪಡಿಸಿ, ಶಿಕ್ಷಣ ಇಲಾಖೆಯೇ ವಹಿಸಿಕೊಳ್ಳುವಂತೆ ಆಗಬೇಕು.

ಕಿರಿಯ ಪ್ರಾಥಮಿಕ ಶಾಲೆಗಳೊಂದಿಗೆ ಶಿಶುವಿಹಾರದಂತಹ ಪೂರ್ವ ಪ್ರಾಥಮಿಕ ಶಾಲೆಗಳನ್ನು ತೆರೆಯಬೇಕು. ಇದರಿಂದ ಪ್ರಾಥಮಿಕ ಶಾಲೆಗಳಿಗೆ ಮಕ್ಕಳನ್ನು ಸೆಳೆಯಲು ಅವಕಾಶವಾಗುತ್ತದೆ. ಇಂಗ್ಲಿಷನ್ನು ಒಂದನೆಯ ತರಗತಿಯಿಂದ ಭಾಷೆಯಾಗಿಯೂ, ಆರನೆಯ ತರಗತಿಯಿಂದ ಮಾಧ್ಯಮವಾಗಿಯೂ ಕಲಿಸಲು ಯೋಜಿಸಬೇಕು. ಇಂಗ್ಲಿಷನ್ನು ಇಂಗ್ಲಿಷಿನಲ್ಲಿಯೇ ಬೋಧಿಸುವಂತಹ ಸಮರ್ಥ ಶಿಕ್ಷಕರನ್ನು ಪ್ರಸ್ತುತ ಸೇವೆಯಲ್ಲಿರುವ ಶಿಕ್ಷಕರ ಗುಂಪಿನಿಂದ ಆಯ್ದುಕೊಳ್ಳುವುದರ ಜೊತೆಗೆ, ತರಬೇತಿ ಪಡೆದವರನ್ನು ಹೊಸದಾಗಿ ನೇಮಿಸಿಕೊಳ್ಳಬೇಕಾದ ಜರೂರಿದೆ. ಖಾಸಗಿ ಶಾಲೆಗಳಲ್ಲಿ, ಸಾಮಾನ್ಯವಾಗಿ ತರಬೇತಿ ಹೊಂದಿಲ್ಲದಿದ್ದರೂ ಪ್ರತಿ ತರಗತಿಗೂ ವಿಷಯಾಧಾರಿತ ಶಿಕ್ಷಕರಿರುತ್ತಾರೆ. ಆದರೆ ಏಕೋಪಾಧ್ಯಾಯ ಅಥವಾ ಇಬ್ಬರು ಉಪಾಧ್ಯಾಯರಿರುವ ಸಾವಿರಾರು ಸರ್ಕಾರಿ ಪ್ರಾಥಮಿಕ ಶಾಲೆಗಳಿವೆ. ಅಲ್ಲಿ ಬಹುವರ್ಗ ಬೋಧನೆ ಜಾರಿಯಲ್ಲಿದೆ.

ಎಷ್ಟೇ ಕಡಿಮೆ ಸಂಖ್ಯೆಯ ಮಕ್ಕಳಿದ್ದರೂ ಕಿರಿಯ ಪ್ರಾಥಮಿಕ ಹಂತದಲ್ಲಿ ತರಗತಿಗೊಬ್ಬರಂತೆ ಶಿಕ್ಷಕರಿಲ್ಲದಿದ್ದಲ್ಲಿ ಮಕ್ಕಳ ಕಲಿಕೆ ಖಂಡಿತ ತೃಪ್ತಿಕರವಾಗಿ ಆಗದು. ಹಿರಿಯ ಪ್ರಾಥಮಿಕ ಹಂತದಲ್ಲಿಯೇ ವಿಷಯಾಧಾರಿತ ಪರಿಕಲ್ಪನಾತ್ಮಕ ಆಧಾರವನ್ನು ಗಟ್ಟಿಯಾಗಿ ನಿರ್ಮಿಸದಿದ್ದರೆ ಮೇಲಿನ ತರಗತಿಗಳಲ್ಲಿ ಹಿಂದೆ ಗಳಿಸಲಾರದ ಕಲಿಕಾಂಶಗಳನ್ನು ಮಕ್ಕಳಿಗೆ ನೀಡಲಾಗುವುದಿಲ್ಲ. ಇದರಿಂದ ಸರ್ಕಾರಿ ಶಾಲೆಗಳ ಮಕ್ಕಳು ಮುಂದಿನ ಸ್ಪರ್ಧಾತ್ಮಕ ಪರಿಸರಕ್ಕೆ ಸಜ್ಜುಗೊಳ್ಳುವುದಿಲ್ಲ. ಶಿಕ್ಷಕರು ಮತ್ತು ಮಕ್ಕಳ ಅನುಪಾತವನ್ನು ರಾಜ್ಯ ಮಟ್ಟದಲ್ಲಿ ಸರಾಸರಿ ಪ್ರಮಾಣದಲ್ಲಿ ಪರಿಗಣಿಸುವ ಬದಲು ಶಾಲಾ ಮಟ್ಟದಲ್ಲಿ ಪರಿಗಣಿಸುವುದು ಉಚಿತ. ಭವಿಷ್ಯದ ಮಾನವ ಸಂಪನ್ಮೂಲವು ಶಾಲೆಗಳಲ್ಲಿ ರೂಪುಗೊಳ್ಳುವುದರಿಂದ, ಹಣಕಾಸು ಸಂಪನ್ಮೂಲದ ಹೊರೆಯನ್ನೇ ಮುಂದಿಟ್ಟುಕೊಂಡು ಅಗತ್ಯ ಸಂಖ್ಯೆಯ ಶಿಕ್ಷಕರನ್ನು ನಿಯೋಜಿಸದೆ ಇರುವುದು ಅತ್ಯಂತ ಸಂಕುಚಿತ ನಿಲುವಾಗುತ್ತದೆ.

ಸೂಕ್ತ ತರಗತಿಕೋಣೆಗಳು, ಶುದ್ಧ ಕುಡಿಯುವ ನೀರು, ಸ್ವಚ್ಛ ಶೌಚಾಲಯಗಳು, ಅಗತ್ಯ ಕುರ್ಚಿ, ಮೇಜು, ವಾಚನಾಲಯ, ಪ್ರಯೋಗಾಲಯ, ಆಟದ ಮೈದಾನ ಮತ್ತು ಕ್ರೀಡಾ ಉಪಕರಣಗಳು, ಕೈತೋಟ ಮುಂತಾದವುಗಳನ್ನೊಳಗೊಂಡ ಸುಸಜ್ಜಿತ ಶಾಲೆಯಲ್ಲಿ ಮಕ್ಕಳ ಒಟ್ಟಾರೆ ಬೆಳವಣಿಗೆಗೆ ಹೆಚ್ಚಿನ ಅವಕಾಶವಿರುತ್ತದೆ. ಹೆಚ್ಚಿನ ಸಂಖ್ಯೆಯ ಮಕ್ಕಳನ್ನು ಹೊಂದಿದ ಖಾಸಗಿ ಶಾಲೆಗಳಿಗೆ ಹೋಲಿಸಿದರೆ ಸರ್ಕಾರಿ ಶಾಲೆಗಳು ಯಾವುದೇ ವಿಧದಲ್ಲಿಯೂ ಕಳಪೆಯಲ್ಲವೆಂದು ಸಮುದಾಯಕ್ಕೆ ಮನದಟ್ಟಾಗುತ್ತದೆ. ಆಗ ಅಧಿಕ ಸಂಖ್ಯೆಯ ಮಕ್ಕಳು ಸರ್ಕಾರಿ ಶಾಲೆಗಳತ್ತ ಆಕರ್ಷಿತರಾಗುತ್ತಾರೆ. ಮುಂದುವರೆದು, ಸಮುದಾಯ ಮತ್ತು ದಾನಿಗಳಿಂದ ಶಾಲೆಗಳಿಗೆ ಅಗತ್ಯ ಕೊಡುಗೆಯನ್ನು ಪಡೆಯುವಲ್ಲಿ ಎಸ್‌ಡಿಎಮ್‌ಸಿಗಳ ಸಕ್ರಿಯ ಪಾತ್ರವನ್ನು ನಿರೀಕ್ಷಿಸಬಹುದು.

ನಮ್ಮ ಸಂಸ್ಥೆಯು 2002-05ರ ನಡುವಿನ ಅವಧಿಯಲ್ಲಿ ಶಿಕ್ಷಣ ಇಲಾಖೆಯ ಸಹಯೋಗದಲ್ಲಿ ಈಶಾನ್ಯ ಕರ್ನಾಟಕದ ಏಳು ಜಿಲ್ಲೆಗಳಲ್ಲಿ 'ಕಲಿಕಾ ಖಾತ್ರಿ' ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಿತ್ತು. ಇದರ ಅನ್ವಯ, ಶೇ. 100ರಷ್ಟು ದಾಖಲಾತಿ ಹಾಗೂ ಶೇ. 90ರಷ್ಟು ನಿರಂತರ ಹಾಜರಾತಿಯನ್ನು ಹೊಂದಿದ್ದ ಎಂಟು ನೂರಾ ತೊಂಬತ್ತಾರು ಶಾಲೆಗಳಲ್ಲಿ ಅಧ್ಯಯನ ಕೈಗೊಳ್ಳಲಾಯಿತು. ಇದರಿಂದ, ಮಕ್ಕಳ ಕಲಿಕಾ ಮಟ್ಟವನ್ನು ಯಶಸ್ವಿಯಾಗಿ ಸಾಧಿಸಿದ ಶಾಲೆಗಳಲ್ಲಿ ಬದ್ಧತೆ ಮತ್ತು ಶಿಸ್ತನ್ನು ರೂಢಿಸಿಕೊಂಡ ಮುಖ್ಯ ಶಿಕ್ಷಕರನ್ನೊಳಗೊಂಡ ಶಿಕ್ಷಕರ ವ್ಯವಸ್ಥೆ ಇತ್ತು ಎಂಬ ಪ್ರಮುಖ ಅಂಶವು ಹೊರಹೊಮ್ಮಿತು.

ಮೇಲಿನ ಶಿಕ್ಷಕರು, ಹಲವಾರು ಉತ್ತಮ ಶೈಕ್ಷಣಿಕ ಅಭ್ಯಾಸಗಳನ್ನು ಮೈಗೂಡಿಸಿಕೊಂಡಿದ್ದರು. ಕಲಿಕೆಯಲ್ಲಿ ಹಿಂದುಳಿದ ಮಕ್ಕಳಿಗೆ ವಿಶೇಷ ತರಗತಿಗಳನ್ನು ತೆಗೆದುಕೊಳ್ಳುವುದು, ಹೋಂವರ್ಕ್ ನೀಡುವುದು, ವಿಶೇಷ ಪರೀಕ್ಷೆಗಳನ್ನು ನಡೆಸುವುದು, ವಿದ್ಯಾರ್ಥಿಗಳ ಕಲಿಕೆಯನ್ನು ಸುಧಾರಿಸಲು ಪೋಷಕರೊಂದಿಗೆ ಸಂವಾದ ನಡೆಸುವುದು, ಮಕ್ಕಳನ್ನು ಧನಾತ್ಮಕವಾಗಿ ಪ್ರೇರೇಪಿಸುವುದು ಮುಂತಾದವು ಅವುಗಳಲ್ಲಿ ಕೆಲವು. ಶಾಲಾ ಪ್ರಕ್ರಿಯೆಗಳಲ್ಲಿ ಕ್ರಿಯಾತ್ಮಕವಾಗಿ ತೊಡಗಿಸಿಕೊಂಡ ಎಸ್‌ಡಿಎಮ್‌ಸಿ ಮತ್ತು ಪೋಷಕರನ್ನೊಳಗೊಂಡ ಸಕ್ರಿಯ ಸಮುದಾಯ ವ್ಯವಸ್ಥೆಗಳು ಇದ್ದದ್ದು ಕಂಡುಬಂದಿತು. ಈ ಒಳನೋಟ ಇಂದಿಗೂ ಪ್ರಸ್ತುತವಾಗುತ್ತದೆ.

ಪ್ರತಿ ಗ್ರಾಮ ಪಂಚಾಯಿತಿಗೆ ಒಂದರಂತೆ ಮಾದರಿ ಶಾಲೆಗಳನ್ನು ಆರಂಭಿಸಲು ಸರ್ಕಾರವು ಈಗ ಒಲವು ವ್ಯಕ್ತಪಡಿಸಿದೆ. ಮೊದಲು ಪ್ರಯೋಗಾತ್ಮಕವಾಗಿ ಕೆಲವು ಪಂಚಾಯಿತಿಗಳಲ್ಲಿ ಮಾದರಿ ಶಾಲೆಗಳು ಆರಂಭವಾಗಲಿ. ಸಮಗ್ರ ಕಲಿಕಾ ವಾತಾವರಣಕ್ಕೆ ಪೂರಕವಾದ ಸಂಪನ್ಮೂಲಗಳನ್ನು ಕ್ರೋಢೀಕರಿಸಿ, ವಿಷಯವಾರು ಶಿಕ್ಷಕರನ್ನು ನಿಯೋಜಿಸಬೇಕು. ಜೊತೆಗೆ, ವ್ಯವಸ್ಥಿತ ನಿರ್ವಹಣೆಯ ಜವಾಬ್ದಾರಿಯನ್ನು ಅಂತಹ ಶಾಲೆಗಳಿಗೆ ನೀಡಬೇಕು. ನಂತರ ಈ ಶಾಲೆಗಳನ್ನು ಇತರೆಡೆಗಳಲ್ಲಿಯೂ ಹಂತ ಹಂತವಾಗಿ ನಿರ್ಮಿಸುವುದು ಒಳಿತು. ಈ ಪ್ರಕ್ರಿಯೆಯಲ್ಲಿ ಎಲ್ಲ ಭಾಗೀದಾರರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕಾದುದು ಅತ್ಯಗತ್ಯ. ಅದರಲ್ಲೂ ಶಿಕ್ಷಕರ ಸಂಘಗಳು ಮಹತ್ತರವಾದ ಪಾತ್ರ ವಹಿಸಬೇಕಾಗುತ್ತದೆ. ಸೇವಾನಿರತ ಶಿಕ್ಷಕರ ವೃತ್ತಿಪರ ಬೆಳವಣಿಗೆಯನ್ನು ಹೊಸ ದೃಷ್ಟಿಕೋನದಿಂದ ನೋಡಬೇಕಾಗುತ್ತದೆ. ತಮ್ಮ ನೈಜ ಅಗತ್ಯಗಳಿಗೆ ತಕ್ಕಂತೆ ತರಬೇತಿಗಳನ್ನು ಆಯ್ಕೆ ಮಾಡಿಕೊಳ್ಳಲು ಶಿಕ್ಷಕರಿಗೆ ಅವಕಾಶ ನೀಡಬೇಕು. ಅದಕ್ಕೆಂದೇ ವಿಶೇಷ ಪಠ್ಯಕ್ರಮ ರಚಿಸಿ, ಆಯ್ದ ಸಂಪನ್ಮೂಲ ವ್ಯಕ್ತಿಗಳಿಂದ ಅತ್ಯುನ್ನತ ಮಟ್ಟದ ತರಬೇತಿಯನ್ನು ಆಯೋಜಿಸಬೇಕು. ನಿರಂತರ ಕಲಿಕೆಯಲ್ಲಿ ತೊಡಗುವ ಶಿಕ್ಷಕರೇ ಮಕ್ಕಳಿಗೆ ಒಳ್ಳೆಯ ಶಿಕ್ಷಣ ನೀಡುವರೆಂಬುದು ಎಲ್ಲರೂ ಒಪ್ಪುವ ಅಂಶ.

ಇಂತಹ ಸುಧಾರಣಾ ಕ್ರಮಗಳ ಜೊತೆಗೆ ಸರ್ಕಾರಿ ಶಾಲೆಗಳಲ್ಲಿನ ಮಕ್ಕಳಿಗೆ ಒದಗಿಸುತ್ತಿರುವ ಸವಲತ್ತುಗಳ ಬಗ್ಗೆ ಕೈಪಿಡಿಗಳನ್ನು, ಪೋಸ್ಟರ್‌ಗಳನ್ನು ತಯಾರಿಸಿ ವಿವಿಧ ಮಾಧ್ಯಮಗಳ ಮೂಲಕ ಜನರಿಗೆ ಅರಿವು ಮೂಡಿಸುವ ಕೆಲಸವನ್ನು ಜಿಲ್ಲೆ ಮತ್ತು ತಾಲ್ಲೂಕು ಮಟ್ಟಗಳಲ್ಲಿ ಮಾಡಬೇಕಾಗಿದೆ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕೂಲಂಕಷವಾಗಿ ವಿಮರ್ಶಿಸಿ, ಶೈಕ್ಷಣಿಕ ಸುಧಾರಣೆಗೆ ಸಮಗ್ರ ಯೋಜನೆಯನ್ನು ರೂಪಿಸಬೇಕಾಗಿದೆ.

## ಬೆಳಕಿಗೆ ಬಂದ ತಪ್ಪು ಕಲ್ಪನೆ

ಆಂಧ್ರಪ್ರದೇಶದ ಐದು ಜಿಲ್ಲೆಗಳಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್ ಕೈಗೊಂಡ ವಿಶೇಷ ಸಂಶೋಧನೆಯು ಜನರಲ್ಲಿ ಸರ್ಕಾರಿ ಹಾಗೂ ಖಾಸಗಿ ಶಾಲೆಗಳ ಬಗ್ಗೆ ಇದ್ದ ತಪ್ಪು ಕಲ್ಪನೆಯನ್ನು ಎತ್ತಿ ತೋರಿಸಿತು. ಈ ಜಿಲ್ಲೆಗಳ ಗ್ರಾಮೀಣ ಭಾಗದ ಅವಕಾಶವಂಚಿತ ಮಕ್ಕಳಿಗೆ ವಿದ್ಯಾರ್ಥಿ ವೇತನ ನೀಡುವ ಮೂಲಕ, ಅವರು ತಮ್ಮ ಆಯ್ಕೆಯ ಖಾಸಗಿ ಶಾಲೆಗಳಿಗೆ ಸೇರುವ ಅವಕಾಶ ಕಲ್ಪಿಸಲಾಯಿತು. ಬಳಿಕ ಈ ಮಕ್ಕಳು ಹಾಗೂ ಸರ್ಕಾರಿ ಶಾಲೆಗಳಲ್ಲೇ ಮುಂದುವರಿದ ವಿದ್ಯಾರ್ಥಿಗಳ ಕಲಿಕಾ ಮಟ್ಟವನ್ನು ಐದು ವರ್ಷಗಳ ಕಾಲ ನಿರಂತರವಾಗಿ (2008–2013ರ ಅವಧಿಯಲ್ಲಿ) ಅಧ್ಯಯನ ಮಾಡಲಾಯಿತು. ಈ ಸಂದರ್ಭದಲ್ಲಿ ತಿಳಿದು ಬಂದ ಅಂಶವು ನಮ್ಮೆಲ್ಲರ ಕಣ್ಣು ತೆರೆಸಿತು. ವಿದ್ಯಾರ್ಥಿ ವೇತನ ಪಡೆದು ಖಾಸಗಿ ಶಾಲೆಗಳಲ್ಲಿ ಓದಿದ ಮಕ್ಕಳು ಸರ್ಕಾರಿ ಶಾಲೆಗಳಲ್ಲೇ ಮುಂದುವರಿದ ಮಕ್ಕಳಿಗಿಂತ ತೆಲುಗು, ಗಣಿತ, ಪರಿಸರ ವಿಜ್ಞಾನ ಮತ್ತು ಇಂಗ್ಲಿಷಿನಲ್ಲಿ ಕಡಿಮೆ ಸಾಮರ್ಥ್ಯವನ್ನು ಹೊಂದಿದ್ದರು. ಆದರೆ ಪೋಷಕರನ್ನು ಈ ಕುರಿತು ಸಂದರ್ಶಿಸಿದಾಗ, ಖಾಸಗಿ ಶಾಲೆಗಳಲ್ಲಿ ಒದಗಿಸಲಾಗುವ ಸಮವಸ್ತ್ರ, ಪಾಲಿಸುವ ಶಿಸ್ತು, ಹಾಜರಾತಿ (ಶಿಕ್ಷಕರು ಮತ್ತು ಮಕ್ಕಳದ್ದು), ಇಂತಹ ಶಾಲೆಗಳಿಗೆ ಸೇರಿಸುವುದರಿಂದ ಸಮಾಜದಲ್ಲಿ ತಮಗೆ ಸಿಗುವ ಮನ್ನಣೆ ಇತ್ಯಾದಿ ಬಾಹ್ಯ ಕಾರಣಗಳಿಂದ ಅವರು ತಮ್ಮ ಮಕ್ಕಳನ್ನು ಅಲ್ಲಿಗೆ ಸೇರಿಸಲು ಬಯಸಿದ್ದರು ಎನ್ನುವುದು ತಿಳಿದುಬಂದಿತು.

## ಶಿಕ್ಷಕರಾಗಿಯೇ ಇರಲಿ

ಶಿಕ್ಷಕರನ್ನು ಚುನಾವಣೆ, ಜನಗಣತಿ, ಜಾತಿಗಣತಿ, ಪ್ರಾಣಿಗಣತಿಯಂತಹ ಶೈಕ್ಷಣಿಕವಲ್ಲದ ಎಲ್ಲ ಬಗೆಯ ಕೆಲಸಗಳಿಗೆ ಬಳಸಿಕೊಳ್ಳುವುದು ಸಾಮಾನ್ಯ. ರಾಜಸ್ಥಾನದಲ್ಲಿ ಇತ್ತೀಚೆಗೆ ಮುಖ್ಯಮಂತ್ರಿಗಳ ಹಿಂದಿನ ಲೋಕಸಭಾ ಕ್ಷೇತ್ರದಲ್ಲಿ 'ಸ್ವಚ್ಛ ಭಾರತ್' ಅಭಿಯಾನದಡಿ, ಬಯಲು ಶೌಚದ ವಿರುದ್ಧ ಜನಜಾಗೃತಿ ಮೂಡಿಸುವ ಕಾರ್ಯಕ್ಕೂ ಶಿಕ್ಷಕರನ್ನು ಬಳಸಿಕೊಂಡ ಉದಾಹರಣೆ ಇದೆ!

■

ಪ್ರಜಾವಾಣಿ, 11–06–2016

ಶಿಕ್ಷಣವನ್ನು ಕುರಿತು ತನ್ನ ದೀರ್ಘಕಾಲೀನ ಪಾತ್ರದತ್ತ ಗಮನಹರಿಸಲು ಬೆಂಗಳೂರು ಮಹಾನಗರ ಪಾಲಿಕೆಗೆ ಇದು ಸಕಾಲ. ಆಡಳಿತದ ಉನ್ನತಮಟ್ಟದಲ್ಲಿ ಶಿಕ್ಷಣಕ್ಕೆ . ಆದ್ಯತೆ ನೀಡಬೇಕಾಗಿದೆ. ನೆನೆಗುದಿಗೆ ಬಿದ್ದಿರುವ ಶಿಕ್ಷಕರ ನೇಮಕಾತಿ, ಸೂಕ್ತ ಕಲಿಕಾ ವಾತಾವರಣದ ನಿರ್ಮಾಣ, ಸಂಪನ್ಮೂಲಗಳ ಲಭ್ಯತೆ ಮತ್ತು ಬಳಕೆ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯೊಂದಿಗೆ ಸಹಯೋಗವನ್ನು ಏರ್ಪಡಿಸಬೇಕಾಗಿದೆ.

# ಬಿಬಿಎಮ್‌ಪಿ ಶಾಲೆಗಳು

## ಕುಸಿದುಬಿದ್ದ ವ್ಯವಸ್ಥೆಯನ್ನು ಸರಿಪಡಿಸಲು ಸಕಾಲ

2016–17ರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಂದರೆ, ಬಿಬಿಎಮ್‌ಪಿಯ ಶಾಲೆ ಹಾಗೂ ಪದವಿಪೂರ್ವ ಕಾಲೇಜುಗಳಲ್ಲಿ ಎಸ್‌ಎಸ್‌ಎಲ್‌ಸಿ ಮತ್ತು ಪಿಯುಸಿ ಫಲಿತಾಂಶಗಳಲ್ಲಿ ತೀವ್ರಕುಸಿತವು ಕಂಡುಬಂದಿತು. ಈ ಹಿನ್ನೆಲೆಯಲ್ಲಿ, ಶಿಕ್ಷಣಕ್ಕೆ ಸಂಬಂಧಿಸಿದ ಪಾಲಿಕೆಯ ವಿಶೇಷ ಜಂಟಿ ಆಯುಕ್ತರು ಪತ್ರಿಕೆಯಲ್ಲಿ ನೀಡಿದ ಆತುರದ ಹೇಳಿಕೆಯನ್ನು ಎಲ್ಲರೂ ಗಮನಿಸಿಯೇ ಇರುತ್ತಾರೆ. ಎಸ್‌ಎಸ್‌ಎಲ್‌ಸಿ ಮತ್ತು ಪಿಯುಸಿ ಪರೀಕ್ಷೆಗಳಲ್ಲಿ ಶೇಕಡಾವಾರು ತೇರ್ಗಡೆ ಮಟ್ಟವನ್ನು ಸುಧಾರಿಸಲು ವಿಫಲರಾಗಿದ್ದಕ್ಕೆ ಶಿಕ್ಷಕರು ಮತ್ತು ವಿಷಯ ತಪಾಸಣಾಧಿಕಾರಿಗಳ ಇನ್‌ಕ್ರಿಮೆಂಟ್‌ನಲ್ಲಿ ಕಡಿತ ಹಾಗೂ ಅಮಾನತುಗಳಂತಹ ದಂಡನಾ ಕ್ರಮಗಳನ್ನು ಕೈಗೊಳ್ಳುವುದರ ಕುರಿತು ಈ ಹೇಳಿಕೆಯು ಪ್ರಸ್ತಾಪಿಸಿತು. ಪಾಲಿಕೆಯ ಮೂವತ್ಮೂರು ಪ್ರೌಢಶಾಲೆಗಳಲ್ಲಿ 2015–16ರಲ್ಲಿ ಎಸ್‌ಎಸ್‌ಎಲ್‌ಸಿ ಪರೀಕ್ಷೆಗಳಲ್ಲಿನ ಒಟ್ಟಾರೆ ಸರಾಸರಿ ಶೇಕಡಾವಾರು ತೇರ್ಗಡೆ ಮಟ್ಟವು ಶೇ. 57ರಷ್ಟಿತ್ತು. ಇದು ಒಟ್ಟಾರೆ ಶೇ. 35 ಅಂಕಗಳನ್ನು ಪಡೆದ ವಿದ್ಯಾರ್ಥಿಗಳನ್ನಷ್ಟೇ ಸೂಚಿಸುತ್ತದೆ. ಅದು ಈ ವರ್ಷ ಸುಮಾರು ಶೇ. 40ಕ್ಕೆ ಇಳಿದಿದೆ. ಅದೇ ಅವಧಿಯಲ್ಲಿ ಪಿಯುಸಿಯ ಶೇಕಡಾವಾರು ತೇರ್ಗಡೆ ಮಟ್ಟವು ಶೇ. 61ರಿಂದ ಶೇ. 57ಕ್ಕೆ ಇಳಿದಿದೆ.

ಇಂತಹ ವೇಳೆಯಲ್ಲಿ, ಸಂಬಂಧಪಟ್ಟ ಅಧಿಕಾರಿಗಳು ನಿಜವಾದ ಸಮಸ್ಯೆಗಳನ್ನು ಗುರುತಿಸಿ ನೇರವಾಗಿ ಅವುಗಳ ಪರಿಹಾರಕ್ಕಾಗಿ ಕ್ರಮ ಕೈಗೊಳ್ಳಬೇಕೆಂದು ನಿರೀಕ್ಷಿಸಲಾಗುತ್ತದೆ. ಆದರೆ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವ ಉದ್ದೇಶದಿಂದ ಶಿಕ್ಷಕರ ವಿರುದ್ಧ ತೆಗೆದುಕೊಳ್ಳಬೇಕೆಂದಿರುವ ಇಂತಹ ನಿರಂಕುಶ ಧೋರಣೆಯ ದಂಡನಾ ಕ್ರಮಗಳು ಅಪೇಕ್ಷಿತ ಫಲಗಳನ್ನು ನೀಡಲಾರವು. ಬದಲಾಗಿ ಅವು ಖಂಡಿತವಾಗಿಯೂ ಶಿಕ್ಷಕರು ಮತ್ತು ಇತರ ಶೈಕ್ಷಣಿಕ ಸಿಬ್ಬಂದಿಗಳಲ್ಲಿ ಈಗಾಗಲೇ ಇರುವ ಅಭದ್ರತೆ ಹಾಗೂ ಅಸಂತೃಪ್ತಿಯ ಭಾವನೆಗಳನ್ನು ಇನ್ನಷ್ಟು ಹೆಚ್ಚಿಸುತ್ತವೆ. ವ್ಯವಸ್ಥೆಯ ನೈತಿಕ ಸ್ಥೈರ್ಯಕ್ಕೆ, ಸರಿಪಡಿಸಲಾಗದಂತಹ ದೀರ್ಘಕಾಲೀನ ಹಾನಿಗಳನ್ನು ಉಂಟುಮಾಡುತ್ತದೆ.

ಪಾಲಿಕೆಯು ನಡೆಸುತ್ತಿರುವ ಶಿಕ್ಷಣ ವ್ಯವಸ್ಥೆಯಲ್ಲಿನ ಕೆಲವು ಪ್ರಸಕ್ತ ವಾಸ್ತವಿಕತೆಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸೋಣ. ಇವು ಅಲ್ಲಿ ಆಳವಾಗಿ ಬೇರೂರಿರುವ ಒಳ ಬೇನೆಗಳ ಪ್ರತೀಕವಾಗಿವೆ.

ಬಹಳ ವರ್ಷಗಳಿಂದ ಪಾಲಿಕೆಯು ತನ್ನ ಶಾಲೆ ಮತ್ತು ಪದವಿಪೂರ್ವ ಕಾಲೇಜುಗಳಿಗೆ ಪೂರ್ಣಾವಧಿ ಖಾಯಂ ಶಿಕ್ಷಕರನ್ನು ನೇಮಕ ಮಾಡಿಕೊಳ್ಳುವುದನ್ನು ನಿಲ್ಲಿಸಿದೆ. ಸುಮಾರು ಇಪ್ಪತ್ತು ಅಥವಾ ಅದಕ್ಕೂ ಹೆಚ್ಚು ವರ್ಷಗಳಿಂದ ಅಧಿಕಾರಿಗಳು, ಪ್ರಧಾನ ವಿಷಯಗಳಾದ ವಿಜ್ಞಾನ, ಗಣಿತ ಹಾಗೂ ಸಮಾಜ ವಿಜ್ಞಾನಗಳನ್ನು ಪಾಠ ಮಾಡಲೂ ಕೂಡ ಹೊರಗುತ್ತಿಗೆ ಸಂಸ್ಥೆಗಳ ಮೂಲಕ ಗುತ್ತಿಗೆ ಆಧಾರದ ಮೇಲೆ ಶಿಕ್ಷಕರನ್ನು ನೇಮಕ ಮಾಡಿಕೊಳ್ಳುವಂತಹ ತಿರೋಗಾಮಿ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ. ಈ ಗುತ್ತಿಗೆ ಆಧಾರಿತ ಶಿಕ್ಷಕರು ತಾಂತ್ರಿಕವಾಗಿ ಅಗತ್ಯ ಶೈಕ್ಷಣಿಕ ಅರ್ಹತೆಗಳನ್ನು ಹೊಂದಿದ್ದರೂ ಒಳಗಿನವರು ಹೇಳುವ ಪ್ರಕಾರ, ಬಹಳಷ್ಟು ಶಿಕ್ಷಕರು ಸಮರ್ಪಕವಾದ ಯಾವುದೇ ಆಯ್ಕೆ ಪ್ರಕ್ರಿಯೆಗಳಿಗೊಳಪಡದೆ ಸಂಶಯಾಸ್ಪದ ರೀತಿಯಲ್ಲಿ ಪ್ರವೇಶ ಪಡೆಯುತ್ತಾರೆ. ಅವರಲ್ಲಿ ಹಲವರು ಸ್ಥಳೀಯ ಪಾಲಿಕೆ ಕಾರ್ಪೊರೇಟರ್ ಅಥವಾ ಶಾಸಕರಿಗೆ ಸಿಷ್ಯರಾಗಿದ್ದು ಪ್ರವೇಶ ದೊರಕಿಸಿಕೊಳ್ಳಲು ಅವರ ಆಶ್ರಯವನ್ನು ಪಡೆದಿರುತ್ತಾರೆ. ಪೌರಸಂಸ್ಥೆಯು ಕೆಲವು ನಿವೃತ್ತ ಶಿಕ್ಷಕರನ್ನು ಬೋಧನೆಗೆ ಮರಳಿ ತಂದಿದ್ದು ಕೂಡ ಈ ಮಾರ್ಗದ ಮೂಲಕವೇ. ಅವರಲ್ಲಿ ಎಲ್ಲರೂ ಸಮರ್ಥರೇನಲ್ಲ ಅಥವಾ ಬದ್ಧತೆಯುಳ್ಳವರಲ್ಲ ಎನ್ನುವುದು ಸ್ಪಷ್ಟ. ಅದರ ಫಲವಾಗಿ, ಪಾಲಿಕೆಯ ಪ್ರೌಢಶಾಲೆಗಳಲ್ಲಿ ಬಂದು ಸೇರಿಕೊಂಡಿರುವ ಕಳಪೆ ಗುಣಮಟ್ಟದ ಬೋಧನಾ ಸಿಬ್ಬಂದಿಗಳ ಸಂಖ್ಯೆಯು ಶೇಕಡಾವಾರು ಅತಿ ಹೆಚ್ಚಿನದಾಗಿದೆ. ಇದರಿಂದ ಅತ್ಯಂತ ವಂಚಿತರಾದ ಮಕ್ಕಳಿಗೆ ಗುಣಮಟ್ಟದ ಶಿಕ್ಷಣವು ದೊರೆಯದಂತಾಗಿದೆ. ಈ ಒಂದೇ ಒಂದು ತಿರೋಗಾಮಿ ಹೆಜ್ಜೆಯು ಬೋಧಕ ಸಮುದಾಯದಲ್ಲಿ ಆಳವಾದ

ಅಂತರಗಳನ್ನು ಸೃಷ್ಟಿಸಿದೆ ಎಂದು ಮತ್ತೆ ಹೇಳುವ ಅಗತ್ಯವೇ ಇಲ್ಲ. ಇದರಿಂದಾಗಿ ಖಾಯಂ ಹಾಗೂ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ಶಿಕ್ಷಕರ ನಡುವಿನ ವೇತನದ ವ್ಯತ್ಯಾಸವು ಹೆಚ್ಚಿದ್ದು ಅದು ಸುಮಾರು 6:1 ಪ್ರಮಾಣದವರೆಗೂ ಇದೆ. ಇದು ಖಾಯಂ ನೇಮಕಾತಿಯನ್ನು ಪಡೆದುಕೊಳ್ಳುವುದಕ್ಕಾಗಿ ಕಾನೂನಿನ ಮಾರ್ಗವನ್ನು ಹಿಡಿಯಲು ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ಶಿಕ್ಷಕರು ಪ್ರತ್ಯೇಕ ಸಂಘವನ್ನು ರಚಿಸಿಕೊಳ್ಳುವಂತೆ ಮಾಡಿದೆ.

ಪಾಲಿಕೆಯ ಶಾಲೆಗಳಲ್ಲಿ ಕ್ರಿಯಾಶೀಲತೆಯು ಕಡಿಮೆಯಾಗುತ್ತಿರುವುದಕ್ಕೆ ಇರುವ ಇನ್ನೊಂದು ಮುಖ್ಯ ಕಾರಣವೆಂದರೆ, ಶಾಲೆಯ ಸಿಬ್ಬಂದಿವರ್ಗವು ಶೈಕ್ಷಣಿಕ ವರ್ಷದ ಆರಂಭದಲ್ಲಿ ತಮ್ಮ ಶಾಲೆಗಳಿಗೆ ಹೊಸ ಮಕ್ಕಳನ್ನು ದಾಖಲಿಸಿಕೊಳ್ಳಲು ಸಂಯೋಜಿತ ಮಾದರಿಯಲ್ಲಿ ಪ್ರಯತ್ನ ಮಾಡದಿರುವುದು. ಹಾಗೊಮ್ಮೆ ಮಾಡಿದರೂ ಅದು ಯಾವುದೋ ಅಧಿಕೃತ ಸುತ್ತೋಲೆಯ ನಿರ್ದೇಶನವನ್ನು ಪಾಲಿಸುವುದಕ್ಕಾಗಿ ಮಾಡಿದ ತೋರಿಕೆಯ ಪ್ರಯತ್ನವಾಗಿರುತ್ತದೆ ಅಷ್ಟೇ. ನಗರದ ಮಧ್ಯಭಾಗದಲ್ಲಿರುವ ಹಲವಾರು ಶಾಲೆಗಳಿಗೆ ಅಲ್ಲಿರುವ ಅನೇಕಾನೇಕ ಅನುದಾನಿತ ಮತ್ತು ಅನುದಾನರಹಿತ ಖಾಸಗಿ ಶಾಲೆಗಳ ತೀವ್ರ ಸ್ಪರ್ಧೆಯಿರುವುದು ವಾಸ್ತವ. ಆ ಶಾಲೆಗಳು ಸಹಜವಾಗಿಯೇ ಪೋಷಕರ ಮೊದಲ ಆಯ್ಕೆಗಳಾಗುತ್ತವೆ. ಆದ್ದರಿಂದ ಪಾಲಿಕೆಯ ಶಾಲೆಗಳಲ್ಲಿ ಪ್ರತೀ ವರ್ಷ ಕೇವಲ ಶಾಲೆಯನ್ನು ನಡೆಸಿಕೊಂಡು ಹೋಗಲೆಂದು, ಬೇರೆ ರಾಜ್ಯಗಳಿಂದ ವಲಸೆ ಬರುವ ಕಾರ್ಮಿಕರ ಏಳೆಂಟು ಮಕ್ಕಳನ್ನು ದಾಖಲು ಮಾಡಿಕೊಳ್ಳುತ್ತಾರೆ ಅಷ್ಟೇ. ‘ಉತ್ತಮ’ವೆಂದು ಕರೆಯಿಸಿಕೊಳ್ಳುವ ಖಾಸಗಿ ಶಾಲೆಗಳಲ್ಲಿ ದಾಖಲಾತಿ ಪಡೆಯುವ ಸಾಮರ್ಥ್ಯ ಈ ಮಕ್ಕಳಿಗಿರುವುದಿಲ್ಲ. ತಮ್ಮ ಸ್ವಂತ ರಾಜ್ಯಗಳಿಗೆ ಮರಳುವ ಮೊದಲು ಮೂರ್ನಾಲ್ಕು ತಿಂಗಳು ಮಾತ್ರ ಅವರು ಇಲ್ಲಿ ಉಳಿಯುವ ಸಾಧ್ಯತೆಯೇ ಹೆಚ್ಚು. ನಿಜವಾದ ಸಮಸ್ಯೆಯೆಂದರೆ, ಮಕ್ಕಳಿಗೆ ಅನುಕೂಲಕರವಾದ ಕಲಿಕೆಯ ವಾತಾವರಣದ ಕೊರತೆ.

ಶಾಲೆಗಳಲ್ಲಿ ದಾಖಲಾತಿಯ ಸಂಖ್ಯೆಯು ಕಡಿಮೆಯಾಗುವುದಕ್ಕೆ ಹಲವಾರು ಕಾರಣಗಳಿವೆ. ಸಂಪನ್ಮೂಲಗಳ ಅಸಮರ್ಪಕ ನಿಯೋಜನೆ ಹಾಗೂ ಬಳಕೆ, ಅಸಂತುಲಿತ ವಿದ್ಯಾರ್ಥಿ ಶಿಕ್ಷಕ ಅನುಪಾತ, ಬೋಧನೆ ಮತ್ತು ಕಲಿಕೆಗೆ ಅನುಕೂಲಕರವಾದ ವಾತಾವರಣದ ಕೊರತೆ ಇತ್ಯಾದಿಗಳು ಅಂತಹ ಪರಿಚಿತ ಸಮಸ್ಯೆಗಳಲ್ಲಿ ಕೆಲವು. ಪಾಲಿಕೆ ಶಾಲೆಗಳ ಸಂದರ್ಭದಲ್ಲಿಯೂ ಈ ಸಮಸ್ಯೆಗಳು ಸಹಜವಾಗಿ ಕಂಡುಬರುತ್ತವೆ. ಈ ಪ್ರವೃತ್ತಿಯು ಮುಂದೆ ಸ್ವತಃ ಇನ್ನಷ್ಟು ವಿಷವರ್ತುಲಗಳಿಗೆ ಕಾರಣವಾಗುತ್ತದೆ. ಉದಾಹರಣೆಗೆ, ಕೆಲವು ಶಿಕ್ಷಕರು ನಗರದ ಅನುಕೂಲಕರ ಸ್ಥಳಗಳಿಗೆ ನಿಯೋಜನೆ ಪಡೆಯಲು ಎಲ್ಲಾ ತರಹದ

ಪ್ರಭಾವಗಳನ್ನು ಬಳಸುತ್ತಾರೆ. ಆ ಮೂಲಕ ತಮ್ಮ ಶಿಕ್ಷಣೇತರ ಚಟುವಟಿಕೆಗಳನ್ನು ತಣ್ಣಗೆ ನಡೆಸಿಕೊಂಡು ಹೋಗಲು ಸಾಕಷ್ಟು ಬಿಡುವಿನ ವೇಳೆಯನ್ನು ದೊರಕಿಸಿಕೊಳ್ಳುತ್ತಾರೆ. ಪಾಲಿಕೆಯು ತನ್ನ ಶಾಲೆಗಳಲ್ಲಿ ವರ್ಷದಿಂದ ವರ್ಷಕ್ಕೆ ದಾಖಲಾತಿಯು ನಿರಂತರವಾಗಿ ಇಳಿಮುಖವಾಗುತ್ತಿರುವ ಬಿಕ್ಕಟ್ಟಿನ ಸಂಗತಿಯತ್ತ ಗಮನ ಹರಿಸುವಲ್ಲಿ ಜಡಮನೋಭಾವವನ್ನು ತೋರಿದೆ.

ಬೆಂಗಳೂರಿನ ಹೊರಭಾಗದಲ್ಲಿರುವ ಕೆಲವು ಶಾಲೆಗಳು ದಾಖಲಾತಿ ಮತ್ತು ಶೈಕ್ಷಣಿಕ ಮಾನದಂಡಗಳೆರಡಕ್ಕೂ ಸಂಬಂಧಿಸಿದಂತೆ ಸಾಕಷ್ಟು ಚೆನ್ನಾಗಿಯೇ ಕಾರ್ಯನಿರ್ವಹಿಸುತ್ತಿವೆ ಎಂಬುದು ಕುತೂಹಲಕರ ಸಂಗತಿ. ಆ ಪ್ರದೇಶಗಳ ಸುತ್ತಮುತ್ತ ಖಾಸಗಿ ಶಾಲೆಗಳಿಲ್ಲದಿರುವುದರಿಂದ ದಾಖಲಾತಿಯ ಪ್ರಮಾಣದಲ್ಲಿ ಹೆಚ್ಚಳವಿರಬಹುದು. ಇದರಿಂದಾಗಿ ಶಿಕ್ಷಕರು ಅವರ ಅಗತ್ಯಗಳಿಗೆ ಗಮನ ನೀಡಬೇಕಾಗುತ್ತದೆ. ಆದರೆ, ಇದು ಸಾಮಾನ್ಯವಾಗಿ ಕಂಡುಬರುವ ವಾಡಿಕೆಯ ಸ್ಥಿತಿಗೆ ಹೊರತಾಗಿದೆ.

ಪಾಲಿಕೆಯು ತನ್ನ ಶಾಲೆಗಳನ್ನು ಅತ್ಯುತ್ತಮವಾಗಿ ನಿರ್ವಹಿಸುವ ಕಾರ್ಯತಂತ್ರದೆಡೆಗೆ ಮರುನೋಟ ಹರಿಸಲು ಇದು ಸೂಕ್ತ ಸಮಯ. ಇದರಿಂದಾಗಿ ಅವರು ಕಳೆದ ಕೆಲವು ವರ್ಷಗಳಿಂದ ನಿರಂತರವಾಗಿ ಕಳಪೆ ದಾಖಲಾತಿಯನ್ನು ಹೊಂದುತ್ತ ಬಂದಿರುವ ಕೆಲವು ಶಾಲೆಗಳನ್ನು ಮುಚ್ಚಬೇಕಾಗಬಹುದು, ಅವುಗಳನ್ನು ಹತ್ತಿರದ ಶಾಲೆಗಳೊಂದಿಗೆ ವಿಲೀನಗೊಳಿಸಬೇಕಾಗಬಹುದು, ಅವುಗಳಲ್ಲಿನ ಬೋಧನಾವರ್ಗ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ಪ್ರಶಸ್ತ ರೀತಿಯಲ್ಲಿ ಮರುನಿಯೋಜನೆ ಮಾಡಬಹುದು. ಈ ರೀತಿಯಾಗಿ ಮಾನವ, ಸಾಮಗ್ರಿ ಮತ್ತು ಮೂಲಭೂತ ಸಂಪನ್ಮೂಲಗಳು ವ್ಯರ್ಥವಾಗುವುದನ್ನು ಕಡಿಮೆ ಮಾಡಬಹುದು. ಏನೇ ಇರಲಿ, ಬಹಳಷ್ಟು ಶಾಲೆಗಳಲ್ಲಿ ನಿರ್ದಿಷ್ಟ ವಿಷಯಗಳಿಗೆ ಸಂಬಂಧಿಸಿದಂತೆ ಅರ್ಹ ಶಿಕ್ಷಕರ ಕೊರತೆಯಿರುವುದಂತೂ ನಿಜ. ಈ ಬಗೆಯಲ್ಲಿ ಸಂಪನ್ಮೂಲಗಳನ್ನು ಸಮರ್ಪಕವಾಗಿ ಮರುಹೊಂದಿಸುವುದರಿಂದ ಅತ್ಯಂತ ಮುಖ್ಯವಾದ ಸಂಪನ್ಮೂಲ ಬಿಕ್ಕಟ್ಟುಗಳಿಗೆ ಕೆಲಮಟ್ಟಿಗೆ ಗಮನ ಹರಿಸಿದಂತಾಗುತ್ತದೆ.

ಪಾಲಿಕೆಯ ಶಾಲೆಗಳ ಶಿಕ್ಷಣಸಂಬಂಧಿ ಆಡಳಿತದಲ್ಲಿ ಮೂಲಮಾದರಿಯೇ ಬದಲಾವಣೆಗೊಳಪಡಬೇಕಾದ ಅಗತ್ಯವಿದೆ. ಅದಕ್ಕೆ ಇರುವ ಮೂರನೆಯ ಮುಖ್ಯ ಕಾರಣವೆಂದರೆ, ಪಾಲಿಕೆಯ ಪ್ರೌಢಶಾಲೆಗಳ ಮತ್ತು ಪದವಿಪೂರ್ವ ಕಾಲೇಜುಗಳ ಶಿಕ್ಷಕರಿಗೆ ವೃತ್ತಿಪರ ಅಭಿವೃದ್ಧಿಯನ್ನು ಹೊಂದಲು ನಿಜವಾದ ಅವಕಾಶಗಳ ಕೊರತೆ. ಇದು ಅವರ ಆತ್ಮಗೌರವವನ್ನು ಕುಂಠಿತಗೊಳಿಸುತ್ತಿದೆ. ಅವರಲ್ಲಿ ಕೆಲವರನ್ನು ಪ್ರತಿ ವರ್ಷ ಶಿಕ್ಷಣ ಇಲಾಖೆಯು ನಡೆಸುವ ಕೆಲವು ತರಬೇತಿ ಕಾರ್ಯಕ್ರಮಗಳಿಗೆ ಆರಿಸಿ, ಕಳುಹಿಸಲಾಗುತ್ತದೆ. ಆದರೂ ಅವುಗಳಲ್ಲಿ

ಭಾಗವಹಿಸುವ ಹೆಚ್ಚಿನ ಪ್ರಮಾಣದ ಶಿಕ್ಷಕರು ಶಿಕ್ಷಣ ಇಲಾಖೆಯಿಂದಲೇ ಬಂದವರಾಗಿರುತ್ತಾರೆ. ಆದ್ದರಿಂದ ಪಾಲಿಕೆಯ ಶಾಲೆಗಳ ಶಿಕ್ಷಕರು ಆ ಸಾಮರ್ಥ್ಯಾಭಿವೃದ್ಧಿ ಪ್ರಯತ್ನಗಳೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವುದೇ ಇಲ್ಲ. ಅದರಿಂದಾಗಿ, ತಮಗೆ ಹೆಚ್ಚಿನ ಗಮನವನ್ನು ನೀಡುತ್ತಿಲ್ಲ ಎಂಬ ಭಾವನೆಯನ್ನು ಅವರು ಹೊಂದಿರುತ್ತಾರೆ. ಜೊತೆಗೆ, ಅಂತಹ ತರಬೇತಿ ಕಾರ್ಯಾಗಾರ ಮತ್ತು ಸಂವಾದ ಪ್ರಕ್ರಿಯೆಗಳಲ್ಲಿ ಸಕ್ರಿಯ ಪಾತ್ರವನ್ನು ವಹಿಸುವುದೇ ಇಲ್ಲ. ಪಾಲಿಕೆಯು ಶಿಕ್ಷಣ ಇಲಾಖೆಯ ಅನುಷ್ಠಾನ ಸಂಸ್ಥೆಗಳಾದ ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ (ಆರ್‌ಎಮ್‌ಎಸ್‌ಎ) ಮತ್ತು ಡಿಎಸ್‌ಇಆರ್‌ಟಿಗಳೊಂದಿಗೆ ಈ ಅಂಶವನ್ನು ಆದ್ಯತೆಯ ಮೇರೆಗೆ ಎತ್ತಿಕೊಳ್ಳಬೇಕು. ಅಲ್ಲದೆ, ತನ್ನ ಶಿಕ್ಷಕರು ಪ್ರತ್ಯೇಕಿತ ಭಾವನೆಯಿಂದ ನರಳದಂತೆ ನೋಡಿಕೊಳ್ಳಬೇಕು. ಎಲ್ಲದಕ್ಕೂ ಮುಖ್ಯವಾಗಿ, ಪಾಲಿಕೆಯ ಶಿಕ್ಷಕರಿಗೆ ಒಂದೆಡೆ ಸೇರಿ ಪರಸ್ಪರ ಅನುಭವಗಳನ್ನು ಹಂಚಿಕೊಳ್ಳಲು, ಕಲಿಯಲು ಬೇರೆ ಯಾವ ಸಾಮಾನ್ಯ ವೇದಿಕೆಯೂ ಇಲ್ಲ. ಅದೇ ಶಿಕ್ಷಣ ಇಲಾಖೆಯಲ್ಲಿನ ಅವರ ಸಹೋದ್ಯೋಗಿಗಳಾದರೆ, ವಿಷಯ-ಶಿಕ್ಷಕರ ವೇದಿಕೆ ಮತ್ತು ಇನ್ನಿತರ ಅಂತಹ ವೇದಿಕೆಗಳಲ್ಲಿ ಭಾಗವಹಿಸುತ್ತಾರೆ. ಸಾಧ್ಯವಾದಷ್ಟೂ ವಿವಿಧ ತರಹದ ಶಾಲೆಗಳು ಹಾಗೂ ವಿವಿಧ ಸರ್ಕಾರಿ ಇಲಾಖೆಗಳ ಆಡಳಿತಕ್ಕೊಳಪಡುವ ಶಿಕ್ಷಣ ಸಂಸ್ಥೆಗಳನ್ನು ಸಂಯೋಜಿತಗೊಳಿಸಬೇಕು. ಏಕೆಂದರೆ, ಅವೆಲ್ಲವೂ ರಾಜ್ಯ ಸರ್ಕಾರದ ನಿಯಂತ್ರಣದಲ್ಲಿಯೇ ಬರುತ್ತವೆ. ಅವರು ಯಾವ ತರಹದ ಶಾಲೆಗಳಿಗೆ ಸೇರಿದವರು ಎಂಬುದನ್ನು ಪರಿಗಣಿಸದೆ ನಿರಂತರವಾದ ವೃತ್ತಿಪರ ಅಭಿವೃದ್ಧಿ ಅವಕಾಶಗಳು ಎಲ್ಲಾ ಶಿಕ್ಷಕರಿಗೂ ಸಮಾನವಾಗಿ ಲಭ್ಯವಾಗುವಂತೆ ನೋಡಿಕೊಳ್ಳಬೇಕು.

ಶೈಕ್ಷಣಿಕ ಸುಧಾರಣೆಗಳನ್ನು ತರಬೇಕಾಗಿರುವುದಕ್ಕೆ ಇರುವ ನಾಲ್ಕನೆಯ ಮುಖ್ಯ ಕಾರಣವೆಂದರೆ, ಪಾಲಿಕೆಯ ಸಾಂಸ್ಥಿಕ ಸಂರಚನೆಯ ಸ್ವರೂಪ ಹಾಗೂ ಅದರ ಆಡಳಿತದ ಉನ್ನತ ಮಟ್ಟದಲ್ಲಿ ಶಿಕ್ಷಣಕ್ಕೆ ಕಡಿಮೆ ಆದ್ಯತೆಯನ್ನು ನೀಡಿರುವುದು. ಒಟ್ಟಾರೆ ಪಾಲಿಕೆಯ ವ್ಯವಹಾರಗಳನ್ನು ನಿರ್ವಹಿಸುವ ಹೊಣೆ ಆಯುಕ್ತರದು. ಆದರೂ ಶಿಕ್ಷಣದ ಸಂಗತಿಗಳನ್ನು ಆಯುಕ್ತರ ಮಟ್ಟದ, ಭಾರತೀಯ ಮಾಹಿತಿ ಸೇವಾ ಶ್ರೇಣಿ(ಐಐಎಸ್)ಯ ವಿಶೇಷ ಅಧಿಕಾರಿಯೊಬ್ಬರಿಗೆ ವಹಿಸಲಾಗಿದೆ. ಅವರು ಆಸ್ತಿ ಸಂಬಂಧಿತ ವಹಿವಾಟು, ತೋಟಗಾರಿಕೆ ಹಾಗೂ ಕಲ್ಯಾಣ ಯೋಜನೆಗಳಂತಹ ಇನ್ನಿತರ ಸಂಗತಿಗಳನ್ನೂ ನೋಡಿಕೊಳ್ಳುತ್ತಾರೆ. ಅಲ್ಲಿ ಉಪ ಆಯುಕ್ತ- ಅಭಿವೃದ್ಧಿ ಹಾಗೂ ಉಪನಿರ್ದೇಶಕ – ಶಿಕ್ಷಣ ಇವರೂ ಇದ್ದಾರೆ. ಅದೂ ಅಲ್ಲದೆ, ಪ್ರತಿಯೊಂದು ವಲಯಕ್ಕೂ ಇರುವ ಶಿಕ್ಷಣ ಅಧಿಕಾರಿಗಳು/ ಸಹಾಯಕ ಶಿಕ್ಷಣ ಅಧಿಕಾರಿಗಳು ಮತ್ತು ವಿಷಯ ತಪಾಸಣಾಧಿಕಾರಿಗಳು (ವಿಶೇಷವಾಗಿ

ಪ್ರತಿ ವಿಷಯಕ್ಕೂ ಶಿಕ್ಷಣ ಇಲಾಖೆಯಲ್ಲಿನ ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಗಳ ಮಾದರಿಯಲ್ಲಿಯೇ ನಿರ್ದಿಷ್ಟ, ತಾತ್ಕಾಲಿಕ ಸಮಯದ ಮಟ್ಟಿಗೆ ಈ ಹೊಣೆಯನ್ನು ವಿಷಯ ಶಿಕ್ಷಕರಿಗೆ ವಹಿಸಲಾಗುತ್ತದೆ. –ಲೇ.), ವಿವಿಧ ಶಾಲಾ–ಕಾಲೇಜುಗಳ ಪ್ರಾಂಶುಪಾಲರು/ ಮುಖ್ಯೋಪಾಧ್ಯಾಯರಿಗೆ ಬೆಂಬಲ ನೀಡುತ್ತಾರೆ. ಆದರೆ, ಇಡೀ ಶಿಕ್ಷಣ ವಿಭಾಗದಲ್ಲಿ ಕಾಣೆಯಾದ ಒಂದೇ ಪ್ರಮುಖ ಕೊಂಡಿಯೆಂದರೆ, ಗಮನವು ಶೈಕ್ಷಣಿಕ ಸಂಗತಿಗಳ ಮೇಲೆ ಕೇಂದ್ರೀಕೃತವಾಗಿಲ್ಲದಿರುವುದು. ಯಾವುದೇ ತರಹದ ಪರಿಣತಿಯ ಮಾತಂತೂ ದೂರವೇ ಉಳಿದಿದೆ.

ಪಾಲಿಕೆಯು ಸುಮಾರು ಎಂಬತ್ತು ಪೂರ್ವಪ್ರಾಥಮಿಕ ಶಾಲೆಗಳನ್ನು ಕೂಡ ನಡೆಸುತ್ತದೆ. ಅವುಗಳಲ್ಲಿ ಸುಮಾರು ಅರವತ್ತು ಶಾಲೆಗಳಲ್ಲಿ (ಹನ್ನೆರಡು ಪ್ರಾಥಮಿಕ, ಮೂವತ್ಮೂರು ಪ್ರೌಢ ಹಾಗೂ ಹನ್ನೆರಡು ಪದವಿಪೂರ್ವ ಕಾಲೇಜುಗಳು) ಐನೂರಕ್ಕೂ ಹೆಚ್ಚು ಶಿಕ್ಷಕ ಹುದ್ದೆಗಳು ದಶಕಗಳಿಂದ ಖಾಲಿಬಿದ್ದಿರುವ ಸಂಗತಿಯನ್ನು ವಿವರಿಸುವುದಾದರೂ ಹೇಗೆ? ಮುಖ್ಯೋಪಾಧ್ಯಾಯರು ಹಾಗೂ ಪ್ರಾಂಶುಪಾಲರಿಗೆ ಎರಡು ಶಾಲೆಗಳನ್ನು ಒಟ್ಟೊಟ್ಟಿಗೇ ನೋಡಿಕೊಳ್ಳಲು ಹೇಳಿರುವುದು, ವರುಷಗಳಿಂದ ಕೆಲವು ಶಾಲೆಗಳಲ್ಲಿ ದಾಖಲಾತಿಯೇ ಇಲ್ಲದಿರುವುದು, ಪ್ರಾಂಶುಪಾಲರು ನಿವೃತ್ತರಾದರೂ ತಿಂಗಳುಗಳ ಕಾಲ ಅವರ ಹೊಣೆಯನ್ನು ಬೇರೆಯವರಿಗೆ ವಹಿಸದೇ ಇರುವುದು, ಮಕ್ಕಳು ಇಲ್ಲದ ಶಾಲೆಗಳಲ್ಲಿ ವರುಷಗಳ ಕಾಲ ಸಂಪನ್ಮೂಲಗಳು ಬಳಕೆಯಾಗದೇ ಬಿದ್ದಿರುವುದು ಮುಂತಾದ ಉದಾಹರಣೆಗಳು ಸಾಕಷ್ಟಿವೆ. ಇದು, ಪೌರಸಂಸ್ಥೆಯು ಶಿಕ್ಷಣ ಕ್ಷೇತ್ರದಲ್ಲಿ ಸುಧಾರಣೆಗಳನ್ನು ತರುವ ವಿಷಯದಲ್ಲಿ ಆಸಕ್ತಿಯನ್ನು ಹೊಂದಿಲ್ಲ, ಸಾಮರ್ಥ್ಯವನ್ನೂ ಹೊಂದಿಲ್ಲ. ಆದರೂ ಮೂಲಭೂತ ಅಗತ್ಯಗಳತ್ತ ಗಮನವನ್ನು ಹರಿಸದೇ ಹೇಗಾದರೂ ಸಂಸ್ಥೆಯನ್ನು ನಡೆಸುವ ಇಚ್ಛೆಯನ್ನು ಹೊಂದಿದೆ ಎಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಸಂವಿಧಾನದ 12ನೆಯ ಅನುಚ್ಛೇದವು, 1992ರಲ್ಲಿ ತರಲಾದ 74 ನೆಯ ತಿದ್ದುಪಡಿ ಕಾಯ್ದೆಯ ಮೂಲಕ ಪೌರಸಂಸ್ಥೆಯ ಹದಿನೆಂಟು ಕಾರ್ಯಗಳಲ್ಲಿ ಶಿಕ್ಷಣದ ಪ್ರಚಾರವೂ ಒಂದು ಎಂಬುದಾಗಿ ಪಟ್ಟಿ ಮಾಡಿದೆ. ಇದು ಶಿಕ್ಷಣವನ್ನು ಕುರಿತಾದ ಆದರ ತೀವ್ರ ಅಸಡ್ಡೆ, ನಿರಾಸಕ್ತಿಗಳನ್ನು ತೋರಿಸುತ್ತದೆ.

ಆದರೆ ಪಾಲಿಕೆ ಆಡಳಿತವು ಒಂದು ಕೋಟಿ ಹತ್ತು ಲಕ್ಷಕ್ಕೂ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ, ಏಳು ನೂರಾ ಐವತ್ತು ಚದುರ ಕಿಲೋಮೀಟರ್‌ಗಳಿಗಿಂತಲೂ ಹೆಚ್ಚಿನ ವಿಸ್ತೀರ್ಣವನ್ನು ಹೊಂದಿರುವ ಬೆಂಗಳೂರು ಮಹಾನಗರದ ಪ್ರದೇಶವನ್ನು ಪರಿಣಾಮಕಾರಿಯಾಗಿ ನಿರ್ವಹಿಸಲಾಗದೇ ಈಗಾಗಲೇ ಕುಸಿದು ಬೀಳುತ್ತಿದೆ. ನಗರಾಡಳಿತವನ್ನು ನಿರ್ವಹಿಸುತ್ತಿರುವ ಪೌರಸಂಸ್ಥೆಗಳಲ್ಲಿ

ಇದು ಇಡೀ ದೇಶದಲ್ಲಿಯೇ ನಾಲ್ಕನೆಯ ಅತಿ ದೊಡ್ಡ ಸಂಸ್ಥೆ. ರಸ್ತೆ ಮತ್ತು ಸಾರಿಗೆಸಂಬಂಧಿ ಮೂಲಭೂತ ಸೌಕರ್ಯಗಳ ದಕ್ಷ ನಿರ್ವಹಣೆ, ವಲಯ ರಚನೆ (ಝೋನಿಂಗ್) ಮತ್ತು ಕಟ್ಟಡ ನಿಯಮಾವಳಿಗಳು, ಆರೋಗ್ಯ, ಸ್ವಚ್ಛತೆ, ಪರವಾನಗಿ ನೀಡುವುದು, ವ್ಯಾಪಾರ, ಸ್ವಚ್ಛ ಉಸಿರಾಟಕ್ಕೆ ಪೂರಕವಾದ ಸ್ಥಳಗಳ ನಿರ್ವಹಣೆ, ಜಲಮೂಲ, ಉದ್ಯಾನವನ ಹಾಗೂ ಗಿಡಮರಗಳು ಸೇರಿದಂತೆ ನಗರದ ಕ್ರಮಬದ್ಧ ಅಭಿವೃದ್ಧಿಯು ಇದರ ಆದ್ಯತೆಯ ಕಾರ್ಯಕ್ರಮವೇ ಆಗಿದೆ. ಜಲಮೂಲ, ಚರಂಡಿ ನಿರ್ವಹಣೆ, ರಸ್ತೆ, ಸಾರಿಗೆ, ಸಂಚಾರ ಹಾಗೂ ಮೂಲಭೂತ ಸೌಲಭ್ಯಗಳನ್ನು ಸಮರ್ಪಕವಾಗಿ ನಿಭಾಯಿಸದ ಕಾರಣಕ್ಕೆ ಇತ್ತೀಚಿನ ದಿನಗಳಲ್ಲಿ ಈ ನಾಗರಿಕ ಸಂಸ್ಥೆಯು ತೆರಿಗೆದಾರರಾದ ಜನತೆ, ಪ್ರಾದೇಶಿಕ ಮತ್ತು ರಾಷ್ಟ್ರೀಯ ಮಾಧ್ಯಮಗಳು, ಹಲವಾರು ನ್ಯಾಯಾಲಯಗಳು ಹಾಗೂ ತಜ್ಞರಿಂದ ತೀವ್ರ ಟೀಕೆಗೊಳಗಾಗಿದೆ.

ರಾಜ್ಯ ಸರ್ಕಾರವು ಪಾಲಿಕೆಯ ದೀರ್ಘಕಾಲೀನ ಪಾತ್ರದತ್ತ, ವಿಶೇಷವಾಗಿ ಶಿಕ್ಷಣದ ಕುರಿತಾದ ಅದರ ಪಾತ್ರದತ್ತ ಗಮನವನ್ನು ಹರಿಸಲು ಇದು ಸಕಾಲ. ಸದ್ಯಕ್ಕೆ ಪಾಲಿಕೆಯಿಂದ ನಿರ್ಲಕ್ಷ್ಯಕ್ಕೊಳಗಾಗುತ್ತಿರುವ ಶಿಕ್ಷಣಸಂಬಂಧಿ ವಿಚಾರಗಳಿಗೆ ಯೋಗ್ಯ ಮಹತ್ವವನ್ನು ನೀಡುವುದು ಒಟ್ಟಾರೆ ಎಲ್ಲರ ಹಿತದೃಷ್ಟಿಯಿಂದ ಒಳ್ಳೆಯದು. ಅದಕ್ಕಾಗಿ ಆದ್ಯತೆಯ ಮೇರೆಗೆ ಶಾಲಾಕಟ್ಟಡ ಹಾಗೂ ಆಟದ ಮೈದಾನಗಳೂ ಸೇರಿದಂತೆ ಸ್ಥಳೀಯ ಸಂಸ್ಥೆಯ ಆಡಳಿತಕ್ಕೊಳಪಡುವ ಶಾಲೆ, ಕಾಲೇಜುಗಳನ್ನು ನೇರವಾಗಿ ಶಿಕ್ಷಣ ಇಲಾಖೆಯ ಜೊತೆ ವಿಲೀನಗೊಳಿಸಬಹುದು. ಇದರಿಂದ ಈ ಶಾಲೆಗಳಲ್ಲಿ ಕನಿಷ್ಠ ಮೂಲಭೂತ ಗುಣಮಟ್ಟವನ್ನು ಪಾಲಿಸುವಂತೆ ಹಾಗೂ ಅಲ್ಲಿ ಸದ್ಯಕ್ಕೆ ಕಲಿಯುತ್ತಿರುವ ಹದಿನೈದು ಸಾವಿರ ಮಕ್ಕಳಿಗೆ ಇನ್ನು ಮುಂದಾದರೂ ಮಲತಾಯಿ ಧೋರಣೆಯನ್ನು ತೋರದಂತೆ ನೋಡಿಕೊಳ್ಳಬಹುದು.



ಬಿ ಫಸ್ಟ್, 09-06-2017

ನಿರಂತರವಾಗಿ ಬೆಳೆಯುತ್ತಲೇ ಇರುವ ಜಗತ್ತಿನ ಜ್ಞಾನಕ್ಕೆ ಇಂಗ್ಲಿಷ್ ನೇರ ಪ್ರವೇಶವನ್ನು ಒದಗಿಸುತ್ತದೆ. ಆದರೆ, ಭಾರತದ ಶಿಕ್ಷಣವ್ಯವಸ್ಥೆಯಲ್ಲಿ ಇಂಗ್ಲಿಷಿನ ಸ್ಥಾನಕ್ಕೆ ಅತಿಯಾದ ಒತ್ತು ನೀಡುವುದಾಗಲಿ, ಒಂದು ಭಾಷೆಯಾಗಿ ಇಂಗ್ಲಿಷ್ ಮೇಲಿರುವ ಹಿಡಿತವನ್ನು ಗುಣಮಟ್ಟಕ್ಕೆ ಸಮೀಕರಿಸುವುದಾಗಲಿ ಸಮಂಜಸವಲ್ಲ.

**– ಜೆ.ಪಿ.ನಾಯಕ್**

# 'ದೇಸಿ'ಯ ಉಳಿವು

ಶಿವಮೊಗ್ಗ ಜಿಲ್ಲೆ ಸಾಗರ ತಾಲೂಕಿನ ಹೆಗ್ಗೋಡು ಎಂಬ ಚಿಕ್ಕದೊಂದು ಹಳ್ಳಿಯಲ್ಲಿ ಕೆಲವು ಯುವತಿಯರು ಒಂದಾಗಿ 'ಚರಕ' ಎನ್ನುವ ವಿವಿಧೋದ್ದೇಶ ಸಹಕಾರಿ ಸಂಘವೊಂದನ್ನು ಕಟ್ಟಿಕೊಂಡಿದ್ದಾರೆ. ಇದು 'ದೇಸಿ' ಎಂಬ ಹೆಸರಿನಲ್ಲಿ ಮಾರಾಟವಾಗುವ, ನೈಸರ್ಗಿಕ ಬಣ್ಣಗಳನ್ನು ಬಳಸುವ, ಕೈಮಗ್ಗದ ಹತ್ತಿ ಉಡುಪುಗಳನ್ನು ತಯಾರಿಸುತ್ತದೆ. ಅವರು ಕೈಮಗ್ಗ ಮತ್ತು ಕರಕುಶಲ ಉತ್ಪನ್ನಗಳಿಗೆ ಸರಕು ಮತ್ತು ಸೇವಾ ತೆರಿಗೆ ವಿಧಿಸುತ್ತಿರುವುದರ ವಿರುದ್ಧ ಹೋರಾಡುತ್ತಿದ್ದಾರೆ. ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ವಿರುದ್ಧ ಪಾದಯಾತ್ರೆ ಮತ್ತು ಪ್ರತಿಭಟನಾ ಪ್ರದರ್ಶನಗಳನ್ನು ನಡೆಸುವುದರ ಮೂಲಕ 'ಕರ ನಿರಾಕರಣೆ ಸತ್ಯಾಗ್ರಹ'ದಲ್ಲಿ ತೊಡಗಿಕೊಂಡಿದ್ದಾರೆ. ದೊಡ್ಡ ಪ್ರಮಾಣದ ವಿದ್ಯುತ್ ಮಗ್ಗಗಳ ದಾಳಿಯಿಂದಾಗಿ ಈಗಾಗಲೇ ನಲುಗುತ್ತಿರುವ ಅವರು ತೆರಿಗೆ ವಿಧಿಸಿರುವುದರಿಂದ ಇನ್ನಷ್ಟು ಪ್ರತಿಕೂಲ ಸನ್ನಿವೇಶವನ್ನು ಎದುರಿಸುತ್ತಿದ್ದಾರೆ. ಖ್ಯಾತ ರಂಗಕರ್ಮಿ, ಲೇಖಕ ಹಾಗೂ ಚರಕದ ಸಂಸ್ಥಾಪಕರಲ್ಲೊಬ್ಬರಾದ ಪ್ರಸನ್ನ ಅವರು ನಗರದ ಗ್ರಾಹಕರನ್ನೇ ಮುಖ್ಯವಾಗಿ ಒಳಗೊಂಡಿರುವ ಗ್ರಾಮ ಸೇವಾ ಸಂಘದ ಜೊತೆಗೂಡಿ ಈ ಸತ್ಯಾಗ್ರಹವನ್ನು ಮುನ್ನಡೆಸುತ್ತಿದ್ದಾರೆ.

ವಿದ್ಯುತ್ ಮತ್ತು ಕೈಮಗ್ಗ ಕ್ಷೇತ್ರಗಳ ನಡುವಿನ ದ್ವಂದ್ವಯುದ್ಧಕ್ಕೆ ಸಮಾನಾಂತರವಾದ ಸನ್ನಿವೇಶವನ್ನು ನಮ್ಮ ಇಂದಿನ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಲ್ಲಿ ಕಾಣಬಹುದು. ಮೇಲು ಮತ್ತು ಮಧ್ಯಮ ಆದಾಯದ ಕುಟುಂಬಗಳು, ಇಂಗ್ಲಿಷ್ ಮಾಧ್ಯಮ ಶಿಕ್ಷಣವನ್ನು ಅದರಲ್ಲಿಯೂ ಖಾಸಗಿ ಸಂಸ್ಥೆಗಳಲ್ಲಿ ಕೊಡಮಾಡುವ ಶಿಕ್ಷಣವನ್ನು ಸಾಮಾಜಿಕ ಚಲನೆಗೆ ಹಾಗೂ ಆರ್ಥಿಕ ಪ್ರಗತಿಗೆ ಸಾಧನವೆಂದು ಭಾವಿಸಿವೆ. ಇದರಿಂದಾಗಿ, ಸ್ಥಳೀಯ ಭಾಷಾ ಮಾಧ್ಯಮದಲ್ಲಿ ಶಿಕ್ಷಣ ನೀಡುವ ಸರ್ಕಾರಿ ಶಾಲೆಯಿಂದ ಮಕ್ಕಳನ್ನು ಹೊರತೆಗೆದು, ಅವುಗಳ ಗುಣಮಟ್ಟವು ಪ್ರಶ್ನಾರ್ಹವಾಗಿದ್ದರೂ ಖಾಸಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಸೇರಿಸುವ ಪ್ರವೃತ್ತಿ ಹೆಚ್ಚೆಚ್ಚು ಕಂಡುಬರುತ್ತಿದೆ.

ಪ್ರಾರಂಭದಲ್ಲಿಯೇ ಇಂಗ್ಲಿಷನ್ನು ಆರಂಭಿಸುವ ಮತ್ತು ವಸ್ತುವಿಷಯವನ್ನು ಹೆಚ್ಚು ಇಂಗ್ಲಿಷಿನಲ್ಲಿಯೇ ಬೋಧಿಸುವ ರೀತಿಯಲ್ಲಿ ಶೈಕ್ಷಣಿಕ ನೀತಿಗಳು ರೂಪಿತವಾಗಬೇಕು ಎಂಬ ಕೂಗು ಹೆಚ್ಚಾಗುತ್ತಿದೆ. ಇದಕ್ಕೆ ಇತ್ತೀಚಿನ ಉದಾಹರಣೆಯೆಂದರೆ, ಉತ್ತರ ಪ್ರದೇಶದಲ್ಲಿ ನಡೆದ 'ಸ್ಕೂಲ್ ಚಲೋ' ಅಭಿಯಾನ. ಇದರಡಿಯಲ್ಲಿ ಕಳೆದ ಏಪ್ರಿಲ್‌ನಲ್ಲಿ ಐದು ಸಾವಿರ ಸರ್ಕಾರಿ ಪ್ರಾಥಮಿಕ ಶಾಲೆಗಳು ಇಂಗ್ಲಿಷ್ ಮಾಧ್ಯಮ ಎಂಬ ಹಣೆಪಟ್ಟಿಯನ್ನು ಪಡೆದವು. ಇಂತಹ ಒಂದು ಮೂಲಭೂತ ಹಾಗೂ ವ್ಯಾಪಕ ಬದಲಾವಣೆಯನ್ನು ತರುವ ಮೊದಲು ಯಾವುದೇ ಸಿದ್ಧತೆ ಹಾಗೂ ಚಿಂತನೆಗಳಿರಲಿಲ್ಲ. ಇಂಗ್ಲಿಷಿನಲ್ಲಿ ಪಠ್ಯಪುಸ್ತಕಗಳನ್ನು ಮುದ್ರಿಸಿ, ವಿತರಿಸುವುದಕ್ಕೆ ವಿಳಂಬವಾದ ಕಾರಣ, ವಿದ್ಯಾರ್ಥಿಗಳು ಹಿಂದಿ ಭಾಷೆಯಲ್ಲಿದ್ದ ಹಳೆಯ ಪುಸ್ತಕದ ಪಾಠಗಳನ್ನೇ ಓದುತ್ತಿದ್ದುದು ಕಂಡುಬಂದಿತು. ಈ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಶಿಕ್ಷಕರನ್ನು ಈಗ ಇರುವ ಸರ್ಕಾರಿ ಶಾಲೆಗಳಿಂದಲೇ ಲಿಖಿತ ಪರೀಕ್ಷೆಯೊಂದರ ಮೂಲಕ ಹಾಗೂ ಇಂಗ್ಲಿಷ್ ಭಾಷೆಯಲ್ಲಿ ಮಾತನಾಡಲು ಅವರಿಗೆ ಇರುವ ಪ್ರಾವೀಣ್ಯತೆಯನ್ನು ಗಮನಿಸಿ, ಆಯ್ಕೆ ಮಾಡಲಾಗಿತ್ತು. ಹಲವಾರು ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ಕುರಿತು ಕೈಗೊಂಡ ಅಧ್ಯಯನಗಳು ಹಾಗೂ ಅನುಭವಗಳು, ಶಿಕ್ಷಕರ ಸಾಮರ್ಥ್ಯದ ಕಾರಣದಿಂದಾಗಿ ಇಂಗ್ಲಿಷ್ ಬೋಧನೆಯ ಗುಣಮಟ್ಟವು ಪ್ರಶ್ನಾರ್ಹವಾಗಿದೆ ಎಂದು ಗುರುತಿಸಿವೆ. ಹಾಗಿದ್ದರೂ ಇಂತಹ ದೊಡ್ಡ ಮಟ್ಟದ ಬದಲಾವಣೆಗೆ ಮುನ್ನ ಶಿಕ್ಷಕರ ಸಿದ್ಧತೆಗೆ ಸಾಕಷ್ಟು ಗಮನ ನೀಡದೇ ಇದ್ದ ಕಾರಣ, ಇದು ಸುಧಾರಣೆಗೆ ಸಹಕಾರಿಯಾಗಲಿಲ್ಲ.

1968, 1986 ಹಾಗೂ 1992ರಲ್ಲಿ ರೂಪಿಸಲಾದ ಶಿಕ್ಷಣವನ್ನು ಕುರಿತಾದ ರಾಷ್ಟ್ರೀಯ ನೀತಿಗಳು ಹಾಗೂ 2005ರಲ್ಲಿ ರೂಪಿಸಲಾದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿ(ಎನ್‌ಸಿಎಫ್)ನ ಶಿಫಾರಸ್ಸುಗಳು, ಶಾಲೆಗಳಲ್ಲಿ ಮಕ್ಕಳು ತಮ್ಮ

ಭಾಷೆಯಲ್ಲಿಯೇ ಕಲಿಯುವುದನ್ನು ಪ್ರೋತ್ಸಾಹಿಸಬೇಕು ಎಂಬ ವಿಚಾರಕ್ಕೆ ಸತತವಾಗಿ ಒತ್ತು ನೀಡಿವೆ. ಆದರೆ ಅನೇಕ ರಾಜ್ಯಗಳಲ್ಲಿ ತರಲಾದ ಇಂಗ್ಲಿಷ್ ಮಾಧ್ಯಮದೆಡೆಗಿನ ಬದಲಾವಣೆಯು ಈ ಶಿಫಾರಸ್ಸುಗಳಿಗೆ ವಿರುದ್ಧವಾಗಿದೆ. ವಾಸ್ತವಿಕವಾಗಿ, ಇಂಗ್ಲಿಷನ್ನು ಬೋಧನಾ ಮಾಧ್ಯಮವನ್ನಾಗಿ ಮಾಡುವುದರಿಂದ ಶಾಲೆಯನ್ನು ಅರ್ಧಕ್ಕೇ ಬಿಡುವ ಹಾಗೂ ಕಲಿಯಲಾರದ ವಿದ್ಯಾರ್ಥಿಗಳ ಸಂಖ್ಯೆಯು ಏರುವ ಸಾಧ್ಯತೆ ಹೆಚ್ಚಿದೆ. ಹೀಗೆಲ್ಲ ಇದ್ದರೂ ಕಡಿಮೆ ಆದಾಯವಿರುವ ಕುಟುಂಬಗಳು ಉತ್ತಮವಾದ ಸರ್ಕಾರಿ ಶಾಲೆಗಳನ್ನು ಬಿಟ್ಟು ತಮ್ಮ ಆದಾಯದಲ್ಲಿನ ಬಹುಪಾಲನ್ನು ಖಾಸಗಿ ಶಾಲೆಗಳ ಮೇಲೆ ವ್ಯಯಿಸುತ್ತಿವೆ. ಎಲ್ಲೆಂದರಲ್ಲಿ ವೇಗವಾಗಿ ಬೆಳೆಯುತ್ತಿರುವ ಇಂಗ್ಲಿಷ್ ಮತ್ತು ಇಂಗ್ಲಿಷ್ ಮಾಧ್ಯಮ ಶಾಲೆಗಳು ಬಹಳಷ್ಟು ಭಾರತೀಯ ವಿದ್ಯಾರ್ಥಿಗಳಿಗೆ ಕಲಿಕೆಯನ್ನು ಕಠಿಣವಾಗಿಸಿವೆ. ಜೊತೆಗೆ, ತಮ್ಮೊಳಗೆ ಪ್ರತ್ಯೇಕವಾದ ಒಂದು ನಾಗರಿಕರ ವರ್ಗವನ್ನೇ ಸೃಷ್ಟಿಸುತ್ತಿವೆ ಎನ್ನುವುದು ಸ್ಪಷ್ಟ. ಮಕ್ಕಳು ತಮ್ಮ ಮಾತೃಭಾಷೆ ಅಥವಾ ಮನೆ ಮಾತಿನಲ್ಲಿ ಕಲಿಸಿದರೆ ಚೆನ್ನಾಗಿ ಕಲಿಯುತ್ತಾರೆ ಎಂದು ಹಲವಾರು ಅಧ್ಯಯನಗಳು ದೃಢಪಡಿಸಿವೆ. ಆದರೂ ಎಲ್ಲೆಡೆಯೂ ಇಂತಹ ಬೆಳವಣಿಗೆಯನ್ನು ಕಾಣಲು ಸಾಧ್ಯ. ವಿದ್ಯಾರ್ಥಿಗಳು ಮಾತೃಭಾಷೆಯಲ್ಲಿ ಹೆಚ್ಚು ಕಾಲ ಕಲಿತಷ್ಟೂ ಅವರು ತಮ್ಮ ಶೈಕ್ಷಣಿಕ ಸಾಧನೆಯನ್ನು ಇನ್ನಷ್ಟು ಉತ್ತಮ ಪಡಿಸಿಕೊಳ್ಳುವ ಸಾಧ್ಯತೆ ಹೆಚ್ಚು. ಏಕೆಂದರೆ, ಚಿಂತನಾ ಕೌಶಲ್ಯಗಳನ್ನು ಮಾತೃಭಾಷೆಯಲ್ಲಿ ಬೆಳೆಸುವುದು ಅತ್ಯುತ್ತಮವಾದದ್ದು. ಅಂದಹಾಗೆ, ಇಂಗ್ಲಿಷನ್ನು ಅಥವಾ ಪ್ರಾದೇಶಿಕವಲ್ಲದ ಭಾಷೆಗಳನ್ನು ಆರಂಭಿಕ ಹಂತದಿಂದಲೇ ಒಂದು ವಿಷಯವಾಗಿ ಕಲಿಸಬೇಕು ಎಂದೂ ಹೇಳಲಾಗುತ್ತದೆ. ಮಕ್ಕಳಿಗೆ ವಿವಿಧ ಭಾಷೆಗಳನ್ನು ಕಲಿಯುವುದು ಸಮಸ್ಯೆಯಾಗುವುದಿಲ್ಲ. ಅವರ ಗಮನವು ಭಾಷೆಯ ಮೇಲಿರದೆ ಅದರಲ್ಲಿನ ಅರ್ಥದ ಮೇಲಿರುವುದರಿಂದ, ಬಹುಭಾಷಾ ಸಮುದಾಯಗಳಲ್ಲಿನ ಮಕ್ಕಳು ಏಕಕಾಲಕ್ಕೆ ಹಲವಾರು ಭಾಷೆಗಳನ್ನು ಅನೌಪಚಾರಿಕ ವಿಧದಲ್ಲಿ ಕಲಿಯುತ್ತಾರೆ ಎಂದು ಸಂಶೋಧನೆಯು ಹೇಳುತ್ತದೆ.

ಕನ್ನಡ ಮಾಧ್ಯಮ ಶಾಲೆಗಳು ಕಳೆದ ಕೆಲವು ದಶಕಗಳಲ್ಲಿ ಹೇಗೆ ಕಡಿಮೆಯಾಗುತ್ತಾ ಬಂದವು ಎನ್ನುವುದನ್ನು ನಾನೇ ಹತ್ತಿರದಿಂದ ಕಂಡಿದ್ದೇನೆ. ಅಂತಹ ಒಂದು ಪ್ರಾಥಮಿಕ ಶಾಲೆಯು ಬೆಂಗಳೂರಿನ ಹೃದಯಭಾಗದಲ್ಲಿರುವ ನಗರ ರೈಲ್ವೇ ನಿಲ್ದಾಣಕ್ಕೆ ತುಂಬಾ ಹತ್ತಿರವಿರುವ ಬಳೇಪೇಟೆಯಲ್ಲಿತ್ತು. ಅಲ್ಲಿ ಅಕ್ಷರಶಃ ಬಳೆಗಳ ವ್ಯಾಪಾರವನ್ನೇ ಮುಖ್ಯವಾಗಿ ಮಾಡುತ್ತಿದ್ದ ಮಾರುಕಟ್ಟೆಯಿತ್ತು. ಆ ಶಾಲೆಯಲ್ಲಿ ಕನ್ನಡವಲ್ಲದೇ ತೆಲುಗು, ತಮಿಳು, ಮರಾಠಿ, ಹಿಂದಿ, ಉರ್ದು ಭಾಷೆಗಳನ್ನು ಮಾತನಾಡುತ್ತಿದ್ದ ಬಹುಭಾಷಿಕ ಸಮುದಾಯವೊಂದರ ಮಕ್ಕಳಿಗೆ ಶಿಕ್ಷಣವನ್ನು ನೀಡಲಾಗುತ್ತಿತ್ತು. ಆ ಪ್ರದೇಶದ ಸುತ್ತಲೂ ಬೇರೆ ಬೇರೆ

ಪೇಟೆಗಳಿದ್ದವು. ಅವುಗಳ ಹೆಸರುಗಳು, ಆಯಾ ಮಾರುಕಟ್ಟೆ ಪ್ರದೇಶದಲ್ಲಿದ್ದ ಜನರು ತೊಡಗಿಕೊಂಡಿದ್ದ ಬೇರೆ ಬೇರೆ ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದ್ದಾಗಿತ್ತು. ಉದಾಹರಣೆಗೆ, ಕಾಳು, ಜವಳಿ, ಎಣ್ಣೆ, ಹೂವು ಇತ್ಯಾದಿ. ಹಾಗಾಗಿ, ಆ ಶಾಲೆಯಲ್ಲಿ ಓದುತ್ತಿದ್ದ ಮಕ್ಕಳ ಪೋಷಕರು ಸಹಜವಾಗಿಯೇ ಕಾರ್ಮಿಕ ವರ್ಗದವರಾಗಿದ್ದು ಅದೇ ಪ್ರದೇಶದಲ್ಲಿದ್ದ ಅಂಗಡಿಗಳಲ್ಲಿ ಕೆಲಸ ಮಾಡುವವರೋ ಸಣ್ಣ ಪುಟ್ಟ ವ್ಯವಹಾರಗಳಲ್ಲಿ ತೊಡಗಿಕೊಂಡಿರುವವರೋ ಉದ್ಯೋಗ ಮಾಡುವವರೋ ಆಗಿರುತ್ತಿದ್ದರು.

ಶಾಲೆಯಲ್ಲಿ ಶಿಶುವಿಹಾರ ಹಾಗೂ ಪ್ರಾಥಮಿಕ ವಿಭಾಗಗಳಿದ್ದವು. ನಂತರ ಅದು ಹಿರಿಯ ಪ್ರಾಥಮಿಕ ಶಾಲೆಯಾಯಿತು. ಸ್ಥಳಾಭಾವದ ಕಾರಣ ಶಾಲೆಯನ್ನು ಎರಡು ಸಣ್ಣ ಹಳೆಯ ಬಾಡಿಗೆ ಕಟ್ಟಡಗಳಲ್ಲಿ ನಡೆಸಬೇಕಾಗಿತ್ತು. ಆ ಕಟ್ಟಡಗಳು ವಸತಿಗಳಿರುವ ಇಕ್ಕಟ್ಟಾದ ಓಣಿಗಳಲ್ಲಿದ್ದವು. ಮೂಲಭೂತ ಸೌಕರ್ಯಗಳು ಏನೂ ಚೆನ್ನಾಗಿರಲಿಲ್ಲ. ಬೋಧನೆ ಮತ್ತು ಕಲಿಕೆಗೆ ಸಂಬಂಧಿಸಿದಂತೆ ಅತ್ಯಂತ ಕನಿಷ್ಠ ಸೌಕರ್ಯಗಳಿದ್ದ, ಪ್ರತ್ಯೇಕ ಚಿಕ್ಕಚಿಕ್ಕ ತರಗತಿಕೋಣೆಗಳಾಗಿ ವಿಭಜಿಸಲಾದ ಜಾಗಗಳಲ್ಲಿಯೇ ಶಿಕ್ಷಕರು, ವಿದ್ಯಾರ್ಥಿಗಳು ನಿಭಾಯಿಸಬೇಕಾಗುತ್ತಿತ್ತು. ಆಟದ ಮೈದಾನ, ಸಭಾಂಗಣ, ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರಿಗಾಗಿ ಸಿಬ್ಬಂದಿ ಕೋಣೆ ಇತ್ಯಾದಿ ಸೌಲಭ್ಯಗಳನ್ನು ಪಡೆದುಕೊಳ್ಳುವುದು ಕಷ್ಟವೇ ಆಗಿತ್ತು. ಪಕ್ಕದಲ್ಲಿದ್ದ ಚಿಕ್ಕ ಲಾಲ್‌ಬಾಗ್ ಉದ್ಯಾನವನವನ್ನು ಆಟದ ಮೈದಾನವಾಗಿಯೂ ಬಳಸಲಾಗುತ್ತಿತ್ತು. ವಾರ್ಷಿಕೋತ್ಸವ ಸಮಾರಂಭಗಳನ್ನು ನಡೆಸಲು ಸಾರ್ವಜನಿಕ ಸಭಾಭವನಗಳನ್ನು ಬಾಡಿಗೆಗೆ ಪಡೆದುಕೊಳ್ಳಬೇಕಿತ್ತು. ದಾನಿಗಳಿಂದ ಹಾಗೂ ಸಮುದಾಯದಿಂದ ಹಣವನ್ನು ಸಂಗ್ರಹಿಸಿ ಶಾಲೆಯ ಮೂಲಭೂತ ಸೌಕರ್ಯಗಳನ್ನು ಹೆಚ್ಚಿಸುವ ಹಾಗೂ ಇತರ ಸುಧಾರಣೆಗಳನ್ನು ಮಾಡುವ ಉದ್ದೇಶದಿಂದ ಹಲವಾರು ಸಾಹಸಿ ಪ್ರಯತ್ನಗಳನ್ನು ಕೈಗೊಳ್ಳಲಾಯಿತು. ಆದರೆ ಹೆಚ್ಚೇನನ್ನೂ ಸಂಗ್ರಹಿಸಲಾಗಲಿಲ್ಲ. ಒಟ್ಟಿನಲ್ಲಿ ಉದ್ದಕ್ಕೂ ಆದಾಯಕ್ಕಿಂತಲೂ ವೆಚ್ಚವೇ ಹೆಚ್ಚಾಯಿತು.

ಬಹುತೇಕವಾಗಿ ಶಾಲೆಯಲ್ಲಿ ಮಕ್ಕಳು ನೂರಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿರುತ್ತಿದ್ದರು. ಆದರೆ ದಾಖಲಾತಿಯ ಪ್ರಮಾಣವು ಗಮನಾರ್ಹವಾಗಿ ಹೆಚ್ಚುತ್ತಿರಲಿಲ್ಲ. ಒಮ್ಮೆ ಶಾಲಾ ಆಡಳಿತವು ಶಿಕ್ಷಣ ಇಲಾಖೆಯನ್ನು ಸಂಪರ್ಕಿಸಿ, ಇಂಗ್ಲಿಷ್ ಮಾಧ್ಯಮ ವಿಭಾಗವನ್ನು (ಹಾಗೂ ಹೆಣ್ಣು ಮಕ್ಕಳಿಗಾಗಿ ಒಂದು ಪ್ರೌಢ ಶಾಲೆ) ಆರಂಭಿಸಲು ಅನುಮತಿ ಕೋರಿತು. ಆದರೆ ಅಧಿಕೃತ ಒಪ್ಪಿಗೆಯನ್ನು ಪಡೆಯಲು ವಿಫಲವಾಯಿತು. ಇನ್ನಿತರ ಅನೇಕ ಶಾಲೆಗಳು ಸರ್ಕಾರದಿಂದ ಸ್ಪಷ್ಟ ಅನುಮತಿ ಸಿಗದೇ ಇದ್ದರೂ ಇಂಗ್ಲಿಷ್ ಮಾಧ್ಯಮ ವಿಭಾಗಗಳನ್ನು ಆರಂಭಿಸಿದ್ದವು. ಅವುಗಳಿಗೆ ವ್ಯತಿರಿಕ್ತವಾಗಿ ಈ ಶಾಲೆಯು ಕಾನೂನನ್ನು ಚಾಚೂತಪ್ಪದೆ ಪಾಲಿಸಿತು.

ನಂತರ, 1990ರ ಕೊನೆಯ ಭಾಗದಲ್ಲಿ, ಶಾಲೆಗೆ ಸರ್ಕಾರದ ಅನುದಾನ-ನೆರವು ದೊರೆಯಿತು. ಶಿಕ್ಷಕರನ್ನು ಅವರ ಸೇವಾ ಹಿರಿತನದ ಆಧಾರದ ಮೇಲೆ ನಗರದಲ್ಲಿದ್ದ ಇನ್ನಿತರ ಅನುದಾನಿತ ಶಾಲೆಗಳಿಗೆ ನಿಯೋಜಿಸಿ, ಕಳುಹಿಸಲಾಯಿತು. ಸುಮಾರು ಐದು ದಶಕಗಳ ಕಾಲ ಅಸ್ತಿತ್ವದಲ್ಲಿದ್ದ ಶಾಲೆಯು ಇನ್ನಿತರ ಖಾಸಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳ ಸ್ಪರ್ಧೆಯ ಎದುರು ತನ್ನನ್ನೇ ತಾನು ಮುನ್ನಡೆಸಿಕೊಂಡು ಹೋಗಲು ಸಾಧ್ಯವಾಗದೇ ಬಾಗಿಲು ಮುಚ್ಚಬೇಕಾಯಿತು.

ಬಡಜನರಿಗಾಗಿ ಇದ್ದ ಈ ಶಾಲೆಯನ್ನು ನನ್ನ ತಂದೆ 1960ರ ದಶಕದ ಕೊನೆಯ ಭಾಗದಿಂದ ಮೂರು ದಶಕಕ್ಕೂ ಹೆಚ್ಚು ಕಾಲ ನಡೆಸಿದ್ದರು. ದೇಶವು ಸ್ವತಂತ್ರವಾದ ಸಮಯದಲ್ಲಿ ನನ್ನ ಅಜ್ಜಿ ಈ ಶಾಲೆಯನ್ನು ಸ್ಥಾಪಿಸಿದ್ದರು. ಆಡಳಿತವು ನಂತರದಲ್ಲಿ ಅಜ್ಜಿಯಿಂದ ನನ್ನ ತಂದೆಯವರಿಗೆ ಹಸ್ತಾಂತರಗೊಂಡಿತ್ತು. ಇಂತಹ ಸಂಪೂರ್ಣ ಕನ್ನಡ ಮಾಧ್ಯಮ ಶಾಲೆಗಳ ಸನ್ನಿವೇಶವು ಇಂದಿಗೂ ಬದಲಾಗಿಲ್ಲ. ಅವುಗಳಲ್ಲಿ ಶಿಕ್ಷಣದ ಧ್ಯೇಯೋದ್ದೇಶಗಳನ್ನು ಅರಿತು ನಡೆಯುವವರೇ ಚೆನ್ನಾಗಿ ಶಾಲೆಗಳನ್ನು ನಿರ್ವಹಿಸುತ್ತಿದ್ದಾರೆ, ವಿವಿಧ ಹಿನ್ನೆಲೆಯ ಮಕ್ಕಳಿಗೆ ಉತ್ತಮ ಗುಣಮಟ್ಟದ ಕಲಿಕೆಯ ಅವಕಾಶವನ್ನು ಒದಗಿಸಲು ಪ್ರಯತ್ನಿಸುತ್ತಲೂ ಇದ್ದಾರೆ. ಅವೂ ಕೂಡ ನಿರಂತರವಾಗಿ ಅಳಿವಿನ ಭಯವನ್ನು ಎದುರಿಸುತ್ತಲೇ ಇವೆ.

ಮಹಾನ್ ಸಮಾಜವಾದಿ ಶಿಕ್ಷಣತಜ್ಞ ಜೆ.ಪಿ.ನಾಯಕ್ ಅವರು ನಾಲ್ಕು ದಶಕಗಳ ಹಿಂದೆಯೇ ಮುನ್ಸೂಚನೆ ನೀಡಿದ ಹಾಗೆ,

> 'ದೀರ್ಘಕಾಲದವರೆಗೆ... ಶಿಕ್ಷಣದಲ್ಲಿ ಅತ್ಯಂತ ಅಮೂಲ್ಯವಾದ ಸಂಗತಿಯೆಂದರೆ, ಇಂಗ್ಲಿಷ್ ಭಾಷೆಯ ಮೇಲಿನ ಹಿಡಿತವೇ ಶಿಕ್ಷಣದಲ್ಲಿನ 'ಗುಣಮಟ್ಟ'ದ ಪರ್ಯಾಯ ಪದ ಆಗಿತ್ತು... ಇಂಗ್ಲಿಷಿನ ಉಪಯುಕ್ತತೆ ಮತ್ತು ಮೌಲ್ಯವನ್ನು ಕಡೆಗಣಿಸುವ ಅಗತ್ಯವಿಲ್ಲ. ಅದು ನಿರಂತರವಾಗಿ ಬೆಳೆಯುತ್ತಲೇ ಇರುವ ಜಗತ್ತಿನ ಜ್ಞಾನಕ್ಕೆ ನೇರ ಪ್ರವೇಶವನ್ನು ಒದಗಿಸುತ್ತದೆ. ಆದರೆ ಭಾರತದ ಶಿಕ್ಷಣದಲ್ಲಿ ಇಂಗ್ಲಿಷಿನ ಸ್ಥಾನಕ್ಕೆ ಅತಿಯಾದ ಒತ್ತು ನೀಡುವುದು ಸಮಂಜಸವೂ ಅಲ್ಲ, ಒಂದು ಭಾಷೆಯಾಗಿ ಇಂಗ್ಲಿಷಿನ ಮೇಲಿರುವ ಹಿಡಿತವನ್ನು ಗುಣಮಟ್ಟಕ್ಕೆ ಸಮೀಕರಿಸುವುದು ಸರಿಯೂ ಅಲ್ಲ.'

ನಾವು ಫಿನ್‌ಲ್ಯಾಂಡ್ ಮತ್ತು ಚೀನಾದಂತಹ ಜಗತ್ತಿನ ಕೆಲವು ಮುಂದುವರೆದ ದೇಶಗಳನ್ನು ಗಮನಿಸುವ ಅಗತ್ಯವಿದೆ. ಅಲ್ಲಿನ ಶಾಲೆಗಳಲ್ಲಿ ಬಡವ, ಶ್ರೀಮಂತರೆಲ್ಲರಿಗೂ ಬೋಧನಾ ಮಾಧ್ಯಮವು ಅವರದೇ ಸ್ಥಳೀಯ ಭಾಷೆಯಾಗಿರುತ್ತದೆ. ಇಂಗ್ಲಿಷನ್ನು ದ್ವಿತೀಯ ಭಾಷೆಯಾಗಿ ಮಾತ್ರ ಕಲಿಸಲಾಗುತ್ತದೆ.

ಅಲ್ಲಿನ ಮಕ್ಕಳು ಅಂತರರಾಷ್ಟ್ರೀಯ ಪರೀಕ್ಷೆಗಳಲ್ಲಿ ಸತತವಾಗಿ ಉತ್ತಮ ಕ್ಷಮತೆಯನ್ನು ತೋರುತ್ತಾರೆ.

ವಿಪರ್ಯಾಸದ ಸಂಗತಿಯೆಂದರೆ ದೇಸಿ ಉತ್ಪನ್ನಗಳು ಮತ್ತು ಆರ್ಥಿಕತೆಯನ್ನು ಉಳಿಸಿಕೊಳ್ಳುವ ಹೋರಾಟ ನಡೆಯುತ್ತಿರುವಾಗಲೇ ನಮ್ಮ ನೀತಿನಿರೂಪಕರು ಸೂಕ್ತವಾದ ಭಾಷಾ ಮತ್ತು ಒಳಗೊಳ್ಳುವಿಕೆಯ ನೀತಿಯನ್ನು ಗುರುತಿಸಿ, ಅವುಗಳನ್ನು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಅಳವಡಿಸಬೇಕೆಂದು ಆಶಿಸಲಾಗುತ್ತಿದೆ. ಈ ಆಯಾಮಗಳ ಕುರಿತು ಶಿಕ್ಷಣ ನೀತಿಯಲ್ಲಿರುವ ನಿರ್ದಿಷ್ಟ ಅಂಶಗಳನ್ನು ಅನುಷ್ಠಾಗೊಳಿಸಬೇಕಿದೆ.

■

ಬಿ ಫಸ್ಟ್, 02–08–2018



ಕೇರಳದ ಶೈಕ್ಷಣಿಕ ಕ್ಷೇತ್ರವೂ ನಮ್ಮಂತೆಯೇ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದರೂ, ಉತ್ಸಾಹ ಕಳೆದುಕೊಳ್ಳದೆ ಸವಾಲನ್ನು ಎದುರಿಸಲು ತಂತ್ರಗಳನ್ನು ರೂಪಿಸುತ್ತಾ ಮುಂದಕ್ಕೆ ಸಾಗುತ್ತಿದೆ. ಶಿಕ್ಷಣ ಇಲಾಖೆ ಮತ್ತು ಸಂಬಂಧಪಟ್ಟ ಇಲಾಖೆಗಳು ಎಲ್ಲ ಭಾಗೀದಾರರೊಂದಿಗೆ ಮಕ್ಕಳಿಗೆ ಗುಣಾತ್ಮಕ ಶಿಕ್ಷಣವನ್ನು ಒದಗಿಸಲು ಕೈಜೋಡಿಸಿವೆ.

# ಸರ್ಕಾರಿ ಶಾಲೆಗಳ ಉಳಿವಿಗೆ ಕೇರಳ ಮಾದರಿ

ಅದೊಂದು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ. ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ಆರು ನೂರಾ ಎಪ್ಪತ್ತಾರು. ಅದರಲ್ಲಿ ಮುನ್ನೂರು ವಿದ್ಯಾರ್ಥಿಗಳು ಒಂದರಿಂದ ನಾಲ್ಕನೆಯ ತರಗತಿಯ ತನಕದವರಾಗಿದ್ದರೆ, ಪೂರ್ವ ಪ್ರಾಥಮಿಕ ಹಂತದಲ್ಲಿರುವ ವಿದ್ಯಾರ್ಥಿಗಳ ಸಂಖ್ಯೆ ಮುನ್ನೂರಾ ಎಪ್ಪತ್ತಾರು. ಒಟ್ಟು ಶಿಕ್ಷಕರ ಸಂಖ್ಯೆ ಇಪ್ಪತ್ತಾ ನಾಲ್ಕು. ಅದರಲ್ಲಿ ಸರ್ಕಾರ ನೇಮಿಸಿದವರ ಸಂಖ್ಯೆ ಹತ್ತು. ಶಾಲೆಯ ಶಿಕ್ಷಕರು ಮತ್ತು ಪೋಷಕರ ಸಂಘ (ಪಿಟಿಎ) ನೇಮಿಸಿರುವ ಶಿಕ್ಷಕರ ಸಂಖ್ಯೆ ಹದಿನಾಲ್ಕು. ಹೀಗೆ ನೇಮಕಗೊಂಡ ಶಿಕ್ಷಕರಿಗೆ ಶಾಲಾ ಅಭಿವೃದ್ಧಿ ನಿಧಿಯಿಂದ ಗೌರವಧನ ಪಾವತಿಸಲಾಗುತ್ತದೆ.

ಹೀಗೆ ಗೌರವಧನ ಪಡೆದು ಕೆಲಸ ಮಾಡುತ್ತಿರುವ ಶಿಕ್ಷಕಿಯೊಬ್ಬರ ಮಕ್ಕಳೂ ಇದೇ ಶಾಲೆಯಲ್ಲಿ ಓದುತ್ತಿದ್ದಾರೆ. ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ನೂರರಷ್ಟಿದ್ದರೆ ಹೆಚ್ಚು ಎಂಬ ಭಾವನೆ ಇರುವ ಈ ಕಾಲದಲ್ಲಿ ಇಂಥದ್ದೊಂದು ಶಾಲೆ ಇರಲು ಸಾಧ್ಯವೇ ಎಂಬ ಪ್ರಶ್ನೆ ಮೂಡುವುದು ಸಹಜ. ಈ ಶಾಲೆ ಇರುವುದು ನೆರೆಯ ಕೇರಳ ರಾಜ್ಯದಲ್ಲಿ. ತ್ರಿಶ್ಶೂರ್ ಜಿಲ್ಲೆಯ ಕೊಡಗೆರೆ ಬ್ಲಾಕ್‌ನಲ್ಲಿರುವ ಕೊಡಲಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ.

ನಮ್ಮ ಸಂಸ್ಥೆಯು ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆಯೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯ ಭಾಗವಾಗಿ, ಮಕ್ಕಳು ಹಾಗೂ ಶಾಲೆಯ ಶಿಕ್ಷಣ ವ್ಯವಸ್ಥೆಗೆ ಪೂರಕವಾಗಿರುವ ವಿವಿಧ ಸಾಂಸ್ಥಿಕ ವ್ಯವಸ್ಥೆಗಳ ಬಗ್ಗೆ ಹಂತಹಂತವಾಗಿ ಅಧ್ಯಯನ ನಡೆಸಿದೆ. ಡಯಟ್ ಪ್ರಾಂಶುಪಾಲರಿಗೆ ಶೈಕ್ಷಣಿಕ ಪರಿಕಲ್ಪನೆಗಳ ಆಳವಾದ ಪರಿಚಯ ಮಾಡಿಕೊಡುವ ಉದ್ದೇಶದಿಂದ ತಂಡವೊಂದು ಕೇರಳ ರಾಜ್ಯಕ್ಕೆ ಪ್ರವಾಸ ಕೈಗೊಂಡಿತ್ತು. ಈ ಸಂದರ್ಭದಲ್ಲಿ ಮೇಲಿನ ಶಾಲೆಯು ಕಾಣಸಿಕ್ಕಿತು. 'ಸರ್ಕಾರಿ ಶಾಲೆ' ಎಂದಾಕ್ಷಣ ನಮ್ಮ ಮನಸ್ಸಿನಲ್ಲಿ ಮೂಡುವ ಚಿತ್ರಣಕ್ಕೆ ಸಂಪೂರ್ಣವಾಗಿ ಭಿನ್ನವಾಗಿರುವ ಇಂತಹ ಅನೇಕ ಶಾಲೆಗಳು ಕೇರಳದಲ್ಲಿವೆ. ಕೊಡಲಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಖಾಸಗಿ ಶಾಲೆಗಳ ಸಂಖ್ಯೆಯೇನೂ ಕಡಿಮೆಯಿಲ್ಲ. ಮೇಲೆ ಉದಾಹರಿಸಿದ ಶಾಲೆಯ ಸುತ್ತಮುತ್ತ ಆರು ಖಾಸಗಿ ಶಾಲೆಗಳಿವೆ. ಆದರೆ ಅಲ್ಲೆಲ್ಲೂ ಸರ್ಕಾರಿ ಶಾಲೆಯಲ್ಲಿರುವಷ್ಟು ಸಂಖ್ಯೆಯ ವಿದ್ಯಾರ್ಥಿಗಳಿಲ್ಲ.

ಅಭಿವೃದ್ಧಿ ಹೊಂದಿದ ದೇಶಗಳಿಗೆ ಸಮಾನ ಎನಿಸುವ ಮಟ್ಟದ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಹೊಂದಿರುವ ಕೇರಳದಲ್ಲಿ ಇದು ಸಹಜ ಎಂದುಬಿಡಬಹುದು. ಆದರೆ ಅಲ್ಲಿಯೂ ಖಾಸಗಿ ಶಾಲೆಗಳು ಉತ್ತಮ ಎಂದು ಭಾವಿಸುವ ಪೋಷಕರಿದ್ದಾರೆ. ಹಾಗೆಯೇ ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಅಗತ್ಯ ಎಂದು ತಿಳಿದಿರುವ ಪೋಷಕರ ಸಂಖ್ಯೆಯೂ ನಮ್ಮಲ್ಲಿಗಿಂತ ಕಡಿಮೆಯೇನಿಲ್ಲ. ಒಟ್ಟರ್ಥದಲ್ಲಿ ಕೇರಳದ ಸರ್ಕಾರಿ ಶಾಲೆಗಳೂ ಕರ್ನಾಟಕದ ಸರ್ಕಾರಿ ಶಾಲೆಗಳು ಎದುರಿಸುತ್ತಿರುವಂಥದ್ದೇ ಸವಾಲುಗಳನ್ನು ಎದುರಿಸುತ್ತಿವೆ. ಆದರೆ ಅಲ್ಲಿ ಸರ್ಕಾರ ಮತ್ತು ಪೋಷಕರ ಆಸಕ್ತಿಯಿಂದಲೇ ಸವಾಲನ್ನು ಎದುರಿಸುವ ತಂತ್ರವೊಂದು ರೂಪುಗೊಂಡಿರುವುದು ವಿಶೇಷ.

ಕರ್ನಾಟಕದಲ್ಲಿ ಇರುವಂತೆಯೇ ಕೇರಳದಲ್ಲಿ ಕೂಡ ಶಾಲಾಭಿವೃದ್ಧಿ ಸಮಿತಿಗಳಿವೆ. ಆದರೆ ಅಲ್ಲಿ ಪಿಟಿಎಗಳು ಹೆಚ್ಚು ಪ್ರಬಲವಾಗಿವೆ. ಶಾಲಾಭಿವೃದ್ಧಿ ಸಮಿತಿಯು ಏನೇ ಮಾಡಬೇಕೆಂದರೂ ಶಾಲೆಯ ಆಗುಹೋಗುಗಳ ನಿಜವಾದ ಭಾಗೀದಾರರಾದ ಶಿಕ್ಷಕರು ಮತ್ತು ಪೋಷಕರನ್ನು ಒಲಿಸಿಕೊಳ್ಳಬೇಕಾಗುತ್ತದೆ. ಕೊಡಲಿಯಲ್ಲಿರುವ ಶಾಲೆಯ ಉದಾಹರಣೆಯನ್ನೇ ತೆಗೆದುಕೊಂಡರೂ ಇದು ಅರ್ಥವಾಗುತ್ತದೆ. ಈ ಶಾಲೆಯ ಕೈತೋಟವನ್ನು ಅಭಿವೃದ್ಧಿಪಡಿಸಿ ನಿರ್ವಹಿಸುವುದು ಪಿಟಿಎ.

ಸರ್ಕಾರದಿಂದ ದೊರೆಯುವ ಅನುದಾನದಿಂದಷ್ಟೇ ಶಾಲೆಯ ಎಲ್ಲ ಅಗತ್ಯಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಈ ಹೆಚ್ಚುವರಿ ಅಗತ್ಯಗಳನ್ನು ಪೂರೈಸಿಕೊಳ್ಳಲು ಬೇಕಿರುವ ಮೊತ್ತವನ್ನು ದಾನಿಗಳಿಂದ ಪಡೆಯುವುದಕ್ಕೆ

ಮಾಡಬೇಕಾಗಿರುವ ಪ್ರಯತ್ನವೂ ಪಿಟಿಎ ಕಡೆಯಿಂದಲೇ ನಡೆಯುತ್ತದೆ. ಶಾಲೆಯ ಎಲ್ಲ ಚಟುವಟಿಕೆಗಳೊಂದಿಗೆ ಒಂದಲ್ಲ ಒಂದು ರೀತಿಯಲ್ಲಿ ಪೋಷಕರಿಗೂ ಸಂಬಂಧವಿರುವಂತೆ ನೋಡಿಕೊಂಡಿರುವುದರಿಂದ ಒಂದು ಸಾಮುದಾಯಿಕ ಮೇಲುಸ್ತುವಾರಿ ಸಹಜವಾಗಿಯೇ ರೂಪುಗೊಂಡಿದೆ. ಇವೆಲ್ಲದರ ಪರಿಣಾಮವು ಶಾಲೆಯ ಒಟ್ಟು ಚಟುವಟಿಕೆಗಳಲ್ಲಿಯೂ ಕಾಣಸಿಗುತ್ತದೆ.

ಸುಮಾರು ನಲವತ್ತು ನಿಮಿಷ ನಡೆಯುವ ಶಾಲೆಯ ಬೆಳಗಿನ ಸಭೆಯನ್ನು ಸಂಪೂರ್ಣವಾಗಿ ಮಕ್ಕಳೇ ನಿರ್ವಹಿಸುತ್ತಾರೆ. ನಾವು ಭೇಟಿ ನೀಡಿದ ಈ ಶಾಲೆಯ ಸಭೆಯನ್ನು ಮೂರನೆಯ ತರಗತಿಯ ಮಕ್ಕಳು ನಡೆಸಿಕೊಟ್ಟರು. ಸುಮಾರು ಮೂವತ್ತು ಮಕ್ಕಳು ವೇದಿಕೆಯ ಮೇಲಿದ್ದರು. ದಿನಪತ್ರಿಕೆಯ ಮುಖ್ಯಾಂಶಗಳಿಂದ ಆರಂಭಿಸಿ ಒಗಟು ಬಿಡಿಸುವಿಕೆ, ರಸಪ್ರಶ್ನೆ, ಗಾಂಧೀಜಿಯ ಚಿಂತನೆ, ಹೀಗೆ ಬೆಳಗಿನ ಸಭೆಯು ಕೇವಲ ಯಾಂತ್ರಿಕವಾಗದಂತೆ ನೋಡಿಕೊಳ್ಳಲಾಗಿತ್ತು. ವೇದಿಕೆಯ ಮೇಲಿದ್ದ ಮಕ್ಕಳಿಗೆ ಇತರ ಮಕ್ಕಳೂ ಪ್ರಶ್ನೆ ಕೇಳುತ್ತಿದ್ದರು. ಭಾಷೆಯೂ ಅಷ್ಟೇ. ಮಲಯಾಳಂ ಮತ್ತು ಇಂಗ್ಲಿಷ್‌ಗಳೆರಡೂ ಸಂದರ್ಭಕ್ಕೆ ತಕ್ಕಂತೆ ಬಳಕೆಯಾಗುತ್ತಿದ್ದವು. ಅಂದರೆ ಕಲಿಕೆಯೆಂಬುದು ತರಗತಿಯೊಳಕ್ಕೆ ಸೀಮಿತವಾಗದೆ ಹೊರಗೂ ವಿಸ್ತರಿಸಿಕೊಂಡಿತ್ತು. ಶಿಕ್ಷಕರ ಮಧ್ಯಪ್ರವೇಶವೇ ಇಲ್ಲದೆ ಮಕ್ಕಳ ನಡುವೆ ಸಂವಹನಗಳು ನಡೆಯುತ್ತಿದ್ದವು. ಅವು ಅನೇಕ ವಿಚಾರಗಳನ್ನು ಅವರಿಗೆ ಕಲಿಸುತ್ತಲೂ ಇದ್ದವು. ಶಾಲೆಯು ಹೀಗೆ ಚಟುವಟಿಕೆಯಿಂದ ತುಂಬಿಕೊಂಡಿರುವುದು ಪೋಷಕರಲ್ಲಿಯೂ ಉತ್ಸಾಹ ಹುಟ್ಟಿಸುತ್ತಿದೆ. ಜೊತೆಗೆ ಸರ್ಕಾರಿ ಶಾಲೆಗಳು ಖಾಸಗಿ ಶಾಲೆಗಳಿಗಿಂತ ಉತ್ತಮ ಎನ್ನುವ ಭಾವನೆ ಮೂಡಿಸುವಲ್ಲಿ ಯಶಸ್ವಿಯಾಗಿದೆ.

ಇದು ನಾವು ಸಂದರ್ಶಿಸಿದ ಒಂದು ಶಾಲೆಗೆ ಸೀಮಿತವಾದ ಮಾದರಿಯೇನಲ್ಲ. ಇದು ಕೇರಳದ ಹದಿನಾಲ್ಕೂ ಜಿಲ್ಲೆಗಳ ಬಹುದೊಡ್ಡ ಸಂಖ್ಯೆಯ ಸರ್ಕಾರಿ ಶಾಲೆಗಳಲ್ಲಿ ಕಾಣಸಿಗುತ್ತದೆ. ಹಾಗೆಯೇ ಸರ್ಕಾರದಿಂದ ಅನುದಾನ ಪಡೆಯುವ ಶಾಲೆಗಳಲ್ಲೂ ಇಂತಹದೊಂದು ವಾತಾವರಣವನ್ನು ಸೃಷ್ಟಿಸಲು ಇಲ್ಲಿನ ಶಿಕ್ಷಣ ವ್ಯವಸ್ಥೆಗೆ ಸಾಧ್ಯವಾಗಿದೆ. ಈ ಬೆಳವಣಿಗೆಯ ಹಿಂದೆ, ಶಾಲೆಯ ಆಗುಹೋಗುಗಳಲ್ಲಿ ಪೋಷಕರನ್ನು ಒಳಗೊಳ್ಳುವ ಪ್ರಯತ್ನದ ಪಾತ್ರ ಬಹುಮುಖ್ಯವಾಗಿದೆ. ಶಾಲೆಗಳಲ್ಲಿ ಪಿಟಿಎ ಪ್ರಬಲವಾಗಿರುವುದೇ ಇದಕ್ಕೆ ಬಹುದೊಡ್ಡ ಸಾಕ್ಷಿ. ಪಾಲಕರು ಶಾಲೆಯ ಬಗ್ಗೆ ಆಸಕ್ತಿ ವಹಿಸುವುದರಿಂದ ಗ್ರಾಮ ಪಂಚಾಯಿತಿಯೂ ಸೇರಿದಂತೆ ಇಡೀ ಸರ್ಕಾರಿ ವ್ಯವಸ್ಥೆಯು ಶಾಲೆಯ ಅಗತ್ಯಗಳನ್ನು ಗಂಭೀರವಾಗಿ ಪರಿಗಣಿಸಲೇಬೇಕಾದ ಒತ್ತಡ ಸೃಷ್ಟಿಯಾಗುತ್ತದೆ. ಈ ಮಾದರಿಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ, ಶಿಕ್ಷಕರನ್ನು ಹೊಸ ಬಗೆಯ ಬೋಧನಾ ವಿಧಾನಗಳಿಗೆ ಸಿದ್ಧಪಡಿಸಿರುವ ಕೇರಳದ ಡಯಟ್‌ಗಳ ಪಾತ್ರ ಕಾಣಿಸುತ್ತದೆ.

ಶಿಕ್ಷಕರಿಗೆ ತರಬೇತಿ ನೀಡುವುದೆಂದರೆ ಶಾಲಾ ಅವಧಿಯಲ್ಲಿ ಅವರನ್ನು ತರಬೇತಿಗಾಗಿ ಕರೆಸಿಕೊಳ್ಳುವುದು ಎಂಬುದನ್ನು ಕೇರಳ ಸಂಪೂರ್ಣವಾಗಿ ಬದಲಾಯಿಸಿದೆ. ಇಲ್ಲಿನ ಸರ್ಕಾರಿ ಶಾಲೆಗಳಲ್ಲಿ ತರಗತಿಗಳು ಸೋಮವಾರದಿಂದ ಶುಕ್ರವಾರದವರೆಗಷ್ಟೇ ಇರುತ್ತವೆ. ಇದರಿಂದ ಒಟ್ಟಾರೆ ಕೆಲಸದ ದಿನಗಳು ಕಡಿಮೆಯಾಗಿಲ್ಲ. ಶಿಕ್ಷಕರ ಸಾಮರ್ಥ್ಯಾಭಿವೃದ್ಧಿ ತರಬೇತಿಗಳೆಲ್ಲವೂ · ರಜಾ ದಿನಗಳಲ್ಲೇ ನಡೆಯುತ್ತವೆ. ಬೇಸಿಗೆ ರಜೆಯ ದಿನಗಳಲ್ಲಿ ಐದು ದಿನಗಳ ಅವಧಿಯ ತರಬೇತಿಯನ್ನು ಶಿಕ್ಷಕರಿಗೆ ನೀಡಲಾಗುತ್ತದೆ. ಈ ಅವಧಿಯ ರಜೆಯನ್ನು ಮುಂದೆ ತೆಗೆದುಕೊಳ್ಳಲು ಅನುವು ಮಾಡಿಕೊಡಲಾಗುತ್ತದೆ. ಪರಿಣಾಮವಾಗಿ ಶಿಕ್ಷಕರು ರಜಾ ದಿನಗಳಲ್ಲಿ ತರಬೇತಿಗೆ ಹಾಜರಾಗುವುದನ್ನು ಹೇರಿಕೆಯೆಂದು ಭಾವಿಸುವುದಿಲ್ಲ. ಶಿಕ್ಷಕರಲ್ಲಿ ಕಂಪ್ಯೂಟರ್ ಬಗ್ಗೆ ಜ್ಞಾನ ಮೂಡಿಸುವುದಕ್ಕಾಗಿಯೇ ಶಾಲೆಗಳಲ್ಲಿ ಮಾಹಿತಿ ಮತ್ತು ಸಂವಹನ ತಂತ್ರಜ್ಞಾನ ವಿಭಾಗಗಳಿವೆ. ಈ ವಿಷಯದಲ್ಲಿ ತಜ್ಞರಾಗಿರುವ ಒಬ್ಬ ಶಿಕ್ಷಕರು ತಮ್ಮ ಸಹೋದ್ಯೋಗಿಗಳಿಗೆ ಈ ಕುರಿತಂತೆ ಸಂಜೆ ಏಳರ ನಂತರ ತರಬೇತಿ ನೀಡುತ್ತಾರೆ.

ಡಯಟ್‌ಗಳ ಪಾತ್ರ ಕೇವಲ ಶಿಕ್ಷಕರಿಗೆ ತರಬೇತಿ ನೀಡುವುದಕ್ಕಷ್ಟೇ ಸೀಮಿತವಾಗಿ ಉಳಿದಿಲ್ಲ. ಪ್ರತಿ ಪಂಚಾಯಿತಿ ವ್ಯಾಪ್ತಿಯಲ್ಲಿ ನೂರು ಶಾಲೆಗಳನ್ನು ಆರಿಸಿಕೊಂಡು ಹಳೆಯ ವಿದ್ಯಾರ್ಥಿಗಳ ಸಂಘಟನೆ, ಪಿಟಿಎ, ಶಾಲಾ ನಿರ್ವಹಣಾ ಸಮಿತಿಗಳು ಹಾಗೂ ಪಂಚಾಯಿತಿ ಸದಸ್ಯರಿಗೆ ತರಬೇತಿ ನೀಡುತ್ತವೆ. ಶಾಲೆಯೊಂದು ಹೇಗೆ ಕಾರ್ಯನಿರ್ವಹಿಸಬೇಕು ಎಂಬುದರ ಸ್ಪಷ್ಟ ಪರಿಕಲ್ಪನೆ ಶಾಲೆಯೊಂದಿಗೆ ಸಂಬಂಧವಿರುವ ಸಮುದಾಯಕ್ಕೂ ಅರಿವಾಗುತ್ತದೆ. ಹಾಗೆಯೇ ಪ್ರತಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಶೈಕ್ಷಣಿಕ ಯೋಜನೆಯನ್ನು ತಯಾರಿಸುವ ಕೆಲಸದಲ್ಲೂ ಡಯಟ್‌ನ ಪಾಲಿದೆ.

ಎಲ್ಲಕ್ಕಿಂತ ಹೆಚ್ಚಾಗಿ ಜಿಲ್ಲಾ ಮಟ್ಟದಲ್ಲಿ ಶೈಕ್ಷಣಿಕ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವ ಸ್ವಾತಂತ್ರ್ಯ ಡಯಟ್‌ಗಳಿಗಿದೆ. ತಮ್ಮ ಯೋಜನೆಗಳ ಫಲವನ್ನು ಅರಿಯಲು ಬೇಕಾಗಿರುವ ಸಂಶೋಧನೆಗಳನ್ನೂ ಇಲ್ಲಿ ಅವು ನಡೆಸುತ್ತವೆ. ಉದಾಹರಣೆಗೆ ತ್ರಿಶ್ಶೂರ್ ಡಯಟ್‌ನಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಲ್ಲಿ ಆಗಿರುವ ಬದಲಾವಣೆಗಳನ್ನು ಅರಿಯುವುದಕ್ಕೆ ಇಪ್ಪತ್ತು ವಿಭಿನ್ನ ಅಧ್ಯಯನಗಳನ್ನು ಕೈಗೊಳ್ಳಲಾಗಿದೆ. ಅಂದರೆ ಫಲಿತಾಂಶವನ್ನು ಕೇವಲ ಭೌತಿಕವಾದ ಅಂಕಿ-ಅಂಶಗಳಿಗೆ ಸೀಮಿತಗೊಳಿಸದೆ, ಅದರ ಗುಣಮಟ್ಟವನ್ನು ಗ್ರಹಿಸುವ ಪ್ರಯತ್ನವು ಜಿಲ್ಲಾ ಮಟ್ಟದಲ್ಲೇ ನಡೆಯುವುದು ವಿಶೇಷ. ಈ ಬಗೆಯ ಕೆಲಸಗಳನ್ನು ದೇಶದ ಯಾವುದೇ ಡಯಟ್ ಮಾಡಬಹುದು. ಆದರೆ ಕೇರಳದಲ್ಲಿ ಮಾತ್ರ ಇದೇಕೆ ಇಷ್ಟೊಂದು ಪರಿಣಾಮಕಾರಿಯಾಗಿದೆ ಈ ಪ್ರಶ್ನೆಗಿರುವ ಉತ್ತರ, ಕೇರಳ ಸರ್ಕಾರವು ಡಯಟ್ ಮತ್ತು ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು

ತರಬೇತಿ ಸಂಸ್ಥೆ (ಎಸ್‌ಸಿಇಆರ್‌ಟಿ) ಇವುಗಳನ್ನು ನಿರ್ವಹಿಸುತ್ತಿರುವ ವಿಧಾನದಲ್ಲಿ ಅಡಗಿದೆ. ಯಾವುದೇ ಯೋಜನೆಯನ್ನು ಕಾರ್ಯರೂಪಕ್ಕೆ ತರುವುದಕ್ಕೆ ಸಂಪನ್ಮೂಲದ ಕೊರತೆ ಇಲ್ಲದಂತೆ ಸರ್ಕಾರ ನೋಡಿಕೊಳ್ಳುತ್ತದೆ.

ಪ್ರತಿ ವರ್ಷ ಶಿಕ್ಷಣ ಇಲಾಖೆ, ಸರ್ವ ಶಿಕ್ಷಣ ಅಭಿಯಾನ, ಜಿಲ್ಲೆಯ ಸಹಾಯಕ ಶಿಕ್ಷಣಾಧಿಕಾರಿ (ಎಇಓ), ಬಿಆರ್‌ಸಿ ಮತ್ತು ಸಿಆರ್‌ಸಿಯ ಅಧಿಕಾರಿಗಳನ್ನು ಒಳಗೊಂಡು ಡಯಟ್ ಯೋಜನೆ ರೂಪಿಸಿ ಅದಕ್ಕೆ ವೆಚ್ಚವಾಗುವ ಹಣದ ಅಂದಾಜನ್ನು ನೀಡುತ್ತದೆ. ರಾಜ್ಯದ ಎಲ್ಲ ಡಯಟ್‌ಗಳ ಯೋಜನೆಯನ್ನು ಕ್ರೋಡೀಕರಿಸಿ ಕೇಂದ್ರ ಮಾನವ ಸಂಪನ್ಮೂಲ ಸಚಿವಾಲಯಕ್ಕೆ ಕಳುಹಿಸಿಕೊಡುವುದು ರಾಜ್ಯ ಸರ್ಕಾರದ ಕೆಲಸ. ಕೇರಳ ಸರ್ಕಾರ ಇನ್ನೂ ಒಂದು ಹೆಜ್ಜೆ ಮುಂದಿಟ್ಟಿದೆ. ಕೇಂದ್ರ ಸರ್ಕಾರ ಒದಗಿಸುವ ಸಂಪನ್ಮೂಲಕ್ಕಾಗಿ ಕಾಯದೆ ಯೋಜನೆಗಳಿಗೆ ಅಗತ್ಯವಿರುವ ಹಣವನ್ನು ಕೇಂದ್ರದಿಂದ ಹಸಿರು ನಿಶಾನೆ ಸಿಕ್ಕ ಕೂಡಲೇ ರಾಜ್ಯ ಸರ್ಕಾರವು ಮಂಜೂರು ಮಾಡಿಬಿಡುತ್ತದೆ. ಆದ್ದರಿಂದ ಯೋಜನೆಗಳು ಸರಿಯಾದ ಸಮಯಕ್ಕೆ ಜಾರಿಯಾಗುತ್ತವೆ.

ಆದರೆ ಬಹುತೇಕ ರಾಜ್ಯಗಳಲ್ಲಿ ಈ ಬಗೆಯ ವ್ಯವಸ್ಥೆಯಿಲ್ಲ. ಕೇಂದ್ರ ಮಾನವ ಸಂಪನ್ಮೂಲ ಸಚಿವಾಲಯವು ಹಣ ಮಂಜೂರು ಮಾಡುವುದಕ್ಕೆ ಕಾಯುವ ಪ್ರಕ್ರಿಯೆಯಲ್ಲೇ ಯೋಜನೆಗಳೆಲ್ಲವೂ ಧೂಳು ತಿನ್ನುತ್ತವೆ. ಆರ್ಥಿಕ ವರ್ಷದ ಕೊನೆಯಲ್ಲಿ ಅನುದಾನ ವಾಪಸ್ಸು ಹೋಗದಂತೆ ನೋಡಿಕೊಳ್ಳುವ ಧಾವಂತದಲ್ಲಿ ಯಾವುದೂ ಸರಿಯಾಗಿ ನಡೆಯುವುದಿಲ್ಲ.

ಮೊದಲೇ ಹೇಳಿದಂತೆ ಕೇರಳದ ಶೈಕ್ಷಣಿಕ ಕ್ಷೇತ್ರವೂ ನಮ್ಮಂತೆಯೇ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಆದರೆ ಅಲ್ಲಿನ ಶೈಕ್ಷಣಿಕ ವ್ಯವಸ್ಥೆಯು ಉತ್ಸಾಹ ಕಳೆದುಕೊಳ್ಳದೆ ಸವಾಲನ್ನು ಎದುರಿಸಲು ತಂತ್ರಗಳನ್ನು ರೂಪಿಸುತ್ತಾ ಮುಂದಕ್ಕೆ ಸಾಗುತ್ತಿದೆ. ಬಹುಮುಖ್ಯವಾಗಿ, ಪೋಷಕರಲ್ಲಿ ಸರ್ಕಾರಿ ಶಾಲೆಗಳ ಬಗ್ಗೆ ನಂಬಿಕೆಯನ್ನು ಹೆಚ್ಚಿಸುತ್ತಿದೆ. ಎಲ್ಲ ಭಾಗೀದಾರರು, ಶಿಕ್ಷಣ ಇಲಾಖೆ ಮತ್ತು ಸಂಬಂಧಪಟ್ಟ ಇಲಾಖೆಗಳೆಲ್ಲವೂ ಕೈಜೋಡಿಸಿ ಮಕ್ಕಳಿಗೆ ಗುಣಾತ್ಮಕ ಶಿಕ್ಷಣವನ್ನು ದೊರಕಿಸಿಕೊಡಲು ಕಾರ್ಯೋನ್ಮುಖವಾಗಿವೆ. ಇದು ಕರ್ನಾಟಕದ ಶಿಕ್ಷಣ ಇಲಾಖೆಗೂ ಮಾದರಿಯಾಗಬೇಕಾಗಿದೆ. ಆಗ ನಮ್ಮಲ್ಲೂ ನೂರಾರು ಸಂಖ್ಯೆಯ ಮಕ್ಕಳು ಮತ್ತು ಅದಕ್ಕೆ ಅನುಗುಣವಾದ ಶಿಕ್ಷಕರಿರುವ ಪ್ರಾಥಮಿಕ ಶಾಲೆಗಳು ಅರಳುತ್ತವೆ.

■

ಪ್ರಜಾವಾಣಿ, 29-01-2014

ಅನುತ್ತೀರ್ಣರಹಿತ ನೀತಿಯನ್ನು ರದ್ದುಗೊಳಿಸುವ ಆಲೋಚನೆಯು ಮಕ್ಕಳ ಕಲಿಕೆಗೆ ಅನುಕೂಲಕರ ವಾತಾವರಣವನ್ನು ಸೃಷ್ಟಿಸುವ ಅಗತ್ಯಕ್ಕೆ ವಿರುದ್ಧವಾದುದಾಗಿದೆ. ಒಂದೇ ವಯೋಗುಂಪಿನ ಮಕ್ಕಳು ತಪ್ಪದೇ ವ್ಯಕ್ತಿಗತ ಗತಿಯಲ್ಲಿ ಕಲಿಯುತ್ತಾರೆ ಹಾಗೂ ಕನಿಷ್ಠ ಕಲಿಕಾ ಮಟ್ಟವನ್ನು ವಿವಿಧ ಹಂತಗಳ ಮೂಲಕ ಗಳಿಸುತ್ತಾರೆ ಎನ್ನುವುದು ನಿರಂತರ ಸಮಗ್ರ ಮೌಲ್ಯಮಾಪನದ ಅಂತರ್ಗತ ನಂಬಿಕೆ.

# ಅನುತ್ತೀರ್ಣರಹಿತ ನೀತಿಯನ್ನು ಹಿಂತೆಗೆದುಕೊಳ್ಳುವುದರ ಅಪಾಯಗಳು

ಮೇ ತಿಂಗಳ ಕೊನೆಯ ವಾರದಲ್ಲಿ ಶಾಲೆಗಳು ಪುನರಾರಂಭ–ಗೊಳ್ಳುವುದರೊಂದಿಗೆ ಹೊಸ ಶೈಕ್ಷಣಿಕ ವರ್ಷವು ಆರಂಭವಾದಾಗ, ಶಿಕ್ಷಕರು ತಮ್ಮ ಶಾಲಾ ಆವರಣ ಮತ್ತು ತರಗತಿ ಕೋಣೆಗಳನ್ನು ಸ್ವಚ್ಛಗೊಳಿಸುವ ಕಾರ್ಯದಲ್ಲಿ, ಹೊಸ ವಿದ್ಯಾರ್ಥಿಗಳನ್ನು ದಾಖಲಿಸಿಕೊಳ್ಳುವುದರಲ್ಲಿ, ಚಟುವಟಿಕೆಗಳನ್ನು ಯೋಜಿಸುವುದರಲ್ಲಿ ಹಾಗೂ ಮಾಸಿಕ ವೇಳಾಪಟ್ಟಿ (ಕ್ಯಾಲೆಂಡರ್)ಯನ್ನು ತಯಾರಿಸುವುದರಲ್ಲಿ ನಿರತರಾಗಿದ್ದರು. ಸರ್ಕಾರದಿಂದ ಪೂರೈಸಲಾದ ಪಠ್ಯಪುಸ್ತಕಗಳನ್ನು ಮುಖ್ಯೋಪಾಧ್ಯಾಯರ ಕೊಠಡಿಯಲ್ಲಿ ಮಕ್ಕಳಿಗೆ ವಿತರಿಸಲೆಂದು ಒಪ್ಪವಾಗಿ ಪೇರಿಸಿಡಲಾಗಿತ್ತು. ರಜೆಯಲ್ಲಿ ತಮ್ಮ ತಮ್ಮ ಊರುಗಳಿಗೆ ಹೋಗಿರುವ ಮಕ್ಕಳು ನಿಧಾನವಾಗಿ ಹಿಂದಿರುಗುತ್ತಿರುವುದರಿಂದ ಮೊದಲ ವಾರದಲ್ಲಿ ಶಾಲೆಯಲ್ಲಿ ಹಾಜರಾತಿಯ ಪ್ರಮಾಣ ಸುಮಾರು ಶೇ. 50–60 ಅಷ್ಟೇ ಇತ್ತು.

ಇಬ್ಬರು ಹಿರಿಯ ಶಿಕ್ಷಕರು ಮುಖ್ಯೋಪಾಧ್ಯಾಯರ ಕೊಠಡಿಯಲ್ಲಿ ಕುಳಿತು, ಕೆಲವು ನಮೂನೆಗಳನ್ನು ಭರ್ತಿ ಮಾಡುತ್ತ ಆಡಳಿತಾತ್ಮಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಆಗ ಅಲ್ಲಿಗೆ ಬಂದ ಪಾಲಕರೊಬ್ಬರು ಅಸಮಾಧಾನದಿಂದ ಆ ಶಿಕ್ಷಕರಲ್ಲಿ ದೂರು ಹೇಳತೊಡಗಿದರು. ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು

ಕಠಿಣ ಮನಸ್ಕರಾಗಿದ್ದು ತಮ್ಮ ಮಗನಿಗೆ ಒಂಬತ್ತನೆಯ ತರಗತಿಯ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಮೃದುಧೋರಣೆಯನ್ನು ತೋರಿಸುತ್ತಿಲ್ಲ ಎಂಬುದು ಅವರ ದೂರಾಗಿತ್ತು. ಸುಮಾರು ನಲವತ್ತರ ವಯಸ್ಸಿನ, ಆ ವ್ಯಕ್ತಿಯು ಕಡಿಮೆ ಸಂಬಳ ಬರುವ ದಿನಗೂಲಿ ಕಾರ್ಮಿಕರಂತೆ ಕಾಣುತ್ತಿದ್ದರು. ಅವರು ಮುಚ್ಚುಮರೆಯಿಲ್ಲದೇ ಹೇಳಿದ ಪ್ರಕಾರ, ಈ ಶಾಲೆಯಲ್ಲಿ ಓದುತ್ತಿದ್ದ ತಮ್ಮ ಮಗನಿಗೆ ವಿದ್ಯಾಭ್ಯಾಸವನ್ನು ಮುಂದುವರೆಸಲಾಗದಂತೆ ಅನುತ್ತೀರ್ಣಗೊಳಿಸಿದರೆ ಬೇರೆ ಯಾವುದೇ ಖಾಸಗಿ ಶಾಲೆಗಳಲ್ಲಿ ಅವನನ್ನು ಸೇರಿಸುವುದಕ್ಕೆ ಹೆಚ್ಚಿನ ಶುಲ್ಕವನ್ನು ಪಾವತಿಸಬೇಕಾಗುತ್ತದೆ. ಆದರೆ ಅವರಿಗೆ ಅದು ಸಾಧ್ಯವಾಗುವುದಿಲ್ಲ.

ಶಿಕ್ಷಕರಲ್ಲಿ ಹಿರಿಯರಾಗಿದ್ದವರು ಆತ ಹೇಳುವುದನ್ನು ಸಹನೆಯಿಂದ ಕೇಳಿಸಿಕೊಂಡರು. ನಂತರ, ಸ್ನೇಹಪರತೆಯಿಂದ ಆದರೆ ದೃಢವಾದ ದನಿಯಲ್ಲಿ ಆ ವ್ಯಕ್ತಿಯೊಂದಿಗೆ ಮಾತನಾಡಿದರು. ಶಾಲೆಯಲ್ಲಿ ಕನಿಷ್ಠ ಕಲಿಕೆಯ ಮಟ್ಟವನ್ನು ನಿರೀಕ್ಷಿಸಲಾಗಿತ್ತು. ಆದರೆ ಆ ಹುಡುಗನು ಅದನ್ನು ತಲುಪಲು ಬೇಕಾಗಿದ್ದ ಶ್ರಮವನ್ನು ಹಾಕದೇ ಇರುವುದು ಸ್ಪಷ್ಟವಾಗಿತ್ತು. ಈಗ ಫಲಿತಾಂಶವನ್ನು ಬದಲಾಯಿಸುವ ನಿಟ್ಟಿನಲ್ಲಿ ಏನನ್ನೂ ಮಾಡಲಾಗುವುದಿಲ್ಲ ಎಂಬುದಾಗಿ ಅವರು ಹೇಳಿದರು. ಹುಡುಗನು, ಕೊಟ್ಟ ಹೋಂವರ್ಕ್‌ಗಳನ್ನು ಮಾಡಿ ಮುಗಿಸಿದ್ದರೆ, ಶ್ರದ್ಧಾಪೂರ್ವಕವಾಗಿ ಅಭ್ಯಾಸ ಮಾಡಿದ್ದರೆ, ಅವನು ಅಂತಿಮ ಪರೀಕ್ಷೆಯಲ್ಲಿ ಅನುತ್ತೀರ್ಣನಾಗುತ್ತಿರಲಿಲ್ಲ ಎಂದು ಅಭಿಪ್ರಾಯಪಟ್ಟರು. ಒಂದೊಮ್ಮೆ ವಿದ್ಯಾರ್ಥಿಯು ವಿದ್ಯಾಭ್ಯಾಸವನ್ನು ಈ ರೀತಿಯಲ್ಲಿಯೇ ಮುಂದುವರೆಸಿದರೂ ಮುಂದಿನ ವರ್ಷ ಹತ್ತನೆಯ ತರಗತಿಗೆ ಬಂದಾಗ ರಾಜ್ಯ ಪರೀಕ್ಷಾ ಮಂಡಳಿಯು ನಡೆಸುವ ಪಬ್ಲಿಕ್ ಪರೀಕ್ಷೆಯಲ್ಲಿ ಒಳ್ಳೆಯ ಸಾಧನೆಯನ್ನು ತೋರಲಾರ ಎಂಬ ಪೂರ್ವಾನುಮಾನವನ್ನು ಕೂಡ ವ್ಯಕ್ತಪಡಿಸಿದರು.

ಇದು ಬೆಂಗಳೂರಿನ ಹೊರಭಾಗದಲ್ಲಿರುವ, ಅತ್ತಿಬೆಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲೊಂದರಲ್ಲಿ, ಶಾಲೆ ಪುನರಾರಂಭವಾದ ಮೂರನೆಯ ದಿನ ಕಂಡ ದೃಶ್ಯ. ವಿದ್ಯಾರ್ಥಿಯು ಅದೇ ಆವರಣದಲ್ಲಿರುವ ಮಾಧ್ಯಮಿಕ ಶಾಲೆಯಲ್ಲಿ ಓದಿರುವನೆಂಬುದು ಹಾಗೂ ಅಲ್ಲಿನ ಪ್ರೌಢಶಾಲೆಯಲ್ಲೇ ಓದುತ್ತಿರುವನೆಂಬುದು ಸ್ಪಷ್ಟ. ತಾನು ಮನಸ್ಸು ಬಿಚ್ಚಿ ತನ್ನ ಅಳಲನ್ನು ಹೇಳಿಕೊಳ್ಳಬಹುದು ಎಂದೆನ್ನಿಸಿದ ಶಿಕ್ಷಕರ ಬಳಿ ತನ್ನ ಕಳವಳವನ್ನು ಹಂಚಿಕೊಳ್ಳುತ್ತಿದ್ದರು ಆ ಬಡಪಾಯಿ ಪೋಷಕ.

ನಾನು ಶಾಲೆಗೆ ಭೇಟಿಯಿತ್ತ ಸಮಯದಲ್ಲಿ ನನಗೆ ತಿಳಿದು ಬಂದ ಇನ್ನೂ ಹೆಚ್ಚಿನ ಕುತೂಹಲಕರ ಸಂಗತಿಯೆಂದರೆ, ಪ್ರೌಢಶಾಲೆಯ ಆ ಮುಖ್ಯೋಪಾಧ್ಯಾಯರು ಸಾಕಷ್ಟು ಕಟ್ಟುನಿಟ್ಟಿನ ಪ್ರಕ್ರಿಯೆ ಅನುಸರಿಸುವವರಾಗಿದ್ದರು. ಅಕ್ಕಪಕ್ಕದ ಖಾಸಗಿ

ಶಾಲೆಗಳಲ್ಲಿ ಕಳಪೆ ಶೈಕ್ಷಣಿಕ ಸಾಧನೆಯ ಕಾರಣ ದಾಖಲಾತಿ ಸಿಗದ, ಈ ಶಾಲೆಯಲ್ಲಿ ಹತ್ತನೆಯ ತರಗತಿಗೆ ದಾಖಲಾತಿಯನ್ನು ಬಯಸಿ ಬರುವ ವಿದ್ಯಾರ್ಥಿಗಳಿಗೆ ಅನೌಪಚಾರಿಕ ಪರೀಕ್ಷೆಯನ್ನು ಕೂಡ ನಡೆಸುತ್ತಿದ್ದರು. ಇದು, ಶೈಕ್ಷಣಿಕವಾಗಿ ಸಮಾಧಾನಕರ ಫಲಿತಾಂಶವನ್ನು ಪಡೆಯಲು ಅಸಮರ್ಥರಾದ ವಿದ್ಯಾರ್ಥಿಗಳ ಕಾರಣದಿಂದ, ಹತ್ತನೆಯ ತರಗತಿಯ ವಾರ್ಷಿಕ ಪರೀಕ್ಷೆಗಳಲ್ಲಿ ಶಾಲೆಯ ಒಟ್ಟಾರೆ ಸಾಧನೆಯು ಇಳಿಮುಖವಾಗಬಾರದು ಎಂಬುದನ್ನು ಖಾತ್ರಿಪಡಿಸಿಕೊಳ್ಳುವುದಕ್ಕಾಗಿತ್ತು.

ಮೇಲಿನ ಪಾಲಕ-ಶಿಕ್ಷಕ ಸಂಭಾಷಣೆಯಿಂದ ನಾನು ಗ್ರಹಿಸಿದ್ದೆಂದರೆ, ಬಹುಶಃ ಆ ಬಡ ಕೂಲಿಕಾರನ ಮಗನು ತನ್ನ ಜೀವನದಲ್ಲಿ ಶಾಲೆಗೆ ಹೋಗಿದ್ದು ಅದೇ ಕೊನೆಯ ದಿನವಾಗಿದ್ದಿರಬೇಕು. ಅವನು ಮತ್ತೆ ಶಾಲೆಗೆ ಹಿಂದಿರುಗಿ ಬರುವ ಸಾಧ್ಯತೆಯೂ ಅತ್ಯಂತ ಕಡಿಮೆ ಇತ್ತು. ಈ ವೈಫಲ್ಯದ ಕಾರಣ ಹುಡುಗನ ಆತ್ಮವಿಶ್ವಾಸವು ನುಚ್ಚುನೂರಾಗಿರುತ್ತದೆ, ಆತ ಈ ಹಂತವನ್ನು ಹೇಗೋ ಪಾರಾಗಿಬಿಟ್ಟರೆ ಮುಂದೆ ತನ್ನ ತಂದೆಯ ಹಾದಿಯನ್ನೇ ಅನುಸರಿಸಿ ಗ್ಯಾರೇಜಿನಲ್ಲೋ ವಾಹನ ದುರಸ್ತಿ ಮಾಡುವ ಅಂಗಡಿಯಲ್ಲೋ ಮತ್ತೊಬ್ಬ ಕಾರ್ಮಿಕನಾಗಿ ಜೀವಮಾನವಿಡೀ ಉಳಿವಿಗಾಗಿ ಹೋರಾಡುತ್ತ ಕಳೆಯಬಹುದು ಎಂದು ಊಹಿಸಿಕೊಂಡೆ.

ಮೇಲಿನ ಘಟನೆಯನ್ನು ನಾನು ನಿರೂಪಿಸುತ್ತಿರುವ ಈ ಹೊತ್ತಿನಲ್ಲಿಯೇ ರಾಷ್ಟ್ರೀಯ ಮಟ್ಟದಲ್ಲಿ ದೊಡ್ಡದೊಂದು ಚರ್ಚೆ ನಡೆಯುತ್ತಿರುವುದು ಕೇವಲ ಕಾಕತಾಳೀಯವಲ್ಲ. ಹದಿನೆಂಟು ರಾಜ್ಯಗಳು ಶಿಕ್ಷಣ ಹಕ್ಕು ಕಾಯ್ದೆ(ಆರ್‌ಟಿಇ) ಯಲ್ಲಿನ ಅನುತ್ತೀರ್ಣರಹಿತ ನೀತಿಯನ್ನು ತೆಗೆದು ಹಾಕುವುದರ ಪರವಾಗಿವೆ. ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ನೇಮಿಸಿದ ಉನ್ನತ ಮಟ್ಟದ ಸಮಿತಿಯೊಂದು ಈ ನೀತಿಯು ಆರನೆಯ ತರಗತಿಗೆ ಕೊನೆಗೊಳ್ಳಬೇಕು ಎಂದು ಶಿಫಾರಸ್ಸು ಮಾಡಿದೆ. ಶಿಕ್ಷಣ ಹಕ್ಕು ಕಾಯ್ದೆ ಅನುಚ್ಛೇದ 16, 'ತಡೆಹಿಡಿಯುವುದು ಹಾಗೂ ಉಚ್ಚಾಟನೆಯ ನಿಷೇಧ'ದ ಕುರಿತಾಗಿದೆ. 'ಶಾಲೆಗೆ ದಾಖಲಾದ ಯಾವುದೇ ಮಗುವನ್ನೂ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಯುವ ತನಕ, ಅಂದರೆ ಎಂಟನೆಯ ತರಗತಿಯ ತನಕ ಯಾವುದೇ ತರಗತಿಯಲ್ಲಿ ತಡೆಹಿಡಿಯಬಾರದು ಅಥವಾ ಶಾಲೆಯಿಂದ ಹೊರಹಾಕಬಾರದು' ಎಂದು ಅದು ಹೇಳುತ್ತದೆ.

ಅದೃಷ್ಟಕ್ಕೆ ಈ ಶಿಶುಸ್ನೇಹಿ ನೀತಿಯನ್ನು ಉಳಿಸಿಕೊಳ್ಳಲು ಉದ್ದೇಶಿಸಿರುವ ಕೆಲವೇ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಕೇಂದ್ರ ಸರ್ಕಾರದ ಮಾನವ

ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ಈ ಪ್ರಮುಖ ಸಮಸ್ಯೆಯನ್ನು ನಿಭಾಯಿಸಲು ಇನ್ನೂ ಹೆಣಗಾಡುತ್ತಿರುವ ಈ ಸಂದರ್ಭದಲ್ಲಿ ಪ್ರಗತಿಪರ ಶಿಕ್ಷಣ ಹಕ್ಕು ಕಾಯ್ದೆಯ ಹಿಂದಿನ ಉದ್ದೇಶವನ್ನು ಮುಖ್ಯವಾಗಿ ಗೌರವಿಸಲೇಬೇಕಾಗಿದ್ದು ಇದರೊಂದಿಗೆ ನಿಕಟ ಸಂಬಂಧ ಹೊಂದಿರುವ ಆದರೆ ಬಹಳಷ್ಟು ತಪ್ಪುತಿಳುವಳಿಕೆಗೆ ಗ್ರಾಸವಾಗಿರುವ ಹಾಗೂ ಕೆಟ್ಟದಾಗಿ ಅನುಷ್ಠಾನಗೊಂಡಿರುವ ಮತ್ತೊಂದು ಮೌಲ್ಯಮಾಪನ ಕ್ರಮ, ನಿರಂತರ ಹಾಗೂ ಸಮಗ್ರ ಮೌಲ್ಯಮಾಪನ(ಸಿಸಿಇ)ದ ಆಶಯವನ್ನು ತಿಳಿದುಕೊಳ್ಳಬೇಕಿದೆ. ಒಂದೇ ವಯೋಗುಂಪಿನ ಮಕ್ಕಳು ತಮ್ಮದೇ ವ್ಯಕ್ತಿಗತ ಗತಿಯಲ್ಲಿ ಕಲಿಯುತ್ತಾರೆ ಹಾಗೂ ನಿರೀಕ್ಷಿತ ಕಲಿಕೆಯ ಮಟ್ಟವನ್ನು ಶಿಕ್ಷಣದ ವಿವಿಧ ಹಂತಗಳ ಮೂಲಕ ಗಳಿಸಿಕೊಳ್ಳುತ್ತಾರೆ ಎನ್ನುವುದು ನಿರಂತರ ಹಾಗೂ ಸಮಗ್ರ ಮೌಲ್ಯಮಾಪನದ ಅಂತರ್ಗತ ನಂಬಿಕೆ. ನಾವು ಒಮ್ಮೆ ಈ ಅಂಶವನ್ನು ಗುರುತಿಸಿದರೆ, ನಂತರ ಮಕ್ಕಳು ತರಗತಿಯಲ್ಲಿ ಉತ್ತೀರ್ಣ ಅಥವಾ ಅನುತ್ತೀರ್ಣರಾಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ ಎನ್ನುವುದು ಅದರಲ್ಲೇ ಅಡಕವಾಗಿರುವ ತರ್ಕ. ಇದು ಕಡ್ಡಾಯ ಅನುತ್ತೀರ್ಣರಹಿತ ನೀತಿಯ ತಿರುಳು. ಈ ನೀತಿಯನ್ನು ತೆಗೆದು ಹಾಕಬೇಕೆಂದು ಜೋರಾಗಿಯೇ ವಾದಿಸುತ್ತಿರುವವರು, ಮಗು ನಿರಂತರ ಕಲಿಕೆಯ ಮೂಲಕ ಜ್ಞಾನವನ್ನು ಹಂತಹಂತವಾಗಿ ಪಡೆದುಕೊಳ್ಳುತ್ತದೆ ಎಂಬುದನ್ನು ಒಪ್ಪಲು ವಿಫಲರಾದ ಕಾರಣ, ತಮ್ಮ ಆಲೋಚನೆಗಳಲ್ಲಿ ತಿರೋಗಾಮಿಗಳಾಗಿದ್ದಾರೆ ಎನ್ನುವುದು ಸ್ಪಷ್ಟ.

ಅನುತ್ತೀರ್ಣತೆಯ ಪ್ರತಿಪಾದಕರು ಒಪ್ಪದ ಇನ್ನೊಂದು ಆಯಾಮವೆಂದರೆ, ಯಾವ ವಿದ್ಯಾರ್ಥಿಯೂ ಬದುಕಿನ ಎಲ್ಲಾ ಆಯಾಮಗಳಲ್ಲಿಯೂ 'ವಿಫಲ'ನಾಗಿರುವುದಿಲ್ಲ ಎನ್ನುವುದು. ಒಬ್ಬರು ಗಣಿತದಲ್ಲಿ ಅಥವಾ ಇಂಗ್ಲಿಷಲ್ಲಿ ಚೆನ್ನಾಗಿಲ್ಲದಿರಬಹುದು. ಆದರೆ ಸಂಗೀತ ಅಥವಾ ಕ್ರೀಡೆಗಳಲ್ಲಿ ಉತ್ತಮ ಸಾಧನೆಗೈಯುವ ಸಾಮರ್ಥ್ಯವನ್ನು ಹೊಂದಿರಬಹುದು. 'ವಿಫಲರು' ಎಂದು ಕರೆಯಲ್ಪಡುವವರು ಅತ್ಯುತ್ತಮವಾದ ಸಾಮಾಜಿಕ ಕೌಶಲ್ಯಗಳನ್ನು ಹೊಂದಿರುವ ಸಾಧ್ಯತೆಯೂ ಕೂಡ ಇದೆ. ಸಂವೇದನಾಶೀಲತೆಯನ್ನು ಹಾಗೂ ಇತರರೊಡನೆ ಅರ್ಥಪೂರ್ಣವಾಗಿ ತೊಡಗಿಕೊಳ್ಳುವ ಸಾಮರ್ಥ್ಯವನ್ನು ಅವರು ಹೊಂದಿರುತ್ತಾರೆ. ಈಗ ಜಾರಿಯಲ್ಲಿರುವ ನಮ್ಮ ಮೌಲ್ಯಮಾಪನದ ಮಾನದಂಡಗಳು ಈ ಗುಣವೈಶಿಷ್ಟ್ಯಗಳನ್ನು ಅಥವಾ ಸಾಮರ್ಥ್ಯಗಳನ್ನು ಪರಿಗಣಿಸುವುದೇ ಇಲ್ಲ ಮತ್ತು ಎಲ್ಲರನ್ನೂ ಒಂದೇ ತಕ್ಕಡಿಯಲ್ಲಿ ತೂಗಲಾಗುತ್ತದೆ.

ನನ್ನದೇ ಉದಾಹರಣೆಯನ್ನು ಹೇಳಬೇಕೆಂದರೆ, ಈಗ್ಗೆ ಸುಮಾರು ನಲವತ್ತು ವರ್ಷಗಳ ಹಿಂದೆ, ಪದವಿಪೂರ್ವ ಹಂತದ ಮೊದಲನೆಯ ವರ್ಷದ ಅಂತಿಮ ಪರೀಕ್ಷೆಯಲ್ಲಿ ಅಕೌಂಟೆನ್ಸಿಯಲ್ಲಿ ಉತ್ತೀರ್ಣನಾಗಲು ಆಗದಿದ್ದುದಕ್ಕೆ 'ವಿಫಲ'

ಎಂಬ ಹಣೆಪಟ್ಟಿಯನ್ನು ನಾನು ಅಂಟಿಸಿಕೊಳ್ಳಬೇಕಾಯಿತು. ಎರಡೂ ಭಾಷೆಗಳಲ್ಲಿ ಸಾಕಷ್ಟು ಉತ್ತಮ ಅಂಕಗಳನ್ನು ಪಡೆದಿದ್ದೆ. ಅದಕ್ಕಿಂತ ಸ್ವಲ್ಪ ಸಾಧಾರಣ ಎನಿಸುವ ಅಂಕಗಳು ಉಳಿದ ವಿಷಯಗಳಲ್ಲಿ ಬಂದಿದ್ದವು. ಎಲ್ಲದಕ್ಕೂ ಹೆಚ್ಚಾಗಿ, ನಾನು ನನ್ನ ಕಾಲೇಜಿನ ಕ್ರಿಕೆಟ್ ತಂಡವನ್ನು ಪ್ರತಿನಿಧಿಸುತ್ತಿದ್ದೆ. ಕ್ರೀಡಾ ವಿಭಾಗಕ್ಕೆ ಇದ್ದ ಸೀಟು ಹಂಚಿಕೆಯ ಮೂಲಕವೇ ಆ ಖ್ಯಾತ ವಿದ್ಯಾಲಯದಲ್ಲಿ ದಾಖಲಾತಿ ಪಡೆದಿದ್ದೆ. ಆ ತಂಡದಲ್ಲಿ ಸೇರಿಕೊಳ್ಳುವುದು ತುಂಬಾ ಕಷ್ಟಕರವಾಗಿತ್ತು. ಏಕೆಂದರೆ, ಅದರಲ್ಲಿ ಕ್ರೀಡಾತಾರೆಗಳೇ ತುಂಬಿದ್ದರು (ಅವರಲ್ಲಿ ಹಲವರು ಆಗಲೇ ರಾಜ್ಯ ರಣಜಿ ಟ್ರೋಫಿ ತಂಡವನ್ನು ಪ್ರತಿನಿಧಿಸಿದ ಮನ್ನಣೆಗೆ ಪಾತ್ರರಾಗಿದ್ದರು). ಅವರಲ್ಲಿ ದೇಶಕ್ಕೆ ಹೆಮ್ಮೆ ತಂದ, ರಾಹುಲ್ ದ್ರಾವಿಡ್ ಕೂಡ ಸೇರಿದ್ದರು. ಅವರೂ ಮುಂದೆ, ಇದೇ ಕಾಲೇಜಿನಿಂದ ತೇರ್ಗಡೆಯಾದರು. ಈ ಹಿನ್ನಡೆಯಿದ್ದರೂ ನಂತರದಲ್ಲಿ ನನಗಿದ್ದ ಬಲವಾದ ಕೌಟುಂಬಿಕ ಬೆಂಬಲ, ಕ್ರಿಕೆಟ್‌ನಿಂದ ಬೆಳೆಸಿಕೊಂಡ ಹೋರಾಟದ ಮನೋಭಾವ ಹಾಗೂ ಸ್ನೇಹಿತರ ಒತ್ತಾಸೆಯಿಂದಾಗಿ ತಿದ್ದುಪಡಿ ಮಾಡಿಕೊಂಡು ವೈಫಲ್ಯವನ್ನು ಗೆಲ್ಲಲು ಸಾಧ್ಯವಾಯಿತು.

ಆದರೆ, ಬೇರೆ ಎಲ್ಲರಿಗೂ ವಿಶೇಷವಾಗಿ, ಪಾಲಕರು ಅಥವಾ ಅಜ್ಜ-ಅಜ್ಜಿಯರು ಶಿಕ್ಷಿತರಾಗಿರದ ಕುಟುಂಬಗಳಿಂದ ಬಂದ ಮಕ್ಕಳಿಗೆ ಇದೇ ಅನುಕೂಲಕರ ಪರಿಸ್ಥಿತಿ ಇರುವುದಿಲ್ಲ. ಅನುತ್ತೀರ್ಣಗೊಂಡ ವಿದ್ಯಾರ್ಥಿಯು ಹುಡುಗಿಯಾಗಿದ್ದರೆ ಹಾಗೂ ಸಾಮಾಜಿಕವಾಗಿ ಹಿಂದುಳಿದ ಸಮುದಾಯಗಳಲ್ಲೊಂದಕ್ಕೆ ಸೇರಿದ್ದು, ಕನಿಷ್ಠ ಆದಾಯ ಹೊಂದಿದ್ದರೆ ಸವಾಲು ಇನ್ನಷ್ಟು ತೀವ್ರವಾಗುತ್ತದೆ. ಇಂತಹ ಸನ್ನಿವೇಶಗಳಲ್ಲಿ, ಆಕೆಯ ಕುಟುಂಬವು ಸಾಧ್ಯವಾದಷ್ಟು ಬೇಗ ಅವಳನ್ನು ಮದುವೆ ಮಾಡಿ ಕಳುಹಿಸಲು ಉತ್ಸುಕವಾಗಿರುತ್ತದೆ. ಏಕೆಂದರೆ, ಶಿಕ್ಷಣವನ್ನು ಮುಂದುವರೆಸುವುದರಿಂದ ಅವಳಿಗೆ ಸದ್ಯದಲ್ಲಿ ಯಾವ ಪ್ರಯೋಜನವೂ ಇಲ್ಲ ಎಂದು ಕುಟುಂಬದ ಸದಸ್ಯರು ಬಲವಾಗಿ ನಂಬಿರುತ್ತಾರೆ. ಈ ಹಿನ್ನೆಲೆಯಲ್ಲಿ ಯಾವುದೇ ತರಹದ ಆರಂಭಿಕ ವೈಫಲ್ಯ ಎಂದರೆ, ಶಿಕ್ಷಣದಿಂದ ಶಾಶ್ವತವಾಗಿ ಸಂಬಂಧ ಕಡಿದುಕೊಳ್ಳುವುದು ಎಂದೇ ಅರ್ಥ. ಇದು ಹುಡುಗಿ ಮತ್ತವಳ ಕುಟುಂಬವನ್ನು 'ಕಡಿಮೆ ಶಿಕ್ಷಣ – ಕಡಿಮೆ ಆರ್ಥಿಕ ಅವಕಾಶ – ಕಡಿಮೆ ಗಳಿಕೆ ಸಾಮರ್ಥ್ಯ – ಕಡಿಮೆ ಸಾಮಾಜಿಕ, ಆರ್ಥಿಕ ಸ್ಥಾನಮಾನ...' ಇದೇ ವಿಷವರ್ತುಲ ದೊಳಕ್ಕೆ ಇರುವಂತೆ ಮಾಡುತ್ತದೆ. ಅದಕ್ಕೂ ಮಿಗಿಲಾಗಿ ಆ ಹುಡುಗಿಯ ಮಕ್ಕಳೂ ಕೂಡ ಇದೇ ಜಾಲದೊಳಗೆ ಸಿಕ್ಕು ಒದ್ದಾಡುವ ಸಾಧ್ಯತೆಯೇ ಹೆಚ್ಚು.

ಕಡ್ಡಾಯ ಅನುತ್ತೀರ್ಣ ನೀತಿಯ ರದ್ಧತಿಯು ವೈಫಲ್ಯದ ಭೀತಿಯು ಪ್ರಧಾನವಾಗಿರುವ ಪರಿಸರದಲ್ಲಿಯೂ ಮಕ್ಕಳು ಕಲಿಯಬಲ್ಲರು ಎಂಬ ದೋಷಪೂರ್ಣ ನಂಬಿಕೆಯನ್ನು ಬಲಗೊಳಿಸುತ್ತದೆ. ಅನುತ್ತೀರ್ಣರಹಿತ

ನೀತಿಯನ್ನು ರದ್ದುಗೊಳಿಸುವ ಆಲೋಚನೆಯು ಮಕ್ಕಳ ಕಲಿಕೆಗೆ ಅನುಕೂಲಕರ ವಾತಾವರಣವನ್ನು ಸೃಷ್ಟಿಸುವ ಅಗತ್ಯಕ್ಕೆ ವಿರುದ್ಧವಾದುದಾಗಿದೆ. ರಚನಾತ್ಮಕ ಹಾಗೂ ದಂಡನಾರಹಿತ ಮೌಲ್ಯಮಾಪನದ ಮೂಲಕ ಮಾತ್ರವೇ ಇಂತಹ ಕಲಿಕೆಗೆ ಅನುಕೂಲಕರ ವಾತಾವರಣ ನಿರ್ಮಿಸಲು ಸಾಧ್ಯ.

ಶಿಕ್ಷಣದಲ್ಲಿ ಆಸಕ್ತಿ ಹೊಂದಿರುವ ಭಾಗೀದಾರರೆಲ್ಲರೂ ಈ ಅಂಶವನ್ನು ಸರಿಯಾದ ದೃಷ್ಟಿಕೋನದಿಂದ ನೋಡಬೇಕಿದೆ. ಶಿಶುವಿರೋಧಿ ಕ್ರಮವನ್ನು ತರದಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮೇಲೆ ಅಗಾಧ ಒತ್ತಡವನ್ನು ಹೇರಬೇಕಿದೆ.

■

ಬಿ ಫಸ್ಟ್, 08-06-2016



**26ನೇ ಆಗಸ್ಟ್ 2014** – ಕೇರಳದ ಶಾಲಾ ಶಿಕ್ಷಣ ವ್ಯವಸ್ಥೆಯ ಬಗ್ಗೆ ಅರಿಯಲು ರಾಜ್ಯದ ಡಯಟ್ ಪ್ರಾಂಶುಪಾಲರೊಂದಿಗೆ ಭೇಟಿ ನೀಡಿದಾಗ ತ್ರಿಶೂರ್‌ನ ಡಯಟ್ ಮುಂದೆ ತೆಗೆದ ಚಿತ್ರ. ಅಲ್ಲಿನ ಪಾಲಕ-ಶಿಕ್ಷಕರ ಸಂಘಗಳು ಮತ್ತು ಸಮುದಾಯದ ಸಕ್ರಿಯ ಪಾತ್ರದಿಂದಾಗಿ ಸರ್ಕಾರಿ ಶಾಲೆಗಳು ಆಕರ್ಷಕವಾಗಿಯೂ ಕ್ರಿಯಾಶೀಲವಾಗಿಯೂ ನಿರ್ವಹಿಸಲಾಗುತ್ತಿದೆ. ಡಯಟ್‌ಗಳು ಶೈಕ್ಷಣಿಕ ಉಪಕ್ರಮಗಳು, ಸಂಶೋಧನೆ, ಶಿಕ್ಷಕರ ಸಾಮರ್ಥ್ಯಾಭಿವೃದ್ಧಿ, ತಂತ್ರಜ್ಞಾನದ ಅಳವಡಿಕೆಯಂಥ ವಿಚಾರಗಳಲ್ಲಿ ಮುಂಚೂಣಿಯಲ್ಲಿವೆ.

ವರ್ಷಕ್ಕೊಮ್ಮೆ ಉಸಿರುಗಟ್ಟಿಸುವ ಬಿಗಿ ವಾತಾವರಣದಲ್ಲಿ ಪರೀಕ್ಷೆ ನಡೆಸಿ, ಕಲಿಕೆಯನ್ನು ದೃಢೀಕರಿಸುವ ವ್ಯವಸ್ಥೆ ಬದಲಾಗಬೇಕು. ರಚನಾತ್ಮಕ ಮೌಲ್ಯಮಾಪನದ ಮೂಲಕ ದೈನಂದಿನ ತರಗತಿ ಪ್ರಕ್ರಿಯೆಯ ಭಾಗವಾಗಿ ಮಕ್ಕಳಿಗೆ ಆತಂಕವುಂಟಾಗದ ಹಾಗೆ ಅವರ ಕಲಿಕೆಯ ಮಟ್ಟವನ್ನು ಅರಿಯುವಂತಾಗಬೇಕು.

# ತೆರೆದ ಪುಸ್ತಕ ಪರೀಕ್ಷೆ: ಸಾಧಕ–ಬಾಧಕಗಳು

ಪ್ರಾಥಮಿಕ ಶಿಕ್ಷಣದ ಸುಧಾರಣೆಗೆ ಸಂಬಂಧಿಸಿದಂತೆ ಇತ್ತೀಚೆಗೆ ವಿಷಯವೊಂದು ಹೆಚ್ಚಿನ ಚರ್ಚೆಗೆ ಗ್ರಾಸವಾಯಿತು. ಅದು ರಾಜ್ಯದ ನೂತನ ಶಿಕ್ಷಣ ಸಚಿವರ ಪ್ರಸ್ತಾವನೆಯಂತೆ, ವಿದ್ಯಾರ್ಥಿಗಳನ್ನು ಅಪನಂಬಿಕೆಯಿಂದ ಕಾಣುವ ಈಗಿನ ಪರೀಕ್ಷಾ ವ್ಯವಸ್ಥೆಯನ್ನು ಬದಲಿಸಿ, ಪ್ರಾಥಮಿಕ ಶಾಲೆಯ ಒಂದರಿಂದ ಐದನೆಯ ತರಗತಿವರೆಗೆ 'ತೆರೆದ ಪುಸ್ತಕ'ದ ಪರೀಕ್ಷೆ ವ್ಯವಸ್ಥೆಯನ್ನು ಪರಿಚಯಿಸುವ ಕುರಿತಾಗಿತ್ತು.

ಭಯಮುಕ್ತ ಕಲಿಕಾ ವಾತಾವರಣವನ್ನು ನಿರ್ಮಿಸಿ ಮಕ್ಕಳ ಸೃಜನಾತ್ಮಕತೆ ಹೆಚ್ಚಿಸಲು ಇಂಥ ಬದಲಾವಣೆಯು ನಾಂದಿಹಾಡುತ್ತದೆಂಬುದು ಈ ಆಲೋಚನೆಯ ಹಿಂದಿನ ಆಶಯವೆನಿಸುತ್ತದೆ. ವಿದ್ಯಾರ್ಥಿಗಳ ನೈಜ ಕಲಿಕೆಯ ಮಟ್ಟವನ್ನು ಅರಿಯುವ ದೃಷ್ಟಿಯಿಂದ ನೋಡಿದಾಗ ಈ ಕ್ರಮ ಸ್ವಾಗತಾರ್ಹ ವಾದುದು. ಆದರೆ ಇದನ್ನು ಜಾರಿಗೊಳಿಸುವ ಮುನ್ನ ಪ್ರಸ್ತುತ ಶಾಲಾ ವ್ಯವಸ್ಥೆಯಲ್ಲಿ ಜಾರಿಯಲ್ಲಿರುವ ಬೋಧನಾ–ಕಲಿಕೆ ಪ್ರಕ್ರಿಯೆ, ಮೌಲ್ಯಮಾಪನಾ ಪದ್ಧತಿ, ಶಿಕ್ಷಕರ ಮನಃಸ್ಥಿತಿಗಳಲ್ಲಿ ಕೆಲವು ಮಾರ್ಪಾಡುಗಳನ್ನು ತರಬೇಕಾಗುತ್ತದೆ. ಭಾಗೀದಾರರೊಂದಿಗೆ ಸಂವಾದವೂ ಸೇರಿದಂತೆ ನಿರ್ದಿಷ್ಟ ಪೂರ್ವಸಿದ್ಧತೆಗಳನ್ನು ಮಾಡಿಕೊಂಡು ಬದಲಾವಣೆಗೆ ಸೂಕ್ತ ವಾತಾವರಣ ನಿರ್ಮಿಸುವುದು ಅಗತ್ಯವೆನಿಸುತ್ತದೆ.

ಇಂಥ ಶೈಕ್ಷಣಿಕ ಸುಧಾರಣೆಗಳ ಅನುಷ್ಠಾನದ ಕೇಂದ್ರಭಾಗವಾಗಿರುವ ಶಿಕ್ಷಕರನ್ನು ಸಂಪೂರ್ಣವಾಗಿ ವಿಶ್ವಾಸಕ್ಕೆ ತೆಗೆದುಕೊಳ್ಳುವುದು ಬದಲಾವಣೆ ಪ್ರಕ್ರಿಯೆಯ ಆದ್ಯತೆಯಾಗಬೇಕು. ಮುಕ್ತ ಪರೀಕ್ಷಾ ಪದ್ಧತಿಯ ತಾರ್ಕಿಕ ಹಿನ್ನೆಲೆ, ಸಾಧಕ-ಬಾಧಕಗಳ ಬಗ್ಗೆ ಅವರು ತಳೆದಿರುವ ನಂಬಿಕೆಗಳನ್ನು ಪರೀಕ್ಷಿಸಿಕೊಳ್ಳುವಂತಾಗಬೇಕು. ಈ ಪ್ರಕ್ರಿಯೆಯಲ್ಲಿ ಎದುರಾಗುವ ಪ್ರಶ್ನೆಗಳನ್ನು ಜಿಜ್ಞಾಸೆಗೊಳಪಡಿಸಿ ಬಹುತೇಕ ಸವಾಲುಗಳಿಗೆ ಅವರೇ ಪರಿಹಾರ ಕಂಡುಕೊಳ್ಳುವಲ್ಲಿ ಶಿಕ್ಷಣ ಇಲಾಖೆಯು ಮುಂದಾಗಬೇಕು. ಮೇಲಿನಿಂದ ವಿಧಿಸುವ ಆದೇಶಗಳನ್ನು ಪಾಲಿಸಿ, ಬದಲಾವಣೆಯನ್ನು ಅನುಷ್ಠಾನಗೊಳಿಸುವುದಕ್ಕಷ್ಟೇ ಶಿಕ್ಷಕರನ್ನು ಸೀಮಿತಗೊಳಿಸದೆ ಇದರ ಹಿಂದಿನ ಸೈದ್ಧಾಂತಿಕ ಹಿನ್ನೆಲೆಯನ್ನು ಶಿಕ್ಷಕರು ಮನಗಾಣುವಂಥ ವಿಶ್ವಸನೀಯ ವಾತಾವರಣವನ್ನು ಸೃಷ್ಟಿಸಬೇಕಾಗುತ್ತದೆ. ಆಗಲೇ ಅವರು ವಿದ್ಯಾರ್ಥಿಗಳಿಗೆ ನಂಬಲರ್ಹ ಕಲಿಕಾ ವಾತಾವರಣವನ್ನು ನಿರ್ಮಿಸಬಲ್ಲರು.

ಇದಕ್ಕೆ ಪೂರಕವಾಗಿ ಬದಲಾವಣೆಯಾಗಬೇಕಾಗಿರುವ ಇನ್ನೊಂದು ಮುಖ್ಯ ಆಯಾಮವೆಂದರೆ, ಈ ಪರೀಕ್ಷಾ ವ್ಯವಸ್ಥೆಯ ಪ್ರತಿಬಿಂಬವಾಗಿರುವ ವಾರ್ಷಿಕ ಪರೀಕ್ಷೆಯ ಪ್ರಶ್ನೆಪತ್ರಿಕೆಯ ನಮೂನೆಯಲ್ಲಿ ಆಗಬೇಕಾದ ಬದಲಾವಣೆ. ಇತ್ತೀಚಿನ ವರ್ಷಗಳ ಎಸ್‌ಎಸ್‌ಎಲ್‌ಸಿ ಪರೀಕ್ಷೆಯ ಕನ್ನಡ ಭಾಷಾ ಪ್ರಶ್ನೆಪತ್ರಿಕೆಗಳನ್ನು ನಮ್ಮ ಸಂಸ್ಥೆಯ ಭಾಷಾ ಸಂಪನ್ಮೂಲ ತಂಡವು ವಿಶ್ಲೇಷಿಸಿತು. ಆದರಿಂದ, ಉರುಹೊಡೆದ ಮಾಹಿತಿಯಾಧಾರಿತ ಸುಲಭ ಕೌಶಲದ ಪ್ರಶ್ನೆಗಳಿಗೆ ಶೇ. 70ರಷ್ಟು ಆದ್ಯತೆ ನೀಡಲಾಗಿದೆ ಎನ್ನುವ ಅಂಶವು ಹೊರಹೊಮ್ಮಿತು. ಉನ್ನತ ಕೌಶಲಗಳಾದ ಸ್ವಂತ ಅಭಿವ್ಯಕ್ತಿ, ಕಲ್ಪನೆ, ತಾರ್ಕಿಕ ವಿಮರ್ಶೆ, ಅಮೂರ್ತ ಪರಿಕಲ್ಪನೆಗಳನ್ನು ಗ್ರಹಿಸಿ ಸ್ವಂತ ಮಾತುಗಳಲ್ಲಿ ಸರಳವಾಗಿ ವಿವರಿಸುವ ಪ್ರಶ್ನೆಗಳು ಅತ್ಯಂತ ಕಡಿಮೆ ಪ್ರಮಾಣದಲ್ಲಿದ್ದವು. ಪ್ರೌಢಶಾಲಾ ಹಂತದಲ್ಲೇ ಪಠ್ಯಪುಸ್ತಕದಾಚೆಗೆ ವಿದ್ಯಾರ್ಥಿಗಳಿಗೆ ಸಂಬಂಧಿಸಿದ ಹೊರಜಗತ್ತಿನ ವಿಷಯಗಳನ್ನರಿಯಲು ಅತ್ಯಂತ ಕಡಿಮೆ ಅವಕಾಶಗಳಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005ರ ಆಶಯದಂತೆ ವಿದ್ಯಾರ್ಥಿಗಳಲ್ಲಿ ಉನ್ನತ ಕೌಶಲಗಳನ್ನು ಬೆಳೆಸುವ ಪರಿಪಾಠವು ಪ್ರಾಥಮಿಕ ಶಾಲಾ ಹಂತದಲ್ಲೇ ಪ್ರಾರಂಭವಾಗಬೇಕು. ಈ ಹಿನ್ನೆಲೆಯಲ್ಲಿ ಯಾವುದೇ ವಿಷಯವನ್ನು ತರಗತಿಯಲ್ಲಿ ಬೋಧಿಸಿದರೂ ಆ ವಿಷಯವನ್ನು ಆಮೂಲಾಗ್ರವಾಗಿ ಅರಿಯುವಂತೆ ಮಾಡುವುದರಲ್ಲಿ ಶಿಕ್ಷಕರ ಪಾತ್ರವು ದೊಡ್ಡದು. ನೀರಿನ ರಾಸಾಯನಿಕ ಗುಣಲಕ್ಷಣಗಳನ್ನು ಕುರಿತು ಪಾಠ ಮಾಡುವ ವಿಜ್ಞಾನ ಶಿಕ್ಷಕರು ಕೆರೆಗಳ

ಮಾಲಿನ್ಯದ ಬಗ್ಗೆಯೂ, ಭೌಗೋಳಿಕ ಆಯಾಮದಿಂದಲೂ ಭಾಷಾಸ್ವರೂಪದ ದೃಷ್ಟಿಯಿಂದಲೂ ಸಂಯೋಜಿತ ರೀತಿಯಲ್ಲಿ ವಿದ್ಯಾರ್ಥಿಗಳೊಂದಿಗೆ ಚರ್ಚಿಸುವಂತಾಗಬೇಕು. ವಿದ್ಯಾರ್ಥಿಗಳು ನೆಲೆಸಿರುವ ಹಳ್ಳಿ ಅಥವಾ ಪಟ್ಟಣದ ಹತ್ತಿರದ ಜಲತಾಣಗಳ ಬಗ್ಗೆ ಕಲೆಹಾಕಿದ ಮಾಹಿತಿಯನ್ನಾಧರಿಸಿ ಈ ವಿಷಯವನ್ನು ಅನ್ವಯಿಕವಾಗಿ ಬೋಧಿಸಬಹುದು. ಇಂಥ ಪರಿಣಾಮಕಾರಿ ಬೋಧನೆಯಲ್ಲಿ ತೊಡಗಲು ಶೈಕ್ಷಣಿಕ ಗುರಿಗಳು, ಕಲಿಕೆಯ ಪ್ರಕ್ರಿಯೆ, ವಿದ್ಯಾರ್ಥಿಗಳ ಸಾಮಾಜಿಕ ಹಿನ್ನೆಲೆ ಮತ್ತು ಅವರ ಸಾಮಾಜಿಕ-ಸಾಂಸ್ಕೃತಿಕ ಪರಿಸರಗಳ ಬಗ್ಗಿನ ಸ್ಪಷ್ಟ ಕಲ್ಪನೆಯನ್ನು ಶಿಕ್ಷಕರು ಹೊಂದಿರಬೇಕು. ಜೊತೆಗೆ, ಆಳವಾದ ವಿಷಯಜ್ಞಾನ ಮತ್ತು ಬೋಧನಾ ವಿಧಾನಗಳ ತಿಳಿವಳಿಕೆಯನ್ನು ಪಡೆದಿರಬೇಕು.

ಇಂಥ ಆಸಕ್ತಿದಾಯಕ ಬೋಧನಾ-ಕಲಿಕೆ ಆಚರಣೆಯನ್ನು ವರ್ಷವಿಡೀ ಅಳವಡಿಸಿಕೊಂಡಾಗಲೇ ವಿದ್ಯಾರ್ಥಿಗಳ ಆಸಕ್ತಿ, ಕುತೂಹಲಗಳು ಗರಿಗೆದರುತ್ತವೆ. ಅದರಿಂದ ಅವರು ನಿರಂತರ ಕಲಿಕೆಯಲ್ಲಿ ತೊಡಗುವಂತಾಗುತ್ತದೆ. ವರ್ಷಕ್ಕೊಮ್ಮೆ ಉಸಿರುಗಟ್ಟಿಸುವ ಬಿಗಿ ವಾತಾವರಣದಲ್ಲಿ ಪರೀಕ್ಷೆ ನಡೆಸಿ, ಕಲಿಕೆಯನ್ನು ದೃಢೀಕರಿಸುವ ವ್ಯವಸ್ಥೆಯು ಬದಲಾಗಬೇಕು. ರಚನಾತ್ಮಕ ಮೌಲ್ಯಮಾಪನದ ಮೂಲಕ ದೈನಂದಿನ ತರಗತಿ ಪ್ರಕ್ರಿಯೆಯ ಭಾಗವಾಗಿ ಮಕ್ಕಳಿಗೆ ಆತಂಕ ಉಂಟಾಗದ ಹಾಗೆ ಅವರ ಕಲಿಕೆಯ ಮಟ್ಟವನ್ನು ಅರಿಯುವಂತಾಗಬೇಕು. ನಿರಂತರ, ವ್ಯಾಪಕ ಮೌಲ್ಯಮಾಪನದ ಉದ್ದೇಶ ಇದೇ ಆಗಿದೆ.

ನಾಲ್ಕು ದಶಕಗಳ ಹಿಂದೆಯೇ ಎಚ್. ನರಸಿಂಹಯ್ಯನವರು ನ್ಯಾಷನಲ್ ಕಾಲೇಜಿನ ಪ್ರಾಂಶುಪಾಲರಾಗಿದ್ದಾಗ ಉಸ್ತುವಾರಿಯಿಲ್ಲದ ಪರೀಕ್ಷಾ ಕ್ರಮವನ್ನು ಕಾಲೇಜಿನಲ್ಲಿ ಪ್ರಯೋಗಿಸಿ ಸೈ ಎನಿಸಿಕೊಂಡಿದ್ದರು. ಆ ಸಂದರ್ಭದಲ್ಲಿ ಪೂರ್ವಭಾವಿಯಾಗಿ ಬೋಧಕ ವರ್ಗವನ್ನು ವಿಶ್ವಾಸಕ್ಕೆ ತೆಗೆದುಕೊಂಡಿದ್ದರು. ಜೊತೆಗೆ ವಿದ್ಯಾರ್ಥಿ ಸಮುದಾಯದ ಆತ್ಮಸಾಕ್ಷಿಯನ್ನು ಬಡಿದೆಬ್ಬಿಸಿ ಪೂರಕ ವಾತಾವರಣ ಸೃಷ್ಟಿಸುವಲ್ಲಿ ಸಾಕಷ್ಟು ಎಚ್ಚರಿಕೆ ವಹಿಸಿದ್ದರು.

ಶಿಕ್ಷಕರಲ್ಲಿ, ಇಲಾಖೆ ಅಧಿಕಾರಿಗಳಲ್ಲಿ, ಭಾಗೀದಾರರಲ್ಲಿ ಪರಸ್ಪರ ನಂಬಿಕೆಯ ವಾತಾವರಣವನ್ನು ಸೃಷ್ಟಿಸಿ, 'ತೆರೆದ ಪುಸ್ತಕ'ದಂತಹ ಪರೀಕ್ಷಾ ಕ್ರಮದ ಜಾರಿಗೆ ಶಿಕ್ಷಣ ಇಲಾಖೆಯು ಮುಂದಾಗುವುದು ಒಳಿತು.

■

ಆಂದೋಲನ, 27-06-2018

ಒಮ್ಮೆ ಮೆರಿಟ್ ಎನ್ನುವುದು ನಮ್ಮ ಡಿಗ್ರಿಗಳಿಂದ, ಪರೀಕ್ಷೆಗಳಿಂದ ಆಚೆಹೋಗಿ ಕಾರ್ಯಕುಶಲತೆ, ಕಷ್ಟಪಟ್ಟು ಕೆಲಸ ಮಾಡುವುದು ಎಂದು ಪರಿಗಣಿಸಲ್ಪಟ್ಟರೆ, ಹಿಂದುಳಿದವರೂ ಹರಿಜನರೂ ಬ್ರಾಹ್ಮಣರಿಗಿಂತ ನೂರುಪಾಲು ಪ್ರತಿಭಾವಂತರೆಂದು ಸಾಬೀತು ಮಾಡುತ್ತಾರೆ. ಹೀಗಾದಾಗ ಮೀಸಲಾತಿಯ ವ್ಯಾಖ್ಯಾನ ಬದಲಾಗುತ್ತದೆ. ಮಾರ್ಕೆಟ್ ಅರ್ಥವ್ಯವಸ್ಥೆ ಪ್ರಧಾನವಾಗಿ ಅಪೇಕ್ಷಿಸುವುದು ಇದನ್ನೇ, ಡಿಗ್ರಿಗಳನ್ನಲ್ಲ.

– **ಪೂರ್ಣಚಂದ್ರ ತೇಜಸ್ವಿ**

# ತೇಜಸ್ವಿಯವರ ಕಲ್ಪನೆಯನ್ನು ಸಾಕಾರಗೊಳಿಸುವುದು

ಪೂರ್ಣಚಂದ್ರ ತೇಜಸ್ವಿಯವರು ಬಹಳ ಬೇಗ, ತಾನಿನ್ನೂ ಯುವಕನಾಗಿದ್ದಾಗಲೇ ಸುಪ್ರಸಿದ್ಧರಾಗಿದ್ದ ತಮ್ಮ ತಂದೆ ರಾಷ್ಟ್ರಕವಿ ಕುವೆಂಪು ಅವರ ನೆರಳಿನಿಂದ ಹೊರಬಂದರು. ತಮ್ಮನ್ನೇ ತಾವು ಕನ್ನಡದ ಉದಯೋನ್ಮುಖ ಬರಹಗಾರರಾಗಿ, ತನ್ನ ಕಾಲದ ತೀಕ್ಷ್ಣ ಚಿಂತಕರಲ್ಲೊಬ್ಬರಾಗಿ ರೂಪಿಸಿಕೊಂಡರು. ಅವರು ಕುವೆಂಪು ಅವರಲ್ಲದೆ ಸಮಾಜವಾದಿ ಚಿಂತಕರಾಗಿದ್ದ ರಾಮಮನೋಹರ ಲೋಹಿಯಾ ಮತ್ತು ಶಾಂತವೇರಿ ಗೋಪಾಲಗೌಡರ ಗಾಢ ಪ್ರಭಾವಕ್ಕೆ ಒಳಗಾಗಿದ್ದರು. ಅವರಲ್ಲೊಬ್ಬ ಕೃಷಿಕನಿದ್ದ, ಪರಿಸರವಾದಿಯಿದ್ದ ಹಾಗೂ ಛಾಯಾಗ್ರಾಹಕನಿದ್ದ. ಇದೆಲ್ಲವೂ ಸೇರಿ ಅವರದೊಂದು ಬಹುಮುಖಿ ವ್ಯಕ್ತಿತ್ವವಾಗಿತ್ತು. ತಮ್ಮದೇ ಆದ ವಿಭಿನ್ನ ಹಾದಿಯಲ್ಲಿ ಮುನ್ನಡೆದ ಅವರ ಬರಹಗಳು ನೆಲಮೂಲತ್ವದ ವಿಚಾರಗಳನ್ನು ಚಿತ್ರಿಸಿದ್ದವು.

ಅವರು ಶಿಕ್ಷಕ ವೃತ್ತಿಗಾಗಲಿ, ಸರ್ಕಾರಿ ಉದ್ಯೋಗಕ್ಕಾಗಲಿ ಸೇರಲು ಬಯಸಲೂ ಇಲ್ಲ. ಛಾಯಾಗ್ರಹಣ, ಚಿತ್ರಕಲೆ, ಸಂಗೀತದಂತಹ ವ್ಯಾಪಕ ಆಸಕ್ತಿ, ಅಭಿರುಚಿಗಳು ಅವರ ಸಂವೇದನೆಗಳನ್ನು ರೂಪಿಸಿದ್ದವು. ಕ್ಯಾಮೆರಾದ ಹಿಂದಿನಿಂದ ಛಾಯಾಗ್ರಾಹಕನೊಬ್ಬ ಚಿತ್ರವನ್ನು ಸೆರೆಹಿಡಿಯುವಂತೆ, ಅವರು ಬದುಕಿನ ಚಿತ್ರಗಳನ್ನು ಬರಹಗಳಲ್ಲಿ ಸೆರೆಹಿಡಿದಿದ್ದರು. ಅವುಗಳನ್ನು ಯಾವುದೇ

ಅತಿಶಯೋಕ್ತಿಗಳಿಲ್ಲದೆ ವಿಭಿನ್ನ ಆಯಾಮದಿಂದ ಅನನ್ಯ ಚೌಕಟ್ಟಿನೊಳಗೆ ಕೂರಿಸುತ್ತಿದ್ದರು. ಅವರ ಆಸಕ್ತಿ ಹಾಗೂ ಬರವಣಿಗೆಗಳು ಇನ್ನಿತರ ಹಲವಾರು ಸಂಗತಿಗಳ ಜೊತೆಗೆ ಅರ್ಥಶಾಸ್ತ್ರ, ರಾಜಕೀಯ, ರೈತರ ಹೋರಾಟ, ಧರ್ಮ ಹಾಗೂ ಸಂಸ್ಕೃತಿ, ಜಾತಿ ನಿರ್ಮೂಲನೆ ಹಾಗೂ ಪರಿಸರ ಕಾಳಜಿಗಳನ್ನು ಒಳಗೊಂಡಿದ್ದವು. 2012ರಲ್ಲಿ ಪುಸ್ತಕ ಪ್ರಕಾಶನವು ಅವರ ಲೇಖನ ಸರಣಿಗಳನ್ನು 'ಹೊಸ ವಿಚಾರಗಳು' ಎಂಬ ಶೀರ್ಷಿಕೆಯಡಿ ಪ್ರಕಟಿಸಿದೆ.

ಶಿಕ್ಷಣವನ್ನು ಕುರಿತ ತೇಜಸ್ವಿಯವರ ಹಲವು ವಿಚಾರಗಳು ಇಂದಿಗೂ ಪ್ರಸ್ತುತವಾಗಿವೆ.

ಹಳ್ಳಿಯ ಮತ್ತು ನಗರದ ಮಕ್ಕಳೆಲ್ಲರಿಗೆ, ಬಡ ಮತ್ತು ಶ್ರೀಮಂತ ಮಕ್ಕಳೆಲ್ಲರಿಗೆ ಒಂದೇ ರೀತಿಯಾದ ಸಾಮಾನ್ಯ ಶಾಲಾ ಶಿಕ್ಷಣ ವ್ಯವಸ್ಥೆ ಇರಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಏಕೆಂದರೆ, ಇವರ ನಡುವಿನ ಶಿಕ್ಷಣದ ಗುಣಮಟ್ಟದಲ್ಲಿನ ಅಸಮಾನತೆಯು ಕೇವಲ ಬೋಧನಾ ಮಾಧ್ಯಮದ ಕಾರಣದಿಂದಷ್ಟೇ ಆಗಿರುವುದಿಲ್ಲ ಎನ್ನುವುದು ಅವರ ಅನುಭವಕ್ಕೆ ಬಂದಿತ್ತು.

'ಮೆರಿಟ್' ಎಂಬ ಪರಿಕಲ್ಪನೆಯನ್ನು ತೇಜಸ್ವಿಯವರು ಮಾರ್ಕೆಟ್ ಅರ್ಥವ್ಯವಸ್ಥೆಯ ಹಿನ್ನೆಲೆಯಲ್ಲಿ ಮರುವ್ಯಾಖ್ಯಾನಿಸಿದ್ದು ಹೀಗೆ:

> ಒಮ್ಮೆ ಮೆರಿಟ್ ಎನ್ನುವುದು ನಮ್ಮ ಡಿಗ್ರಿಗಳಿಂದ, ಪರೀಕ್ಷೆಗಳಿಂದ ಆಚೆಹೋಗಿ ಕಾರ್ಯಕುಶಲತೆ, ಕಷ್ಟಪಟ್ಟು ಕೆಲಸ ಮಾಡುವುದು ಎಂದು ಪರಿಗಣಿಸಲ್ಪಟ್ಟರೆ, ಹಿಂದುಳಿದವರೂ ಹರಿಜನರೂ ಬ್ರಾಹ್ಮಣರಿಗಿಂತ ನೂರುಪಾಲು ಪ್ರತಿಭಾವಂತರೆಂದು ಸಾಬೀತು ಮಾಡುತ್ತಾರೆ. ಒಂದು ಕಾಲದಲ್ಲಿ ತನ್ನ ಕೌಶಲ್ಯಕ್ಕೆ ಭಾರತ ಜಗತ್‌ಪ್ರಸಿದ್ಧವಾಗಿದ್ದು ಈಗ ನಾವು ಯಾರನ್ನು ಹಿಂದುಳಿದವರೆಂದು ಕರೆಯುತ್ತೇವೆಯೋ ಅವರಿಂದ. ಕಾರ್ಯಕುಶಲತೆ ಮತ್ತು ದೈಹಿಕ ಶ್ರಮಗಳು ಮೆರಿಟ್ ಆದರೆ ಮೀಸಲಾತಿಯ ವ್ಯಾಖ್ಯಾನ ಬದಲಾಗುತ್ತದೆ. ಮಾರ್ಕೆಟ್ ಅರ್ಥವ್ಯವಸ್ಥೆ ಪ್ರಧಾನವಾಗಿ ಅಪೇಕ್ಷಿಸುವುದು ಇದನ್ನೇ, ಡಿಗ್ರಿಗಳನ್ನಲ್ಲ.

ಕನ್ನಡ ಭಾಷೆ ಮತ್ತು ಸಾಹಿತ್ಯಿಕ ವಿಮರ್ಶೆಗಳನ್ನು ಕುರಿತಾದ ಅವರ ನಿಲುವುಗಳು ಕರ್ನಾಟಕದಲ್ಲಿ ಕನ್ನಡವನ್ನು ಹೇಗೆ ನಡೆಸಿಕೊಳ್ಳಬೇಕು ಎನ್ನುವುದರ ಬಗ್ಗೆ ಕುತೂಹಲಕರವಾದ ಒಳನೋಟಗಳನ್ನು ನೀಡುವಂತಹದಾಗಿವೆ. ಶಾಲಾ ಶಿಕ್ಷಣ ಮತ್ತು ಎಲ್ಲಾ ದೇಸಿ ಭಾಷೆಗಳಿಗೆ ಸಂಬಂಧಪಟ್ಟಂತೆ ಅತ್ಯಂತ ಮಹತ್ವಪೂರ್ಣವಾಗಿವೆ. ತನ್ನದು ಎನ್ನುವ ದೇಸಿ ಭಾಷೆಯ ಕುರಿತಾದ ಅಂಧಾಭಿಮಾನ ಹಾಗೂ ಇತರ ಭಾಷೆಗಳ ಮೇಲಿನ ವಿವೇಚನಾರಹಿತ ವ್ಯಾಮೋಹಗಳೆರಡೂ ಹಾನಿಕರ ಎಂದು ತೇಜಸ್ವಿ ಹೇಳುತ್ತಿದ್ದರು. ಮೊದಲನೆಯದು ವ್ಯಕ್ತಿಯೊಬ್ಬನನ್ನು ಭಾವುಕನನ್ನಾಗಿ

ಮಾಡಿದರೆ, ಎರಡನೆಯದು ಇಂಗ್ಲಿಷಿನಂತಹ ಭಾಷೆಗಳಿಗೆ ಅತಿಶಯವಾದ ಮಹತ್ವವನ್ನು ನೀಡುವಂತೆ ಮಾಡುತ್ತದೆ. ಭಾಷೆಯನ್ನು ಆಲೋಚಿಸಲು, ಸಂವಹಿಸಲು, ವ್ಯವಹರಿಸಲು, ಜ್ಞಾನ ಸಂಪಾದಿಸಲು ಹಾಗೂ ಒಂದು ತಲೆಮಾರಿನಿಂದ ಮತ್ತೊಂದಕ್ಕೆ ಅದನ್ನು ದಾಟಿಸಲು ಸಾಧನವಾಗಿ ಬಳಸುವ ಮಧ್ಯಮ ಮಾರ್ಗದಲ್ಲಿ ಅವರು ಬಲವಾದ ನಂಬಿಕೆಯನ್ನು ಹೊಂದಿದ್ದರು. ಈ ತಾರ್ಕಿಕತೆಯ ದೃಷ್ಟಿಯಿಂದ, ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಮಾತೃ ಭಾಷೆಯು ಬೋಧನೆಯ ಮಾಧ್ಯಮವಾಗಿರಬೇಕು ಹಾಗೂ ಇಂಗ್ಲಿಷನ್ನು ಒಂದು ಭಾಷೆಯಾಗಿ ಚೆನ್ನಾಗಿ ಕಲಿಸಬೇಕು ಎಂಬ ವಿಚಾರದ ಪ್ರತಿಪಾದಕರಾಗಿದ್ದರು.

2014ರ ಮೇ ತಿಂಗಳಿನಲ್ಲಿ ಬಂದ ಸರ್ವೋಚ್ಚ ನ್ಯಾಯಾಲಯದ ಆದೇಶವು ಮಕ್ಕಳ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಬೋಧನಾ ಮಾಧ್ಯಮವನ್ನು ಆಯ್ಕೆಮಾಡಿಕೊಳ್ಳುವ ಹೊಣೆಯನ್ನು ಪೋಷಕರ ಮೇಲೆ ಹೊರಿಸುತ್ತದೆ. ಇದನ್ನು ತೆರವುಗೊಳಿಸುವ ಕಾರ್ಯವು ಅತ್ಯಂತ ಕಷ್ಟಕರವೆಂದು ತೋರುತ್ತದೆ. ಪ್ರಾಥಮಿಕ ಶಿಕ್ಷಣದಲ್ಲಿ ರಾಜ್ಯ ಭಾಷೆಗಳಿಗೆ ಪ್ರಾಮುಖ್ಯತೆಯು ಸಿಗುವಂತೆ ಸಂವಿಧಾನ ತಿದ್ದುಪಡಿಯನ್ನು ತರುವ ಸಂಬಂಧವಾಗಿ ಕೇಂದ್ರ ಮತ್ತು ರಾಜ್ಯಗಳೆರಡೂ ಒಮ್ಮತದಿಂದ ಕೆಲಸ ಮಾಡಬೇಕಿದೆ.

ಆದಾಗ್ಯೂ ತಳಹಂತದಲ್ಲಿ ಹೆಚ್ಚು ಅರ್ಥಪೂರ್ಣವಾದ ಕೆಲಸಗಳನ್ನು ಮಾಡುವ ಮೂಲಕ ರಾಜ್ಯ ಭಾಷೆಗಳಿಗೆ ಪ್ರಾಮುಖ್ಯತೆ ತಂದುಕೊಡುವುದು ಇನ್ನೂ ದೊಡ್ಡ ಸವಾಲಾಗಿದೆ. ಉದಾಹರಣೆಗೆ, ವಿಜ್ಞಾನ ಮತ್ತು ತಂತ್ರಜ್ಞಾನದ ವಿಷಯಗಳಲ್ಲಿ ಬೌದ್ಧಿಕ ಸಂವಾದಕ್ಕೆ ನಾವಿನ್ನೂ ಕೇವಲ ಇಂಗ್ಲಿಷ್ ಭಾಷೆಯೊಂದರ ಮೇಲೆಯೇ ಸಂಪೂರ್ಣವಾಗಿ ಅವಲಂಬಿಸಿದ್ದೇವೆ. ದೇಸಿ ಭಾಷೆಗಳಲ್ಲಿ ಮೂಲ ಚಿಂತನೆಗಳನ್ನು ಉತ್ತೇಜಿಸದಿರುವ ಕಾರಣ ನಾವು ಬೌದ್ಧಿಕ ಮುಂದಾಳತ್ವವನ್ನು ಉಸಿರುಗಟ್ಟಿಸುತ್ತಿದ್ದೇವೆ. ಜೊತೆಗೆ, ಒಟ್ಟಾರೆ ಸಮಾಜದಲ್ಲಿನ ಕಲಿಕೆ ಹಾಗೂ ಬೌದ್ಧಿಕ ಉಪಕ್ರಮಗಳನ್ನು ಕಡೆಗಣಿಸುತ್ತಲೂ ಇದ್ದೇವೆ, ಅಪಮೌಲ್ಯಗೊಳಿಸುತ್ತಲೂ ಇದ್ದೇವೆ. ಕೇಂದ್ರ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯದ ಜೈವಿಕ ತಂತ್ರಜ್ಞಾನ ಇಲಾಖೆಯ ಕಾರ್ಯದರ್ಶಿಗಳಾದ ವಿಜಯರಾಘವನ್ ಅವರು ತಮ್ಮ ಇತ್ತೀಚಿನ ಒಂದು ಲೇಖನದಲ್ಲಿ ದ್ವಿಭಾಷಿಕವಾದ ವಿಜ್ಞಾನ, ತಂತ್ರಜ್ಞಾನ, ಎಂಜಿನಿಯರಿಂಗ್ ಮತ್ತು ಗಣಿತ (ಎಸ್‌ಟಿಇಎಂ) ವಿಷಯಗಳಲ್ಲಿನ ವೃತ್ತಿಪರ ಶಿಕ್ಷಣವನ್ನು ಆಕರ್ಷಕಗೊಳಿಸುವುದರ ಹಾಗೂ ಆರ್ಥಿಕವಾಗಿ ಅನುಕೂಲಕರವಾಗಿಸುವುದರ ಮಹತ್ವವನ್ನು ಎತ್ತಿ ಹೇಳಿದ್ದಾರೆ. ಇದರರ್ಥ, ನಾವು ಈ ವಿಷಯಗಳಿಗೆ ಸಂಬಂಧಿಸಿದಂತೆ, ಕನ್ನಡದಲ್ಲಿ ಕೂಡ ಅರ್ಥಪೂರ್ಣ ಚರ್ಚೆ-ಸಂವಾದಗಳನ್ನು ಹುಟ್ಟುಹಾಕಲು ಆರಂಭಿಸಬೇಕು ಹಾಗೂ ಸಾಹಿತ್ಯವನ್ನು ರಚಿಸಬೇಕು. ಈ

ಉಪಕ್ರಮವನ್ನು ಸಮಾಜ ವಿಜ್ಞಾನಗಳಲ್ಲಿ ಕೂಡ ಕೈಗೊಳ್ಳಬೇಕು. ಜರ್ಮನಿ, ಫ್ರಾನ್ಸ್ ಅಥವಾ ಹಾಲೆಂಡ್ ದೇಶಗಳಲ್ಲಿ ಯಾವುದೇ ಕೃಷಿಕ, ಶಾಲಾ ಶಿಕ್ಷಕ, ಮಾನವಶಾಸ್ತ್ರಜ್ಞ, ವಾಸ್ತುಶಿಲ್ಪಿ ಅಥವಾ ನ್ಯಾಯಶಾಸ್ತ್ರಜ್ಞನು ತಮ್ಮ ಕಾರ್ಯಕ್ಷೇತ್ರದ ಅತ್ಯಂತ ತಲಸ್ತರದಲ್ಲಿ ತಮ್ಮದೇ ಭಾಷೆಯನ್ನು ಬಳಸುತ್ತಾರೆ. ನಮ್ಮ ದೇಶದಲ್ಲಿರುವ ವೈವಿಧ್ಯತೆಯ ಹಿನ್ನೆಲೆಯಲ್ಲಿ ಕೂಡ ಇದು ಸಾಧ್ಯವಾಗಬೇಕು.

ವಿವಿಧ ರಂಗಗಳಲ್ಲಿ ಪ್ರಗತಿ ಸಾಧಿಸಲು ತಂತ್ರಜ್ಞಾನ, ಅದರಲ್ಲೂ ಕಂಪ್ಯೂಟರ್‌ನ ಮಹತ್ವವನ್ನರಿತಿದ್ದ ತೇಜಸ್ವಿಯವರು ಅದರ ಕಲಿಕೆಗೆ ಯಾವ ಮಾರ್ಗವನ್ನು ಅನುಸರಿಸಬೇಕೆನ್ನುವುದರ ಬಗ್ಗೆ ಸ್ಪಷ್ಟ ನಿಲುವನ್ನು ಹೊಂದಿದ್ದರು. ಕೆಳಗಿನ ಅವರ ಮಾತುಗಳನ್ನು ಗಮನಿಸೋಣ.

> ಕಂಪ್ಯೂಟರ್‌ನ್ನು ಮಕ್ಕಳಿಗೆ ಪರೀಕ್ಷೆಗಾಗಲಿ, ಪದವಿಗಳಿಗಾಗಲಿ ಕಲಿಸದೆ ತಮ್ಮ ಜೀವನದ ಸಂದರ್ಭದಲ್ಲಿ ಎದುರಾಗುವ ಸಮಸ್ಯೆಗಳನ್ನು ಕಂಪ್ಯೂಟರ್ ಬಳಕೆಯಿಂದ ನಿರ್ವಹಿಸುವುದನ್ನಷ್ಟೆ ಹೇಳಿಕೊಡುವುದು ಒಳ್ಳೆಯದು. ಯಾವೊಂದು ಶಾಸ್ತ್ರವನ್ನಾಗಲಿ, ಭಾಷೆಯನ್ನಾಗಲಿ, ತಂತ್ರಜ್ಞಾನವನ್ನಾಗಲಿ ಕ್ರಮಬದ್ಧವಾಗಿ ಆ ಶಾಸ್ತ್ರದ ಅ,ಆ,ಇ,ಈ-ಯಿಂದ ಪ್ರಾರಂಭಿಸಿ ಕಲಿಯಬೇಕು ಎನ್ನುವುದೇ ಸರಿಯಾದುದಲ್ಲ. ಜ್ಞಾನವನ್ನು ಪ್ರತಿಯೊಬ್ಬನೂ ತನಗೆ ಗ್ರಾಹ್ಯವಾದಲ್ಲಿಂದಲೇ ಆರಂಭಿಸಿ ಕಲಿಯಬಹುದಲ್ಲವೆ? ತಂತ್ರಜ್ಞಾನವನ್ನು ಹೇಳಿಕೊಡುವಾಗ ಯಾವ ಮಾಧ್ಯಮದಲ್ಲಿ ಹೇಳಿಕೊಡಬೇಕು? ಹೇಗೆ ಹೇಳಿಕೊಡಬೇಕು? ಅದಕ್ಕೆ ಪೂರ್ವಸಿದ್ಧತೆ ಏನಿರಬೇಕು ಎಂಬ ಕೊನೆಯಿಲ್ಲದ ವಾದಗಳ ಬದಲಾಗಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕಲಿಯುವವನ ಭಾಷಾ ಪ್ರೌಢಿಮೆಗಿಂತ ಅವನ ಕಾರ್ಯಸಾಧನೆಯೇ ಒರೆಗಲ್ಲಾಗುತ್ತದೆ. ಅಲ್ಲದೆ ಕಂಪ್ಯೂಟರ್ ಕ್ಷೇತ್ರದ ಪಾರಿಭಾಷಿಕ ಪದಗಳನ್ನು ಕನ್ನಡಕ್ಕಾಗಲಿ, ಸಂಸ್ಕೃತಕ್ಕಾಗಲಿ ತರ್ಜುಮೆ ಮಾಡದೆ ಪರಿಚಿತ ಪದಗಳನ್ನೇ ನೇರವಾಗಿ ಉಪಯೋಗಿಸುವುದು ಸೂಕ್ತವಾಗುತ್ತದೆ.

ಆದಾಗ್ಯೂ, ಟಿವಿ ಮುಂತಾದ ಯಾವುದೇ ಆಧುನಿಕ ತಂತ್ರಜ್ಞಾನ ಮಾಧ್ಯಮಕ್ಕೆ (ಪ್ರಸ್ತುತ ಸಂದರ್ಭದಲ್ಲಿ ಮೊಬೈಲ್ ಫೋನ್ ಮೂಲಕ ಹೆಚ್ಚು ಬಳಕೆಯಲ್ಲಿರುವ ಫೇಸ್‌ಬುಕ್, ವಾಟ್ಸ್‌ಆಪ್, ಟ್ವಿಟರ್, ಇನ್ಸ್ಟಾಗ್ರಾಮ್ ಮುಂತಾದ ಸಾಮಾಜಿಕ ಮಾಧ್ಯಮ ವೇದಿಕೆಗಳನ್ನು ಇದಕ್ಕೆ ಸೇರಿಸಬಹುದು – ಲೇ.) ಮರುಳಾಗಿ ವ್ಯಸನಿಗಳಾಗುವುದರಿಂದ ಉಂಟಾಗುವ ಅಪಾಯವನ್ನು ತೇಜಸ್ವಿ ಮನಗಂಡಿದ್ದರು. ಇದಕ್ಕೆ ಪೂರಕವಾಗಿ ಕೆಳಗಿನ ಅವರ ಮಾತುಗಳನ್ನು ನೋಡಬಹುದು.

> ಈಚೆಗೆ ಟಿವಿಯಲ್ಲಿನ ಜಾಹೀರಾತುಗಳಲ್ಲಿ ಮಕ್ಕಳನ್ನು ಪ್ರಧಾನವಾಗಿ ಬಳಸತೊಡಗಿರುವುದನ್ನು ಗಮನಿಸಿದ್ದೀರಾ?... ಅಂಕಿ-ಅಂಶಗಳ ಪ್ರಕಾರ

ಹತ್ತಿರ ಹತ್ತಿರ ಅರ್ಧಕ್ಕರ್ಧ ಮಕ್ಕಳೇ ಟಿವಿ ನೋಡುತ್ತಾ ಕುಳಿತಿರುತ್ತಾರೆ. ಜೊತೆಗೆ ಮಕ್ಕಳ ಮನಸ್ಸಿನ ಮೇಲೆ ಪರಿಣಾಮ ಬೀರುವುದು ಸುಲಭ.

ಇದು ಮಕ್ಕಳು ದೊಡ್ಡವರೆನ್ನದೆ ಎಲ್ಲರಿಗೂ ಒಂದೊಂದು ಪ್ರಮಾಣದಲ್ಲಿ ಹಾನಿ ಮಾಡುತ್ತದೆಯಾದರೂ ಮಕ್ಕಳಿಗೆ ಇದು ಹೆಚ್ಚು. ಒಂದು ಪುಸ್ತಕವನ್ನೋದಿ ವರ್ಣಚಿತ್ರವನ್ನು ನೋಡಿ ತಾವೇ ಮನದಲ್ಲಿ ಕಲ್ಪಿಸಿಕೊಳ್ಳುವ ಶಕ್ತಿ ಕಡಿಮೆಯಾಗುತ್ತಾ ಹೋಗುತ್ತದೆ. ಸದಾ ಟಿವಿ ಮುಂದೆ ಪಿಳಿಪಿಳಿ ಕಣ್ಣು ಬಿಡುತ್ತಾ ಕೂರುವ ಮಕ್ಕಳಿಗೆ ಮೊದಲಾಗಿ ಜೀವನಾನುಭವವೇ ಕಡಿಮೆಯಾಗುತ್ತದೆ. ಇದರೊಡನೆ ಒಂದು ಸಾಲನ್ನೋ ಒಂದು ಪ್ಯಾರಾವನ್ನೋ ಓದಿ ತಾನೇ ತನ್ನ ಜೀವನಾನುಭವದಿಂದ ಕಲ್ಪನೆಯಲ್ಲಿ ಪ್ರತಿಮೆಗಳನ್ನು ರೂಪಿಸುವ ಶಕ್ತಿ ಕಡಿಮೆಯಾಗುತ್ತದೆ.

ಟಿವಿ ಸದ್ಯಕ್ಕಂತೂ ಮಕ್ಕಳಿಗೆ ಜೀವನದಲ್ಲಿ ಆಸಕ್ತಿ ಕೆರಳಿಸುವ ಬದಲು ಅವರನ್ನು ಜೀವನವಿಮುಖರನ್ನಾಗಿ ಮಾಡಿ ತನ್ನಲ್ಲೇ ಅನುರಕ್ತರನ್ನಾಗಿ ಮಾಡಿಕೊಳ್ಳುತ್ತಿದೆ. ಆಟವೂ ಇಲ್ಲ, ಪಾಠವೂ ಇಲ್ಲ. ಆದಷ್ಟು ಬೇಗ ಹೋಮ್‌ವರ್ಕ್ ಮುಗಿಸಿ ಸೀರಿಯಲ್‌ಗಳನ್ನು, ಜಾಹೀರಾತುಗಳನ್ನು ನೋಡಲು ಸಿದ್ಧರಾಗುತ್ತಾರೆ. ತಾವು ದೊಡ್ಡವರಾಗಿ ಮುಂದೆ ಜೀವನವನ್ನು ಎದುರಿಸಬೇಕಾಗಿ ಬಂದಾಗ ಈ ಕಠೋರ ವಾಸ್ತವಗಳು ಅವರ ಮನಸ್ಸಿನ ಮೇಲೆ ಎಂಥ ಪರಿಣಾಮ ಬೀರುತ್ತವೆ ಯೋಚಿಸಿ..

ಕನ್ನಡದ ಉಳಿವಿಗೆ ಏನು ಮಾಡಬೇಕು ಎನ್ನುವುದರ ಕುರಿತು ತೇಜಸ್ವಿಯವರ ನಿಲುವು ಪ್ರಾಯೋಗಿಕ ನೆಲೆಯಲ್ಲಿತ್ತು. ಕನ್ನಡ ಭಾಷೆಯು ಸುಮಾರು ಎರಡು ಸಾವಿರ ವರ್ಷಗಳ ಸಮೃದ್ಧ ಸಾಹಿತ್ಯಿಕ ಪರಂಪರೆಯನ್ನು ಹೊಂದಿದೆ. ಆಧುನಿಕ ಯುಗದಲ್ಲಿ ಅತ್ಯಂತ ಹೆಚ್ಚು ಜ್ಞಾನಪೀಠ ಪ್ರಶಸ್ತಿಗಳನ್ನು ಪಡೆದ ಭಾಷೆಗಳಲ್ಲಿ ಎರಡನೆಯ ಸ್ಥಾನದಲ್ಲಿದೆ. ಆದರೂ ದೈನಂದಿನ ಆಡಳಿತ ವ್ಯವಹಾರ ಹಾಗೂ ಆರ್ಥಿಕ ವಲಯಗಳಲ್ಲಿ ಕನ್ನಡವನ್ನು ಹೇಗೆ ಬಳಸಲಾಗುತ್ತದೆ ಎನ್ನುವುದರ ಮೇಲೆ ಅದರ ಬೆಳವಣಿಗೆಯು ಅವಲಂಬಿಸಿದೆ. ಕುತೂಹಲಕರ ಸಂಗತಿಯೆಂದರೆ, ಅವರು ಇ-ಆಡಳಿತಕ್ಕಾಗಿ ಚೀನಾ, ಮಲೇಷಿಯಾ, ದಕ್ಷಿಣ ಕೋರಿಯಾ ಹಾಗೂ ಬ್ರೆಝಿಲ್ ದೇಶಗಳು ಹೇಗೆ ಲೈನಕ್ಸ್ ಆಪರೇಟಿಂಗ್ ಸಿಸ್ಟಮ್‌ನ್ನು ಅಳವಡಿಸಿಕೊಂಡಿವೆಯೋ ಅದೇ ಮಾದರಿಯಲ್ಲಿ ಕನ್ನಡ ತಂತ್ರಾಂಶವನ್ನು ಅಭಿವೃದ್ಧಿಪಡಿಸಬೇಕೆಂದು ಶಿಫಾರಸ್ಸು ಮಾಡಿದ್ದರು.

1980ರ ಮಧ್ಯಭಾಗದಲ್ಲಿ, ಯುವ ಬರಹಗಾರರ ಕೃತಿಗಳನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ಕನ್ನಡದಲ್ಲಿ ಪುಸ್ತಕಗಳನ್ನು ಪ್ರಕಟಿಸಲು ಸಹಕಾರಿ ಚಳುವಳಿಯೊಂದನ್ನು ಆರಂಭಿಸಬೇಕೆಂಬ ಕ್ರಾಂತಿಕಾರಿ ವಿಚಾರವೊಂದನ್ನೂ ಅವರು ಮುಂದಿಟ್ಟಿದ್ದರು.

ಕೇರಳದ ಮಾದರಿಯನ್ನು ಅಭ್ಯಸಿಸುವಂತೆ ಸರ್ಕಾರಿ ಅಧಿಕಾರಿಗಳ ಗಮನವನ್ನು ಕೂಡ ಸೆಳೆದಿದ್ದರು. ಕರ್ನಾಟಕ ಸರ್ಕಾರವು 1985ರಲ್ಲಿ ಮೈಸೂರಿನಲ್ಲಿ ನಡೆದ ಮೊದಲ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಅಗಾಧ ಪ್ರಮಾಣದಲ್ಲಿ ಕನ್ನಡ ಪುಸ್ತಕಗಳನ್ನು ಕೈಗೆಟಕುವ ಬೆಲೆಯಲ್ಲಿ ಪ್ರಕಟಿಸಿ ಮಾರಾಟ ಮಾಡುವ ಕಾರ್ಯವನ್ನು ಕೈಗೊಂಡಿತು. ಭಾಷೆ ಹಾಗೂ ಸಂಸ್ಕೃತಿಯ ಸಂರಕ್ಷಣೆಗೆ ಕೇವಲ ವಾರ್ಷಿಕ ಸಾಹಿತ್ಯ ಸಮ್ಮೇಳನಗಳನ್ನು ಅದ್ಧೂರಿಯಾಗಿ ನಡೆಸುವುದಕ್ಕಿಂತಲೂ ಇಂತಹ ಪ್ರಶಂಸಾರ್ಹ ಕಾರ್ಯಗಳು ಹೆಚ್ಚು ಅರ್ಥಪೂರ್ಣ. ಈ ರೀತಿಯಲ್ಲಿ ಸಮಾಜವು ತನ್ನ ಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸಿಕೊಳ್ಳಲು ದೀರ್ಘಕಾಲೀನ ಆಧಾರದ ಮೇಲೆ ವ್ಯವಸ್ಥಿತವಾಗಿ ಕೆಲಸ ಮಾಡಬೇಕು ಎಂದವರು ನಂಬಿದ್ದರು.

ಕೆಲವು ಸಣ್ಣ ಪ್ರಕಾಶಕರು ಒಳ್ಳೆಯ ಉದ್ದೇಶದಿಂದ ಕೆಲಸ ಮಾಡುತ್ತಿದ್ದಾರೆ. ಉದ್ದಿಮೆಯನ್ನು ನಡೆಸಿಕೊಂಡು ಹೋಗಲು ಅವರು ತುಂಬಾ ಹೆಣಗುತ್ತಿದ್ದಾರೆ. ಆದ್ದರಿಂದ ಸರ್ಕಾರವು ತನ್ನ ಗ್ರಂಥಾಲಯಗಳ ದೊಡ್ಡ ಜಾಲದ ಮೂಲಕ ಕನ್ನಡ ಪ್ರಕಟಣೆಗಳು ಜನಸಾಮಾನ್ಯರಿಗೆ ವ್ಯಾಪಕ ರೀತಿಯಲ್ಲಿ ತಲುಪುವಂತಹ ಕೆಲಸ ಮಾಡಬೇಕು ಎನ್ನುವುದು ತೇಜಸ್ವಿಯವರ ಅಭಿಪ್ರಾಯವಾಗಿತ್ತು. ಇದು ಇಂದಿಗೂ ಪ್ರಸ್ತುತವಾಗಿದೆ. ಜನರಲ್ಲಿ ಓದುವ ಆಸಕ್ತಿ ಕಡಿಮೆಯಾಗುತ್ತಿದೆ ಎಂಬ ಮಾತನ್ನು ಅವರು ಒಪ್ಪುತ್ತಿರಲಿಲ್ಲ. ಭಾಷೆ ಮತ್ತು ಸಂಸ್ಕೃತಿಯ ಅಭಿವೃದ್ಧಿಗೆಂದು ಸ್ಥಾಪಿಸಲಾದ ಹಲವಾರು ಅಕಾಡೆಮಿಗಳನ್ನು ಒಂದೇ ಸೂರಿನಡಿ ತರಬೇಕು. ಜೊತೆಗೆ, ಅವುಗಳಲ್ಲಿನ ಸರ್ಕಾರಿ ಅನುದಾನವನ್ನು ಪ್ರಕಟಣೆಗಳಂತಹ ಅರ್ಥಪೂರ್ಣ ಉದ್ದೇಶಗಳಿಗೆ ಬಳಸಬೇಕು ಎನ್ನುವುದು ಅವರ ಪ್ರತಿಪಾದನೆಯಾಗಿತ್ತು.

ಲೇಖಕರಿಗೆ ಕೊಡುವ ಗೌರವಧನವನ್ನು ಗಣನೀಯವಾಗಿ ಹೆಚ್ಚಿಸಬೇಕೆಂದು ಅವರು ಅಭಿಪ್ರಾಯ ಪಡುತ್ತಿದ್ದರು. ಬರಹವನ್ನೇ ಪೂರ್ಣಾವಧಿ ವೃತ್ತಿಯಾಗಿಯೂ ಸ್ವೀಕರಿಸಲು ಸಾಧ್ಯ ಎಂಬ ವಿಶ್ವಾಸವನ್ನು ಇದು ಯುವ ಬರಹಗಾರರಲ್ಲಿ ಮೂಡಿಸುತ್ತದೆ. ಜೊತೆಗೆ, ಇದರಿಂದ ಅವರಿಗೆ ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಳ್ಳುವ ನಿಟ್ಟಿನಲ್ಲಿ ಬೆಳವಣಿಗೆಗೆ ಪೂರಕವಾಗುವಂತೆ ಪುಸ್ತಕ, ಪತ್ರಿಕೆ, ನಿಯತಕಾಲಿಕೆಗಳನ್ನು ಖರೀದಿಸಲು, ಪ್ರಸ್ತುತವಾಗಿರುವ ವಿಚಾರ ಸಂಕಿರಣ ಮತ್ತು ಸಮಾವೇಶಗಳಲ್ಲಿ ಪಾಲ್ಗೊಳ್ಳಲು ಪ್ರಯಾಣ ವೆಚ್ಚವನ್ನು ಭರಿಸಲು ನೆರವಾಗುತ್ತದೆ.

ತೇಜಸ್ವಿಯವರ ಹಲವಾರು ವಿಚಾರಗಳು ಇನ್ನೂ ಅನುಷ್ಠಾನಗೊಳ್ಳಬೇಕಿವೆ. ಮುಂಬರುವ ದಿನಗಳಲ್ಲಿ ನೀತಿನಿರೂಪಣಾ ಪ್ರಕ್ರಿಯೆಗೆ ಸಂಬಂಧಿಸಿದಂತೆ ಇವು ಮುನ್ನೆಲೆಗೆ ಬರುತ್ತವೆ ಎಂದು ಆಶಿಸೋಣ.

■ ಬಿ.ಫಸ್ಟ್, 27-12-2017

ಉದ್ಯೋಗವನ್ನು ದೊರಕಿಸಿಕೊಡುವುದರ ಮೇಲಿನ ಹೊಣೆಯು ಸೃಜನಶೀಲತೆಯನ್ನು ಕುಂಠಿತಗೊಳಿಸುತ್ತದೆ. ಜವಾಬ್ದಾರಿಯ ಹೆಸರಿನಲ್ಲಿ ಹಣಕಾಸಿನ ಹಂಚಿಕೆಯನ್ನು ಪರೀಕ್ಷಾ ಫಲಿತಾಂಶಕ್ಕೇ ಜೋಡಿಸಲಾಗುತ್ತದೆ. ಕೌಟುಂಬಿಕ ಮೌಲ್ಯ ಮತ್ತು ಸಾಮಾಜಿಕ ಕೌಶಲಗಳನ್ನು ಒಳಗೊಂಡ ಸಮಗ್ರ ವ್ಯಕ್ತಿತ್ವದ ಮಾನವ ಜೀವಿಗಳನ್ನು ಸಿದ್ಧಗೊಳಿಸುವ ಕ್ರಿಯೆಯು ಮೂಲೆಗುಂಪಾಗಿದೆ.

**– ಅಮೆರಿಕದ ಶಿಕ್ಷಣ ತಜ್ಞರು**

---

ಮಿಷಿಗನ್ ಡೈರಿ ಭಾಗ – 1

# ಅಮೆರಿಕದ ಶಿಕ್ಷಣ ಪದ್ಧತಿ: ನಾವು ಕಲಿಯಬಹುದಾದ ಅಂಶಗಳು

---

ಈ ಬರಹವು 2015ರ ಏಪ್ರಿಲ್‌ನಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನಕ್ಕೆ ನಾನು ಕೈಗೊಂಡ ಪ್ರವಾಸದ ಅವಧಿಯಲ್ಲಿ ಪಡೆದ ವೈಯಕ್ತಿಕ ಅನುಭವಗಳನ್ನು ಆಧರಿಸಿದೆ. ಅಲ್ಲಿನ ಶಾಲಾ ಶಿಕ್ಷಣ ಪದ್ಧತಿಯ ಕಾರ್ಯವೈಖರಿಯನ್ನು ಅರಿಯುವುದು ಪ್ರವಾಸದ ಮುಖ್ಯ ಉದ್ದೇಶವಾಗಿತ್ತು. ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಯು ದೇಶದಲ್ಲಿ ಶಿಕ್ಷಕ-ಶಿಕ್ಷಣ ಕೋರ್ಸ್‌ನ್ನು ಹೊಂದಿರುವ ಅಗ್ರಶ್ರೇಣಿಯ ಸಂಸ್ಥೆಗಳಲ್ಲಿ ಒಂದು. ಅಲ್ಲಿನ ಬೋಧಕವರ್ಗದೊಡನೆ ನಡೆಸಿದ ವಿಚಾರ ವಿನಿಮಯದ ಜೊತೆಗೆ ವ್ಯವಸ್ಥೆಯ ಒಳಗೆ ಹಾಗೂ ಹೊರಗೆ ಇರುವ ತಜ್ಞರೊಡನೆ ಚರ್ಚಿಸಿ, ಶಾಲೆಗಳಿಗೆ ಭೇಟಿ ನೀಡಿ, ವಿಷಯವನ್ನು ಸಂಗ್ರಹಿಸಿ, ವಿಶ್ಲೇಷಿಸಿದ್ದೇನೆ. ಎರಡು ಭಾಗಗಳನ್ನು ಹೊಂದಿರುವ ಸರಣಿ ಬರಹದಲ್ಲಿ ಇದು ಮೊದಲನೆಯದು.

*

ಅಮೆರಿಕದಲ್ಲಿನ ಶಿಕ್ಷಣ ವ್ಯವಸ್ಥೆಯ ರಾಚನಿಕ ಸ್ವರೂಪವನ್ನು ಬಹುಮಟ್ಟಿಗೆ ಭಾರತದಲ್ಲಿರುವ ಶಿಕ್ಷಣ ವ್ಯವಸ್ಥೆಯ ಸ್ವರೂಪಕ್ಕೆ ಹೋಲಿಸಬಹುದು. ಪೂರ್ವಪ್ರಾಥಮಿಕ ಶಿಕ್ಷಣವು ಮೂರನೆಯ ವಯಸ್ಸಿನಲ್ಲಿ ಅಂದರೆ ನರ್ಸರಿ/ ಕಿಂಡರ್‌ಗಾರ್ಟನ್‌ನೊಡನೆ ಆರಂಭವಾಗುತ್ತದೆ. ಮಕ್ಕಳು ಆರನೆಯ ವರ್ಷ ತಲುಪಿದಾಗ ಗ್ರೇಡ್ 1ರಿಂದ ಆರಂಭವಾಗುವ ಪ್ರಾಥಮಿಕ ಶಿಕ್ಷಣವು ಹದಿನಾಲ್ಕನೆಯ

ವಯಸ್ಸಿನಲ್ಲಿ ಗ್ರೇಡ್ 8ನ್ನು ಮುಗಿಸುವವರೆಗೂ ಮುಂದುವರೆಯುತ್ತದೆ. ಗ್ರೇಡ್ 12ಕ್ಕೆ ಸಮನಾದ ಹೈಸ್ಕೂಲ್ ಡಿಪ್ಲೊಮಾವನ್ನು ನೀಡುವ ಪ್ರೌಢ ಶಿಕ್ಷಣವು ಹದಿನೇಳನೆಯ ವಯಸ್ಸಿಗೆ ಕೊನೆಗೊಳ್ಳುತ್ತದೆ. ನಿಯಮಿತವಾದ, ಸಾಮಾನ್ಯ ಶೈಕ್ಷಣಿಕ ವಿಭಾಗಗಳಲ್ಲದೆ ಪ್ರೌಢಶಾಲಾ ಮಟ್ಟದಲ್ಲಿ ಇನ್ನಿತರ ವೃತ್ತಿಪರ ಹಾಗೂ ತಾಂತ್ರಿಕ ಶಿಕ್ಷಣವನ್ನು ನೀಡುವ ವ್ಯವಸ್ಥೆಯೂ ಇದೆ. ಆನಂತರ, ಹಲವಾರು ವೃತ್ತಿಪರ ಹಾಗೂ ತಾಂತ್ರಿಕ ಶಿಕ್ಷಣ ಸಂಸ್ಥೆಗಳು ಇಲ್ಲಿನ ಡಿಪ್ಲೊಮಾ ಶಿಕ್ಷಣಕ್ಕೆ ಸಮನಾದ ಎರಡು ವರ್ಷ ಅವಧಿಯ ಅಸೋಸಿಯೇಟ್ ಪದವಿ/ಸರ್ಟಿಫಿಕೇಟ್ ಕೋರ್ಸ್‌ಗಳನ್ನು ನೀಡುತ್ತವೆ. ಪ್ರಾಥಮಿಕ ಶಿಕ್ಷಣವು ಯಾವಾಗ ಮುಗಿಯುತ್ತದೆ (ಗ್ರೇಡ್ 4 ಅಥವಾ 5) ಅಥವಾ ಪ್ರೌಢಶಾಲೆಯು ಯಾವಾಗ ಆರಂಭವಾಗುತ್ತದೆ (ಗ್ರೇಡ್ 8 ಅಥವಾ 9) ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ದೇಶದಾದ್ಯಂತ ಚಿಕ್ಕಪುಟ್ಟ ವ್ಯತ್ಯಾಸಗಳಿರಬಹುದು. ಸ್ನಾತಕ ಪದವಿ ಕೋರ್ಸ್‌ಗಳು ಸಾಧಾರಣವಾಗಿ ನಾಲ್ಕು ವರ್ಷ ಅವಧಿಯದಾಗಿವೆ. ಮತ್ತೊಂದು ವರ್ಷದ ಅಧ್ಯಯನದಿಂದ ಸ್ನಾತಕೋತ್ತರ ಪದವಿಯನ್ನು ಪಡೆಯಬಹುದು. ಆ ವೇಳೆಗೆ ವಿದ್ಯಾರ್ಥಿಗೆ ಸುಮಾರು ಇಪ್ಪತ್ತೆರಡು ವರ್ಷ ವಯಸ್ಸಾಗಿರುತ್ತದೆ. ಈ ಹಂತದ ನಂತರ, ಆಸಕ್ತಿಯಿದ್ದವರು ಸಂಶೋಧನಾ ಅಧ್ಯಯನ ಅಥವಾ ತದನಂತರದ ಪೋಸ್ಟ್-ಡಾಕ್ಟೊರಲ್ ಅಧ್ಯಯನವನ್ನು ಕೈಗೊಳ್ಳಬಹುದು.

ಕಿಂಡರ್‌ಗಾರ್ಟನ್‌ನಿಂದ ಗ್ರೇಡ್ 12ರ ವರೆಗಿನ ಶಿಕ್ಷಣವು ಎಲ್ಲಾ ಮಕ್ಕಳಿಗೂ ಕಡ್ಡಾಯವಾಗಿದೆ. ನಮ್ಮಲ್ಲಿರುವ ಶಿಕ್ಷಣ ಹಕ್ಕು ಕಾಯಿದೆಯ ರೀತಿಯಲ್ಲಿಯೇ ಅಮೆರಿಕದ ಸಂವಿಧಾನವು ಈ ಹೊಣೆಯನ್ನು ರಾಜ್ಯಗಳಿಗೆ ವಹಿಸುತ್ತದೆ. ಸರ್ಕಾರವು ನಡೆಸುವ ಸಾರ್ವಜನಿಕ ಶಾಲೆಗಳಲ್ಲದೆ ಸ್ಥಳೀಯ ಶಾಲಾ ಮಂಡಳಿ ಅಥವಾ ಸಾರ್ವಜನಿಕ ವಿಶ್ವವಿದ್ಯಾಲಯಗಳಿಂದ ಅಧಿಕೃತವಾಗಿ ಮಾನ್ಯತೆ ಪಡೆದ ಖಾಸಗಿ ಮತ್ತು ಚಾರ್ಟರ್ಡ್ ಶಾಲೆಗಳು ಇರುತ್ತವೆ. ಜೊತೆಗೆ, ಗೃಹಶಿಕ್ಷಣ ಮತ್ತು ವೋಚರ್ ಪದ್ಧತಿಗಳೂ ಸೇರಿ ಹಲವಾರು ಬಗೆಯ ಶಾಲಾ ಪದ್ಧತಿಗಳು ಜಾರಿಯಲ್ಲಿವೆ. ಆಡಳಿತದ ವಿಷಯಕ್ಕೆ ಬಂದರೆ, ಫೆಡರಲ್ ಸರ್ಕಾರವು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಕಾಯಿದೆ, 'ಯಾವ ಮಗುವೂ ಹಿಂದೆ ಉಳಿಯದು' (No Child Left Behind), ಉಚಿತ ಅಥವಾ ಕಡಿಮೆ ಬೆಲೆಗೆ ಮಧ್ಯಾಹ್ನದ ಊಟ ಅಥವಾ ಅಂಗವೈಕಲ್ಯವುಳ್ಳ ವ್ಯಕ್ತಿಗಳಿಗೆ ಸಂಬಂಧಿಸಿದ ಕಾಯಿದೆ (ಐಡಿಇಎ) ಇತ್ಯಾದಿ ಮೂಲಭೂತ ನೀತಿ ನಿಯಮಗಳಿಗೆ ಸಂಬಂಧಿಸಿದ ಕಾಯಿದೆಗಳನ್ನು ತರುತ್ತದೆ. ರಾಜ್ಯ ಸರ್ಕಾರಗಳು ಪ್ರತಿ ಗ್ರೇಡ್‌ಗೆ ಪ್ರಮಾಣಿತ ಮಟ್ಟಗಳನ್ನು (Standard) ಗೊತ್ತುಪಡಿಸುತ್ತವೆ ಹಾಗೂ ಮೌಲ್ಯಮಾಪನದ ಮಾನದಂಡಗಳನ್ನು

ನಿಗದಿಪಡಿಸುತ್ತವೆ. ಸ್ಥಳೀಯ ಜಿಲ್ಲಾ ಶಾಲಾ ಮಂಡಳಿಗಳು ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳನ್ನು ಸಿದ್ಧಪಡಿಸುತ್ತವೆ. ಆ ಪ್ರಕಾರ, ಆಯವ್ಯಯ ಪತ್ರದ ಹಣಕಾಸಿನ ಹಂಚಿಕೆಯಲ್ಲಿ ರಾಜ್ಯಗಳು ಶಿಕ್ಷಣಕ್ಕೆ ಸುಮಾರು ಶೇ. 50ರಷ್ಟು (ಮುಖ್ಯವಾಗಿ ಕಾರ್ಪೊರೇಟ್ ಮತ್ತು ಮಾರಾಟ ತೆರಿಗೆಗಳಿಂದ ಬಂದ ಆದಾಯ) ತಮ್ಮ ಪಾಲನ್ನು ಹೊಂದಿಸಿ ಮೀಸಲಿಡುತ್ತವೆ. ಫೆಡರಲ್ ಸರ್ಕಾರವು ಕೇವಲ ಶೇ. 11ರಷ್ಟನ್ನು ಖರ್ಚುಮಾಡುತ್ತದೆ. ಉಳಿದ ಹಣಕಾಸನ್ನು ಸ್ಥಳೀಯ ಮಟ್ಟದ ಶಾಲಾ ಸಂಸ್ಥೆಗಳು (ಆಸ್ತಿ ತೆರಿಗೆಗಳ ಮೂಲಕ) ಹಾಗೂ ಖಾಸಗಿ ದತ್ತಿ ಸಂಸ್ಥೆಗಳ ಅನುದಾನದ ಮೂಲಕ ಒಗ್ಗೂಡಿಸಲಾಗುತ್ತದೆ. ಎಲ್ಲಾ ಆಯವ್ಯಯ ಪತ್ರಗಳನ್ನೂ ಪ್ರತಿ ಮಗುವಿಗೆ ತಗಲುವ ವೆಚ್ಚದ ಆಧಾರದ ಮೇಲೆ ಪರಿಗಣಿಸಲಾಗುತ್ತದೆ.

ಪ್ರಸವಪೂರ್ವ ಅವಧಿಯಿಂದ ಹಿಡಿದು ಎಂಟನೆಯ ವಯಸ್ಸಿನವರೆಗಿನ ಹಂತದಲ್ಲಿ ಶಿಕ್ಷಣ ಇಲಾಖೆಯು ಗಮನವನ್ನು ಯಾವುದರ ಮೇಲೆ ಕೇಂದ್ರೀಕರಿಸಬೇಕು ಎನ್ನುವುದನ್ನು ಮಾರ್ಗದರ್ಶಿ ತತ್ತ್ವಗಳು (Guiding Principles) ನಿರ್ಧರಿಸುತ್ತವೆ. ಅತಿ ಹೆಚ್ಚು ಅಗತ್ಯವಿರುವ ಮಗುವಿನ ಅಂದರೆ ಕಡಿಮೆ ಆದಾಯವನ್ನುಳ್ಳ ಕುಟುಂಬಗಳಿಂದ ಬಂದ, ವೈವಿಧ್ಯಮಯ ಮತ್ತು ದ್ವಿಭಾಷಾ ಹಿನ್ನೆಲೆಯನ್ನುಳ್ಳ, ವೈಕಲ್ಯ ಅಥವಾ ವಸತಿರಹಿತ ಕುಟುಂಬಗಳ ಹಿನ್ನೆಲೆಯನ್ನುಳ್ಳ ಮಕ್ಕಳ ಕಾಳಜಿಯನ್ನು ಮೊದಲು ತೆಗೆದುಕೊಳ್ಳಬೇಕು ಹಾಗೂ ಮಕ್ಕಳ ಅಭಿವೃದ್ಧಿಯಲ್ಲಿ ಪೋಷಕರ ಮತ್ತು ಸಮುದಾಯಗಳ ಮಾತಿಗೆ ಅವಕಾಶವಿರಬೇಕು ಎಂದು ಮಾರ್ಗದರ್ಶಿ ತತ್ತ್ವಗಳು ಹೇಳುತ್ತವೆ. ಪ್ರೌಢ ಶಾಲಾ ಹಂತಕ್ಕೆ ಬಂದಾಗ ವಿದ್ಯಾರ್ಥಿಗಳನ್ನು 'ಉದ್ಯಮ ಅಥವಾ ಕಾಲೇಜಿಗೆ ಸಿದ್ಧಪಡಿಸು'ವುದರತ್ತ ಸರ್ಕಾರದ ಗಮನವು ಹೊರಳುತ್ತದೆ. ಆ ಹಂತದಲ್ಲಿ ವ್ಯವಸ್ಥೆಯ ಗಮನವು ಮಕ್ಕಳಿಗೆ ಶಾಲಾ ಅವಕಾಶವನ್ನು ಕಲ್ಪಿಸುವದರತ್ತ ಇರುವುದಿಲ್ಲ. ಬದಲಾಗಿ, ಸಾಕ್ಷರತೆ ಹಾಗೂ ಗಣಿತದ ವಿಷಯದಲ್ಲಿ ಮಕ್ಕಳು ಕಲಿಕೆಯ ಕನಿಷ್ಠ ಮಟ್ಟ ತಲುಪುವುದನ್ನು ಖಚಿತಪಡಿಸುವುದಾಗಿರುತ್ತದೆ (ವಿಜ್ಞಾನ ಮತ್ತು ಸಮಾಜ ವಿಜ್ಞಾನದ ವಿಷಯದಲ್ಲಿ ಅಷ್ಟಾಗಿ ಗಮನವಿಲ್ಲ). ಹಲವಾರು ರೀತಿಯ ಪರೀಕ್ಷಾ ವಿಧಾನಗಳನ್ನು ಉಪಯೋಗಿಸಿ ವಿದ್ಯಾರ್ಥಿಗಳ ಕಲಿಕೆಯ ಮಟ್ಟವನ್ನು ಅಳೆಯುವ ಅಗಾಧ ಪ್ರಯತ್ನಗಳು ನಡೆಯುತ್ತವೆ. ಕಾರ್ಯ ನಿರ್ವಹಣೆಯ ವಿಷಯದಲ್ಲಿ ಈ ವಿಧಾನಗಳು ಶಿಕ್ಷಕರ ಮೇಲೆಯೇ ಹೆಚ್ಚಿನ ಹೊಣೆಯನ್ನು ಹೊರಿಸುವಂತಿವೆ. 2010ರಲ್ಲಿ ನಲವತ್ತೆರಡಕ್ಕೂ ಹೆಚ್ಚಿನ ರಾಜ್ಯಗಳು ಸಮಾನ ಮೂಲ ಪಠ್ಯಕ್ರಮ(ಸಿಸಿಸಿ–ಕಾಮನ್ ಕೋರ್ ಕರಿಕ್ಯುಲಮ್) ವನ್ನು ಅಳವಡಿಸಿಕೊಂಡವು. ಇದು ವಿಷಯವಾರು ಪ್ರಮಾಣಿತ ಮಟ್ಟವನ್ನು ನಿಗದಿಪಡಿಸುವುದರ ಜೊತೆಗೆ, ವಿದ್ಯಾರ್ಥಿಗಳು ನಾಲ್ಕು ಮಟ್ಟದ ಕೌಶಲಗಳನ್ನು

ಅಂದರೆ – ತಾರ್ಕಿಕ ಕೌಶಲ, ಸಹಯೋಗ ಮತ್ತು ಸಂವಹನ, ತಂತ್ರಜ್ಞಾನದ ಬಳಕೆ ಮತ್ತು ಸಮಸ್ಯಾ ಪರಿಹಾರ ಸಾಮರ್ಥ್ಯಗಳನ್ನು – ಪಡೆದುಕೊಳ್ಳಬೇಕು ಎಂಬುದಾಗಿ ಆದೇಶಿಸುತ್ತದೆ. ಉನ್ನತ ಶಿಕ್ಷಣ ಸಂಸ್ಥೆಗಳ ಜೊತೆಗೆ ವ್ಯಾಪಾರೋದ್ಯಮ ಸಂಸ್ಥೆಗಳು ಕೂಡ ಪಠ್ಯಕ್ರಮವನ್ನು ರೂಪಿಸುವಲ್ಲಿ ಗಮನಾರ್ಹ ಪ್ರಭಾವ ಬೀರಿವೆ.

ಅಮೆರಿಕದಲ್ಲಿ ನಾಲ್ಕೈದು ಶಾಲೆಗಳಿಗೆ ಭೇಟಿ ಕೊಡುವ ಹಾಗೂ ಈ ಕೆಲವು ನೀತಿಗಳು ಅಲ್ಲಿ ನಿಜಕ್ಕೂ ಹೇಗೆ ಕೆಲಸ ಮಾಡುತ್ತಿವೆ ಎಂಬುದನ್ನು ನಾವೇ ಕಂಡುಕೊಳ್ಳುವ ಅವಕಾಶವೊಂದು ನಮಗೆ ದೊರಕಿತು. ನಾವು ಭೇಟಿ ಕೊಟ್ಟ ಶಾಲೆಗಳೆಲ್ಲವೂ ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಯ ಸುತ್ತಮುತ್ತ ಇದ್ದವು. ವಿಶ್ವವಿದ್ಯಾನಿಲಯದಿಂದ ಕಾರಿನಲ್ಲಿ ಹೋದರೆ ನಲವತ್ತೈದರಿಂದ ಅರವತ್ತು ನಿಮಿಷದ ಅವಧಿಯಲ್ಲಿ ತಲುಪಬಹುದಿತ್ತು. ನಮ್ಮ ಭೇಟಿಯ ಕುರಿತು ಶಾಲಾ ಅಧಿಕಾರಿಗಳಿಗೆ ಮುಂಚಿತವಾಗಿಯೇ ತಿಳಿಸಲಾಗಿತ್ತು. ಗ್ರೇಡ್‌ಗಳು, ವಿಧ (ಗ್ರಾಮೀಣ/ನಗರ ಪ್ರದೇಶದ) ಹಾಗೂ ಅವು ಸಮಾಜದ ಯಾವ ವರ್ಗದ ಮಕ್ಕಳಿಗಾಗಿ ಇವೆ (ಮೇಲ್ವರ್ಗ/ಕೆಳವರ್ಗ) ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಶಾಲೆಗಳು ವಿವಿಧ ರೀತಿಯದಾಗಿದ್ದವು. ಶಾಲೆಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ನಾನು ಗಮನಿಸಿದ ಕೆಲವು ಸಂಗತಿಗಳ ಸಾರಾಂಶವು ಆಸಕ್ತಿದಾಯಕವಾಗಿದೆ:

- ಈ ಶಾಲೆಗಳಲ್ಲಿ ಹೆಚ್ಚಿನವು ಮೂಲಭೂತ ಭೌತಿಕ ಸೌಲಭ್ಯಗಳ ದೃಷ್ಟಿಯಿಂದ ಸಾಕಷ್ಟು ಸಮೃದ್ಧವಾಗಿವೆ. ತರಗತಿ ಕೋಣೆಗಳಲ್ಲಿ ಮಕ್ಕಳಿಗೆ ಆಸನ, ಮೇಜುಗಳ ವ್ಯವಸ್ಥೆ, ಶೌಚಾಲಯಗಳಿವೆ. ಬರಹ, ಸುತ್ತೋಲೆಗಳನ್ನು ಪ್ರದರ್ಶಿಸಲು ಫಲಕಗಳಿವೆ. ಕಲಿಕೆ ಮತ್ತು ಬೋಧನೆಯ ಸಾಮಗ್ರಿಗಳಿವೆ. ಶ್ರವಣ ಹಾಗೂ ದೃಶ್ಯ ಮಾಧ್ಯಮಗಳನ್ನು ಬಳಸಲು ಉಪಕರಣಗಳಿವೆ (ಕಂಪ್ಯೂಟರ್‌ಗಳ ಬಳಕೆ ಒಂದು ಮತ್ತು ಎರಡನೆಯ ತರಗತಿಗಳಲ್ಲಿ ಕೂಡ ಇತ್ತು ಹಾಗೂ ಒಂದು ಶಾಲೆಯಲ್ಲಂತೂ ಡಿಜಿಟಲ್ ರೆಕಾರ್ಡಿಂಗ್ ಸ್ಟುಡಿಯೋ ಕೂಡ ಇತ್ತು). ಗ್ರಂಥಾಲಯ, ದೊಡ್ಡ ಸಮಾರಂಭಗಳನ್ನು ನಡೆಸಲು ಸಭಾಭವನ, ಕಚೇರಿ, ಪ್ರಾಂಶುಪಾಲರ ಕೋಣೆ ಮತ್ತು ಸಭೆಗಳನ್ನು ನಡೆಸಲು ಕೊಠಡಿಗಳು, ಜಿಮ್ನೇಶಿಯಮ್ ಸೇರಿದಂತೆ ದೈಹಿಕ ಸ್ವಾಸ್ಥ್ಯ ಕೇಂದ್ರ, ಒಳಾಂಗಣ/ಹೊರಾಂಗಣ ಮೈದಾನಗಳು, ಈಜುಗೊಳ ಇತ್ಯಾದಿಗಳು ಇದ್ದವು.
- ಶಾಲಾ ಜಿಲ್ಲೆ (Shool District) ಎನ್ನುವುದು ಸಾಧಾರಣವಾಗಿ ಆರರಿಂದ ಹತ್ತು ಶಾಲೆಗಳನ್ನು ಹೊಂದಿರುತ್ತದೆ ಹಾಗೂ ತನ್ನ

ಭೌಗೋಳಿಕ ವ್ಯಾಪ್ತಿಯಲ್ಲಿರುವ, ಕಿಂಡರ್‌ಗಾರ್ಟನ್‌ನಿಂದ ಗ್ರೇಡ್ 12ರ ವರೆಗಿನ ವಿವಿಧ ತರಗತಿಯ ಮಕ್ಕಳ ಅಗತ್ಯಕ್ಕೆ ತಕ್ಕ ಹಾಗೆ ಅವುಗಳನ್ನು ನಿರ್ಮಿಸಲಾಗಿರುತ್ತದೆ. ಸದರ್ನ್ ಕೆಂಟ್, ಮಿಡ್ಲ್‌ವಿಲ್‌ನಲ್ಲಿರುವ ಥಾರ್ನ್‌ಪಲ್ ಕೆಲ್ಲೊಗ್ ಸ್ಕೂಲ್ಸ್ ಎನ್ನುವುದು ಅಂತಹ ಶಾಲಾ ಸಂಕೀರ್ಣಗಳಲ್ಲಿ ಒಂದು. ಈ ಸಂಕೀರ್ಣವು 1936ರಲ್ಲಿ ಆರಂಭವಾಯಿತು. ಇದರಲ್ಲಿ ಪ್ರಾಥಮಿಕದಿಂದ ಪ್ರೌಢ ಶಾಲೆಗಳವರೆಗಿನ ನಾಲ್ಕು ಕಟ್ಟಡಗಳಿವೆ. ಎಲ್ಲವೂ ನಾಲ್ಕು ನೂರರಿಂದ ಐನೂರು ಮೀಟರ್ ವ್ಯಾಪ್ತಿಯೊಳಗಿವೆ. ಗ್ರಾಮೀಣ ಎನ್ನಬಹುದಾದ ಆ ಶಾಲೆಯಲ್ಲಿ ಸುಮಾರು ಮೂರು ಸಾವಿರ ವಿದ್ಯಾರ್ಥಿಗಳು ಓದುತ್ತಿದ್ದಾರೆ.

- ಸಂಪನ್ಮೂಲಗಳಿಗೆ ಕೊಡುಗೆ ನೀಡುವುದರ ಮೂಲಕ ಹಾಗೂ ತೆರಿಗೆ ಪಾವತಿಸುವುದರ ಮೂಲಕ ಸ್ಥಳೀಯ ಸಮುದಾಯವು ಶಾಲೆಗೆ ಪೂರ್ಣ ರೀತಿಯ ಬೆಂಬಲ ನೀಡುತ್ತದೆ. ಪೋಷಕರಲ್ಲಿ ಈ ಶಾಲೆ ನಮ್ಮದು ಎಂಬ ಭಾವನೆ ಎದ್ದು ಕಾಣುತ್ತದೆ. ಅವರು ಪೋಷಕ–ಶಿಕ್ಷಕ ಸಭೆಗಳಿಗೂ ಹೊರತಾದ ಶಾಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ.

- **ಸ್ಥಳೀಯ ಶಾಲಾ ಜಿಲ್ಲೆಯು ಶಾಲೆಗಳಿಗೆ ಅನೇಕ ರೀತಿಯಲ್ಲಿ ಬೆಂಬಲ ನೀಡುತ್ತದೆ:** ವಿಶೇಷವಾಗಿ ಬೋಧನಾ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಸ್ಥಿರವಾದ ಹಣಕಾಸಿನ ಬೆಂಬಲ ನೀಡುವುದು, ಪ್ರಬಲವಾದ ಸಮುದಾಯ ಬೆಂಬಲವನ್ನು ಪಡೆದುಕೊಳ್ಳುವುದು, ವಿದ್ಯಾರ್ಥಿಗಳ ಸುರಕ್ಷತೆಯ ಕಾಳಜಿ ಹಾಗೂ ಸಿಬ್ಬಂದಿಗಳ ಪೋಷಣೆ ಮುಂತಾದವು. ತಮ್ಮ ಶಾಲೆಗಳನ್ನು ಆಕರ್ಷಕವಾಗಿಸಲು ಹಾಗೂ ಕ್ರಿಯಾಶೀಲವಾಗಿಡಲು ಕೇವಲ ಜಿಲ್ಲಾ ಮೇಲುಸ್ತುವಾರಿ ಅಧಿಕಾರಿಯಲ್ಲದೆ, ಪಠ್ಯಕ್ರಮ ನಿರ್ದೇಶಕರು ಮತ್ತು ಹಣಕಾಸಿನ ನಿರ್ದೇಶಕರು ಒಟ್ಟಾಗಿ ಶ್ರಮ ವಹಿಸುತ್ತಾರೆ. ಉದಾಹರಣೆಗೆ, ಸದರ್ನ್ ಕೆಂಟ್ ಶಾಲಾ ಜಿಲ್ಲೆಯಲ್ಲಿ ಪ್ರತಿ ಮಗುವಿನ ವಾರ್ಷಿಕ ಶಾಲಾನಿಧಿ ಸುಮಾರು 7126 ಅಮೆರಿಕನ್ ಡಾಲರ್ ಇತ್ತು. ಶೇ. 36ರಷ್ಟು ಬಡ ವಿದ್ಯಾರ್ಥಿಗಳು ಅದರಲ್ಲಿಯೂ ಹೆಚ್ಚಾಗಿ ವಲಸಿಗ ಕುಟುಂಬಗಳಿಂದ ಬಂದ ಅಥವಾ ಒಂಟಿ ಪೋಷಕರನ್ನು ಹೊಂದಿರುವ ಮಕ್ಕಳು ಉಚಿತ ಊಟದ ಸೌಲಭ್ಯವನ್ನು ಪಡೆಯುತ್ತಿದ್ದರು. ಈ ಹಿನ್ನೆಲೆಯಲ್ಲಿ ಇಂತಹ ನಿಧಿಯ ವ್ಯವಸ್ಥೆಯು ಸಾಕಷ್ಟು ಮಹತ್ವವನ್ನು ಪಡೆದುಕೊಳ್ಳುತ್ತದೆ.

- ತರಗತಿ ಕೋಣೆಯ ಪ್ರಕ್ರಿಯೆಗೆ ಬಂದರೆ, ಶಿಕ್ಷಕರು ವೇಳಾಪಟ್ಟಿ ಮತ್ತು ಸಮಯವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.
- ಶಿಕ್ಷಕರ ವೃತ್ತಿ ಅನುಭವಕ್ಕೂ ಅವರು ಬೋಧಿಸುವ ಗ್ರೇಡ್‌ಗಳಿಗೂ ಯಾವುದೇ ರೀತಿಯ ಸಂಬಂಧ ಇರುವುದಿಲ್ಲ. ಅತ್ಯಂತ ಹೆಚ್ಚು ಅನುಭವವನ್ನು ಹೊಂದಿರುವ ಶಿಕ್ಷಕರೂ ಕೂಡ ಗ್ರೇಡ್ 1–2 ಸೇರಿದಂತೆ ಕೆಳಗಿನ ಹಂತದ ತರಗತಿಗಳಿಗೆ ಪಾಠ ಮಾಡುತ್ತಿರಬಹುದು.
- ಶಿಕ್ಷಕ–ಶಿಕ್ಷಣ ಕೋರ್ಸ್‌ನ ಪ್ರಶಿಕ್ಷಣಾರ್ಥಿಗಳು (ಇಂಟರ್ನ್ ಶಿಕ್ಷಕರು) ಹಿರಿಯ ಶಿಕ್ಷಕರಿಗೆ ಗುಂಪುಕಾರ್ಯದಲ್ಲಿ ನೆರವಾಗುವುದಲ್ಲದೆ ಓದು ಅಥವಾ ಇನ್ನಿತರ ಚಟುವಟಿಕೆಗಳಲ್ಲಿ ಹಿಂದೆ ಬಿದ್ದಿರುವ ನಿರ್ದಿಷ್ಟ ಮಕ್ಕಳಿಗೆ ಬೆಂಬಲ ನೀಡುತ್ತಾರೆ. ಕೆಲವು ಅವಧಿ ಪಾಠವನ್ನೂ ಮಾಡುತ್ತಾರೆ. ವಿಶೇಷ ಅಗತ್ಯಗಳನ್ನು ಹೊಂದಿರುವ ಮಕ್ಕಳಿಗೆಂದೇ ಆ ಕ್ಷೇತ್ರದಲ್ಲಿ ತರಬೇತಿ ಪಡೆದ ಶಿಕ್ಷಕರು ಅಲ್ಲಿ ಇದ್ದರು.
- ಶಿಕ್ಷಕರಿಗೆ ನಿರ್ದಿಷ್ಟವಾದ, ನಿಗದಿಪಡಿಸಿದ ತರಗತಿ ಹಾಗೂ ತರಗತಿ ಕೋಣೆಗಳಿವೆ. ಉದಾಹರಣೆಗೆ, ವಿಜ್ಞಾನದ ಶಿಕ್ಷಕರೊಬ್ಬರು ತಮಗೆ ನಿಗದಿಪಡಿಸಿದ ತರಗತಿಕೋಣೆಯಿಂದ ಆಚೆ ಹೋಗುವುದಿಲ್ಲ. ವಿವಿಧ ವಿಭಾಗಗಳ ಅಥವಾ ಗ್ರೇಡ್‌ಗಳ ವಿದ್ಯಾರ್ಥಿಗಳು ವಿಜ್ಞಾನವನ್ನು ಕಲಿಯಲು ಅವರ ತರಗತಿಕೋಣೆಗೇ ಬಂದು ಹೋಗುತ್ತಾರೆ. ಇದರಿಂದ ಶಿಕ್ಷಕರಿಗೆ, ವಿವಿಧ ವಿದ್ಯಾರ್ಥಿಗಳಿಗೆ ಪ್ರಸ್ತುತವಾದ ಸಾಮಗ್ರಿಗಳನ್ನು ನವೀನ ರೀತಿಯಲ್ಲಿ ತಮ್ಮ ಕೋಣೆಯೊಳಗೆ ಪ್ರದರ್ಶಿಸಲು ಸಾಧ್ಯವಾಗುತ್ತದೆ.
- ಚರ್ಚೆ, ಪ್ರಯೋಗಗಳು ಹಾಗೂ ನಡೆಸಲಾಗುವ ಇನ್ನಿತರ ಹಲವಾರು ತರಹದ ಚಟುವಟಿಕೆಗಳ ಕಾರಣ ತರಗತಿಗಳು ಕ್ರಿಯಾಶೀಲವಾಗಿದ್ದವು. ಷಾರ್ಲಟ್ ಪಬ್ಲಿಕ್ ಸ್ಕೂಲ್ ಎನ್ನುವ ಒಂದು ಪ್ರೌಢ ಶಾಲೆಯಲ್ಲಿ ಮಕ್ಕಳ ಇಂಗ್ಲಿಷ್ ಭಾಷಾ ಗ್ರಹಿಕೆಯು ಆಶ್ಚರ್ಯಕರವೆನ್ನುವ ರೀತಿಯಲ್ಲಿ ಸರಾಸರಿ ಮಟ್ಟಕ್ಕಿಂತಲೂ ಕಡಿಮೆಯಿತ್ತು. ಕೆಲವು ಮಕ್ಕಳು ಅಕ್ಷರಗಳನ್ನು ಬರೆಯುವಲ್ಲಿ ಬಹಳಷ್ಟು ತಪ್ಪುಗಳನ್ನು ಮಾಡಿದ್ದರು. ಇನ್ನು ಕೆಲವು ಮಕ್ಕಳು ಮೂಲ ಬೀಜಗಣಿತವನ್ನು ಅರ್ಥೈಸಿಕೊಳ್ಳಲು ಹೆಣಗುತ್ತಿದ್ದರು. ಅತ್ಯುತ್ತಮ ಮೂಲಭೂತ ಸೌಕರ್ಯಗಳ ಲಭ್ಯತೆ ಅಥವಾ ಕಂಪ್ಯೂಟರ್ ನೋಟ್‌ಬುಕ್, ಐಪ್ಯಾಡ್‌ಗಳಂತಹ ಅತ್ಯಾಧುನಿಕ ತಂತ್ರಜ್ಞಾನ ಸಲಕರಣೆಗಳನ್ನು ಹೊಂದಿರುವ ಮಾತ್ರಕ್ಕೆ ತರಗತಿಕೋಣೆಗಳಲ್ಲಿ

ವಿದ್ಯಾರ್ಥಿಗಳು ಕಲಿಯುತ್ತಾರೆ ಎಂದೇನಿಲ್ಲ. ಅವರಿಗೆ ಬೇಕಾಗಿರುವುದು ವಿಷಯವಸ್ತುವನ್ನು ನವೀನ ರೀತಿಯಲ್ಲಿ ತಿಳಿಯಪಡಿಸಬಲ್ಲ ಒಳ್ಳೆಯ ಶಿಕ್ಷಕರು ಎನ್ನುವ ಸಂಗತಿಯೂ ಇನ್ನಷ್ಟು ನಿಖರವಾಯಿತು.

- ಶಾಲೆಯ ಪ್ರಾಂಶುಪಾಲರು ಬೋಧನೆಯಲ್ಲಿ ಅನುಭವವನ್ನು ಹೊಂದಿರುವುದರ ಜೊತೆಗೆ ವಿಶೇಷವಾಗಿ ಶಾಲಾ ಆಡಳಿತಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ತರಬೇತಿಯೊಂದನ್ನು ಪಡೆಯುತ್ತಾರೆ. ಅವರು ತಮ್ಮದೇ ಆದ ವೃತ್ತಿಪರ ಕಲಿಕಾ ಸಮುದಾಯವನ್ನು ಹೊಂದಿರುತ್ತಾರೆ. ಅದರ ಸಭೆಯು ವಾರಕ್ಕೊಮ್ಮೆ ನಡೆಯುತ್ತದೆ. ಅವರು ಹೆಚ್ಚಾಗಿ ಶೈಕ್ಷಣಿಕ ಮುಂದಾಳತ್ವದ ಪಾತ್ರವನ್ನು ನಿರ್ವಹಿಸುತ್ತಾರೆ. ಸಾಕಷ್ಟು ಪರಿಣಾಮಕಾರಿಯಾಗಿ ಸ್ಪಷ್ಟವಾದ, ಸ್ಫುಟವಾದ ಶೈಲಿಯಲ್ಲಿ ವಿಷಯವನ್ನು ಆಕರ್ಷಕವಾಗಿ ಪ್ರಸ್ತುತ ಪಡಿಸುವ ಸಾಮರ್ಥ್ಯವನ್ನು ಹೊಂದಿರುತ್ತಾರೆ.

- ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ಹಲವಾರು ಉನ್ನತ ಸ್ತರದ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಎದುರಿಸಲು ಅನುಕೂಲವಾಗುವಂತೆ ಒಟ್ಟೊಟ್ಟಿಗೇ ಸಿದ್ಧತೆ ನಡೆಯುತ್ತಿತ್ತು. ಗ್ರೇಡ್ 12ರಿಂದ ಹೊರಬೀಳುವ ಶೇ. 60 ವಿದ್ಯಾರ್ಥಿಗಳು ತಮ್ಮನ್ನು ಉದ್ಯೋಗದಲ್ಲಿ ತೊಡಗಿಸಿಕೊಳ್ಳಲು ಬಯಸುತ್ತಾರೆ ಹಾಗೂ ಸಾಕಷ್ಟು ಸಂಖ್ಯೆಯ ವಿದ್ಯಾರ್ಥಿಗಳು ಭೂಸೇನೆ ಮತ್ತು ನೌಕಾಸೇನೆಯನ್ನು ಸೇರುವ ಆದ್ಯತೆಯನ್ನು ಹೊಂದಿದ್ದಾರೆ ಎನ್ನುವುದನ್ನು ತಿಳಿದಾಗ ಈ ಆಯಾಮವು ಪ್ರಾಮುಖ್ಯತೆ ಪಡೆದುಕೊಳ್ಳುತ್ತದೆ. ಒಂದು ಪ್ರೌಢಶಾಲೆಯಲ್ಲಿ ಮರಗೆಲಸವನ್ನು ಕಲಿಸುತ್ತಿದ್ದರು. ಅನುಭವೀ ಶಿಕ್ಷಕರೊಬ್ಬರು ಮರದ ಹಲವಾರು ತರಹದ ಮಾದರಿಗಳನ್ನು ಕೈಯಿಂದ ತಯಾರಿಸುವುದಕ್ಕೆ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಆಟೋಕ್ಯಾಡ್ ವಿನ್ಯಾಸ ಹಾಗೂ ಸಂಗೀತದ ಕೋರ್ಸ್‌ಗಳೂ ಲಭ್ಯವಿದ್ದವು. ಪರೀಕ್ಷೆಗಳಲ್ಲಿ ಪಡೆದ ಅಂಕಗಳು ಹಾಗೂ ಹಲವಾರು ಸ್ಪರ್ಧೆಗಳಲ್ಲಿ ಗಳಿಸಿದ ಯಶಸ್ಸು ಶಾಲೆಯ ಬ್ರ್ಯಾಂಡ್ ಮೌಲ್ಯವನ್ನು ಹೆಚ್ಚಿಸುತ್ತವೆ.

ಶಾಲೆಗಳಿಗೆ ಭೇಟಿ ಇತ್ತು ಗಮನಿಸಿದ ಮೇಲ್ಕಂಡ ಅಂಶಗಳನ್ನು ಇಡೀ ಅಮೆರಿಕಕ್ಕೆ ಸಾಮಾನ್ಯೀಕರಿಸಿ ಹೇಳಿದರೆ ತಪ್ಪಾದೀತು. ಗ್ರಾಮೀಣ ಭಾಗಗಳಲ್ಲಿ, ಬೇರೆ ರಾಜ್ಯಗಳಲ್ಲಿ ವಾಸ್ತವವು ತುಂಬಾ ಭಿನ್ನವಾಗಿದ್ದೀತು. ಹೆಣ್ಣುಮಕ್ಕಳು ಚಿಕ್ಕ ವಯಸ್ಸಿನಲ್ಲಿಯೇ ಗರ್ಭಧರಿಸುವುದು, ನಿರುದ್ಯೋಗ, ಮಾದಕವಸ್ತುಗಳ ವ್ಯಸನ,

ಮದ್ಯಪಾನ, ಬೊಜ್ಜು, ಸಾಲ ಹಾಗೂ ದುಂದುವೆಚ್ಚ, ದ್ವಿಪದಂತಾದ ಅತಿ ವೈಯಕ್ತಿಕತೆಯ ಬಾಳು, ಅಸೂಕ್ಷ್ಮತೆ, ಬಡವ ಬಲ್ಲಿದರ ನಡುವಿನ ಕಂದಕ, ಸ್ವಯಂಶಿಸ್ತು ಹಾಗೂ ಬಾಹ್ಯ ಆಕ್ರಮಣಕಾರೀ ಸ್ವಭಾವಗಳಿಗೆ ಸಂಬಂಧಿಸಿದಂತೆ ವೈರುಧ್ಯ ಇತ್ಯಾದಿ ತೀವ್ರಸ್ವರೂಪದ ಸಮಸ್ಯೆಗಳು ಅಮೆರಿಕದ ಸಮಾಜವನ್ನು ಬಾಧಿಸುತ್ತಿವೆ. ಈ ಎಲ್ಲ ಸಂಕೀರ್ಣ ಸಾಮಾಜಿಕ ಸಮಸ್ಯೆಗಳಿಗೆ ಸಮಾನ ಮೂಲ ಪಠ್ಯಕ್ರಮದಿಂದ ಪರಿಹಾರ ಸಿಗಬಹುದೇ ಎನ್ನುವುದು ಊಹೆಗೆ ಬಿಟ್ಟ ಸಂಗತಿ.

ಅಮೆರಿಕದ ವ್ಯವಸ್ಥೆಯೊಳಗೇ ಇರುವ ಕೆಲವು ತಜ್ಞರೂ ಕೂಡ ಶಿಕ್ಷಣದ ಗುಣಮಟ್ಟವು ಮುಖ್ಯವಾಗಿ ಶಿಕ್ಷಕರ ಗುಣಮಟ್ಟವನ್ನು, ಅವರು ಎಲ್ಲಿಂದ ಬಂದಿದ್ದಾರೆ ಎನ್ನುವುದನ್ನು, ಅವರು ಹೊಂದಿರುವ ಶಿಕ್ಷಣದ ರೀತಿಯನ್ನು ಹಾಗೂ ಅವರು ಹೊಂದಿರುವ ವಿಷಯಜ್ಞಾನದ ಮಟ್ಟವನ್ನು ಅವಲಂಬಿಸಿದೆ ಎನ್ನುವುದನ್ನು ಒಪ್ಪಿಕೊಳ್ಳುತ್ತಾರೆ. ಇದು ತೈವಾನ್‌ನಂತಹ ದೇಶದಲ್ಲಿನ ಹಾಗಲ್ಲ. ಅಲ್ಲಿ ಶಿಕ್ಷಕರಿಗೆ ಅತ್ಯಂತ ಹೆಚ್ಚಿನ ಗೌರವವನ್ನು ತೋರಿಸಲಾಗುತ್ತದೆ. ಹಾಗಾಗಿ, ಒಳ್ಳೆಯ ವಿಷಯಜ್ಞಾನ ಹೊಂದಿರುವ ಅತ್ಯುತ್ತಮ ವಿದ್ಯಾರ್ಥಿಗಳು ಬೋಧನೆಯನ್ನು ವೃತ್ತಿಯಾಗಿ ಸ್ವೀಕರಿಸುತ್ತಾರೆ. ಸಮಾನ ಮೂಲ ಪಠ್ಯಕ್ರಮವು ಪರಿಹಾರಗಳನ್ನು ಒದಗಿಸಿದರೂ ಕೂಡ ಪಠ್ಯಕ್ರಮದ ನಿರ್ವಹಣೆಯೇ ದೊಡ್ಡದೊಂದು ಸಮಸ್ಯೆಯಾಗಿರುವುದರಿಂದ ಎಲ್ಲಾ ಶಿಕ್ಷಕರಿಗೂ ಇದು ಹಿತಕರವಾಗಿ ಕಾಣಿಸುತ್ತಿಲ್ಲ ಎಂದು ಅವರು ನಂಬಿದ್ದಾರೆ. ಇದರ ಜೊತೆಗೆ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವ ಪಟ್ಟಭದ್ರ ಹಿತಾಸಕ್ತಿಗಳ ಪ್ರಬಲ ಗುಂಪಿನಿಂದಾಗಿ ಪರಿಸ್ಥಿತಿಯನ್ನು ಸುಧಾರಿಸಲು ಬೇಕಾದ ಸನ್ನಿವೇಶ ಇರುವುದಿಲ್ಲ. ಉದ್ಯೋಗವನ್ನು ದೊರಕಿಸಿಕೊಡುವುದರ ಮೇಲೆ ಇರುವ ಅತಿ ಹೆಚ್ಚಿನ ಹೊಣೆಯು ಸೃಜನಶೀಲತೆಯನ್ನು ಕುಂಠಿತಗೊಳಿಸುತ್ತದೆ. ಜವಾಬ್ದಾರಿಯ ಹೆಸರಿನಲ್ಲಿ ಸಾಧನೆಯ ಮಟ್ಟ ಮತ್ತು ಪರೀಕ್ಷೆಯಲ್ಲಿ ಪಡೆದ ಅಂಕಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಗುತ್ತಿದ್ದು, ಹಣಕಾಸಿನ ಹಂಚಿಕೆಯನ್ನು ಪರೀಕ್ಷಾ ಫಲಿತಾಂಶಕ್ಕೇ ಜೋಡಿಸಲಾಗುತ್ತದೆ. ರೂಢಿಗತವಾದ ಫೆಡರಲ್ ಮತ್ತು ರಾಜ್ಯ ನೀತಿನಿಯಮಗಳನ್ನು ಅನುಸರಿಸುವ ಭರದಲ್ಲಿ ಕೌಟುಂಬಿಕ ಮೌಲ್ಯಗಳನ್ನು ಮತ್ತು ಸಾಮಾಜಿಕ ಕೌಶಲಗಳನ್ನು ಬೆಳೆಸಿಕೊಳ್ಳುವ ಮೂಲಕ ಸಮಗ್ರ ವ್ಯಕ್ತಿತ್ವವನ್ನು ಹೊಂದಿರುವ ಮಾನವ ಜೀವಿಗಳನ್ನು ಸಿದ್ಧಗೊಳಿಸುವ ಕ್ರಿಯೆಯು ಮೂಲೆಗುಂಪಾಗಿದೆ ಎಂದು ಅವರು ಒತ್ತಿ ಹೇಳುತ್ತಾರೆ. ಸ್ಥಳೀಯ ಸರ್ಕಾರಗಳು ಸ್ವಾಯತ್ತತೆಯನ್ನು ಕಾಪಾಡಿಕೊಳ್ಳುವ ಬಯಕೆಯನ್ನು ಹೊಂದಿವೆ. ಜೊತೆಗೆ, ಫೆಡರಲ್ ಸರ್ಕಾರದಿಂದ ಹೆಚ್ಚಿನ ಹಣಕಾಸಿನ ನೆರವು ಬೇಕೆಂದೂ ಬೇಡಿಕೆ ಸಲ್ಲಿಸುತ್ತವೆ. ಶಿಕ್ಷಣ ವ್ಯವಸ್ಥೆಯಲ್ಲಿನ ಇಂತಹ ವೈರುಧ್ಯಗಳನ್ನು ಕೂಡ ಅವರು ಎತ್ತಿ ತೋರಿಸುತ್ತಾರೆ.

ಅಮೆರಿಕದ ವ್ಯವಸ್ಥೆಗೆ ಸಂಬಂಧಿಸಿದ ವಿಷಯದಲ್ಲಿ ತಜ್ಞರಾದವರು ವ್ಯಕ್ತಪಡಿಸಿದ ಕಾಳಜಿಗಳು ಬಹುಶಃ ನಮ್ಮನ್ನು ಗಂಭೀರ ಚಿಂತನೆಗೆ ಹಚ್ಚಲೇಬೇಕಿದೆ. ಏಕೆಂದರೆ, ನಮ್ಮಲ್ಲಿ ಬಹಳಷ್ಟು ಜನ, ಆಧುನಿಕ ಸೌಲಭ್ಯಗಳನ್ನು ಹೊಂದಿರುವ, ಅತ್ಯಂತ ಪರಿಪೂರ್ಣವಾದ ವಾತಾವರಣದಲ್ಲಿ ಅತ್ಯುತ್ತಮ ಶಿಕ್ಷಣವನ್ನು ನೀಡುತ್ತೇವೆ ಎಂದು ಹೇಳಿಕೊಳ್ಳುವ ಶ್ರೇಷ್ಠ ಶಿಕ್ಷಣ ಸಂಸ್ಥೆಗಳಲ್ಲಿ ತಮ್ಮ ಮಕ್ಕಳನ್ನು ಓದಿಸಲು ಕಾತರರಾಗಿರುವಂತೆ ತೋರುತ್ತದೆ. ಆದರೆ, ಇದೇ ವೇಳೆಗೆ ಉತ್ತಮ ಗುಣಮಟ್ಟದ ಶಿಕ್ಷಕರು, ಬೋಧನೆ-ಕಲಿಕೆಯ ವಾತಾವರಣ, ಮಗುಸ್ನೇಹಿ ಶಾಲಾ ಪರಿಸರ ಹಾಗೂ ಮಗುವಿನ ಸಮಗ್ರ ಬೆಳವಣಿಗೆ ಮುಂತಾದ ಪ್ರಮುಖ ಅಂಶಗಳನ್ನು ಕಡೆಗಣಿಸುತ್ತಿದ್ದೇವೆ.

■

ಬಿ.ಫಸ್ಟ್, 18-04-2016





## ವಿವಿಧ ಸರ್ಕಾರ/ಇಲಾಖೆಗಳು ನಡೆಸುತ್ತಿರುವ ಶಾಲೆಗಳ ಪ್ರಮಾಣ

| 44135 | 741 | 26 | 89 | 12 |
|---|---|---|---|---|
| ಶಿಕ್ಷಣ ಇಲಾಖೆ ಶಾಲೆಗಳು | ಆದಿವಾಸಿ/ಸಮಾಜ ಕಲ್ಯಾಣ ಇಲಾಖೆ ಶಾಲೆಗಳು | ಸ್ಥಳೀಯ ಸಂಸ್ಥೆ ಶಾಲೆಗಳು | ಕೇಂದ್ರ ಸರ್ಕಾರದ ಶಾಲೆಗಳು | ಇತರೆ ಇಲಾಖೆ ಶಾಲೆಗಳು |

ಸಾರ್ವಜನಿಕ ವಲಯದಲ್ಲಿರುವ ಒಟ್ಟು ಶಾಲೆಗಳಲ್ಲಿ ಶಿಕ್ಷಣ ಇಲಾಖೆಯ ಆಡಳಿತಕ್ಕೊಳಪಟ್ಟಿರುವ ಶಾಲೆಗಳದ್ದೇ ಸಿಂಹಪಾಲು. ಕೇಂದ್ರ ಸರ್ಕಾರದ ಆಡಳಿತದ 89 ಶಾಲೆಗಳನ್ನು ಹೊರತುಪಡಿಸಿ ರಾಜ್ಯ ಸರ್ಕಾರದ ಇನ್ನಿತರ ಇಲಾಖೆಗಳು ನಡೆಸುತ್ತಿರುವ ಶಾಲೆಗಳ ಪ್ರಮಾಣ ಕ್ಷೀಣಿಸಿದ್ದರೂ, ಆ ಶಾಲೆಗಳ ಗುಣಮಟ್ಟವನ್ನು ಹೆಚ್ಚಿಸುವತ್ತ ಹೆಚ್ಚಿನ ಗಮನ ಹರಿಸಬೇಕಿದೆ. ಇದರಲ್ಲಿ ಶಿಕ್ಷಕರ ನೇಮಕಾತಿ ಮತ್ತು ವೃತ್ತಿಪರ ಬೆಳವಣಿಗೆ, ಶಾಲೆಗಳ ಮೂಲಭೂತ ಸೌಕರ್ಯ, ಶಿಕ್ಷಕರಿಗೆ ಶೈಕ್ಷಣಿಕ ಬೆಂಬಲ ಮತ್ತು ಪ್ರೋತ್ಸಾಹಕ ಯೋಜನೆಗಳನ್ನು ದೊರಕಿಸುವುದು ಹಾಗೂ ವಿದ್ಯಾರ್ಥಿ ನಿಲಯವನ್ನು ಒಳಗೊಂಡು ಶಾಲಾ ವಾತಾವರಣಕ್ಕೆ ತುಂಬುವುದು – ಈ ಅಂಶಗಳು ಸೇರಿವೆ.

## ವಿವಿಧ ವಿಭಾಗ/ಜಿಲ್ಲೆಗಳ ಶಾಲೆಗಳ ಪ್ರಮಾಣ




**ಆಕರ:** *Elementary Education in India - District Report Cards* : 2016-17, Vol. 1. Published by The National Institute of Educational Planning and Administration, New Delhi

**ಕೋಷ್ಟಕ 1**

| ವಿಭಾಗ | ಜಿಲ್ಲೆ | ಸರ್ಕಾರಿ ಶಾಲೆ (ಶೇ.) ಪ್ರಮಾಣ | ಬ್ಲಾಕ್‌ವಾರು ಸರಾಸರಿ ಸರ್ಕಾರಿ ಶಾಲೆಗಳ ಪ್ರಮಾಣ | ಬ್ಲಾಕ್‌ವಾರು ಎಲ್ಲ ಶಾಲೆಗಳ ಪ್ರಮಾಣ |
|---|---|---|---|---|
| ಕಲಬುರಗಿ | ಕಲಬುರಗಿ | **61.6** | **228** | **370** |
| ಬೆಳಗಾವಿ | ಬಾಗಲಕೋಟೆ | **70.0** | **221** | **316** |
| ಬೆಂಗಳೂರು | ಬೆಂಗಳೂರು ದಕ್ಷಿಣ | **31.0** | **178** | **574** |
| ಮೈಸೂರು | ಮಂಡ್ಯ | **82.0** | **212** | **257** |

ಶೈಕ್ಷಣಿಕ ಆಡಳಿತದ ದೃಷ್ಟಿಯಿಂದ ಶಿಕ್ಷಣ ಇಲಾಖೆಯನ್ನು ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಕಲಬುರಗಿ. ಬೆಳಗಾವಿ. ಮೈಸೂರು ಹಾಗೂ ಬೆಂಗಳೂರು ವಿಭಾಗಗಳಿಂದ ಒಂದೊಂದು ಜಿಲ್ಲೆಯನ್ನು ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡು. ಆಯಾ ಜಿಲ್ಲೆಗಳಲ್ಲಿನ ಒಟ್ಟು ಶಾಲೆ/ಸರ್ಕಾರಿ ಶಾಲೆಗಳ ಪ್ರಮಾಣ; ಬ್ಲಾಕ್‌ವಾರು ವಿಂಗಡಿಸಿ ಅವುಗಳ ಪ್ರಮಾಣವನ್ನು ನೋಡಿದಾಗ. ತಳಸ್ತರದ ಮೇಲುಸ್ತುವಾರಿ ಜವಾಬ್ದಾರಿಯ ಸಂಕೀರ್ಣತೆಯು ಅರಿವಿಗೆ ಬರುತ್ತದೆ.




## ವಿವಿಧ ವಿಭಾಗ / ಜಿಲ್ಲೆಗಳ ಏಕೋಪಾಧ್ಯಾಯ ಶಾಲೆಗಳು




**ಆಕರ:** *Elementary Education in India - District Report Cards* : 2016-17, Vol. 1. Published by the National Institute of Educational Planning and Administration, New Delhi

ಪ್ರತಿ ವಿಭಾಗದ ಒಂದು ಪ್ರಮುಖ ಜಿಲ್ಲೆಯಲ್ಲಿ ವಿದ್ಯಾರ್ಥಿ–ಶಿಕ್ಷಕ ಅನುಪಾತವನ್ನು ಮೇಲ್ನೋಟಕ್ಕೆ ನೋಡಿದಾಗ, ಕಲಬುರಗಿ ಮತ್ತು ಬೆಂಗಳೂರು ದಕ್ಷಿಣ – ಈ ಎರಡು ಜಿಲ್ಲೆಗಳಲ್ಲಿ ಅನುಪಾತವು 30ಕ್ಕಿಂತ ಕಡಿಮೆಯಾಗಿದ್ದು, ಮಂಡ್ಯದಲ್ಲಿ 25ಕ್ಕಿಂತಲೂ ಕಡಿಮೆಯಿರುವುದು ಕಂಡುಬರುತ್ತದೆ. ಆದರೆ ಜಿಲ್ಲೆಗಳಲ್ಲಿರುವ ಏಕೋಪಾಧ್ಯಾಯ ಶಾಲೆಗಳನ್ನು ಜೊತೆಗಿಟ್ಟು ನೋಡಿದಾಗ ಬೇರೊಂದು ಸತ್ಯ ಕಣ್ಣಿಗೆ ಕಾಣುತ್ತದೆ.

ಅತ್ಯಂತ ಆರೋಗ್ಯಕರ ವಿದ್ಯಾರ್ಥಿ:ಶಿಕ್ಷಕ ಅನುಪಾತವನ್ನು ಹೊಂದಿರುವಂತೆ ಕಾಣುವ ಮಂಡ್ಯ ಜಿಲ್ಲೆಯಲ್ಲಿ ಹೆಚ್ಚಿನ ಏಕೋಪಾಧ್ಯಾಯ ಶಾಲೆಗಳಿದ್ದು, ಅವುಗಳಲ್ಲಿ ಶೇ. 82ರಷ್ಟು ಪ್ರಾಥಮಿಕ ಶಾಲೆಗಳಾಗಿರುವುದು, ಆ ಶಾಲೆಗಳ ಶಿಕ್ಷಕರು ಒಂದರಿಂದ ಐದನೇ ತರಗತಿವರೆಗೆ ನಿರ್ವಹಿಸಬೇಕಾದ ಶೈಕ್ಷಣಿಕ ಜವಾಬ್ದಾರಿಯ ಜೊತೆಗೆ ಆಡಳಿತಾತ್ಮಕ ಹೊರೆಯನ್ನು ಜೊತೆಗಿಟ್ಟು ನೋಡಿದಾಗ, ವಿದ್ಯಾರ್ಥಿ:ಶಿಕ್ಷಕ ಅನುಪಾತವನ್ನು ಕುರಿತಾದ ನೀತಿಯಲ್ಲಿ ಬದಲಾವಣೆ ತರಬೇಕಾದುದರ ಕಡೆಗೆ ನೀತಿ ನಿರೂಪಕರ ಗಮನಸೆಳೆಯುತ್ತದೆ. ಉಳಿದ ಜಿಲ್ಲೆಗಳಲ್ಲೂ ಏಕೋಪಾಧ್ಯಾಯ ಶಾಲೆಗಳ ಪ್ರಮಾಣ ಸಾಪೇಕ್ಷವಾಗಿ ಕಡಿಮೆಯಿದ್ದರೂ, ಇಂತಹ ಬದಲಾವಣೆಯನ್ನು ಬೇಡುತ್ತದೆ.

## ಪ್ರಾಥಮಿಕ ಹಂತದಿಂದ ಹಿರಿಯ ಪ್ರಾಥಮಿಕ ಹಂತಕ್ಕೆ ಶಿಕ್ಷಣವನ್ನು ಮುಂದುವರಿಸುವವರ ಸಂಖ್ಯೆ (%)




ಆಕರ: *Elementary Education in India - District Report Cards* : 2016-17, Vol. 1. Published by the National Institute of Educational Planning and Administration, New Delhi

ಪ್ರಾಥಮಿಕ ಹಂತದಿಂದ ಹಿರಿಯ ಪ್ರಾಥಮಿಕ ಹಂತಕ್ಕೆ (ಐದನೇ ತರಗತಿಯಿಂದ ಆರನೇ ತರಗತಿಗೆ) ಶಿಕ್ಷಣ ಮುಂದುವರೆಸಿರುವ ವಿದ್ಯಾರ್ಥಿಗಳ ಪ್ರಮಾಣವನ್ನು ಗಮನಿಸಿದರೆ ಯಾದಗಿರಿ ಮತ್ತು ಕಲಬುರಗಿ ಜಿಲ್ಲೆಗಳಲ್ಲಿ ಗಣನೀಯ ಸುಧಾರಣೆಯಾಗಬೇಕಿದೆ. ಬೀದರ್, ರಾಯಚೂರು ಜಿಲ್ಲೆಗಳೂ ಹೆಚ್ಚಿನ ಪ್ರಮಾಣವನ್ನು ಸಾಧಿಸಬೇಕಿದೆ.

**ಕೋಷ್ಟಕ 2**

| ತರಗತಿ | ಶಾಲೆ ತೊರೆದವರ (ಶೇ.) ಪ್ರಮಾಣ |
|---|---|
| 8 | 7.34 |
| 9 | 6.71 |
| 10 | 47.17 |
| 11 | 1.96 |

ಪ್ರೌಢಶಾಲೆ ಹಂತದಲ್ಲಿ ಅನೇಕ ಕಾರಣಗಳಿಂದ ಶಿಕ್ಷಣ ಮುಂದುವರೆಸಲಾರದೆ ಶಾಲೆ ತೊರೆದ ವಿದ್ಯಾರ್ಥಿಗಳ ಪ್ರಮಾಣದತ್ತ ಕಣ್ಣು ಹಾಯಿಸಿದಾಗ, ಪರಿಸ್ಥಿತಿಯ ಗಂಭೀರತೆ ಅರಿವಾಗುತ್ತದೆ. ಅದರಲ್ಲೂ ಒಂಬತ್ತನೇ ತರಗತಿಯಿಂದ ಹತ್ತನೇ ತರಗತಿಗೆ ಬರುವ ವಿದ್ಯಾರ್ಥಿಗಳ ಪ್ರಮಾಣ ಅರ್ಧದಷ್ಟು ಕಡಿಮೆಯಾಗುತ್ತದೆ.

ಎಲ್ಲ ಶಾಲೆಗಳಲ್ಲಿ ಕುಡಿಯುವ ನೀರಿನ ಸೌಲಭ್ಯ ತಕ್ಕಮಟ್ಟಿಗೆ ಇದೆಯೆಂಬ ಚಿತ್ರಣವಿದ್ದರೂ, ಯೋಗ್ಯವಾದ ನೀರು ನಿರಂತರವಾಗಿ ಲಭ್ಯವಿದೆಯೇ ಎಂಬ ಪ್ರಶ್ನೆಯೇಳುತ್ತದೆ. ಅದರಲ್ಲೂ ಬಾಗಲಕೋಟೆ, ಬೀದರ್, ಬಳ್ಳಾರಿ ಮತ್ತು ರಾಯಚೂರಿನ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಈ ವ್ಯವಸ್ಥೆ ಸುಧಾರಿಸಬೇಕಿದೆ.




**ಆಕರ:** *Elementary Education in India - District Report Cards* : 2016-17, Vol. 1. Published by the National Institute of Educational Planning and Administration, New Delhi

## ವಿದ್ಯಾರ್ಥಿನಿಯರ ಶೌಚಾಲಯ




**ಆಕರ:** *Elementary Education in India - District Report Cards* : 2016-17, Vol. 1. Published by the National Institute of Educational Planning and Administration, New Delhi

ಹೆಣ್ಣು ಮಕ್ಕಳು ಶಿಕ್ಷಣವನ್ನು ಮುಂದುವರೆಸಬೇಕಾದ ಮಹತ್ವವನ್ನು ಮನಗಂಡು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿನಿಯರಿಗಾಗಿ ಪ್ರತ್ಯೇಕ ಶೌಚಾಲಯ ಒದಗಿಸಬೇಕಾದುದು ತುಂಬಾ ಅಗತ್ಯ. ಎಲ್ಲ ಜಿಲ್ಲೆಗಳಲ್ಲೂ ಅದರ ಲಭ್ಯತೆ ಮತ್ತು ನಿರ್ವಹಣೆಗೆ ಕ್ರಮ ವಹಿಸಬೇಕಾದುದು ಅಗತ್ಯವಾದರೂ, ಬಾಗಲಕೋಟೆ, ಬೀದರ್, ಬಳ್ಳಾರಿ, ರಾಯಚೂರು ಮತ್ತು ವಿಜಯಪುರ ಜಿಲ್ಲೆಗಳು ವಿಶೇಷ ಆಸ್ಥೆ ವಹಿಸಬೇಕಾಗಿವೆ.

## ಶಾಲೆಗಳಲ್ಲಿ ಭೌತಿಕ ಸೌಲಭ್ಯ




ಆಕರ: *Elementary Education in India - District Report Cards* : 2016-17, Vol. 1. Published by the National Institute of Educational Planning and Administration, New Delhi

ಮಕ್ಕಳ ಸುರಕ್ಷತೆ ಮತ್ತು ಸಮಗ್ರ ಬೆಳವಣಿಗೆಯ ದೃಷ್ಟಿಯಿಂದ ಶಾಲೆಗೊಂದು ಆಟದ ಮೈದಾನ, ಕಾಂಪೌಂಡ್ ಗೋಡೆಯಿರುವುದು ಕನಿಷ್ಠ ಅಗತ್ಯವಾಗಿದೆ. ಆಟದ ಮೈದಾನಕ್ಕೆ ಸಂಬಂಧಿಸಿದಂತೆ ಬಳ್ಳಾರಿ, ರಾಯಚೂರು, ಯಾದಗಿರಿ ಜಿಲ್ಲೆಗಳು ಹೆಚ್ಚಿನ ಪ್ರಗತಿ ಸಾಧಿಸಬೇಕಾಗಿವೆ. ಕಾಂಪೌಂಡ್ ಗೋಡೆ ಕಟ್ಟಿಸುವ ವಿಚಾರದಲ್ಲಿ ಯಾದಗಿರಿ, ವಿಜಯಪುರ ಮತ್ತು ಕಲಬುರಗಿ ಜಿಲ್ಲೆಗಳು ಶೀಘ್ರವಾಗಿ ಕ್ರಮ ಕೈಗೊಳ್ಳಬೇಕಾದ ಜಿಲ್ಲೆಗಳಾಗಿವೆ.

## ೨೦೦೧ರ ನಂತರ ಪ್ರಾರಂಭವಾದ ಶಾಲೆಗಳು




ಆಕರ: *Elementary Education in India - District Report Cards* : 2016-17, Vol. 1. Published by the National Institute of Educational Planning and Administration, New Delhi

ಸರ್ವ ಶಿಕ್ಷಣ ಅಭಿಯಾನ ಜಾರಿಗೊಂಡ ಮೇಲೆ ಪ್ರತಿ ಕಿಲೋಮೀಟರ್‌ಗೆ ಒಂದರಂತೆ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿ ಪ್ರವೇಶಾವಕಾಶ ಹೆಚ್ಚಿಸಿದ ಪರಿಣಾಮವಾಗಿ ಈಶಾನ್ಯ ಕರ್ನಾಟಕದ ಜಿಲ್ಲೆಗಳಲ್ಲಿ ಶೇ. 30 ರಿಂದ 35ರಷ್ಟು ಶಾಲೆಗಳನ್ನು ಹೊಸದಾಗಿ ಪ್ರಾರಂಭಿಸಿರುವುದು ಶ್ಲಾಘನೀಯ ಸಾಧನೆ. ಈ ಶಾಲೆಗಳಲ್ಲಿ ಅಗತ್ಯ ಮೂಲ ಸೌಲಭ್ಯಗಳನ್ನು ಒದಗಿಸುವುದೂ ಮುಖ್ಯವಾಗುತ್ತದೆ.




ಕೋಷ್ಟಕ 3

## ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಪ್ರಾಥಮಿಕ ಹಂತದ ಬೋಧನಾ ಮಾಧ್ಯಮ

| ದೇಶ | ಬೋಧನಾ ಮಾಧ್ಯಮ |
|---|---|
| ಚೀನಾ | ಮ್ಯಾಂಡೇರಿನ್ |
| ಫಿನ್‌ಲ್ಯಾಂಡ್ | ಫಿನಿಷ್, ಸ್ವೀಡಿಷ್, ಅಥವಾ ಲ್ಯಾಪ್ (ಶಾಲೆಗಳು ಬೋಧನಾ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳುತ್ತವೆ) |
| ತೈವಾನ್ | ಮ್ಯಾಂಡೇರಿನ್ ಚೈನೀಸ್ |
| ಜರ್ಮನಿ | ಜರ್ಮನ್ |
| ಫ್ರಾನ್ಸ್ | ಫ್ರೆಂಚ್ |
| ಜಪಾನ್ | ಜ್ಯಾಪನೀಸ್ |
| ಇಸ್ರೇಲ್ | ಹೀಬ್ರೂ |
| ದಕ್ಷಿಣ ಕೊರಿಯಾ | ಕೊರಿಯನ್ |

ಆಕರ: ಆಯಾ ದೇಶಗಳ ಸರ್ಕಾರಿ ಮತ್ತು ಇತರೆ ಜಾಲತಾಣಗಳಿಂದ ಮಾಹಿತಿಯನ್ನು ತೆಗೆದುಕೊಳ್ಳಲಾಗಿದೆ.










**11ನೇ ಏಪ್ರಿಲ್ 2015** – ಮಿಷಿಗನ್‌ನ ಥೊರ್ನ್ಯಾಪಲ್ ಕೆಲಾಗ್ ಸ್ಕೂಲ್ ಡಿಸ್ಟ್ರಿಕ್ಟ್ ಶಾಲೆಯ ಕಿರಿಯ ಪ್ರಾಥಮಿಕ ಹಂತದ ತರಗತಿ ವೀಕ್ಷಣೆಯ ಸಂದರ್ಭದಲ್ಲಿ ತೆಗೆದ ಚಿತ್ರ. ಈ ಹಂತದಲ್ಲಿ ಶಾಲೆ ಮತ್ತು ಕಲಿಕೆಯೆಂಬುದು ಎಷ್ಟು ತ್ರಾಸದಾಯಕವಾಗಿರುತ್ತದೆ ಹಾಗೂ ಅದನ್ನು ಸಂತಸದಾಯಕವಾಗಿಸಲು ಶಿಕ್ಷಕರು. ಪೋಷಕರ ಪಾತ್ರ ಎಷ್ಟು ಮಹತ್ವದ್ದು ಎಂಬುದನ್ನು ಮಕ್ಕಳ ಈ ಸ್ವಚ್ಛಂದವಾದ ಬರಹಗಳು ಸೂಚಿಸುತ್ತಿರುವಂತಿವೆ.



**15ನೇ ಏಪ್ರಿಲ್ 2015** – ಮಿಷಿಗನ್‌ನ ಬೆನೆಟ್ ವುಡ್ಸ್ ಪ್ರಾಥಮಿಕ ಶಾಲೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಕಂಡ ಶಾಲೆಯ ವಾಚನಾಲಯದ ಚಿತ್ರ. ಪುಸ್ತಕಗಳ ಆಯ್ಕೆ ಮತ್ತು ಜೋಡಣೆ, ಆಸನಗಳ ವ್ಯವಸ್ಥೆ ಇವು ಮಕ್ಕಳನ್ನು ಈ ಸ್ಥಳಕ್ಕೆ ಆಹ್ವಾನಿಸುವಂತಿವೆ.

**11ನೇ ಏಪ್ರಿಲ್ 2015** – ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಯ ಕ್ಯಾಂಪಸ್ ಭೇಟಿ ಸಂದರ್ಭದ ಚಿತ್ರ. ನಮ್ಮ ಭೇಟಿಯನ್ನು ಸಂಯೋಜಿಸಿದ ಎಂ.ಎಸ್.ಯು ನ ಇನೀಸ್ ಬರ್ಜಿನಾ ಪಿಚರ್, ನನ್ನ ಸಹೋದ್ಯೋಗಿಗಳಾದ ಅಂಕುರ್ ಮದನ್, ಅರುಣ್ ನಾಯಕ್, ರಾಜೀವ್ ಶರ್ಮಾ, ಶೋಭನ್ ಸಿಂಗ್ ನೇಗಿ ಮತ್ತು ಶರದ್ ಸುರೆ ಅವರುಗಳೊಂದಿಗೆ.

ಶಿಕ್ಷಕರು ಎಂಥವರಾಗಿರಬೇಕೆಂಬ ಸಮಾಜದ ನಿರೀಕ್ಷೆಗಳಿಗೂ, ವಾಸ್ತವದಲ್ಲಿ ಶಿಕ್ಷಕರು ಅಂತಹ ನಿರೀಕ್ಷೆಗಳನ್ನು ತಲುಪುವಲ್ಲಿ ಯಾವ ಪ್ರಮಾಣದಲ್ಲಿ ಯಶಸ್ವಿಯಾದರು ಎನ್ನುವ ಸಂಗತಿಗೂ ನಡುವಿನ ಅಂತರ ನಿರಂತರವಾಗಿ ಮುಂದುವರೆದಿರುವುದು ಕಾಲಾತೀತ ಸತ್ಯವಾಗಿದೆ.

# ಭಾರತದ ಎರಡು ಶತಮಾನಗಳ ಶೈಕ್ಷಣಿಕ ಚರಿತೆ

ಶಾಲೆಗಳಲ್ಲಿ ಶಿಕ್ಷಕರಾಗಬಯಸುವವರು ಎಂಥವರಾಗಿರಬೇಕು? ಅವರು ಯಾವ ಮಟ್ಟದ ವಿದ್ಯಾರ್ಹತೆಯನ್ನು ಗಳಿಸಿರಬೇಕು? ಎಂಥ ಗುಣ ಲಕ್ಷಣಗಳನ್ನು, ಮೌಲ್ಯಗಳನ್ನು ಮೈಗೂಡಿಸಿಕೊಂಡಿರಬೇಕು? ಶಿಕ್ಷಕರನ್ನು ರೂಪಿಸುವ ಸಾಂಸ್ಥಿಕ ವ್ಯವಸ್ಥೆ ಮತ್ತು ಒಟ್ಟಾರೆ ಶಿಕ್ಷಣದ ಗೊತ್ತುಗುರಿಗಳನ್ನು ಅರ್ಥೈಸಿಕೊಂಡು ಅದಕ್ಕೆ ಪೂರಕವಾಗಿ ಸ್ಪಂದಿಸಬೇಕಾದ ಶಿಕ್ಷಕ ಶಿಕ್ಷಣ ಸಂಸ್ಥೆಗಳ ಸ್ವರೂಪ ಮತ್ತು ಪ್ರಕ್ರಿಯೆಗಳು ಹೇಗಿರಬೇಕು? ಈ ಗಹನ ಮತ್ತು ಸಂಕೀರ್ಣ ಪ್ರಶ್ನೆಗಳು ಇಂದು ನಿನ್ನೆಯವಲ್ಲ.

ಈ ಪ್ರಶ್ನೆಗಳನ್ನು ಅರ್ಥ ಮಾಡಿಕೊಳ್ಳಲು ನಮ್ಮ ದೇಶದ ಶಿಕ್ಷಕ ಶಿಕ್ಷಣ ವ್ಯವಸ್ಥೆಯು ಕಳೆದ ಇನ್ನೂರು ವರ್ಷಗಳಲ್ಲಿ ಹೇಗೆ ಬೆಳೆದು ಬಂದಿದೆ ಎನ್ನುವುದರತ್ತ ದೃಷ್ಟಿ ಹರಿಸುವ ಅಗತ್ಯವಿದೆ. ಅಲ್ಲದೆ ಹತ್ತೊಂಬತ್ತನೇ ಶತಮಾನದ ಆರಂಭದಿಂದ ಪ್ರಸ್ತುತ ಅವಧಿಯವರೆಗೆ ಈ ನಿಟ್ಟಿನಲ್ಲಿ ಆದ ಪ್ರಮುಖ ಬದಲಾವಣೆಗಳನ್ನು ಗಮನಿಸುತ್ತ, ಅವುಗಳ ಹಿಂದಿನ ಆಶಯಗಳು ವಾಸ್ತವದಲ್ಲಿ ಈಡೇರಿವೆಯೇ ಎನ್ನುವುದನ್ನು ಪರ್ಯಾಲೋಚಿಸುವ ಪ್ರಯತ್ನವನ್ನು ಈ ಲೇಖನ ಮಾಡುತ್ತದೆ.

ಶಿಕ್ಷಕನ ಅರ್ಹತೆಯನ್ನು ಕುರಿತು ಅವಲೋಕಿಸುವ ಮುನ್ನ ಶಿಕ್ಷಣದ ಮೂಲ ಉದ್ದೇಶವೇನು ಎಂಬುದನ್ನು ನಿರ್ಣಯಿಸುವುದು ಮುಖ್ಯವಾಗುತ್ತದೆ. ಇದಕ್ಕೆ ಡಾ.ಕೆ.ಶಿವರಾಮ ಕಾರಂತರ ಜಿಜ್ಞಾಸೆಯು ಪೀಠಿಕೆಯನ್ನು ಒದಗಿಸಬಲ್ಲದು.

## ಶಿಕ್ಷಣದ ಗುರಿ ಓದು–ಬರಹವೇ?

ಯಾರಾದರೂ ಒಬ್ಬನಿಗೆ ಕೆಲವು ವರ್ಷ ಕನ್ನಡ ಭಾಷೆಯ ಶಿಕ್ಷಣ ದೊರೆಯಿತೆಂದರೆ ಅವನು ತಾನು ಒಬ್ಬ ಉಪಾಧ್ಯಾಯನಾಗಲು ತಕ್ಕವನಿರುವೆನು ಎಂದು ತಿಳಿಯುವನು. ಈಗ ಸಾಮಾನ್ಯವಾಗಿ ಉಪಾಧ್ಯಾಯರಾಗಿರುವವರೂ ಅಂಥವರೇ. ಮನುಷ್ಯನು ಅಪಾರವಾದ ಮಾನವ ಕುಟುಂಬದ ಒಂದು ಅಣುವು. ಅವನ ಸುಖ–ದುಃಖಗಳು ಈ ಕುಟುಂಬದ ಸುಖ–ದುಃಖಗಳನ್ನು ಅವಲಂಬಿಸಿವೆ. ಯಾರು ಈ ಮಾನವ ಸಮಾಜದ ಲಹರಿಯನ್ನು ತಿಳಿದು ಅದರ ಹಿತಕ್ಕೆ ಸರಿಯಾಗಿ ತನ್ನ ಹಿತವನ್ನೂ ಸೇರಿಸಿ ವರ್ತಿಸಬಲ್ಲನೋ, ಅವನು ಸುಖಿಯಾಗಬಲ್ಲನು. ಹಾಗಿದ್ದ ಬಳಿಕ, ಮನುಷ್ಯನನ್ನು ಸಮಾಜದಲ್ಲಿ ಸರಿಸೇರಿ ಬೆರೆತು ಆನಂದಿಸಲು ತಿದ್ದುವ ವ್ಯವಸ್ಥೆಯೇ ಶಿಕ್ಷಣವು. ಯಾವುದೇ ಕ್ರಮದಿಂದ ಅದು ಅವನನ್ನು ಮಾನವ ಸಮಾಜಕ್ಕೆ ಉಪಯುಕ್ತನನ್ನಾಗಿ ಮಾಡುವುದೋ ಆಗ ಅದು ತನ್ನ ಕೆಲಸವನ್ನು ಪೂರೈಸಿದಂತಾಗುವುದು.

**ಜ್ಞಾನವನ್ನು ವಿಕಾಸಗೊಳಿಸುವ ಬಗೆ:** ಭಿನ್ನಭಿನ್ನವಾದ ಸ್ವಭಾವ ಹೊಂದಿರುವ ಮಕ್ಕಳ ಜೊತೆ ವ್ಯವಹರಿಸಬೇಕಾದ ಶಿಕ್ಷಕನು 'ತಾನು ಕಲಿಸುವವನು' ಎಂಬ ಹೆಚ್ಚುಗಾರಿಕೆಯ ಭಾವನೆ ಹೊಂದಿರಬಾರದು. ಬದಲಿಗೆ, ಮಕ್ಕಳ ಸ್ವಭಾವ ಏನು ಎಂಬುದನ್ನು ಗೊತ್ತುಹಚ್ಚುವುದನ್ನು ಕಲಿಯಬೇಕು.

## ಯಾರು ಶಿಕ್ಷಕನಾಗಲು ಬಯಸಬೇಕು?

ಶಿಕ್ಷಣವು ಎಂಥ ವಿಷಯವೆಂದರಿತ ನಾವು, ಆ ಉದ್ದೇಶಕ್ಕೆ ಎಂಥವರನ್ನು ಆರಿಸಬೇಕೆಂದು ಅಥವಾ ಯಾರು ಶಿಕ್ಷಕರಾಗಲು ಬರುವರು ಎಂದು ವಿಚಾರಿಸುವ. ಈಗಿನ ದಿನಗಳಲ್ಲಿ ಬಿ.ಎ. ಆದ ಯಾವನೋ ಹೈಸ್ಕೂಲು ಉಪಾಧ್ಯಾಯ ಆಗಬಹುದು. ಎಂಟನೇ ತರಗತಿ ಪಾಸಾದ ('ಈಗ ಪಿ.ಯು.ಸಿ ತರಗತಿ' – ಡಾ.ಕೆ.ಶಿವರಾಮ ಕಾರಂತ.[1]) ಯಾವನೋ ಪ್ರಾಥಮಿಕ ಶಾಲೆಗಳ ಉಪಾಧ್ಯಾಯನೆನಿಸಬಹುದು. ಇಂಥದೊಂದು

---

1. ಲೇಖನದ ಅವಧಿ 1932.

ಪದವಿಯ ಪ್ರಶಸ್ತಿ ದೊರೆಯುತ್ತದೆಂದರೆ ಶಿಕ್ಷಣಕ್ಕೆ ಅರ್ಹತೆಯು ಬರುವುದೇ?

ಈಗ ಉಪಾಧ್ಯಾಯ ವೃತ್ತಿಗೆ ಬರುವವರೆಲ್ಲ ಎಂಥವರು? ಏನಾದರೊಂದು ಪರೀಕ್ಷೆಯಾಗಿ ತನ್ನ ಜೀವನ ನಿರ್ವಾಹಕ್ಕೊಂದು ದಾರಿ ಎಂದು ತಿಳಿಯುವವರು. ಜೀವನದ ಉಪಾಯವು ಎಲ್ಲರಿಗೂ ಬೇಕಾದುದೇ. ಆದರೆ ಉಪಾಧ್ಯಾಯ ವೃತ್ತಿಯನ್ನು ಅದಕ್ಕಾಗಿ ಎಂದೂ ಕೈಗೊಳ್ಳಬಾರದು. ಅವನ ಕೈಯಲ್ಲಿ ನೂರಾರು ಹಸುಳೆಗಳು ತಮ್ಮ ಭವಿಷ್ಯವನ್ನಿರಿಸುವರು. ಅವನು ಅವರಿಗೆ ಸರಿಯಾದ ಮಾರ್ಗದರ್ಶಕನಾಗದೆ ಹೋದರೆ ಅವರ ಜನ್ಮವೇ ವ್ಯರ್ಥವಾಯಿತು. ಒಬ್ಬನ ಹೊಟ್ಟೆ ತುಂಬಬೇಕೆಂದು ನೂರಾರು ಮಕ್ಕಳ ಜೀವನದ ಉಪಾಯವನ್ನೋ, ಸುಖದ ಹಾದಿಯನ್ನೋ ನಾವು ತಡೆಯಲು ಬಾರದು. ಶಿಕ್ಷಕನೆನಿಸುವವನಿಗೆ ಅದಕ್ಕೆ ತಕ್ಕ ಲಕ್ಷಣಗಳಿರಬೇಕು. ಅವನು ಶಾಲಾ ಪಾಠಗಳಲ್ಲಿ ಬುದ್ಧಿವಂತನಾದರೆ ಸಾಲದು. ಮಕ್ಕಳ ನಡತೆಗೆ ಒಂದು ರೂಪವನ್ನು ಕೊಡಬಲ್ಲವನಾಗಬೇಕು. ಅಂಥ ಗುಣಗಳೆಲ್ಲ ಅವನಲ್ಲಿರಬೇಕು. ಒಬ್ಬನಿಂದ ನೂರಾರು ಜನರು ಮೇಲಕ್ಕೆ ಬರುವಂತೆ ಅವನ ಜೀವನದ ಆದರ್ಶವಿರಬೇಕು. ತಾನು ತಪ್ಪಿ ಬಿದ್ದರೆ ತನ್ನ ಹಾದಿಯನ್ನು ಅವರೂ ಹಿಡಿದಾರು ಎಂಬ ಭೀತಿಯು ಅವನಲ್ಲಿರಬೇಕು.[2]

ಬೇರೆ ಬೇರೆ ಮಕ್ಕಳ ಬೆಳವಣಿಗೆಯು ಹೇಗೆ ಸಾಗುವುದು, ಅವರ ಜೀವನದ ಆಸೆ, ಉತ್ಸಾಹಗಳು ಯಾವ ರೀತಿಯಲ್ಲಿ ಹರಿಯುತ್ತವೆ ಎಂದು ನಿರೀಕ್ಷಿಸುವ ತಾಳ್ಮೆಯು ಅವನಿಗೆ ಬೇಕು. ಅವರ ಮನೋಲಹರಿಗಳೊಡನೆ ಸಹಾನುಭೂತಿ ಯಿಂದ ಕೆಲಸ ಮಾಡುವ ತಾಳ್ಮೆಯೂ, ಶಾಂತ ಪ್ರಕೃತಿಯೂ ಅವನಿಗೆ ಇರಬೇಕು. ಎಲ್ಲ ಮಕ್ಕಳ ಸ್ವಭಾವಗಳಲ್ಲಿ ಒಂದೇ ರೀತಿಯ ಚುರುಕು ಕಾಣುವುದಿಲ್ಲವಾದ್ದರಿಂದ, ಒಂದೇ ಬಾರಿಗೆ ಎಲ್ಲರನ್ನೂ ಹಾದಿಗೆ ತರುವೆಯೆಂಬ ದುರಾಸೆಯೂ ಹೊಂದಿಲ್ಲ, ಅದು ಅಸಾಧ್ಯವಾದರೆ, ನಿರುತ್ಸಾಹವೂ ಅವನಲ್ಲಿ ಬರಬಾರದು.

ತಾನು ಶಿಕ್ಷಕನಲ್ಲ; ವಿದ್ಯಾರ್ಥಿ. ತಾನು ಕಲಿಯುವುದು ಮುಗಿದಿಲ್ಲ. ಶಿಕ್ಷಕ ವೃತ್ತಿಯೊಂದಿಗೆ ತನ್ನ ವಿದ್ಯಾಭ್ಯಾಸವು ತೊಡಗುತ್ತಿದೆ ಎಂಬ ಆತ್ಮಜ್ಞಾನವು ಮೊದಲಿಗೆ ಬೇಕು. ಹಣದ ಆಸೆಗಾಗಿ ತಾನು ಈ ವೃತ್ತಿಯನ್ನು ಮಾಡಬಾರದೆಂದು, ತನ್ನ ಕರ್ತವ್ಯವು ಮೇಲಾಧೀಸರರ ಪ್ರಶಂಸೆಯನ್ನಾಗಲಿ, ಸಂಬಳದ ಏರಿಕೆಗಳನ್ನಾಗಲಿ ಹೊಂದಿಲ್ಲವೆಂದು

2. ಡಾ.ಕೆ.ಶಿವರಾಮ ಕಾರಂತ, 'ಆದರ್ಶ ಶಿಕ್ಷಕ ಮತ್ತು ಶಿಕ್ಷಕನ ಆದರ್ಶ – ಚಿಣ್ಣರ ಲೋಕದಲ್ಲಿ ಕಾರಂತರು', ಎಸ್.ಬಿ.ಎಸ್, ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಜನವರಿ 2013

ತಿಳಿಯಬೇಕು. ಮಕ್ಕಳೊಡನೆ ಬೆರೆತು ಪ್ರೀತಿಯಿಂದ ಒಂದಾಗಬಲ್ಲ ಎಳೆ ಹೃದಯವು ಅವನಿಗೆ ಬೇಕು. ತಾನೂ ಒಂದು ಮಗು, ಎಷ್ಟಕ್ಕೂ ಮಕ್ಕಳಿಂದ ಶ್ರೇಷ್ಠನಲ್ಲ. ಅವರೂ ತನ್ನಂತೆ, ತಾನೂ ಅವರಂತೆ ಎಂಬ ಆತ್ಮೀಯತೆಯೂ ಬೇಕು.

ಭಾರತವು ಬ್ರಿಟಿಷ್ ಸಾಮ್ರಾಜ್ಯದ ಆಡಳಿತಕ್ಕೊಳಪಟ್ಟಿದ್ದ ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ, ಶಿಕ್ಷಣ ರಂಗಕ್ಕೆ ಅಂದಿನ ಪ್ರಭುತ್ವವು ಎಂತಹ ಮಹತ್ವವನ್ನು ಕೊಟ್ಟಿತು ಎನ್ನುವುದು, ತನ್ನ ವಸಾಹತುಶಾಹಿ ನೀತಿಯ ಗುರಿ ಉದ್ದೇಶಗಳ ಈಡೇರಿಕೆಗೆ ಭಾರತದ ಸಾಮಾಜಿಕ–ಆರ್ಥಿಕ ಸಂರಚನೆಯು ಹೇಗೆ ಅಧೀನವಾಗಿರಬೇಕೆನ್ನುವ ಸಂಕುಚಿತ ಕಲ್ಪನೆಯನ್ನು ಅವಲಂಬಿಸಿತ್ತು. ಇತಿಹಾಸಜ್ಞೆ ಅಪರ್ಣಾ ಬಸುರವರ ಟಿಪ್ಪಣಿ ಈ ಸಂಗತಿಗೆ ಪುಷ್ಟಿಯನ್ನೊದಗಿಸುತ್ತದೆ.

'ಈಸ್ಟ್ ಇಂಡಿಯಾ ಕಂಪೆನಿಯ ಪ್ರಮುಖ ಉದ್ದೇಶ ವ್ಯಾಪಾರವೇ ಆಗಿದ್ದರಿಂದ ಅದು ಶಿಕ್ಷಣ ವ್ಯವಸ್ಥೆಯ ಬೆಳವಣಿಗೆಯಲ್ಲಿ ಯಾವುದೇ ಆಸಕ್ತಿಯನ್ನು ತಳೆಯದಿದ್ದುದು ಆಶ್ಚರ್ಯಕರ ಸಂಗತಿಯೇನಲ್ಲ. 1813ರಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಮೊದಲ ಬಾರಿ ನಿರ್ಣಯ ಕೈಗೊಂಡು, ಭಾರತದಲ್ಲಿನ ಶಿಕ್ಷಣಕ್ಕಾಗಿ ಕಾನೂನಾತ್ಮಕವಾಗಿ ಕಂಪೆನಿಯ ಸನ್ನದ್ದಿನಲ್ಲಿ ಗವರ್ನರ್ ಜನರಲ್‌ರವರು ಕನಿಷ್ಠ ಒಂದು ಲಕ್ಷ ರೂಪಾಯಿಗಳನ್ನು ಮೀಸಲಿರಿಸಬೇಕು ಎಂದಿತು. ನಂತರ ಎರಡನೇ ಮುಖ್ಯ ಬೆಳವಣಿಗೆಯಾದದ್ದು 1835ರ ಫೆಬ್ರವರಿಯಲ್ಲಿ. ಆಗ ಕಾನೂನು ಸದಸ್ಯನೂ, ಸಾರ್ವಜನಿಕ ಶಿಕ್ಷಣದ ಸಾಮಾನ್ಯ ಸಮಿತಿಯ ಅಧ್ಯಕ್ಷನೂ ಆಗಿದ್ದ ಮೆಕಾಲೆಯನ್ನು ಶಿಕ್ಷಣ ವ್ಯವಸ್ಥೆಯ ಬಗ್ಗೆ ಅಭಿಪ್ರಾಯ ನೀಡುವಂತೆ ಬ್ರಿಟಿಷ್ ಸರ್ಕಾರ ಕೇಳಿದಾಗ ಆತ ಇಡೀ ಶಿಕ್ಷಣದ ಸಮಸ್ಯೆಯನ್ನು ಭಾಷಾ ಮಾಧ್ಯಮಕ್ಕೆ ಸೀಮಿತಗೊಳಿಸಿ ದೇಶೀಯ ಭಾಷೆಗಳಾದ ಅರೇಬಿಕ್, ಸಂಸ್ಕೃತ ಮುಂತಾದ ಮಾತೃಭಾಷೆಯ ಬದಲಿಗೆ ಕೆಲವೇ ಸಂಖ್ಯೆಯ ಮೇಲ್ವರ್ಗದ ಜನರಿಗೆ ಪ್ರೌಢ ಮತ್ತು ಉನ್ನತ ಶಿಕ್ಷಣದ ಹಂತದಲ್ಲಿ ಇಂಗ್ಲಿಷ್ ಮಾಧ್ಯಮವನ್ನು ಜಾರಿಗೊಳಿಸಿ ಸರ್ಕಾರದ ಅನುದಾನವನ್ನು ಅಂತಹ ಶಾಲೆಗಳಿಗೆ ಮಾತ್ರ ನೀಡಬೇಕೆಂದು ಶಿಫಾರಸು ಮಾಡಿದನು. ತದನಂತರದ ಬೆಳವಣಿಗೆಯೆಂದರೆ 1854ರಲ್ಲಿ ಭಾರತದಲ್ಲಿನ ಶಿಕ್ಷಣದ ಸ್ಥಿತಿಗತಿಗಳ ಬಗ್ಗೆ ಸರ್ವೇಕ್ಷಣೆ ಮಾಡಿ ವರದಿ ನೀಡಲು ಸರ್. ಚಾರ್ಲ್ಸ್ ವುಡ್ ಅಧ್ಯಕ್ಷತೆಯಲ್ಲಿ ನೇಮಿಸಲಾದ ಶಿಕ್ಷಣ ಆಯೋಗ.'

ಅದರಂತೆ ವುಡ್ ಸಮಿತಿಯು ಎಲ್ಲ ವರ್ಗದ ಜನರು ಶಿಕ್ಷಣ ಪಡೆಯಲು ಪೂರಕವಾಗಿ ಶಿಕ್ಷಣ ಕ್ಷೇತ್ರವನ್ನು ಸಾರ್ವತ್ರೀಕರಣಗೊಳಿಸುವುದು, ಜನರಿಗೆ

ಪ್ರಾದೇಶಿಕ ಭಾಷೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವುದು, ಎಲ್ಲ ಪ್ರಾಂತ್ಯಗಳಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗಳು ಮತ್ತು ಶಿಕ್ಷಕರ ತರಬೇತಿ ಶಾಲೆಗಳ ಸ್ಥಾಪನೆ, ಶಾಲೆಯಿಂದ ವಿಶ್ವವಿದ್ಯಾಲಯ ಹಂತದವರೆಗೆ ಶಿಕ್ಷಣ ವ್ಯವಸ್ಥೆಯ ಪರಿಕಲ್ಪನೆ ಮುಂತಾದ ಮಹತ್ವದ ಶಿಫಾರಸುಗಳನ್ನು ಒಳಗೊಂಡು ಭವಿಷ್ಯದ ಶಿಕ್ಷಣಕ್ಷೇತ್ರದ ರೂಪುರೇಷೆಗೆ ಅಡಿಪಾಯ ಹಾಕಿತು. ಆದರೂ, ಶಿಕ್ಷಣ ಕ್ಷೇತ್ರದಲ್ಲಿನ ಬದಲಾವಣೆಗಳು ವಾಸ್ತವದಲ್ಲಿ ಮಂದಗತಿಯಲ್ಲೇ ಜಾರಿಯಾದವು.

> 'ಈ ಮೇಲಿನ ಸಮಿತಿಗಳ ಮುಖ್ಯ ನಿಲುವುಗಳನ್ನೇ ಬ್ರಿಟಿಷ್ ಸರ್ಕಾರ ತನ್ನ ಶಿಕ್ಷಣ ನೀತಿಗಳಲ್ಲಿ 1947ರ ತನಕ ಅನುಸರಿಸಿತು. ಇದರಿಂದ ಶಿಕ್ಷಣಕ್ಕೆ ಸರ್ಕಾರ ಮೀಸಲಿರಿಸಿದ ಮೊತ್ತ ಅತ್ಯಂತ ಕನಿಷ್ಠ ಪ್ರಮಾಣದ್ದಾಗಿತ್ತು. ಕಡಿಮೆ ಸಿಬ್ಬಂದಿ, ಆಡಳಿತಾತ್ಮಕ ಅಗತ್ಯಗಳನ್ನು ಪೂರೈಸದಿದ್ದುದು, ಸಾಮಾನ್ಯ ಜನರು ಬಹುವಿಧದ ಭಾಷೆಗಳಲ್ಲಿ ಶಿಕ್ಷಿತರಾಗಲು ಒತ್ತಾಸೆ ನೀಡದಿದ್ದುದು ಭಾರತದ ಸಮಗ್ರ ಅಭಿವೃದ್ಧಿಯ ಕುರಿತಾಗಿ ಬ್ರಿಟಿಷರು ತಳೆದ ಅವಜ್ಞೆಯ ದೃಷ್ಟಿಕೋನಕ್ಕೆ ಕನ್ನಡಿ ಹಿಡಿದಂತಿತ್ತು.
>
> ಇವೆಲ್ಲದರ ಪರಿಣಾಮವಾಗಿ ಶಾಲೆಗಳಲ್ಲಿ ತರಬೇತಿ ಹೊಂದಿದ ಶಿಕ್ಷಕರ ಕೊರತೆ ತೀವ್ರವಾಗಿದ್ದರಿಂದ ಬೋಧನೆಯ ಗುಣಮಟ್ಟ ಮತ್ತಷ್ಟು ಕುಸಿಯಿತು. 1936–37ರಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ತರಬೇತಿ ಪಡೆದ ಪುರುಷ ಶಿಕ್ಷಕರ ಪ್ರಮಾಣ ಶೇ. 57ರಷ್ಟಿತ್ತು. ಅದರಲ್ಲಿ ಕೇವಲ ಶೇ. 23ರಷ್ಟು ಶಿಕ್ಷಕರು ಸ್ನಾತಕ ಪದವಿ ಹಂತದವರೆಗೆ ವಿದ್ಯಾರ್ಹತೆ ಗಳಿಸಿದ್ದರು. ತರಬೇತಿ ಪಡೆದು ಬಂದ ಶಿಕ್ಷಕರ ಕ್ಷಮತೆಯೂ ಅಷ್ಟಕ್ಕಷ್ಟೇ ಎನ್ನುವಂತಿತ್ತು. ಅವರ ಸಂಬಳದ ಪ್ರಮಾಣವೂ ನಿಕೃಷ್ಟ ಮಟ್ಟದ್ದಾಗಿದ್ದರಿಂದ ಸರ್ಕಾರಿ ಸೇವೆಗೆ ಅರ್ಹತೆ ಪಡೆಯದ ಅಥವಾ ಕಾನೂನು ವೃತ್ತಿಗೆ ಪ್ರವೇಶಿಸಲಾರದವರು ಮಾತ್ರ ಶಿಕ್ಷಕರಾಗಲು ಮುಂದೆ ಬಂದರು. ಇಂತಹ ಬೆಳವಣಿಗೆಗಳಿಂದ ಎರಡನೇ ಮಹಾಯುದ್ಧದ ವೇಳೆಗೆ ಅರ್ಹ ವಯೋಮಾನದ ಮಕ್ಕಳಲ್ಲಿ ಕೇವಲ ಶೇ. 31ರಷ್ಟು ವಿದ್ಯಾರ್ಥಿಗಳು ಪ್ರಾಥಮಿಕ ಶಾಲೆಗಳಲ್ಲಿ ದಾಖಲಾಗಿದ್ದರು. ಮುಂದುವರೆದ ದೇಶಗಳಲ್ಲಿ ಈ ಪ್ರಮಾಣ ಆದಾಗಲೇ ಶೇ. 100ರಷ್ಟಿತ್ತು.'[3]

ಬ್ರಿಟಿಷ್ ಸರ್ಕಾರವು ಹೀಗೆ ಶಿಕ್ಷಣ ಕ್ಷೇತ್ರವನ್ನು, ಶಿಕ್ಷಕರ ಸಿದ್ಧತೆಯ ವ್ಯವಸ್ಥೆಯನ್ನು ಕಡೆಗಣಿಸಿದ್ದಕ್ಕೆ ಇನ್ನೊಂದು ಪುರಾವೆಯನ್ನು ಹೆಣ್ಣು ಮಕ್ಕಳಿಗೆ

3. Basu, Aparna, 'The Origins and Operations of the Indian Education System, 1757-1947', in Essays in the History of Indian education, New Delhi, Concept Publishing Company, 1982.

ಮೊದಲ ಶಾಲೆಯನ್ನು ಆರಂಭಿಸಿದ, ಹತ್ತೊಂಬತ್ತನೇ ಶತಮಾನದ ಸಮಾಜ ಸುಧಾರಕ, ಜೋತಿರಾವ್ ಫುಲೆ ಒದಗಿಸುತ್ತಾರೆ.

"ಪೂನಾ ಪ್ರಾಂತ್ಯದಲ್ಲಿ ಅಸ್ತಿತ್ವದಲ್ಲಿರುವ ಕೆಲವು ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಣದ ಮಟ್ಟವು ನಾನು ಗಮನಿಸಿದಂತೆ ಸಮಾಧಾನಕರ ಅಥವಾ ಸುಸ್ಥಿತಿಯಲ್ಲಿದೆಯೆಂದು ನನಗನಿಸುವುದಿಲ್ಲ. ಈ ಪ್ರಾಂತ್ಯದಲ್ಲಿ ಸಾಮಾನ್ಯ ಜನರಿಗೆ ಒದಗಿಸುತ್ತಿರುವ ಪ್ರಾಥಮಿಕ ಶಿಕ್ಷಣವನ್ನು ಕಡೆಗಣಿಸಲಾಗಿದೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ವಿದ್ಯಾರ್ಥಿಗಳು ಯಾವುದೇ ವೃತ್ತಿಯನ್ನು ರೂಢಿಸಿಕೊಂಡು ತಮ್ಮ ಭವಿಷ್ಯವನ್ನು ಕಟ್ಟಿಕೊಳ್ಳುವುದಕ್ಕೆ ಉಪಯುಕ್ತವಾಗಿಯಾಗಲಿ ಪ್ರಾಯೋಗಿಕವಾಗಿಯಾಗಲಿ ಅವರನ್ನು ಅಣಿಗೊಳಿಸದ ಕಾರಣ ಶಿಕ್ಷಣ ವ್ಯವಸ್ಥೆಯು ದೋಷಪೂರಿತವಾಗಿದೆ. ಜನಜೀವನದ ಹಿತದೃಷ್ಟಿಯಿಂದ ಸಮುದಾಯದ ಅಗತ್ಯಕ್ಕೆ ಸ್ಪಂದಿಸುವ ರೀತಿಯಲ್ಲಿ ಮುಂದಿನ ದಿನಗಳಲ್ಲಿ ಶಿಕ್ಷಣ ವ್ಯವಸ್ಥೆಯನ್ನು ಸುಧಾರಿಸುವುದು ಉಪಯುಕ್ತ ಕ್ರಮವಾದೀತು. ಇದಕ್ಕಾಗಿ ಶಿಕ್ಷಕರನ್ನು ತಯಾರು ಮಾಡುವ ವ್ಯವಸ್ಥೆ ಮತ್ತು ಈಗ ಅನುಸರಿಸುತ್ತಿರುವ ಪಠ್ಯಕ್ರಮವನ್ನು ಆಮೂಲಾಗ್ರವಾಗಿ ಮರುವಿನ್ಯಾಸಗೊಳಿಸಬೇಕು".

– ಹೀಗೆಂದು 1882ರಲ್ಲಿ ಅಭಿಪ್ರಾಯ ಪಟ್ಟವರು ಜೋತಿರಾವ್ ಫುಲೆ.[4]

ಮುಂದುವರೆದಂತೆ ಅವರು,

'ಪ್ರಾಥಮಿಕ ಶಾಲೆಗಳಲ್ಲಿ ನೇಮಕಗೊಂಡಿರುವ ಬಹುತೇಕ ಶಿಕ್ಷಕರು ಯಾವುದೇ ತರಬೇತಿಯನ್ನು ಹೊಂದಿರುವುದಿಲ್ಲ. ಅವರಲ್ಲಿ ಕೆಲವೇ ಕೆಲವು ಮಂದಿ ನಾರ್ಮಲ್ ತರಬೇತಿ ಶಾಲೆ[5]ಯಿಂದ ಹೊರಬಂದಿದ್ದಾರೆ.... ಪ್ರಾಥಮಿಕ ಶಾಲೆಗಳಲ್ಲಿ ಕಲಿಸುವ ಶಿಕ್ಷಕರು ಸರಿಯಾದ ತರಬೇತಿ ಪಡೆದವರೇ ಆಗಿರುವುದು ಸೂಕ್ತ. ಅಲ್ಲದೆ, ತರಬೇತಿ ಪಡೆಯದೆ

---

4. ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಸುಧಾರಣೆಯನ್ನು ಕುರಿತು ನೇಮಿಸಲಾದ ಶಿಕ್ಷಣ ಆಯೋಗದ ಮಾಹಿತಿಗಾಗಿ ಅಂದಿನ ಪೂನಾ ಪ್ರಾಂತ್ಯದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಅಸ್ತಿತ್ವದಲ್ಲಿದ್ದ ಶಿಕ್ಷಣದ ಸ್ಥಿತಿಗತಿಗಳನ್ನು ಕುರಿತು ತಾವು ಕಂಡಂತೆ ಜೋತಿರಾವ್ ಫುಲೆ ಅವರು ಅಕ್ಟೋಬರ್ 19, 1882ರಂದು ನೀಡಿದ ಲಿಖಿತ ಹೇಳಿಕೆಯ ಭಾಗ.

5. 'ನಾರ್ಮಲ್ ಶಾಲೆ'ಯೆಂದರೆ ಶಿಕ್ಷಕರ ತರಬೇತಿ ಶಾಲೆ. ಭಾರತದಲ್ಲಿ ಪ್ರಪ್ರಥಮವಾಗಿ 1793ರಲ್ಲಿ ಆಗಿನ ಬೆಂಗಾಲದ ಸೇರಾಂಪುರದಲ್ಲಿ ಇಂತಹ ಶಾಲೆ ಆರಂಭವಾಯಿತು. ಇದಕ್ಕೆ ಮೊದಲು ಅಮೆರಿಕ, ಕೆನಡಾ, ಯೂರೋಪಿನ ಹಲವು ದೇಶಗಳಲ್ಲಿ ಇಂತಹ ಶಾಲೆಗಳು ಆರಂಭಗೊಂಡು ನಂತರ ಇವೇ ಶಿಕ್ಷಕರ ತರಬೇತಿ ಸಂಸ್ಥೆಗಳಾಗಿ ರೂಪುಗೊಂಡವು.

ಇರುವವರಲ್ಲಿ, ದಕ್ಷರಾದವರನ್ನು ಹೊರತುಪಡಿಸಿ, ಉಳಿದಂತೆ ತರಬೇತಿ ಹೊಂದಿದವರನ್ನೇ ನೇಮಿಸಿಕೊಳ್ಳಬೇಕಾಗುತ್ತದೆ. ಸಮರ್ಥ ಶಿಕ್ಷಕರನ್ನು ಆಯ್ಕೆ ಮಾಡಿಕೊಂಡು ಅವರ ಸ್ಥಿತಿಗತಿಗಳನ್ನು ಸುಧಾರಿಸಲು ಅವರ ಸಂಬಳವನ್ನು ಹನ್ನೆರಡು ರೂಪಾಯಿಗಳಿಗೆ ಕಡಿಮೆಯಿಲ್ಲದಂತೆ, ದೊಡ್ಡ ಗ್ರಾಮಗಳಲ್ಲಿ ಇದು ಕನಿಷ್ಠ ಹದಿನೈದರಿಂದ ಇಪ್ಪತ್ತು ರೂಪಾಯಿಗಳಿರುವಂತೆ ನೋಡಿಕೊಳ್ಳಬೇಕು.'

'ನಗರ, ಪಟ್ಟಣ ಪ್ರದೇಶಗಳು ಮತ್ತು ದೊಡ್ಡ ಹಳ್ಳಿಗಳಲ್ಲಿರುವ ದೇಶೀಯ ಶಾಲೆಗಳಲ್ಲಿ ಕಲಿಸುವ ಈಗಿನ ಶಿಕ್ಷಕರು ಹಳ್ಳಿಯ ಪದ್ಧತಿಯನ್ನೇ ಅನುಸರಿಸುತ್ತಿದ್ದಾರೆ. ಅಲ್ಲಿ ಕಲಿಯುವ ಹುಡುಗರು ಬಾಯಿ ಪಾಠದ ಮಗ್ಗಿ, ಸ್ವಲ್ಪ ಮಟ್ಟಿನ ಮೋಡಿ ಲಿಪಿ[6]ಯಲ್ಲಿ ಬರವಣಿಗೆ ಮತ್ತು ಓದುವುದು ಹಾಗೂ ಕೆಲವು ಧಾರ್ಮಿಕ ಮಂತ್ರಗಳನ್ನು ಪಠಿಸುವುದನ್ನು ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದಾರೆ. ಸಾಮಾನ್ಯವಾಗಿ ಬೋಧನೆಯ ಕಲೆಯಲ್ಲಿ ಪ್ರವೇಶಿಕೆ ಇಲ್ಲದ ಕಾರಣ, ಶಿಕ್ಷಕರು ಇದನ್ನು ಮೀರಿ ಯಾವುದೇ ಸುಧಾರಣೆ ತರಲು ಅಸಮರ್ಥರಾಗಿದ್ದಾರೆ. ಅತ್ಯಧಿಕ ಸಂಖ್ಯೆಯ ಶಿಕ್ಷಕರು ಬ್ರಾಹ್ಮಣ ಸಮಾಜದಿಂದ ಬಂದವರಾಗಿದ್ದು ಅವರು ಗಳಿಸಿದ ವಿದ್ಯೆಯಿಂದಾಗಿ ಕಷ್ಟಪಟ್ಟು ಮರಾಠಿಯನ್ನು ಓದಿ, ಬರೆಯಲು ಮತ್ತು ಮೂಲ ಲೆಕ್ಕಗಳನ್ನು ಮಾಡಲು ಹೆಣಗಾಡುತ್ತಿದ್ದಾರೆ. ಜೀವನದಲ್ಲಿ ಬೇರೆ ಏನನ್ನೂ ಮಾಡಲು ಸಮರ್ಥರಲ್ಲದವರು ಕಡೆಯ ಆಯ್ಕೆಯಾಗಿ ಶಿಕ್ಷಕರ ಕಸುಬಿಗೆ ಬರುತ್ತಾರೆ. ಇಂತಹ ಶಾಲೆಗಳಿಗೆ ಸಮರ್ಥರಾದ ಶಿಕ್ಷಕರನ್ನು ಸಜ್ಜುಗೊಳಿಸಲು ದೇಶದಲ್ಲಿ ಯಾವ ವ್ಯವಸ್ಥೆಯೂ ಇಲ್ಲ. ಈಗಿನ ಶಿಕ್ಷಕರ ಬದಲಾಗಿ ಪ್ರಾದೇಶಿಕ ಭಾಷೆಗಳಲ್ಲಿ ತರಬೇತಿ ಕಾಲೇಜುಗಳಿಂದ ಕನಿಷ್ಠ ಆರನೇ ತರಗತಿ ಓದಿದವರನ್ನು ನೇಮಿಸಿಕೊಳ್ಳದಿದ್ದರೆ ದೇಶೀಯ ಶಾಲೆಗಳ ಸ್ಥಿತಿ ಅಯೋಮಯವಾಗುತ್ತದೆ.'

1930 ಮತ್ತು 1940ರ ದಶಕಗಳು ಸ್ವಾತಂತ್ರ್ಯ ಸಂಗ್ರಾಮದ ಹೋರಾಟ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲ. ಅಂತಹ ಹೋರಾಟಗಳನ್ನು ಮುನ್ನಡೆಸುತ್ತಿದ್ದ ಗಾಂಧೀಜಿ ಮತ್ತು ಇತರ ನಾಯಕರು ಭವಿಷ್ಯದ ಭಾರತವನ್ನು ಕುರಿತಾದ

---

6. ಬಹುತೇಕ ಮರಾಠಿ ಭಾಷೆಯಲ್ಲಿನ ವ್ಯವಹಾರಗಳು ಮೋಡಿ ಲಿಪಿಯಲ್ಲೇ ನಡೆಯುತ್ತಿದ್ದು, ಸುಮಾರು 1940ರವರೆಗೆ ಲೆಕ್ಕ ಮಾಡುವುದೂ ಸೇರಿದಂತೆ ಮೋಡಿ ಲಿಪಿಯನ್ನು ಅಲ್ಲಿನ ಶಾಲೆಗಳಲ್ಲಿ ಕಲಿಸಲಾಗುತ್ತಿತ್ತು.
7. ಮೂಲ ರಾಷ್ಟ್ರೀಯ ಶಿಕ್ಷಣ ಕುರಿತ ಡಾ.ಜಾಕೀರ್ ಹುಸೇನ್ ಸಮಿತಿಯ ವರದಿ, ಡಿಸೆಂಬರ್ 2, 1937.

ಮಹತ್ತರ ಕನಸುಗಳಿಗೆ ನಿರ್ದಿಷ್ಟ ರೂಪವನ್ನು ನೀಡಲು ಪ್ರಯತ್ನಿಸುತ್ತಿದ್ದ ಕಾಲ. ಸ್ವತಂತ್ರ ಭಾರತದ ಮೂರನೇ ರಾಷ್ಟ್ರಪತಿಗಳೂ. ಪ್ರಮುಖ ಶಿಕ್ಷಣ ಸಂಸ್ಥೆಗಳ ಸಂಸ್ಥಾಪಕರೂ ಆದ ಡಾ.ಜಾಕೀರ್ ಹುಸೇನ್, ಗಾಂಧೀಜಿಯವರ ನಿಲುವುಗಳಲ್ಲಿ ನಂಬಿಕೆಯಿಟ್ಟವರಲ್ಲಿ ಒಬ್ಬರಾಗಿದ್ದರು. ಶಿಕ್ಷಣ ರಂಗವನ್ನು ಕುರಿತು ಅವರ ಮುಂದಾಳತ್ವದಲ್ಲಿ ರಚಿಸಲಾದ ಸಮಿತಿಯು 1937ರಲ್ಲಿ ನೀಡಿದ ವರದಿಯು ಶಿಕ್ಷಕರ ವಿದ್ಯಾರ್ಹತೆಯನ್ನು ಕುರಿತು ಈ ರೀತಿ ಅಭಿಪ್ರಾಯವನ್ನು ವ್ಯಕ್ತಪಡಿಸಿತು.[7]

> 1937ರ ವಾರ್ಧಾ ರಾಷ್ಟ್ರೀಯ ಶಿಕ್ಷಣ ಸಮ್ಮೇಳನದಲ್ಲಿ ನಿರ್ಣಯಿಸಿದಂತೆ ಆಗ ಜಾರಿಯಲ್ಲಿದ್ದ ಬ್ರಿಟಿಷ್ ಶಿಕ್ಷಣ ಪದ್ಧತಿಗೆ ಬದಲಾಗಿ ನಮ್ಮ ದೇಶದ ಸ್ಥಿತಿ–ಗತಿಗೆ ಪೂರಕವಾಗಿ ಗ್ರಾಮೀಣ ಬದುಕಿಗೆ ವಿದ್ಯಾರ್ಥಿಗಳನ್ನು ಸಿದ್ಧಪಡಿಸಲು ಅದೇ ವರ್ಷ ಡಿಸೆಂಬರ್ 2ರಂದು ಡಾ.ಜಾಕೀರ್ ಹುಸೇನ್ ಸಮಿತಿಯು 'ಮೂಲ ರಾಷ್ಟ್ರೀಯ ಶಿಕ್ಷಣ' ಎಂತಲೂ ಕರೆಯಲಾದ ಮಹತ್ವದ ದಾಖಲೆಯನ್ನು ವರದಿಯ ರೂಪದಲ್ಲಿ ಸಲ್ಲಿಸಿತು. ಶಿಕ್ಷಕ ತರಬೇತಿಗೆ ಸಂಬಂಧಿಸಿದಂತೆ ಸಮಿತಿಯ ಶಿಫಾರಸುಗಳಲ್ಲಿ ಮುಖ್ಯವಾಗಿ, ಶೈಕ್ಷಣಿಕ ವಿಷಯಗಳಲ್ಲದೆ ಶಾಲೆಗಳಲ್ಲಿ ಕುಶಲ ಕೆಲಸಗಳ ಕುರಿತ ಪ್ರಕ್ರಿಯೆಗಳು ಮತ್ತು ತಂತ್ರಗಳನ್ನು ಅವರ ತರಬೇತಿಯಲ್ಲಿ ಸೇರ್ಪಡೆಗೊಳಿಸಬೇಕೆಂದು ಹೇಳಲಾಯಿತು. ಅಲ್ಲದೆ ಮೂರು ವರ್ಷದ ಶಿಕ್ಷಕ ತರಬೇತಿ ಕೋರ್ಸುಗಳಿಗೆ ಸೇರಲು ಕನಿಷ್ಠ ಅರ್ಹತೆಯಾಗಿ ಹತ್ತನೇ ತರಗತಿ ಪರೀಕ್ಷೆಯಲ್ಲಿ ತೇರ್ಗಡೆ ಅಥವಾ ದೇಶೀಯ ಭಾಷೆಯೊಂದರ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಎರಡು ವರ್ಷಗಳ ಬೋಧನಾ ಅನುಭವವಿರಬೇಕೆಂಬ ಶಿಫಾರಸನ್ನು ಮಾಡಲಾಯಿತು.
>
> ಆಯೋಗವು ಆಗಿನ ಶಿಕ್ಷಣ ಪದ್ಧತಿಯ ಬಗ್ಗೆ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, ಸಮಾಜದ ಉಪಯುಕ್ತ ಉತ್ಪಾದಕ ಸದಸ್ಯರಾಗಿ ಮುಖ್ಯವಾಹಿನಿಯಲ್ಲಿ ತಮ್ಮ ಕೊಡುಗೆ ನೀಡಿ ಪರಿಣಾಮಕಾರಿಯಾಗಿ ಭಾಗವಹಿಸುವಂತೆ ವಿದ್ಯಾರ್ಥಿಗಳನ್ನು ಸಿದ್ಧಪಡಿಸಲಾಗದಿರುವ ಬಗ್ಗೆ ಕಳವಳವನ್ನು ದಾಖಲಿಸಿತು.

1940ರ ದಶಕದಲ್ಲಿ ನಮ್ಮ ನಾಡಿನ ಶಾಲೆಗಳ, ಶಿಕ್ಷಕರ ದಾರುಣ ಸ್ಥಿತಿ–ಗತಿಗಳನ್ನು ಮನೋಜ್ಞವಾಗಿ ಚಿತ್ರಿಸಿರುವ ಕೃತಿ 'ರಂಗಣ್ಣನ ಕನಸಿನ ದಿನಗಳು'. ಕರ್ನಾಟಕದ ಶಿಕ್ಷಣ ಕ್ಷೇತ್ರದಲ್ಲಿ ಆಸಕ್ತಿ ಹೊಂದಿದ ಬಹುತೇಕ ಜನರು ಈ ಪುಸ್ತಕವನ್ನು ಓದಿರುತ್ತಾರೆ. ಪುಸ್ತಕದ ಮುನ್ನುಡಿಯಲ್ಲಿ ಲೇಖಕ ಎಂ.ಆರ್.ಶ್ರೀನಿವಾಸಮೂರ್ತಿ ಎಂಥವರು ಶಿಕ್ಷಕರಾಗಬೇಕು ಎನ್ನುವುದನ್ನು ಸ್ಪಷ್ಟವಾಗಿ ಹೇಳುತ್ತಾರೆ. 1949ರಲ್ಲಿ

ಪುಸ್ತಕದ ಮೊದಲ ಮುದ್ರಣಕ್ಕೆ ಬರೆದ ಮುನ್ನುಡಿಯ ಆಯ್ದ ಭಾಗವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

'ಪಾಠಶಾಲೆಯೆಂಬ ಒಡಲಿಗೆ ಉಪಾಧ್ಯಾಯರೇ ಜೀವ. ಕ್ಷೀಣದೆಶೆಯಲ್ಲಿರುವ ಪಾಠಶಾಲೆಗೆ ದಕ್ಷರೂ ಶ್ರದ್ಧಾವಂತರೂ ಆದ ಉಪಾಧ್ಯಾಯರು ವರ್ಗವಾಗಿ ಹೋದರೆ ಅದನ್ನು ಒಂದು ವರ್ಷದೊಳಗಾಗಿ ಊರ್ಜಿತ ಮಾಡಿ, ಐವತ್ತು ಅರುವತ್ತು ಮಕ್ಕಳು ತುಂಬಿದ ಪಾಠಶಾಲೆಯಾಗಿ ಮಾಡುತ್ತಾರೆ; ಮತ್ತು ಗ್ರಾಮಸ್ಥರ ಗೌರವವನ್ನು ಸಂಪಾದಿಸಿ ಗಣ್ಯವ್ಯಕ್ತಿಗಳಾಗುತ್ತಾರೆ. ಉತ್ತಮ ಸ್ಥಿತಿಯಲ್ಲಿ ಇರುವ ಪಾಠಶಾಲೆಗೆ ಯೋಗ್ಯತೆಯಿಲ್ಲದ ಮತ್ತು ಶ್ರದ್ಧಾಹೀನರಾದ ಉಪಾಧ್ಯಾಯರು ಹೋದರೆ ಮೂರು ತಿಂಗಳಲ್ಲಿ ಅದನ್ನು ಕ್ಷೀಣದೆಶೆಗೆ ತಂದುಬಿಡುತ್ತಾರೆ. ಆದ್ದರಿಂದ ವಿದ್ಯಾಭ್ಯಾಸದ ಇಲಾಖೆಯಲ್ಲಿ ಯಾರು ಯಾರನ್ನೋ ಉಪಾಧ್ಯಾಯರನ್ನಾಗಿ ನೇಮಕ ಮಾಡುವುದು ಸರಿಯಲ್ಲ. ಮೊದಲನೆಯದಾಗಿ, ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿಯೂ ಟ್ರೈನಿಂಗ್ ಪರೀಕ್ಷೆಯಲ್ಲಿಯೂ ತೇರ್ಗಡೆಯಾದವರನ್ನು ಉಪಾಧ್ಯಾಯರನ್ನಾಗಿ ನೇಮಕ ಮಾಡಬೇಕು.'

'ಈಗ ಪಾಠಶಾಲೆಗಳನ್ನು ಅಚ್ಚುಕಟ್ಟಾಗಿ ಸ್ಥಾಪಿಸುತ್ತಿದ್ದಾರೆ. ಅನೇಕ ಪಾಠಶಾಲೆಗಳಲ್ಲಿ ಉಪಾಧ್ಯಾಯರುಗಳಿಲ್ಲ; ಅಥವಾ ಅವರ ಸಂಖ್ಯೆ ಕಡಿಮೆ. ಟ್ರೈನಿಂಗ್ ಆಗಿಲ್ಲದವರನ್ನೆಲ್ಲ ಸೇರಿಸಿಕೊಂಡು ಅವರಿಗೆ ಯಾವುದೊಂದು ಅಲ್ಪಾವಧಿಯ ಶಿಕ್ಷಣವನ್ನೂ ಕೊಡದೆ ಉಪಾಧ್ಯಾಯರನ್ನಾಗಿ ಕಳಿಸುತ್ತಿದ್ದಾರೆ. ಅವರ ಸರ್ವಿಸ್ಸು ಅರ್ಧ ಮುಗಿಯುವ ಹೊತ್ತಿಗೋ ಏನೋ ಟ್ರೈನಿಂಗ್‌ಗೆ ಕಳಿಸಿಕೊಡುತ್ತಾರೆ. ಏತನ್ಮಧ್ಯೆ ಈ ಅನನುಭವಿಗಳು ತಮಗೆ ತೋರಿದಂತೆ ಪಾಠಗಳನ್ನು ಮಾಡುತ್ತಾರೆ. ಈ ದೋಷಗಳೆಲ್ಲ ನಿವಾರಣೆಯಾಗಬೇಕಾಗಿದೆ. ನಮಗೆ ಪ್ರತಿಯೊಂದು ಜಿಲ್ಲೆಯಲ್ಲಿಯೂ ನಾರ್ಮಲ್ ಸ್ಕೂಲುಗಳು ಬೇಕು. ಎಸ್.ಎಸ್.ಎಲ್.ಸಿ. ಆದವರಿಗೆ ಸ್ಕಾಲರ್‌ಷಿಪ್ ಕೊಟ್ಟು ಒಂದು ವರ್ಷ ಕಾಲ ಆ ಪಾಠಶಾಲೆಗಳಲ್ಲಿ ಶಿಕ್ಷಣವನ್ನು ಒದಗಿಸಿ ಉಪಾಧ್ಯಾಯರನ್ನಾಗಿ ನೇಮಕ ಮಾಡುತ್ತ ಹೋಗಬೇಕು. ಪ್ರತಿ ವರ್ಷವೂ ಹೀಗೆ ಐನೂರು ಮಂದಿಯಾದರೂ ತರಬೇತಾಗಿ ಬರುತ್ತಿದ್ದರೆ ನಮ್ಮ ಪ್ರಾಥಮಿಕ ವಿದ್ಯಾಭ್ಯಾಸದ ಸಮಸ್ಯೆ ಬಹುಮಟ್ಟಿಗೆ ಬಗೆಹರಿದೀತು.'[8]

ಒಟ್ಟಾರೆ ಮೇಲಿನ ಶೈಕ್ಷಣಿಕ ಚರಿತೆಯ ಚಿತ್ರಣವನ್ನು ವಿಶ್ಲೇಷಿಸಿದಾಗ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ.

---

8. ಎಂ.ಆರ್. ಶ್ರೀನಿವಾಸಮೂರ್ತಿ. 'ರಂಗಣ್ಣನ ಕನಸಿನ ದಿನಗಳು' ಪುಸ್ತಕದ ಮೊದಲ ಮುದ್ರಣಕ್ಕೆ 1949ರಲ್ಲಿ ಬರೆದ ಮುನ್ನುಡಿಯ ಭಾಗ. ಆರನೆಯ ಮುದ್ರಣ. ಅಂಕಿತ ಪುಸ್ತಕ. 2009.

- ಆಯಾಕಾಲಕ್ಕೆ ತಕ್ಕಂತೆ ಶಿಕ್ಷಕರಾಗಲು ನಿಗದಿತ ವಿದ್ಯಾರ್ಹತೆ ಮತ್ತು ತರಬೇತಿ ಪ್ರಮಾಣವನ್ನು ನಿಶ್ಚಯಿಸಲಾಗಿದೆ.
- ಈ ಎರಡು ಪರಿಮಾಣಾತ್ಮಕ ಅಗತ್ಯತೆಗಳನ್ನು ಮೀರಿ ಶಿಕ್ಷಕರು ರೂಢಿಸಿಕೊಳ್ಳಬೇಕಾದ ಗುಣಾತ್ಮಕ ಅಂಶಗಳ ಬಗ್ಗೆಯೂ ಅಂದಂದಿನ ಸಮಾಜ ತನ್ನದೇ ನಿರೀಕ್ಷೆಗಳನ್ನು ಹೊಂದಿರುವುದಕ್ಕೆ ನಿದರ್ಶನಗಳಿವೆ.
- ಸಮಾಜ ಬೆಳೆದಂತೆ, ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ಪ್ರಗತಿಯಾದಂತೆ, ಶಿಕ್ಷಣ ಕ್ಷೇತ್ರದಿಂದ ಸಮಾಜ ಇರಿಸಿಕೊಂಡ ನಿರೀಕ್ಷೆಗಳು ವಿಕಸಿತಗೊಳ್ಳುತ್ತಿವೆ. ಶಿಕ್ಷಕರಾಗುವವರ ವಿದ್ಯಾರ್ಹತೆ ಮತ್ತು ತರಬೇತಿ ಪ್ರಮಾಣದಲ್ಲಿ ಹಂತಹಂತವಾಗಿ ಆದ ಹೆಚ್ಚಳ ವಿವಿಧ ಕಾಲಘಟ್ಟಗಳಲ್ಲಿ ರೂಪಿತವಾದ ಸಮಾಜದ ಪರಿಕಲ್ಪನೆಯ ಭಾಗವೇ ಆಗಿದೆ.
- ಆದರೂ ಶಿಕ್ಷಕರು ಎಂಥವರಾಗಿರಬೇಕು? ಅವರು ಯಾವ ರೀತಿಯ ಕ್ಷಮತೆಯನ್ನು ಹೊಂದಿರಬೇಕು ಎಂಬ ಸಮಾಜದ ನಿರೀಕ್ಷೆಗಳಿಗೂ, ವಾಸ್ತವದಲ್ಲಿ ಶಿಕ್ಷಕರು ಅಂತಹ ನಿರೀಕ್ಷೆಗಳನ್ನು ತಲುಪುವಲ್ಲಿ ಯಾವ ಪ್ರಮಾಣದಲ್ಲಿ ಯಶಸ್ವಿಯಾದರು ಎನ್ನುವ ಸಂಗತಿಗೂ ನಡುವಿನ ಅಂತರ ನಿರಂತರವಾಗಿ ಮುಂದುವರೆದಿರುವುದು ಕಾಲಾತೀತ ಸತ್ಯವಾಗಿದೆ.
- ಇದರರ್ಥ, ಶಿಕ್ಷಕರನ್ನು ರೂಪಿಸುವ ವ್ಯವಸ್ಥೆ ಮತ್ತು ಅದರ ಸಾಂಸ್ಥಿಕ ಸ್ವರೂಪ ಹಾಗೂ ಪ್ರಕ್ರಿಯೆಗಳಲ್ಲಿ ಸುಧಾರಣೆಗಳಾಗಿದ್ದರೂ, ಈ 'ನಿರೀಕ್ಷೆ – ಸಾಧನೆ' ಸಮೀಕರಣದಲ್ಲಿನ ವ್ಯತ್ಯಾಸವನ್ನು ತುಂಬಲು ಶಿಕ್ಷಕ ಶಿಕ್ಷಣ ವ್ಯವಸ್ಥೆಯು ತನ್ನ ಕಾಣ್ಕೆ, ಉದ್ದೇಶಗಳನ್ನು ಮರುರೂಪಿಸಿಕೊಂಡು ತನ್ನ ಪ್ರಸ್ತುತತೆಯನ್ನು ಉಳಿಸಿಕೊಳ್ಳಬೇಕಾಗಿದೆ. ಅಲ್ಲದೆ ತನ್ನ ಮತ್ತು ತನ್ನ ಸದಸ್ಯರ ಸಾಮರ್ಥ್ಯವೃದ್ಧಿಯನ್ನು ನಾವೀನ್ಯಪೂರ್ಣ ನೆಲೆಯಲ್ಲಿ ಪರಿಕಲ್ಪಿಸಿಕೊಳ್ಳಬೇಕಿದೆ.

■

13–01–2021

**ಕೋಷ್ಟಕ 4: 1882–1950ರ ಅವಧಿಯ ಶಿಕ್ಷಕ ಶಿಕ್ಷಣದ ಸಂಕ್ಷಿಪ್ತ ಚಿತ್ರಣ**

| ಕ್ರಸಂ | ಆಕರ | ಅಧ್ಯಯನ/ ಲೇಖನದ ಅವಧಿ ಶಿಕ್ಷಕರ | ವಿದ್ಯಾರ್ಹತೆ/ತರಬೇತಿ ಪ್ರಮಾಣ | ವ್ಯಾಖ್ಯೆ |
|---|---|---|---|---|
| 1 | ಜ್ಯೋತಿರಾವ್ ಫುಲೆ, ಶಿಕ್ಷಣ ಆಯೋಗಕ್ಕೆ ನೀಡಿದ ಲಿಖಿತ ಹೇಳಿಕೆ. | 1882ರ ಅಕ್ಟೋಬರ್ | ಬಹುತೇಕ ಶಿಕ್ಷಕರು ಯಾವುದೇ ತರಬೇತಿ ಹೊಂದಿಲ್ಲ. ಕನಿಷ್ಠ ಆರನೇ ತರಗತಿ (ಪ್ರಾದೇಶಿಕ ಭಾಷೆಗಳಲ್ಲಿ) ಹಾಗೂ ನಾರ್ಮಲ್ ಶಾಲೆಯಿಂದ ತೇರ್ಗಡೆ ಹೊಂದಿರಬೇಕು. | ಕೆಲವೇ ಶಿಕ್ಷಕರು ನಾರ್ಮಲ್ ಶಾಲೆಗಳಿಂದ ಹೊರಬಂದಿರುವುದನ್ನು ಗುರುತಿಸಲಾಗಿದೆ. |
| 2 | ಡಾ. ಕೆ. ಶಿವರಾಮ ಕಾರಂತ, 'ಚಿಣ್ಣರ ಲೋಕದಲ್ಲಿ ಕಾರಂತರು' | 1932 | ಪ್ರಾಥಮಿಕ ಹಂತಕ್ಕೆ ಎಂಟನೇ ತರಗತಿ ಹಾಗೂ ಪ್ರೌಢಶಾಲೆ ಹಂತಕ್ಕೆ ಬಿ.ಎ ಆದವರು ಶಿಕ್ಷಕರಾಗಬಹುದೆಂದು ಉಲ್ಲೇಖಿಸಲಾಗಿದೆ. | ಶಿಕ್ಷಕರು ನಿರ್ದಿಷ್ಟ ವಿದ್ಯಾರ್ಹತೆಯನ್ನು ಮೀರಿ ನಿರಂತರ ಕಲಿಕಾರ್ಥಿಯಾಗಿ, ಆದರ್ಶ ವ್ಯಕ್ತಿಯಾಗಿ, ಮಕ್ಕಳೊಂದಿಗೆ ಸಂವೇದನೆಯಿಂದ ಬೆರೆಯಬಲ್ಲವನಾಗಿರಬೇಕೆಂದು ಆಶಿಸಲಾಗಿದೆ. |
| 3 | ಅಪರ್ಣಾ ಬಸು ಅವರ ಪ್ರಬಂಧ (ಹಿಸ್ಟರಿ ಆಫ್ ಇಂಡಿಯನ್ ಎಜುಕೇಶನ್) | 1936–37 | ನಿಗದಿತ ತರಬೇತಿ ಪಡೆದ ಪುರುಷ ಶಿಕ್ಷಕರು ಶೇ.57 ರಷ್ಟು; ಅದರಲ್ಲಿ ಸ್ನಾತಕ ಪದವಿ ಪಡೆದವರ ಪ್ರಮಾಣ ಶೇ.23%. | ಈ ದತ್ತಾಂಶ ಪ್ರೌಢಶಾಲೆ ಶಿಕ್ಷಕರನ್ನೂ ಒಳಗೊಂಡಿದೆ. ಇದರರ್ಥ ಪ್ರಾಥಮಿಕ ಹಂತದಲ್ಲಿ ಇನ್ನೂ ಕಡಿಮೆ ವಿದ್ಯಾರ್ಹತೆ, ಮತ್ತು ತರಬೇತಿ ಹೊಂದಿಲ್ಲದವರ ಪ್ರಮಾಣ ಹೆಚ್ಚಾಗಿರುತ್ತದೆ. |
| 4 | ಎಂ.ಆರ್.ಶ್ರೀ, 'ರಂಗಣ್ಣನ ಕನಸಿನ ದಿನಗಳು' ಕೃತಿಯ ಮುನ್ನುಡಿಯಲ್ಲಿ. | 1949 | ಎಸ್ಸೆಸ್ಸೆಲ್ಸಿ ಹಾಗೂ ಒಂದು ವರ್ಷದ ಟ್ರೈನಿಂಗ್ ಪರೀಕ್ಷೆ ಎರಡರಲ್ಲೂ ತೇರ್ಗಡೆ. | ಶಿಕ್ಷಕ ತರಬೇತಿ ಆಗಿಲ್ಲದವರನ್ನು ಉಪಾಧ್ಯಾಯರಾಗಿ ನೇಮಿಸುತ್ತಿದ್ದುದನ್ನು ಕಂಡು, ಜಿಲ್ಲೆಗಳಲ್ಲಿ ನಾರ್ಮಲ್ ಸ್ಕೂಲುಗಳ ಸ್ಥಾಪನೆ ಮಾಡಿ ಎಸ್ಸೆಸ್ಸೆಲ್ಸಿ ಆದವರಿಗೆ ಅಂತಹ ಶಾಲೆಗಳಿಗೆ ಸೇರಲು ಸ್ಕಾಲರ್ಶಿಪ್ ನೀಡಲು ಸಲಹೆ ನೀಡಲಾಗಿದೆ. |

ಜಾಗತೀಕರಣವು ಪ್ರತಿಯೊಂದು ಕ್ಷೇತ್ರದಲ್ಲಿಯೂ ಆಳವಾಗಿ ಬೇರೂರುತ್ತಿರುವ ಹಾಗೂ ದೇಶವು ಅಭಿವೃದ್ಧಿ ಹೊಂದಿದ ರಾಷ್ಟ್ರವಾಗುವ ಬಯಕೆಯನ್ನು ಹೊತ್ತಿರುವ ಈ ಸಂದರ್ಭದಲ್ಲಿ ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ಉತ್ತಮ ಗುಣಮಟ್ಟದ ಶಿಕ್ಷಣವನ್ನು ನೀಡುವುದರ ಮೂಲಕ ದೃಢವಾದ ಅಡಿಪಾಯವನ್ನು ಹಾಕುವುದು ಅಗತ್ಯವಾಗಿದೆ.

# ಶಿಕ್ಷಕರ ವೃತ್ತಿಪರ ಅಭಿವೃದ್ಧಿ – ಒಂದು ಮರುಚಿಂತನೆ

ಕರ್ನಾಟಕದಲ್ಲಿ ಶಿಕ್ಷಕ ಶಿಕ್ಷಣಕ್ಕೆ ದೀರ್ಘ ಇತಿಹಾಸವಿದೆ. ಮೊತ್ತಮೊದಲ ಶಿಕ್ಷಕ ತರಬೇತಿ ವಿದ್ಯಾಲಯ(ಟಿಟಿಸಿ)ವು 1857ರಲ್ಲಿ ಧಾರವಾಡದಲ್ಲಿ ಆರಂಭವಾಯಿತು. 1868ರಲ್ಲಿ ಸೇವಾನಿರತ ಶಿಕ್ಷಕರಿಗೆ ತರಬೇತಿ ನೀಡಲು ಹೋಬಳಿ ಮಟ್ಟದಲ್ಲಿ ನಾರ್ಮಲ್ ಸ್ಕೂಲ್‌ಗಳನ್ನು ಆರಂಭಿಸಲಾಯಿತು. 1966ರ ತನಕವೂ ಎಂಟನೆಯ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿದವರಿಗೆ ಟಿಸಿಎಲ್ ಹಾಗೂ ಹತ್ತನೆಯ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿದವರಿಗೆ ಟಿಸಿಎಚ್ ಎಂಬ ಎರಡು ತರಹದ ಕೋರ್ಸ್‌ಗಳನ್ನು ನಡೆಸಲಾಗುತ್ತಿತ್ತು. ನಂತರ ಟಿಸಿಎಚ್‌ನ ಕಾಲಾವಧಿಯನ್ನು ಎರಡು ವರ್ಷಕ್ಕೆ ಏರಿಸಲಾಯಿತು. 1987–88ರಲ್ಲಿ ಟಿಸಿಎಚ್‌ಗೆ ಪ್ರವೇಶ ಪಡೆಯಲು ಪಿಯುಸಿ ಶಿಕ್ಷಣವನ್ನು ಪಡೆದಿರಬೇಕು ಎಂದು ನಿಗದಿಪಡಿಸಲಾಯಿತು. 2012–13ರಲ್ಲಿ ಟಿಸಿಎಚ್ ಅನ್ನು ಡಿಎಡ್ ಎಂದು ಮರುನಾಮಕರಣ ಮಾಡಲಾಗಿದೆ. ನಂಬಲರ್ಹ ಅಂದಾಜುಗಳ ಪ್ರಕಾರ ಕರ್ನಾಟಕದಲ್ಲಿ ಸದ್ಯಕ್ಕೆ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಸುಮಾರು 1,70,000 ಶಿಕ್ಷಕರಿದ್ದಾರೆ. ಇವರಲ್ಲಿ ಸುಮಾರು ಒಂದು ಲಕ್ಷ ಶಿಕ್ಷಕರು ಟಿಸಿಎಚ್ ಜೊತೆಗೆ ಎಸ್‌ಎಸ್‌ಎಲ್‌ಸಿ ಅಥವಾ ಪಿಯುಸಿ ವಿದ್ಯಾರ್ಹತೆಯನ್ನು ಹೊಂದಿದ್ದಾರೆ.

ಯಾವುದೇ ಮಾನದಂಡದಿಂದ ನೋಡಿದರೂ ಈ ಪ್ರವೇಶ ಹಂತದ ವಿದ್ಯಾರ್ಹತೆಯು ಶಿಕ್ಷಕರು ಶಾಲಾ ವಿಷಯಗಳನ್ನು ಸಮರ್ಥ ರೀತಿಯಲ್ಲಿ ಬೋಧಿಸುವಂತೆ, ಅದನ್ನು ಮಕ್ಕಳ ಕಲಿಕೆಯಾಗಿ ಮಾರ್ಪಡಿಸುವಂತೆ ಅವರನ್ನು ಸಿದ್ಧಗೊಳಿಸುವುದಿಲ್ಲ. ಅಮೆರಿಕ ಹಾಗೂ ಇನ್ನಿತರ ಅಭಿವೃದ್ಧಿ ಹೊಂದಿದ ಹಲವು ದೇಶಗಳಲ್ಲಿ ಶಿಕ್ಷಕರನ್ನು ತಯಾರು ಮಾಡುವ ಕಾರ್ಯಕ್ರಮಗಳ ಅನುಸಾರ, ಹೊಸದಾಗಿ ಬೋಧನೆಯ ಕ್ಷೇತ್ರಕ್ಕೆ ಕಾಲಿಡುತ್ತಿರುವ ಶಿಕ್ಷಕರು ನಾಲ್ಕರಿಂದ ಐದು ವರ್ಷಗಳ ಕಠಿಣ ಶಿಕ್ಷಣವನ್ನು ಪಡೆಯಲೇಬೇಕಿದ್ದು, ಅದರಲ್ಲಿ ವಿಷಯ-ನಿರ್ದಿಷ್ಟ ಜ್ಞಾನ ಹಾಗೂ ಬೋಧನಾಕ್ರಮಕ್ಕೆ ಸಂಬಂಧಿಸಿದ ತರಬೇತಿಯನ್ನು ಸಂಯೋಜಿಸಲಾಗಿರುತ್ತದೆ. ಹೀಗಾಗಿ ಈ ಕೋರ್ಸ್ ಇನ್ನಿತರ ಯಾವುದೇ ವೃತ್ತಿಪರ ಪದವಿಗೆ ಕಡಿಮೆ ಇಲ್ಲದ ರೀತಿಯಲ್ಲಿರುತ್ತದೆ. ಅದಕ್ಕೆ ವ್ಯತಿರಿಕ್ತವಾಗಿ ಭಾರತದಲ್ಲಿ ಶಿಕ್ಷಕರನ್ನು ತಯಾರು ಮಾಡುವ ಕಾರ್ಯಕ್ರಮಗಳು ಕೆಲವೊಂದು ಉದಾಹರಣೆಗಳ ಹೊರತಾಗಿ, ಉಳಿದಂತೆ ಕೇವಲ ಎರಡು ವರ್ಷ ಅವಧಿಯದಾಗಿವೆ. 2016-17ರ ನಂತರ ಶಿಕ್ಷಕ ಶಿಕ್ಷಣದ ಕುರಿತಾದ ರಾಷ್ಟ್ರೀಯ ಮಂಡಳಿ(ಎನ್‌ಸಿಟಿಇ)ಯು ಬಿಎಡ್ ತರಗತಿಯ ಕಾಲಾವಧಿಯನ್ನು ಒಂದರಿಂದ ಎರಡು ವರ್ಷಕ್ಕೆ ಹೆಚ್ಚಿಸಿದ್ದಷ್ಟೇ ಅಲ್ಲದೆ, ಶಿಕ್ಷಕರು ವಿಷಯಗಳನ್ನು ಹೆಚ್ಚು ಆಳವಾಗಿ ಬೋಧಿಸಲು ಆರಂಭಿಸುವ, ಹಿರಿಯ ಪ್ರಾಥಮಿಕ ಮಟ್ಟದ (ಆರರಿಂದ ಎಂಟನೆಯ ತರಗತಿ) ಶಿಕ್ಷಕರಿಗೂ ಅದನ್ನೇ ನಿಗದಿಪಡಿಸಿತು.

ಜಾಗತೀಕರಣವು ನಮ್ಮ ಬದುಕಿನ ಪ್ರತಿಯೊಂದು ಕ್ಷೇತ್ರದಲ್ಲಿಯೂ ಆಳವಾಗಿ ಬೇರೂರುತ್ತಿರುವ ಹಾಗೂ ದೇಶವು ಅಭಿವೃದ್ಧಿ ಹೊಂದಿದ ರಾಷ್ಟ್ರವಾಗುವ ಬಯಕೆಯನ್ನು ಹೊತ್ತಿರುವ ಈ ಸಂದರ್ಭದಲ್ಲಿ ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ಉತ್ತಮ ಗುಣಮಟ್ಟದ ಶಿಕ್ಷಣವನ್ನು ನೀಡುವುದರ ಮೂಲಕ ದೃಢವಾದ ಅಡಿಪಾಯವನ್ನು ಹಾಕುವುದು ಅತ್ಯಂತ ಅಗತ್ಯವಾಗಿದೆ. ಅದಕ್ಕಾಗಿ ಮಕ್ಕಳು ಪ್ರತಿಯೊಂದು ತರಗತಿಗೆ ನಿಗದಿಪಡಿಸಲಾದ ಕಲಿಕೆಯ ಮಟ್ಟವನ್ನು ತಲುಪಬೇಕಾದ ಅಗತ್ಯದ ಜೊತೆಗೆ ತರ್ಕಬದ್ಧ ಆಲೋಚನಾ ಶಕ್ತಿಯನ್ನು ಬೆಳೆಸಿಕೊಳ್ಳುವ, ವಿಮರ್ಶಾತ್ಮಕವಾಗಿ ವಿಷಯವನ್ನು ವಿಶ್ಲೇಷಿಸುವ, ಸ್ವತಂತ್ರ ಆಯ್ಕೆಗಳನ್ನು ಮಾಡುವ ಸಾಮರ್ಥ್ಯವನ್ನು ಹೊಂದಿರಬೇಕು ಹಾಗೂ ಇತರರ ಕುರಿತಾದ ಗೌರವ, ಪರಿಸರದ ಬಗ್ಗೆ ಕಾಳಜಿ ಮುಂತಾದ ಮಾನವೀಯ ಗುಣಗಳನ್ನು ಬೆಳೆಸಿಕೊಂಡು ಆ ಮೂಲಕ ಸಮಾಜದಲ್ಲಿ ಜವಾಬ್ದಾರಿಯುತ ನಾಗರಿಕರಾಗಬೇಕು.

ವರ್ಷದಿಂದ ವರ್ಷಕ್ಕೆ ಶಾಲಾ ವಿಷಯಗಳು ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತಿವೆ. ಪ್ರತಿಯೊಂದು ರಾಜ್ಯದಲ್ಲಿಯೂ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಹಾಗೂ

ಇನ್ನಿತರ ಪ್ರಸ್ತುತ ನೀತಿನಿರೂಪಣಾ ದಸ್ತಾವೇಜುಗಳ ಪ್ರಕಾರ ಪಠ್ಯಪುಸ್ತಕಗಳನ್ನು ಪರಿಷ್ಕರಿಸಲಾಗುತ್ತಿದೆ. ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿ ಮಂಡಳಿ(ಎನ್‌ಸಿಇಆರ್‌ಟಿ)ಯು ನಿಗದಿಪಡಿಸಿದ ಪಠ್ಯಪುಸ್ತಕಗಳು ಬಹಳಷ್ಟು ರಾಜ್ಯಗಳ ಮಟ್ಟಿಗೆ ಮೂಲ ಆಕರಗಳಾಗುತ್ತಿವೆ. ಪ್ರತಿ ಬಾರಿ ಇಂತಹ ಪರಿಷ್ಕರಣೆ ನಡೆದಾಗಲೂ ಶಿಕ್ಷಕರು ಹೆಚ್ಚಿನ ವಿಷಯವಸ್ತು ಹಾಗೂ ಬೋಧನಾಕ್ರಮದ ವಿಧಾನಗಳಿಗೆ ಅನುಗುಣವಾಗಿ ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಲೇಬೇಕಾಗುತ್ತದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಸೇವಾನಿರತ ಶಿಕ್ಷಕರ ಪಾಲಿಗೆ ವೃತ್ತಿಯಲ್ಲಿ ನಿರಂತರವಾದ ಬೆಳವಣಿಗೆಯೆನ್ನುವುದು ಅತ್ಯಂತ ಅಗತ್ಯ.

ಸದ್ಯಕ್ಕೆ ರಾಜ್ಯಮಟ್ಟದಲ್ಲಿ ಸೇವಾನಿರತ ಶಿಕ್ಷಕರಿಗೆ ನೀಡುತ್ತಿರುವ ತರಬೇತಿ ಕಾರ್ಯಕ್ರಮಗಳು ವ್ಯವಸ್ಥಿತವಾಗಿಲ್ಲದಿರುವುದರ ಜೊತೆಗೆ ಎಲ್ಲರಿಗೂ ಏಕರೂಪವಾಗಿ ನಡೆಯುತ್ತಿದ್ದು, ಶಿಕ್ಷಕರ ವಿಷಯ-ನಿರ್ದಿಷ್ಟ ಅಗತ್ಯಗಳನ್ನು ಗುರುತಿಸುವಂತಹ ಮಾಪನ ವಿಧಾನದ ಅವಶ್ಯಕತೆ ಇದೆ. ತರಬೇತಿಯಲ್ಲಿಯೇ ಒಂದು ವಿಧದಿಂದ ಮತ್ತೊಂದಕ್ಕೆ ಯಾವುದೇ ರೀತಿಯ ಸಂಬಂಧವೂ ಕಾಣುವುದಿಲ್ಲ. ಇದು ಶಿಕ್ಷಕರ ವಿಭಿನ್ನ ತರಹದ ಅನುಭವಗಳನ್ನು ಲೆಕ್ಕಕ್ಕೇ ತೆಗೆದುಕೊಳ್ಳುವುದಿಲ್ಲ. ಸಹಶಿಕ್ಷಕರೊಂದಿಗಿನ ಪರಸ್ಪರ ಒಡನಾಟದಿಂದ ಪಡೆಯುವ ಅನುಭವ ಮತ್ತು ಜ್ಞಾನ ಇತ್ಯಾದಿಗಳನ್ನು ಹಂಚಿಕೊಳ್ಳುವುದಕ್ಕೆ ಮತ್ತು ಆ ಮೂಲಕ ಕಲಿಯುವುದಕ್ಕೆ ಅವಕಾಶವನ್ನೇ ಕಲ್ಪಿಸಿಕೊಡುವುದಿಲ್ಲ. ಶಿಕ್ಷಕರಿಗೆ, ಅನುಪಾಲನೆ ಮತ್ತು ಶಾಲೆಯ ಸಂದರ್ಭದಲ್ಲೇ ಬೆಂಬಲ ನೀಡುವ ವಿಷಯದಲ್ಲಿ ಹೆಚ್ಚು ಗಮನವನ್ನು ಕೇಂದ್ರೀಕರಿಸಬೇಕಿದೆ. ಮೇಲಿನಿಂದ ಕೆಳಗಿನವರೆಗೂ ಹರಿಯುವ ತರಬೇತಿಯ ಅಸಮರ್ಪಕ ವಿನ್ಯಾಸದ ಜೊತೆಗೆ ಅಂತಿಮ ಕ್ಷಣದ ಯೋಜನೆ ಮತ್ತು ಕಾರ್ಯಸಿದ್ಧತೆಗಳು ಸೇರಿ ವಿನ್ಯಾಸ ಹಾಗೂ ವಿಷಯಜ್ಞಾನ ಕಳಪೆಯಾಗಿರುವುದನ್ನು ಸೂಚಿಸುತ್ತವೆ. ಅತ್ಯಂತ ಕಡಿಮೆ ಸಮಯಾವಕಾಶದ ಕಾರಣ ಸಂಪನ್ಮೂಲ ವ್ಯಕ್ತಿಗಳ ಸಮರ್ಪಕ ಆಯ್ಕೆ ನಡೆದಿರುವುದಿಲ್ಲ, ಸಿದ್ಧತೆ ಮಾಡಿಕೊಳ್ಳಲು ಅವರಿಗೆ ಸಮಯ ಸಾಕಷ್ಟಿರುವುದಿಲ್ಲ ಅಥವಾ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಅಗತ್ಯ ಸಂಪನ್ಮೂಲ ಸಾಮಗ್ರಿಯನ್ನು ಒಗ್ಗೂಡಿಸಿಕೊಳ್ಳಲು ಆಗಿರುವುದಿಲ್ಲ. ತರಬೇತಿ ನೀಡುವ ಸ್ಥಳ ಸೂಕ್ತವಾಗಿಲ್ಲದೆ ಇರುವುದು, ಕಲಿಕೆಗೆ ಸಮರ್ಪಕವಾದ ವಾತಾವರಣವನ್ನು ಒದಗಿಸಲು ಸೂಕ್ತ ಸೌಲಭ್ಯಗಳಿಲ್ಲದೆ ಇರುವುದು ವಿಫಲತೆಗೆ ಹೇಳಿ ಮಾಡಿಸಿದ ಸನ್ನಿವೇಶವೇ ಸರಿ.

ನೂರಾರು ಶಾಲೆಗಳಲ್ಲಿ ಶಿಕ್ಷಕರು ಒಂದಕ್ಕಿಂತಲೂ ಹೆಚ್ಚು ತರಗತಿಗಳನ್ನು ಹಾಗೂ ಬಹುಹಂತದ ತರಗತಿಕೋಣೆಗಳನ್ನು ನಿಭಾಯಿಸಬೇಕಾದ ಸನ್ನಿವೇಶವಿದೆ. ಇದು ಸಮಸ್ಯೆಯನ್ನು ಇನ್ನಷ್ಟು ಸಂಕೀರ್ಣಗೊಳಿಸುತ್ತದೆ. ಒಬ್ಬರೇ ಅಥವಾ ಇಬ್ಬರೇ

ಶಿಕ್ಷಕರಿರುವ ಶಾಲೆಗಳಲ್ಲಿ, ಶಿಕ್ಷಕರಿಗೆ ವಿಷಯದ ಕುರಿತಾಗಿ ಅಗತ್ಯ ಹಿನ್ನೆಲೆ ಅಥವಾ ಸಾಮರ್ಥ್ಯ ಇಲ್ಲದಿರುವಾಗಲೂ ಹಲವಾರು ವಿಷಯಗಳನ್ನು ಬೋಧಿಸಬೇಕಾದ ಒತ್ತಡ ಬಂದೊದಗುತ್ತದೆ. ಬಹಳಷ್ಟು ಶಿಕ್ಷಕರಲ್ಲಿ ಪ್ರೇರಣೆ ಮತ್ತು ಆತ್ಮಗೌರವದ ಮಟ್ಟ ತುಂಬಾ ಕೆಳಗಿದೆ. ಸಮಾಜದ ದೃಷ್ಟಿಯಲ್ಲಿ ಬೋಧನೆಯು ಆದ್ಯತೆಯ ವೃತ್ತಿಯಾಗಿಲ್ಲ. ಇವೆಲ್ಲವೂ ಅತ್ಯಂತ ಮುಖ್ಯವಾದ ಈ ಸಾಮಾಜಿಕ ಕ್ಷೇತ್ರವನ್ನು ನೀತಿನಿರೂಪಣೆಯ ವಿಷಯದಲ್ಲಿ ನಿರಂತರವಾಗಿ ಕಡೆಗಣಿಸುತ್ತಲೇ ಬಂದಿದ್ದರ ಪರಿಣಾಮವಾಗಿದೆ.

ಸೇವಾನಿರತ ಶಿಕ್ಷಕರ ವೃತ್ತಿ ಬೆಳವಣಿಗೆಯೆಡೆಗೆ ಈಗಿರುವ ಆಲೋಚನಾಕ್ರಮದ ಅನುಷ್ಠಾನದಲ್ಲಿ ವ್ಯಾಪಕ ಬದಲಾವಣೆಗಳ ಅಗತ್ಯವಿದೆ. ಈ ಬದಲಾವಣೆಗಳಲ್ಲಿ ಮುಖ್ಯವಾಗಿ ಆಗಬೇಕಾಗಿರುವುದು ಏನೆಂದರೆ, ಅಭಿವೃದ್ಧಿಯ ಹೊಣೆಗಾರಿಕೆಯನ್ನು ಶಿಕ್ಷಕರೇ ಸ್ವಇಚ್ಛೆಯಿಂದ ತೆಗೆದುಕೊಳ್ಳುವಂತೆ ಮಾಡುವುದು. ಸದ್ಯಕ್ಕೆ ರಾಜ್ಯಮಟ್ಟದಲ್ಲಿ ನಡೆಯುತ್ತಿರುವ ಕೇಂದ್ರೀಕೃತ ಪ್ರಯತ್ನಗಳ ಬದಲಾಗಿ ಜಿಲ್ಲಾಮಟ್ಟದಲ್ಲಿ ವಿಕೇಂದ್ರೀಕೃತ, ಸಹಯೋಗಾತ್ಮಕ ಕಾರ್ಯಪ್ರಯತ್ನಗಳು ಜಾರಿಯಲ್ಲಿ ಬರಬೇಕು. ಜೊತೆಗೆ, ಶಿಕ್ಷಕರ ತರಬೇತಿ ಅಗತ್ಯಗಳನ್ನು ಗುರುತಿಸುವುದರಿಂದ ಮೊದಲ್ಗೊಂಡು ಸಾಮರ್ಥ್ಯ ನಿರ್ಮಾಣ ಕಾರ್ಯಕ್ರಮಗಳ ವಿನ್ಯಾಸ ಹಾಗೂ ಅವುಗಳನ್ನು ಕಾರ್ಯಗತಗೊಳಿಸುವುದಕ್ಕೆ ಸಂಬಂಧಿಸಿದ ಪ್ರಕ್ರಿಯೆಗಳಲ್ಲಿ ಮುಂದಾಳತ್ವ ವಹಿಸುವಂತೆ ಡಯಟ್‌ಗಳನ್ನು ಸಬಲೀಕರಿಸಬೇಕು. ಬದಲಾದ ಈ ಕ್ರಮ, ವಿಧಾನಗಳ ಹಿನ್ನೆಲೆಯಲ್ಲಿ ಉತ್ತಮವಾಗಿ ವಿನ್ಯಾಸಗೊಳಿಸಿದ ಅಲ್ಪಕಾಲಿಕ ಮತ್ತು ದೀರ್ಘಕಾಲಿಕ ಕೋರ್ಸ್‌ಗಳಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ಅನುಕೂಲವಾಗುವಂತೆ ಶಿಕ್ಷಕರಿಗೆ ಸಾಕಷ್ಟು ಆಯ್ಕೆಗಳಿರಬೇಕು ಹಾಗೂ ತಮ್ಮ ವೃತ್ತಿ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳಲು ಅಗತ್ಯವಾದ ಕಲಿಕೆಯನ್ನು ಹಲವು ವರ್ಷಗಳ ಅವಧಿಯಲ್ಲಿ ಹಂತಹಂತವಾಗಿ ರೂಪಿಸಿಕೊಳ್ಳಲು ಸಾಧ್ಯವಾಗಬೇಕು. ಆಂತರಿಕವಾಗಿ ಇಲಾಖೆಯೊಳಗಿನಿಂದಲೇ ಉತ್ತಮ ಗುಣಮಟ್ಟದ ಶಿಕ್ಷಕರು ಹಾಗೂ ಶೈಕ್ಷಣಿಕ ಸಂಪನ್ಮೂಲ ವ್ಯಕ್ತಿಗಳ ನಡುವಿನಿಂದಲೇ ಸಂಪನ್ಮೂಲ ವ್ಯಕ್ತಿಗಳನ್ನು ಆಯ್ಕೆ ಮಾಡಲು ಮತ್ತು ಅವರನ್ನು ಅಭಿವೃದ್ಧಿ ಪಡಿಸಲು ಸಾಕಷ್ಟು ಗಮನವನ್ನು ನೀಡುವ ಅಗತ್ಯವಿದೆ.

ಸಂಪೂರ್ಣವಾಗಿ ವಿಭಿನ್ನವಾದ ಇಂತಹ ಅಭಿವೃದ್ಧಿಪರ ಆಲೋಚನಾ ಕ್ರಮವು ಕೇವಲ ವರ್ಷಕ್ಕೊಮ್ಮೆ ನಡೆಸುವ ಕಾರ್ಯಾಗಾರಗಳ ಮೇಲಲ್ಲದೇ ಟೆಲಿ-ಕಾನ್ಫರನ್ಸ್ (ದೂರವಾಣಿಯ ಮೂಲಕ ನಡೆಸುವ ಸಂಪರ್ಕ ಸಭೆಗಳು), ಶಿಕ್ಷಕ ಕಲಿಕಾ ವೇದಿಕೆಗಳು, ವಿಚಾರ ಸಂಕಿರಣಗಳು, ಅಧ್ಯಯನ ಪ್ರಬಂಧಗಳ ಪ್ರಸ್ತುತಿ, ಜ್ಞಾನಪರಿಧಿಯನ್ನು ಹೆಚ್ಚಿಸುವ ಕ್ಷೇತ್ರಭೇಟಿ, ಪ್ರಾಯೋಗಿಕ

ಕಾರ್ಯಯೋಜನೆಗಳು, ಆನ್‌ಲೈನ್ ಮೂಲಕ ಸಾಮಗ್ರಿಗಳ ವಿನಿಮಯ ಇತ್ಯಾದಿ ಶಿಕ್ಷಕರೊಡನೆ ತೊಡಗಿಸಿಕೊಳ್ಳುವ ಹಲವಾರು ವಿಧಾನಗಳನ್ನು ರೂಪಿಸಲೂ ಕೂಡ ನಿಶ್ಚಿತವಾಗಿಯೂ ಒತ್ತು ನೀಡಬೇಕಾಗುತ್ತದೆ. ಶಿಕ್ಷಕರು ಸಾಕಷ್ಟು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವ ಪ್ರದೇಶಗಳಲ್ಲಿಯೇ ಶಿಕ್ಷಕ ಕಲಿಕಾ ಕೇಂದ್ರ(ಟಿಎಲ್‌ಸಿ)ಗಳನ್ನು ಸ್ಥಾಪಿಸಬೇಕು. ಇದರಿಂದಾಗಿ ಅವರಿಗೆ ಶಾಲಾ ಅವಧಿಯ ನಂತರ ಮತ್ತು ವಾರಾಂತ್ಯಗಳಲ್ಲಿ ಕಲಿಕೆಯ ಅವಕಾಶಗಳು ದೊರೆಯುವಂತೆ ಮಾಡಲು ಸಾಧ್ಯವಾಗುತ್ತದೆ. ಶಾಲಾ ಅವಧಿಯಲ್ಲಿ ಅವರನ್ನು ತರಬೇತಿಗೆಂದು ಬೇರೆಡೆಗೆ ಕರೆದೊಯ್ಯಬೇಕಾದ ಅಗತ್ಯವೂ ಇರುವುದಿಲ್ಲ. ಅದರ ಜೊತೆಗೆ, ದೀರ್ಘಕಾಲೀನ ಕಾರ್ಯಾಗಾರಗಳನ್ನು ಚಳಿಗಾಲದ ಬಿಡುವು ಹಾಗೂ ಬೇಸಿಗೆ ರಜೆಯ ಅವಧಿಯಲ್ಲಿ ಹಮ್ಮಿಕೊಳ್ಳಬೇಕು ಮತ್ತು ಶಿಕ್ಷಕರಿಗೆ ತರಬೇತಿಯಲ್ಲಿ ಪಾಲ್ಗೊಂಡ ದಿನಗಳಿಗೆ ಅನುಗುಣವಾಗಿ ಸಂಬಳಸಹಿತ ರಜೆಯನ್ನು ನೀಡಬೇಕು. ಕೇರಳವು ಈಗಾಗಲೇ ಈ ಮಾದರಿಯನ್ನು ಪರಿಣಾಮಕಾರಿಯಾಗಿ ಜಾರಿಗೆ ತಂದಿದೆ.

ಇದಕ್ಕೆ ಸಂಬಂಧಿಸಿದಂತೆ ಈಗಿನ ವ್ಯವಸ್ಥೆಯಲ್ಲಿ ಅಗತ್ಯವಾಗಿ ಆಗಬೇಕಾದದ್ದೆಂದರೆ, ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಇಲಾಖೆ (ಡಿಎಸ್‌ಇಆರ್‌ಟಿ), ಡಯಟ್‌ಗಳು, ಬಿಆರ್‌ಸಿ ಮತ್ತು ಸಿಆರ್‌ಸಿಗಳೂ ಸೇರಿದಂತೆ ರಾಜ್ಯ ಮಟ್ಟದಿಂದ ಕ್ಲಸ್ಟರ್ ಮಟ್ಟದವರೆಗೂ ಮೂಲಸೌಕರ್ಯವನ್ನು ಒದಗಿಸುವುದರ ಜೊತೆಗೆ ಆಸಕ್ತ, ಬದ್ಧ, ಸಮರ್ಥ ಬೋಧಕವರ್ಗವನ್ನು ನಿಗದಿತ ಸಂಖ್ಯೆಯಲ್ಲಿ ನೇಮಕ ಮಾಡುವುದರ ಮೂಲಕ ರಾಜ್ಯದಲ್ಲಿನ ಇಡೀ ಶೈಕ್ಷಣಿಕ ವ್ಯವಸ್ಥೆಯ ಸಾಂಸ್ಥಿಕ ರಚನೆಯನ್ನು ಪುನಃಶ್ಚೇತನಗೊಳಿಸುವುದು. ಅತ್ಯಂತ ಪ್ರಮುಖವಾದ ಈ ಪರಿವರ್ತನಾ ಪ್ರಯತ್ನದಲ್ಲಿ ಪೂರಕವಾಗುವಂತೆ ಶಿಕ್ಷಕರ ಸಂಘಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಶಿಕ್ಷಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ವೃತ್ತಿಪರವಾಗಿಸಲು ಅವರನ್ನು ಅರ್ಥಪೂರ್ಣ ಚರ್ಚೆಗಳಲ್ಲಿ ತೊಡಗಿಸಿಕೊಳ್ಳುವುದು ಅಗತ್ಯ. ಇದರ ಪರಿಣಾಮವಾಗಿ ತಮ್ಮ ತರಗತಿಕೋಣೆಗಳಲ್ಲಿ ಅವರು ಆಚರಣೆಯಲ್ಲಿ ತರುವ ಬದಲಾವಣೆಗಳು ಮಕ್ಕಳ ಕಲಿಕೆಯ ಮಟ್ಟವನ್ನು ಎತ್ತರಿಸುತ್ತವೆ, ಸಾರ್ವಜನಿಕ ಶಾಲಾವ್ಯವಸ್ಥೆಯನ್ನು ಕುರಿತಾದ ಪೋಷಕರ ಮತ್ತು ಸಮುದಾಯದ ವಿಶ್ವಾಸವನ್ನು ಪುನಃಸ್ಥಾಪಿಸುತ್ತವೆ. ಇಂತಹ ಗಣನೀಯ ಪ್ರಮಾಣದ ಸುಧಾರಣೆಯೊಂದೇ ದೀರ್ಘಕಾಲಾವಧಿಯಲ್ಲಿ ಸರ್ಕಾರಿ ಶಾಲಾವ್ಯವಸ್ಥೆಯ ಬ್ರ್ಯಾಂಡ್ ಮೌಲ್ಯವು ಸವಕಳಿಯಾಗದಂತೆ ತಡೆಗಟ್ಟಬಹುದು.



ಬಿ ಫಸ್ಟ್, 31–03–2016

# ಶಿಕ್ಷಕರ ಶಿಕ್ಷಣ ಕುರಿತಾದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (ಎನ್‌ಸಿಎಫ್‌ಟಿಇ)

## 2009ರ ಪ್ರಕಾರ 'ಶಿಕ್ಷಕ'ರ ಕುರಿತಾದ ನೋಟ

ಎನ್‌ಸಿಎಫ್‌ಟಿಇಯು ಶಿಕ್ಷಕರ ಕುರಿತಾದ ನೋಟವನ್ನು ಈ ಕೆಳಗಿನಂತೆ ಪ್ರಸ್ತುತಪಡಿಸಿದೆ.

- ಶಿಕ್ಷಕರು ಪರ್ಯಾಲೋಚಿಸುವವರಾಗಿದ್ದು ತಮ್ಮ ನಂಬಿಕೆ, ಭಾವನೆ, ಆಶೋತ್ತರ ಹಾಗೂ ಕಲ್ಪನೆಗಳನ್ನು ಅರಿತವರಾಗಿರುತ್ತಾರೆ. ಈ ಕಲ್ಪನೆಗಳು ಆಚರಣೆಯನ್ನು ಹೇಗೆ ಪ್ರಭಾವಿಸುತ್ತವೆ ಎಂಬುದನ್ನು ತಿಳಿದವರಾಗಿರುತ್ತಾರೆ. ಆ ಕಲ್ಪನೆ ಮತ್ತು ನಂಬಿಕೆಗಳಲ್ಲಾದ ಪಲ್ಲಟಗಳ ಅರಿವುಳ್ಳವರಾಗಿರುತ್ತಾರೆ. ಪಠ್ಯಕ್ರಮ, ಪಠ್ಯಪುಸ್ತಕಗಳು, ಪಾತ್ರ ಇತ್ಯಾದಿ ಹಲವಾರು ವಿಷಯಗಳನ್ನು ಕುರಿತಾದ ತಮ್ಮ ನಂಬಿಕೆ ಹಾಗೂ ಚಿಂತನೆಗಳನ್ನು ವಿಮರ್ಶಾತ್ಮಕವಾಗಿ ಪರಿಶೋಧಿಸಲು ಹಾಗೂ ವಿಶ್ಲೇಷಿಸಲು ಬೇಕಾದ ಮುಕ್ತ ಮನಸ್ಸನ್ನು ಹೊಂದಿರುತ್ತಾರೆ.
- ಬೋಧನೆ – ಕಲಿಕೆಯ ಸನ್ನಿವೇಶಗಳಲ್ಲಿ ಉತ್ತೇಜನ, ಬೆಂಬಲ ನೀಡುವವರು ಹಾಗೂ ಮಾನವೀಯ ಅಂತಃಕರಣವನ್ನುಳ್ಳ ಸುಗಮಗಾರರಾಗಿರುತ್ತಾರೆ. ಕಲಿಯುವವರಿಗೆ ತಮ್ಮ ಪ್ರತಿಭೆಯನ್ನು ಅನ್ವೇಷಿಸಲು, ತಮ್ಮ ದೈಹಿಕ ಹಾಗೂ ಬೌದ್ಧಿಕ ಸಾಮರ್ಥ್ಯವನ್ನು ಸಂಪೂರ್ಣವಾಗಿ ಅರಿಯಲು ಸಾಧ್ಯವಾಗುವಂತೆ ಮಾಡುತ್ತಾರೆ.
- ವಿದ್ಯಾರ್ಥಿಗಳನ್ನು ಕುರಿತು ಕಾಳಜಿ ಹೊಂದಿರುತ್ತಾರೆ ಹಾಗೂ ಅವರೊಂದಿಗೆ ಇರಲು ಇಷ್ಟಪಡುತ್ತಾರೆ. ಅವರನ್ನು ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸಂದರ್ಭಗಳೊಳಗೆ ಅರ್ಥಮಾಡಿಕೊಳ್ಳುತ್ತಾರೆ.
- ಕಲಿಕೆಯನ್ನು ವೈಯಕ್ತಿಕ ಅನುಭವದಿಂದ ಅರ್ಥವನ್ನು ಶೋಧಿಸುವ ಕ್ರಿಯೆಯೆಂದು ನೋಡುತ್ತಾರೆ. ಕಲಿಕೆಯು ಉಂಟಾಗುವ ರೀತಿಯನ್ನು ಅರ್ಥಮಾಡಿಕೊಳ್ಳುತ್ತಾರೆ. ಕಲಿಕೆಗೆ ಅನುಕೂಲಕರವಾದ ಸ್ಥಿತಿಗತಿಗಳ

ನಿರ್ಮಾಣವನ್ನು ಸಾಧ್ಯವಾಗಿಸುತ್ತಾರೆ. ಕಲಿಯುವವರಲ್ಲಿ ಕಲಿಕೆಗೆ ಸಂಬಂಧಿಸಿದಂತೆ ಇರುವ ಬಗೆ, ಗತಿ ಹಾಗೂ ಶೈಲಿಗಳಲ್ಲಿನ ವ್ಯತ್ಯಾಸಗಳನ್ನು ಗುರುತಿಸಬಲ್ಲವರಾಗಿರುತ್ತಾರೆ.

- ಜ್ಞಾನ ಸೃಷ್ಟಿಯನ್ನು ಪರ್ಯಾಲೋಚಕ ಕಲಿಕೆಯ ನಿರಂತರ ವಿಕಸನದ ಪ್ರಕ್ರಿಯೆಯೆಂದು ನೋಡುತ್ತಾರೆ. ಅದನ್ನು ಪಠ್ಯಪುಸ್ತಕಗಳಲ್ಲಿ ಹುದುಗಿರುವ ಬಾಹ್ಯ ಮೂಲದ ವಾಸ್ತವವಾಗಿ ಅಲ್ಲ, ಆದರೆ ಬೋಧನೆ-ಕಲಿಕೆ ಮತ್ತು ವೈಯಕ್ತಿಕ ಅನುಭವಗಳ ಕೊಡುಕೊಳ್ಳುವಿಕೆಯ ಸಂದರ್ಭದಲ್ಲಿ ನಿರ್ಮಿತವಾದದ್ದೆಂದು ಭಾವಿಸುತ್ತಾರೆ.
- ಸಮಾಜದ ಕುರಿತು ಜವಾಬ್ದಾರಿಯನ್ನು ಹೊಂದಿರುತ್ತಾರೆ ಹಾಗೂ ಸಾಮಾಜಿಕ ಪುನರ್‌ರಚನೆಯನ್ನು ತರುವ ನಿಟ್ಟಿನಲ್ಲಿ ಉತ್ಸಾಹದಿಂದ ಕೆಲಸ ಮಾಡುತ್ತಾರೆ.
- ಪರಿಸರ ಸಂರಕ್ಷಣೆ, ತನ್ನೊಳಗೆ ತಾನು ಮತ್ತು ನೈಸರ್ಗಿಕ, ಸಾಮಾಜಿಕ ಪರಿಸರದೊಡನೆ ಸೌಹಾರ್ದತೆಯಿಂದ ಬದುಕುವುದಕ್ಕೆ ಒತ್ತು ನೀಡುತ್ತಾರೆ. ಶಾಂತಿ, ಪ್ರಜಾತಾಂತ್ರಿಕ ಜೀವನ ಮಾರ್ಗಗಳು, ಸಂವಿಧಾನದಲ್ಲಿ ಉಲ್ಲೇಖಿಸಿರುವಂತೆ ಸಮಾನತೆ, ನ್ಯಾಯ, ಸ್ವಾತಂತ್ರ್ಯ, ಭ್ರಾತೃತ್ವ ಹಾಗೂ ಧರ್ಮನಿರಪೇಕ್ಷತೆಯ ಮೌಲ್ಯಗಳನ್ನು ಪ್ರೋತ್ಸಾಹಿಸುತ್ತಾರೆ. ಬೆಲೆಕೊಡುತ್ತಾರೆ.
- ತಮ್ಮ ವಿಷಯವನ್ನು ಆಳವಾಗಿ ಪರಿಶೋಧಿಸುವ ಉತ್ಕಟತೆಯನ್ನು ಹೊಂದಿರುವ ವೃತ್ತಿಪರರಾಗಿರುತ್ತಾರೆ. ಪರಿಕಲ್ಪನೆಗಳೊಳಗಿನ ಹಾಗೂ ಎಲ್ಲ ವಿಷಯಗಳ ನಡುವಿನ ಪರಸ್ಪರ ಸಂಬಂಧಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಅವುಗಳನ್ನು ತರಗತಿಕೋಣೆಗಳಲ್ಲಿ ಕಲಿಯುವವರ ತನಕ ಕೊಂಡೊಯ್ಯಲು ಹೊಸ ವಿಧಾನಗಳನ್ನು, ಸಂಪನ್ಮೂಲಗಳನ್ನು ಕಂಡುಹಿಡಿಯುತ್ತಾರೆ.

■

31-03-2016



**4ನೇ ಜನವರಿ 2013** – ಡಾ. ಆರ್ಥರ್ ಐಸನ್‌ಕ್ರಾಫ್ಟ್ ಬೋಸ್ಟನ್‌ನ ಯೂನಿವರ್ಸಿಟಿ ಆಫ್ ಮ್ಯಾಸಚುಸೆಟ್ಸ್‌ನ ಸೆಂಟರ್ ಆಫ್ ಸೈನ್ಸ್ ಅಂಡ್ ಮ್ಯಾಥಮ್ಯಾಟಿಕ್ಸ್ ಇನ್ ಕಾಂಟೆಕ್ಸ್ಟ್(COSMIC)ನ ನಿರ್ದೇಶಕರು ಮತ್ತು ವಿಜ್ಞಾನ ಶಿಕ್ಷಣದ ಗೌರವ ಪ್ರಾಧ್ಯಾಪಕರು. ಅವರು ಮಂಡ್ಯದ ಸರ್ಕಾರಿ ಶಾಲೆಯೊಂದರಲ್ಲಿ ಆರನೇ ತರಗತಿ ಮಕ್ಕಳನ್ನು ವಿಜ್ಞಾನ ಪಾಠದಲ್ಲಿ ತೊಡಗಿಸಿದ ಕ್ಷಣ. ಈ ಹಿಂದೆ ಸುದೀರ್ಘಕಾಲ ಪ್ರೌಢಶಾಲೆಯ ಶಿಕ್ಷಕರಾಗಿದ್ದ ಇವರು ನಮ್ಮ ವಿಶ್ವವಿದ್ಯಾಲಯಗಳ ಬೋಧಕವರ್ಗಕ್ಕೆ ಮಾದರಿಯಾಗಿದ್ದಾರೆ.

ಶಿಕ್ಷಣದಲ್ಲಿ ಅಗ್ರಪಂಕ್ತಿಯಲ್ಲಿರುವ ದೇಶಗಳಲ್ಲಿ ಶಿಕ್ಷಕರಾಗಬಯಸುವವರು ಆಯ್ಕೆಯಾಗಲು ತೀವ್ರ ಸ್ಪರ್ಧೆಯನ್ನು ಹಾದು ಬರಬೇಕಾಗುತ್ತದೆ. ಅದರಲ್ಲಿ ಯಶಸ್ವಿಯಾಗುವವರು ಶೇ. 10ಕ್ಕಿಂತಲೂ ಕಡಿಮೆ ಜನ. ಆದರೆ, ಭಾರತದಲ್ಲಿ ಪಠ್ಯಕ್ರಮವನ್ನು ಪರಿಷ್ಕರಿಸಿದ ನಂತರವೂ ವ್ಯವಸ್ಥಿತ ರೀತಿಯಲ್ಲಿ ಅನುಷ್ಠಾನ ಕ್ರಮವನ್ನು ಕೈಗೊಳ್ಳದಿರುವುದರಿಂದ ಶಿಕ್ಷಕ ಶಿಕ್ಷಕರ ಸ್ವಾಯತ್ತತೆಗೆ ಸಾಕಷ್ಟು ಪೆಟ್ಟು ಬಿದ್ದಿದೆ.

# ಶಿಕ್ಷಕ ಸಿದ್ಧತೆಯಲ್ಲಿನ ಸುಧಾರಣೆಗಳು – ನಾವು ಹಿಂದೆ ಬಿದ್ದಿದ್ದೇವೆಯೇ?

ಈ ಲೇಖನವು ಕರ್ನಾಟಕದಲ್ಲಿ 2014ರಲ್ಲಿ ಸೇವಾಪೂರ್ವ ಶಿಕ್ಷಕ ಶಿಕ್ಷಣದಲ್ಲಿ ಸುಧಾರಣೆಗಳನ್ನು ತಂದ ನಂತರದ ಸನ್ನಿವೇಶವನ್ನು ಪರಾಮರ್ಶಿಸುವ ಪ್ರಯತ್ನ ಮಾಡುತ್ತದೆ.

## 2014ರ ಸೇವಾಪೂರ್ವ ಶಿಕ್ಷಕ-ಶಿಕ್ಷಣ ಕಾರ್ಯಕ್ರಮದಲ್ಲಿನ ಸುಧಾರಣೆಗಳ ಆಶಯ

2014ರಲ್ಲಿ ಸೇವಾಪೂರ್ವ ಶಿಕ್ಷಕ ಸಿದ್ಧತೆ ಕಾರ್ಯಕ್ರಮಗಳಿಗೆ ಸಂಬಂಧಪಟ್ಟ ರಾಷ್ಟ್ರೀಯ ಸಂಸ್ಥೆಯಾದ, ಶಿಕ್ಷಕ ಶಿಕ್ಷಣವನ್ನು ಕುರಿತಾದ ರಾಷ್ಟ್ರೀಯ ಮಂಡಳಿ(ಎನ್‌ಸಿಟಿಇ)ಯು ತುಂಬಾ ಅಗತ್ಯವಾಗಿದ್ದ ಸುಧಾರಣೆಗಳನ್ನು ತಂದಿದ್ದರಿಂದಾಗಿ, ಈ ಕಾರ್ಯಕ್ರಮಗಳು ಸಾಕಷ್ಟು ಚಾಲನೆಯನ್ನು ಪಡೆದವು. ಈ ಮೂಲಕ ತರಲಾದ ಕೆಲವು ಮುಖ್ಯ ಬದಲಾವಣೆಗಳು ಹೀಗಿವೆ: ಬಿಎಡ್ ಮತ್ತು ಎಮ್‌ಎಡ್‌ಗಳಂತಹ ಕಾರ್ಯಕ್ರಮಗಳ ಅವಧಿಯನ್ನು ಒಂದು ವರ್ಷದಿಂದ ಎರಡು ವರ್ಷಕ್ಕೆ ಹೆಚ್ಚಿಸಲಾಗಿದೆ. ನಾಲ್ಕು ವರ್ಷ ಅವಧಿಯ ಸಂಯೋಜಿತ ಬಿಎಸ್ಸಿ.ಎಡ್ ಹಾಗೂ ಬಿಎ.ಎಡ್ ಕಾರ್ಯಕ್ರಮಗಳನ್ನು ಆರಂಭಿಸಲಾಗಿದೆ. ಅಗತ್ಯವಿರುವ ವೃತ್ತಿಪರ ಕೋರ್ಸ್‌ಗಳ ಮೂಲಕ ತಮ್ಮ ಕೌಶಲ, ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ತರಬೇತಿ ಹೊಂದಿಲ್ಲದ ಸಾವಿರಾರು ಶಿಕ್ಷಕರಿಗೆ ಅನುಕೂಲವನ್ನು

ಕಲ್ಪಿಸಿಕೊಡಲಾಗಿದೆ ಹಾಗೂ ದೂರಶಿಕ್ಷಣ ವಿಧಾನದ ಮೂಲಕ ಪಡೆಯಲಾಗುತ್ತಿದ್ದ ಎಮ್‌ಎಡ್ ಕೋರ್ಸ್‌ನ್ನು ತೆಗೆದುಹಾಕಲಾಗಿದೆ.

ಶಿಕ್ಷಕ ಶಿಕ್ಷಣವನ್ನು ಕುರಿತಾದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು, 2009ರ ಆಶೋತ್ತರಗಳನ್ನು ಸಾಕಾರಗೊಳಿಸಲು ತರಲಾದ ಈ ದೂರಗಾಮಿ ಸುಧಾರಣೆಗಳಿಂದ ಬಹಳಷ್ಟನ್ನು ನಿರೀಕ್ಷಿಸಲಾಗಿತ್ತು. ಇದು ಉತ್ತಮ ಗುಣಮಟ್ಟದ ಶಿಕ್ಷಕರ ಹಾಗೂ ಶಿಕ್ಷಕ ಶಿಕ್ಷಕರ ಸಿದ್ಧತೆಗೆ ಎಡೆಮಾಡಿಕೊಡುತ್ತದೆ ಎಂಬ ನಿರೀಕ್ಷೆ ಇತ್ತು. ಮುಂದೆ ಶಿಕ್ಷಕರಾಗಲಿರುವವರಿಗೆ ಹಾಗೂ ಶಿಕ್ಷಕ ಶಿಕ್ಷಕರಾಗುವವರಿಗೆ ತಮ್ಮ ವೃತ್ತಿಪರ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು, ಬೋಧನೆಗೆ ಸಂಬಂಧಿಸಿದಂತೆ ಕೌಶಲವನ್ನು ವೃದ್ಧಿಸಿಕೊಳ್ಳಲು, ಶಿಕ್ಷಣದಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಳ್ಳಲು ಹಾಗೂ ಶೈಕ್ಷಣಿಕ ಸಂಗತಿಗಳ ಯೋಜನೆ ಮತ್ತು ನಿರ್ವಹಣೆಗಳನ್ನು ಅಭಿವೃದ್ಧಿಪಡಿಸಿಕೊಳ್ಳಲು ಅನುಕೂಲವಾಗುವ ಹಾಗೆ ಸೂಕ್ತ ಅವಕಾಶವನ್ನು ಒದಗಿಸಲು ಕಾರ್ಯಕ್ರಮದ ಅವಧಿಯನ್ನು ಹೆಚ್ಚಿಸಲಾಗಿತ್ತು.

## ಶಿಕ್ಷಕ ಶಿಕ್ಷಣ ಸಂಸ್ಥೆಗಳಲ್ಲಿನ ಪ್ರಸ್ತುತ ಸನ್ನಿವೇಶ

ಇತ್ತೀಚೆಗೆ, ಬೆಂಗಳೂರು ಮತ್ತು ಅದರ ಸುತ್ತಲೂ ಇರುವ ಕೆಲವು ಖ್ಯಾತ ಖಾಸಗಿ ಶಿಕ್ಷಕ ಶಿಕ್ಷಣ ಸಂಸ್ಥೆಗಳಿಗೆ ಸೇರಿದ ಅನುಭವಿ ಶಿಕ್ಷಕ ಶಿಕ್ಷಕರ ಚಿಕ್ಕ ಗುಂಪೊಂದರ ಜೊತೆ ಅನೌಪಚಾರಿಕ ಚರ್ಚೆಯಲ್ಲಿ ತೊಡಗಲು ನನಗೆ ಅವಕಾಶ ಒದಗಿತ್ತು. ಎರಡು ವರ್ಷಗಳ ಅವಧಿಯ ಪುನರುಜ್ಜೀವಿತ ಬಿಎಡ್ ಕಾರ್ಯಕ್ರಮವು ಎಷ್ಟು ಕೆಟ್ಟದಾಗಿ ಅನುಷ್ಠಾನಗೊಂಡಿದೆ ಎಂಬುದರ ತ್ವರಿತ ನೋಟವೊಂದು ಈ ಮಾತುಕತೆಯಲ್ಲಿ ನನಗೆ ದೊರಕಿತು. ನಾನು ಚರ್ಚೆಯಲ್ಲಿ ತೊಡಗಿದ್ದ ಶಿಕ್ಷಕ ಶಿಕ್ಷಕರು ಕೇವಲ ಆತ್ಮಸಾಕ್ಷಿಗನುಗುಣವಾಗಿ ಕೆಲಸ ಮಾಡುವವರಷ್ಟೇ ಆಗಿರಲಿಲ್ಲ, ಅವರ ಉದ್ದೇಶವೂ ಘನವಾಗಿತ್ತು. ಆದ್ದರಿಂದ ಅವರು ಹೇಳಿದ್ದು ಹೆಚ್ಚು ಮುಖ್ಯವಾಗುತ್ತದೆ. 2014ರಲ್ಲಿ ತರಲಾದ ಬದಲಾವಣೆಗಳಿಗೂ ಮೊದಲು ಕೆಲ ವರ್ಷಗಳಷ್ಟು ಹಿಂದೆಯೇ ಪರ್ಯಾಯ ಬಿಎಡ್ ಪಠ್ಯಕ್ರಮವೊಂದನ್ನು ಪ್ರಾಯೋಗಿಕ ರೂಪದಲ್ಲಿ ತರಲಾಗಿತ್ತು. ಅದರ ಅನುಷ್ಠಾನದ ಅನುಭವವು ಈ ಗುಂಪಿನ ಕೆಲವರಿಗಿತ್ತು.

ಅವರು ಉಲ್ಲೇಖಿಸಿದವುಗಳಲ್ಲಿ ಕೆಲವು ಸಂಗತಿಗಳು ಬಹಳ ಚಿಂತೆಗೆ ಈಡು ಮಾಡುತ್ತವೆ.

ಬಿಎಡ್ ಕಾರ್ಯಕ್ರಮಕ್ಕೆ ದಾಖಲಾತಿ ಪಡೆಯಲು ಪದವಿ ಮಟ್ಟದಲ್ಲಿ ಕನಿಷ್ಠ ಶೇ. 50 ಅಂಕಗಳನ್ನು ಪಡೆದಿರಬೇಕು ಎನ್ನುವ ಅರ್ಹತಾ ಮಾನದಂಡವು ಭಾವಿ

ವಿದ್ಯಾರ್ಥಿಗಳನ್ನು ಆಕರ್ಷಿಸುವುದಿಲ್ಲ ಎಂಬ ಭಯದಿಂದ, ಹಲವಾರು ಸಂಸ್ಥೆಗಳು ಅದನ್ನು ಅನುಕೂಲಕರವಾಗಿ ಗಾಳಿಗೆ ತೂರಿಬಿಟ್ಟಿವೆ. ಸಾಕಷ್ಟು ಹೆಸರುವಾಸಿಯಾದ ಸಿಇಟಿಯನ್ನಂತೂ ಈಗ ತಪ್ಪಿಸಿಕೊಂಡಾಗಿದೆ.

ವಿಶ್ವವಿದ್ಯಾಲಯದ ಶಿಕ್ಷಣ ವಿಭಾಗಗಳಲ್ಲಿಯೂ ಕೂಡ ಸಾಕಷ್ಟು ಸಂಖ್ಯೆಯ ಶಿಕ್ಷಕ ಶಿಕ್ಷಕ ಹುದ್ದೆಗಳು ವರ್ಷಗಳಿಂದ ಖಾಲಿ ಬಿದ್ದಿವೆ ಹಾಗೂ ಈಗ ಸದ್ಯಕ್ಕೆ ಪಾಠ ಮಾಡುತ್ತಿರುವವರೂ ಅಲ್ಪಾವಧಿ ಅತಿಥಿ ಬೋಧಕರಾಗಿದ್ದು ಅವರು ಹೆಚ್ಚಿನ ವೇಳೆ ಅನುಮಾನಾಸ್ಪದ ಆಯ್ಕೆ ವಿಧಾನಗಳ ಮೂಲಕ ಪ್ರವೇಶ ಪಡೆದಿರುತ್ತಾರೆ.

ವಾಣಿಜ್ಯದಂತಹ ಹೊಸ ವಿಷಯಗಳಿಗೆ ಸಂಬಂಧಿಸಿದಂತೆ ಅರ್ಹ ಶಿಕ್ಷಕ ಶಿಕ್ಷಕರ ಕೊರತೆಯಿರುವುದರಿಂದ ಬೋಧಕವರ್ಗದಲ್ಲಿಯೇ ಯಾರಾದರೊಬ್ಬರು ಅಷ್ಟೇನೂ ವಿಷಯದ ಹಿನ್ನೆಲೆ ಇಲ್ಲದವರು ತರಗತಿಕೋಣೆಯಲ್ಲಿ ಒಂದಿಷ್ಟು ಸ್ಲೈಡ್‌ಗಳನ್ನು ತೋರಿಸುವ, ಟಿಪ್ಪಣಿಗಳನ್ನು ಕೊಡುವ ಕೆಲಸ ಮಾಡಬೇಕಾಗುತ್ತದೆ. ಉಳಿದುದನ್ನು ಸಂಬಂಧಿಸಿದ ವಿದ್ಯಾರ್ಥಿಗಳು ತಾವೇ ಮಾಡಿಕೊಳ್ಳಬೇಕಾಗುತ್ತದೆ.

ಪರಿಷ್ಕೃತ ಪಠ್ಯಕ್ರಮವನ್ನು ಕಾರ್ಯಗತಗೊಳಿಸುವ ವಿಧಾನದಲ್ಲೇನೂ ಬದಲಾವಣೆಯಾಗಲಿಲ್ಲ. ವಿದ್ಯಾರ್ಥಿ–ಶಿಕ್ಷಕರು ಜ್ಞಾನವನ್ನು ತಾವೇ ಶೋಧಿಸಿ, ಪಡೆದುಕೊಳ್ಳುವುದನ್ನು ಉತ್ತೇಜಿಸುವುದರ ಬದಲಾಗಿ, ಉಪನ್ಯಾಸ ಮಾದರಿಯ ಅದೇ ಹಳೆಯ ವಿಧಾನವನ್ನು ಅನುಸರಿಸಲಾಗುತ್ತಿದೆ.

ಪಠ್ಯಕ್ರಮ ಬದಲಾವಣೆಯ ನಂತರದಲ್ಲಿ ಶಿಕ್ಷಕ ಶಿಕ್ಷಕರಿಗಾಗಿ ಅವರ ಸಂಸ್ಥೆಗಳಾಗಲಿ ಅಥವಾ ವಿಶ್ವವಿದ್ಯಾಲಯವಾಗಲಿ ಸಾಮರ್ಥ್ಯಾಭಿವೃದ್ಧಿ ಕಾರ್ಯಾಗಾರಗಳನ್ನು ಆಯೋಜಿಸಲೇ ಇಲ್ಲ. ಅವರು ಬೇರೆ ಶಿಕ್ಷಕ ಶಿಕ್ಷಕರೊಡನೆ ಹೊಸ ಸಿಲೆಬಸ್ ಅನ್ನು ಕಾರ್ಯಗತಗೊಳಿಸುವ ಕುರಿತು ಅರ್ಥಪೂರ್ಣ ಚರ್ಚೆಯಲ್ಲಿ ತೊಡಗಲೂ ಇಲ್ಲ. ಶಿಕ್ಷಕ ಶಿಕ್ಷಕರಲ್ಲಿ ಹೆಚ್ಚಿನವರು ತಾವೇನು ಮಾಡುತ್ತಿದ್ದಾರೋ ಅದರಲ್ಲಿಯೇ ತೃಪ್ತರಾಗಿರುವುದು ಒಳ್ಳೆಯ ಸೂಚನೆಯಲ್ಲ.

ಸಂಸ್ಥೆಗಳು ತಮ್ಮಲ್ಲಿನ ವಿದ್ಯಾರ್ಥಿಗಳನ್ನು ಅವರವರ ವೃತ್ತಿಯಲ್ಲಿ ಚೆನ್ನಾಗಿ ಕಾರ್ಯನಿರ್ವಹಿಸಲು ಬೇಕಾದಂತೆ ತಯಾರು ಮಾಡುವ ಬದಲಾಗಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿಸಬೇಕೆಂಬುದರ ಕುರಿತು ಹೆಚ್ಚು ಕಾಳಜಿ ಹೊಂದಿವೆ. ಯಾವುದೇ ಶಿಕ್ಷಕ ಶಿಕ್ಷಕರು ನವೀನವಾದುದೇನನ್ನಾದರೂ ತರುವ ಉದ್ದೇಶದಿಂದ ಯಾವುದೇ ಅಸಾಂಪ್ರದಾಯಿಕ ಪ್ರಯತ್ನವನ್ನು ಮಾಡಿದರೂ ಅದನ್ನು ಅನಗತ್ಯವೆಂದು ಪರಿಗಣಿಸಿ ಹತ್ತಿಕ್ಕಲಾಗುತ್ತದೆ.

ಬೋಧನಾ ಅಭ್ಯಾಸದ ವಿಸ್ತೃತ ಭಾಗಗಳನ್ನು (ಮೊದಲನೆಯ ವರ್ಷ ನಾಲ್ಕು ವಾರಗಳು ಮತ್ತು ಎರಡನೆಯ ವರ್ಷ ಹದಿನಾರು ವಾರಗಳು) ಇನ್ನಷ್ಟು ಸಮೃದ್ಧಗೊಳಿಸುವ ದೊಡ್ಡದೊಂದು ಅವಕಾಶವನ್ನು ಕಳೆದುಕೊಂಡಾಗಿದೆ.

ಇದನ್ನು ಉತ್ತಮಗೊಳಿಸುವುದು ಹೇಗೆ ಎನ್ನುವುದರ ಕುರಿತು ಚಿಂತನೆಗಳು ನಡೆಯಬೇಕಿದೆ.

ರಾಜ್ಯದ ಉನ್ನತ ಶಿಕ್ಷಣ ಇಲಾಖೆಯಾಗಲಿ ವಿಶ್ವವಿದ್ಯಾಲಯವಾಗಲಿ ಪರಿಷ್ಕೃತ ಪಠ್ಯಕ್ರಮದ ಅಗತ್ಯ ಸ್ವರೂಪಗಳನ್ನು ಕುರಿತಂತೆ ಒಂದು ಸಾಮಾನ್ಯ ತಿಳುವಳಿಕೆಯನ್ನು ರೂಪಿಸಬೇಕಿದೆ. ಎಲ್ಲಾ ಸರ್ಕಾರಿ ವಿಶ್ವವಿದ್ಯಾಲಯ/ಸಂಸ್ಥೆಗಳನ್ನು ಅವು ಎದುರಿಸುತ್ತಿರುವ ಪ್ರಾಯೋಗಿಕ ಸವಾಲುಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ಒಂದೆಡೆ ಸೇರಿಸುವ ಉಪಕ್ರಮಕ್ಕೆ ಮುಂದಾಗಬೇಕಿದೆ.

ಡಿಎಡ್ ಸಂಸ್ಥೆಗಳಲ್ಲಿಯೂ ಸನ್ನಿವೇಶವು ಸಾಕಷ್ಟು ನಿರಾಶಾದಾಯಕವಾಗಿಯೇ ಇದೆ. ಅಭ್ಯರ್ಥಿಗಳೇ ಇಲ್ಲದೆ ಅವುಗಳಲ್ಲಿ ಬಹಳಷ್ಟನ್ನು ಮುಚ್ಚಲಾಗಿದೆ. ಹಿರಿಯ ಪ್ರಾಥಮಿಕ ತರಗತಿಗಳಲ್ಲಿ ಪಾಠ ಮಾಡಲು ಪದವಿಯ ಜೊತೆಗೆ ಡಿಎಡ್ ಹೊಂದಿರಬೇಕೆಂಬ ಕನಿಷ್ಠ ಮಾನದಂಡವನ್ನು ರಾಜ್ಯ ಸರ್ಕಾರವು ಕಡ್ಡಾಯಗೊಳಿಸಿದೆ. ಆದರೆ, ಎಲ್ಲಾ ತರಹದ ಶಾಲೆಗಳಲ್ಲಿಯೂ ಸಿಬಿಎಸ್‌ಸಿ ಮಂಡಳಿಯವರು ಅನುಸರಿಸುವ ಸಾಮಾನ್ಯ ಪಠ್ಯಕ್ರಮವನ್ನು ಆರಂಭಿಸುವುದಕ್ಕೆ ಶಿಕ್ಷಕರು ಬಿಎಡ್‌ನಂತಹ ಉನ್ನತ ಶೈಕ್ಷಣಿಕ ಅರ್ಹತೆಯನ್ನು ಪಡೆದುಕೊಳ್ಳುವ ಅಗತ್ಯವಿದೆ. ಆದ್ದರಿಂದ ಡಿಎಡ್ ಬೋಧಕ ವರ್ಗದ ಪಾತ್ರವನ್ನು ವಿಶೇಷವಾಗಿ ಡಯಟ್‌ಗಳಲ್ಲಿ ಪುನರಾವಲೋಕಿಸುವ ಅಗತ್ಯವಿದೆ.

## ದೀರ್ಘಕಾಲೀನ ಪರಿಣಾಮ

ಈ ಸಾಮೂಹಿಕ ಅನಿರ್ಣಾಯಕತೆಯು ಬದ್ಧತೆಯುಳ್ಳ ಶಿಕ್ಷಕ ಶಿಕ್ಷಕರ ಮೇಲೆ ಹಾನಿಕಾರಕ ಪರಿಣಾಮವನ್ನು ಬೀರಿದೆ. ಅವರ ಕರ್ತೃತ್ವ ಶಕ್ತಿ ಮತ್ತು ಸ್ವಾಯುತ್ತತೆಗಳಿಗೆ ಸಾಕಷ್ಟು ಪೆಟ್ಟು ತಗುಲಿದೆ. ಅವರಿಗೆ ತಾವು ಎಂತಹ ಶಿಕ್ಷಕರನ್ನು ತಯಾರಿಸಿ ಕಳುಹಿಸುತ್ತಿದ್ದೇವೆ ಎಂಬ ಭಯವೂ ಇದೆ. ಹಾಗೆ ಹೊರಬರುವ ಶಿಕ್ಷಕರು ಖಂಡಿತವಾಗಿಯೂ ತಮ್ಮ ಭಾವಿ ತರಗತಿಕೋಣೆಯ ಸವಾಲುಗಳನ್ನು ನಿಭಾಯಿಸಲು ಸುಸಜ್ಜಿತರಾಗುವುದಿಲ್ಲ ಎಂಬ ಇಂಗಿತವಿದೆ. ಈ ಕಳಪೆ ಗುಣಮಟ್ಟದ ಶಿಕ್ಷಕರ ಕೃಪೆಯಲ್ಲಿ ಕಲಿಯಬೇಕಾದ ಭವಿಷ್ಯದ ಬಡಪಾಯಿ ವಿದ್ಯಾರ್ಥಿಗಳ ಮೇಲೆ ಇದು ನೇರವಾಗಿ ಪರಿಣಾಮ ಬೀರುತ್ತದೆ.

## ಪ್ರಗತಿಪರ ರಾಷ್ಟ್ರಗಳಲ್ಲಿ ಶಿಕ್ಷಕ ಶಿಕ್ಷಣ ವ್ಯವಸ್ಥೆ

ಭಾರತವು ಶಿಕ್ಷಕ ಶಿಕ್ಷಣ ವಿಷಯದಲ್ಲಿನ ಗುಣಮಟ್ಟದ ಸಮಸ್ಯೆಗಳನ್ನು ಪರಿಹರಿಸಲು ಕಷ್ಟಪಟ್ಟು ಹೆಣಗಾಡುತ್ತಿದೆ. ಈ ಹೊತ್ತಿನಲ್ಲಿ, ಶಿಕ್ಷಕ ಸಿದ್ಧತೆ ಕಾರ್ಯಕ್ರಮಗಳ ಗುಣಮಟ್ಟ ಮತ್ತು ಅವಧಿಗೆ ಸಂಬಂಧಿಸಿದಂತೆ ಶಿಕ್ಷಣದಲ್ಲಿ ಅತ್ಯುತ್ತಮವಾಗಿ ಕಾರ್ಯನಿರ್ವಹಿಸುತ್ತಿರುವ ಕೆಲವು ರಾಷ್ಟ್ರಗಳ ಜೊತೆಗೆ ಇದನ್ನು ಹೋಲಿಸುವುದು ಕುತೂಹಲಕರವಾಗಿದೆ. ಆರ್ಥಿಕ ಸಹಕಾರ ಮತ್ತು ಅಭಿವೃದ್ಧಿ ಕುರಿತಾದ ಸಂಸ್ಥೆ(ಒಇಸಿಡಿ)ಯು ವಿಜ್ಞಾನಕ್ಕೆ ಸಂಬಂಧಿಸಿದಂತೆ ನಡೆಸುವ ಅಂತರರಾಷ್ಟ್ರೀಯ ವಿದ್ಯಾರ್ಥಿಗಳ ಮೌಲ್ಯಮಾಪನ ಕಾರ್ಯಕ್ರಮ (ಪಿಐಎಸ್‌ಎ)ವು ಒದಗಿಸುವ ಶ್ರೇಯಾಂಕದ ಪ್ರಕಾರ ಕೆನಡಾ ದೇಶವು ಇತ್ತೀಚೆಗೆ ಅಗ್ರಪಂಕ್ತಿಯಲ್ಲಿದೆ. ಕೆನಡಾ, ಫಿನ್ಲೆಂಡ್, ಸಿಂಗಪುರ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳೆಲ್ಲೆಡೆ ಸೀನಿಯರ್ ಸೆಕೆಂಡರಿ ಮಟ್ಟದ (ಪದವಿಪೂರ್ವ ಎರಡು ವರ್ಷಗಳಿಗೆ ಸಮನಾದದ್ದು) ನಂತರ ಸುಮಾರು ಐದು ವರ್ಷಗಳನ್ನು ಶಿಕ್ಷಕ ಸಿದ್ಧತೆ ಕಾರ್ಯಕ್ರಮಕ್ಕಾಗಿ ನಿಗದಿಪಡಿಸಲಾಗಿದೆ. ಶಿಕ್ಷಕರಾಗುವ ಇಚ್ಛೆಯುಳ್ಳವರು ಉದ್ದೇಶಿತ ಕಾರ್ಯಕ್ರಮಗಳಿಗೆ ಆಯ್ಕೆಯಾಗಲು ತೀವ್ರ ಸ್ಪರ್ಧೆಯನ್ನು ಹಾದು ಬರಬೇಕಾಗುತ್ತದೆ. ಅದರಲ್ಲಿ ಯಶಸ್ವಿಯಾಗುವವರು ಶೇ. 10ಕ್ಕಿಂತಲೂ ಕಡಿಮೆ ಜನ.

ಫಿನ್ಲೆಂಡ್ ದೇಶವು ತನ್ನ ಶಿಕ್ಷಕರಿಗೆ ತರಗತಿಯಲ್ಲಿ ಯಾವ ವಿಧಾನವನ್ನು ಬಳಸಬೇಕು ಎನ್ನುವ ವಿಷಯದಲ್ಲಿ ಹಾಗೂ ಸಂಶೋಧನೆಯನ್ನು ಆಧರಿಸಿದ ರೀತಿಯಲ್ಲಿ ಬೋಧನಾಕ್ರಮಕ್ಕೆ ಸಂಬಂಧಿಸಿದ ನಿರ್ಣಯಗಳನ್ನು ತೆಗೆದುಕೊಳ್ಳುವುದರಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದ ಸ್ವಾಯತ್ತತೆಯನ್ನು ನೀಡುತ್ತದೆ. ತಪಾಸಣೆ, ಪರೀಕ್ಷೆ, ಪರಿಶೀಲನೆಗಳಂತಹ ಬಾಹ್ಯ ಅಗತ್ಯಗಳು ಮತ್ತು ಸರ್ಕಾರಿ ನಿಯಂತ್ರಣಗಳ ತೊಂದರೆಯಿಲ್ಲದ ಕಾರಣ ಶಿಕ್ಷಕರು ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಾರೆ. ಕೆನಡಾ ಕೂಡ ತನ್ನ ಶಿಕ್ಷಕರನ್ನು ಚೆನ್ನಾಗಿ ನಡೆಸಿಕೊಳ್ಳುತ್ತದೆ. ಅಲ್ಲಿನ ಜನಸಂಖ್ಯೆಯಲ್ಲಿ ವಿವಿಧ ರೀತಿಯ ವಲಸಿಗರ ಪ್ರಮಾಣವು ಹೆಚ್ಚೇ ಇದೆ. ಆದರೂ ವಂಚಿತ ಮತ್ತು ವಂಚಿತರಲ್ಲದ ವಿದ್ಯಾರ್ಥಿಗಳ ಗುಂಪಿನಲ್ಲಿ ನ್ಯಾಯ ಮತ್ತು ಸಮತೆಯನ್ನು ಸಾಧಿಸುವಲ್ಲಿ ಕೆನಡಾ ಯಶಸ್ವಿಯಾಗಿದೆ. ಸಿಂಗಪುರದ ಮುಖ್ಯ ಶಿಕ್ಷಕ ಶಿಕ್ಷಣ ಸಂಸ್ಥೆಯಾದ ರಾಷ್ಟ್ರೀಯ ಶಿಕ್ಷಣ ಸಂಸ್ಥೆ(ಎನ್‌ಐಇ)ಯು ಸೇವಾನಿರತ ಶಿಕ್ಷಕರಿಗೆ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮದ ಜೊತೆಗೆ ಪ್ರಾಂಶುಪಾಲರು, ಇಲಾಖಾ ಮುಖ್ಯಸ್ಥರು ಹಾಗೂ ಇನ್ನಿತರ ಶೈಕ್ಷಣಿಕ ಮುಂದಾಳುಗಳಿಗೆ ಕಾರ್ಯ ನಿರ್ವಾಹಕ ಮುಂದಾಳತ್ವ ಕಾರ್ಯಕ್ರಮಗಳೂ ಸೇರಿದಂತೆ ಎಲ್ಲಾ ಮಟ್ಟದ ಶಿಕ್ಷಕ ಶಿಕ್ಷಣ ಕಾರ್ಯಕ್ರಮಗಳನ್ನು ನೀಡುತ್ತದೆ. ಅಮೆರಿಕದಲ್ಲಿ ವಿದ್ಯಾರ್ಥಿ–ಶಿಕ್ಷಕರಿಗೆ

ಸದೃಢವಾದ ಬೋಧನಾ ಅಭ್ಯಾಸದ ಘಟಕಗಳಿವೆ. ಜೊತೆಗೆ ಕ್ಷೇತ್ರ ಬೆಂಬಲ ಹಾಗೂ ಮಾರ್ಗದರ್ಶನದ ವ್ಯವಸ್ಥೆಯೂ ಸರಾಗವಾಗಿ ನಡೆಯುತ್ತದೆ. ವಿಶ್ವವಿದ್ಯಾಲಯದ ಶಿಕ್ಷಣ ವಿಭಾಗ ಮತ್ತು ವಿದ್ಯಾರ್ಥಿಗಳು ಭೇಟಿ ನೀಡುವ ಶಾಲೆಗಳ ನಡುವೆ ಬಲವಾದ ಸಹಯೋಗವಿದೆ ಹಾಗೂ ವಿದ್ಯಾರ್ಥಿ–ಶಿಕ್ಷಕರು ತಮ್ಮ ಆಚರಣೆಗಳನ್ನು ಹರಿತಗೊಳಿಸಿಕೊಳ್ಳಲು ನೆರವಾಗುವಂತಹ ಪರ್ಯಾಲೋಚಕ ಹಿಮ್ಮಾಹಿತಿಯ ವ್ಯವಸ್ಥೆ ಇದೆ.

## ಮುಂದಿರುವ ಪ್ರಯಾಸಕರ ಪಯಣ

ಹೊಸದಾಗಿ ಸೇರಿರುವ ಅನುಭವರಹಿತ ವಿದ್ಯಾರ್ಥಿ–ಶಿಕ್ಷಕರನ್ನು ಸಮರ್ಥ ಶಿಕ್ಷಕರನ್ನಾಗಿ ಪರಿವರ್ತಿಸುವ ಪ್ರಕ್ರಿಯೆಯು ಒಂದು ಕಠಿಣ ಹಾಗೂ ಸುದೀರ್ಘವಾದ ಪಯಣ. ತರಗತಿಕೋಣೆಯ ಅವಲೋಕನ, ವಿವಿಧ ಶಾಲಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಿಕೆ, ವಿದ್ಯಾರ್ಥಿಗಳ ಸಾಮಾಜಿಕ ಪರಿಸರವನ್ನು ಅರ್ಥಮಾಡಿಕೊಳ್ಳುವುದು ಹಾಗೂ ಅವರ ಪಾಲಕರೊಂದಿಗೆ ಸಂವಹಿಸುವುದು, ಅನುಭವಿ ಶಿಕ್ಷಕರಡಿ ತರಬೇತಿ ಪಡೆಯುತ್ತ ಕಲಿಯುವುದು ಹಾಗೂ ಅವರ ಬೆಂಬಲದೊಂದಿಗೆ ಪ್ರತ್ಯೇಕ ತರಗತಿಗಳನ್ನು ತೆಗೆದುಕೊಳ್ಳುವುದು – ಇವು ವಿದ್ಯಾರ್ಥಿ–ಶಿಕ್ಷಕರು ಬಹುಶಃ ಹಾದುಹೋಗಬೇಕಾದ, ಪರಸ್ಪರ ಸಂಬಂಧವಿರುವ ಹಲವಾರು ಪ್ರಕ್ರಿಯೆಗಳಲ್ಲಿ ಕೆಲವು. ಈ ರೀತಿಯಾಗಿ, ಅವರು ಸ್ವತಂತ್ರ ವೃತ್ತಿಪರರಾಗಿ ವಿಕಸನಗೊಳ್ಳುತ್ತಾರೆ.

ಇತ್ತೀಚೆಗೆ ಶಾಲಾ ಶಿಕ್ಷಣ ಇಲಾಖೆಯು ಸೇವಾನಿರತ ಶಿಕ್ಷಕ ಶಿಕ್ಷಣದಲ್ಲಿ ಸುಧಾರಣೆಗಳನ್ನು ತರುವ ಸಂದರ್ಭದಲ್ಲಿ ಕಂಡುಬಂದ ಹಾಗೆ, ಸೇವಾಪೂರ್ವ ಕ್ಷೇತ್ರದಲ್ಲಿ ಇಂತಹ ಬದಲಾವಣೆಗಳನ್ನು ದೊಡ್ಡ ಪ್ರಮಾಣದಲ್ಲಿ ತರಲು ಸರ್ಕಾರದ ಉನ್ನತ ಶಿಕ್ಷಣ ಇಲಾಖೆ ಮತ್ತು ಮಂಡಳಿಗಳು ಸ್ಪಷ್ಟ ಉದ್ದೇಶ ಮತ್ತು ಬದ್ಧತೆಯನ್ನು ಹೊಂದಿರಬೇಕು, ವ್ಯವಸ್ಥಿತ ಯೋಜನೆಗಳನ್ನು ರೂಪಿಸಿಕೊಳ್ಳಬೇಕು. ಬದಲಾವಣೆಗಳನ್ನು ಜಾರಿಗೊಳಿಸಲು ಸುಸಂಘಟಿತ ಕಾರ್ಯತಂತ್ರ, ಆಯೋಜನಾ ಸಾಮರ್ಥ್ಯ ಮತ್ತು ಸಂಪನ್ಮೂಲಗಳ ಗರಿಷ್ಠ ಬಳಕೆಯ ಅಗತ್ಯವಿದೆ. ಪ್ರಕ್ರಿಯೆಯ ಪ್ರತೀ ಹಂತದಲ್ಲಿಯೂ ನಿರಂತರ ಬೆಂಬಲ ಹಾಗೂ ಅನುಪಾಲನೆಯ ಕಾರ್ಯವನ್ನು ಕೈಗೊಳ್ಳಬೇಕಿದೆ.

## ಸನ್ನಿವೇಶವನ್ನು ಸುಧಾರಿಸಲು ಇರುವ ಕೆಲವು ಮಾರ್ಗಗಳು

ಸನ್ನಿವೇಶವು ಸಮಾಧಾನಕರವಾಗಿ ಇಲ್ಲದಿದ್ದರೂ ಅದನ್ನು ಸುಧಾರಿಸಲು ಆಗದು ಎಂದೇನಿಲ್ಲ. ಉನ್ನತ ಶಿಕ್ಷಣ ಇಲಾಖೆ ಅಥವಾ ಮಂಡಳಿಯು

ಮಾಡಬೇಕಾದ ಮೊತ್ತಮೊದಲ ಕೆಲಸವೆಂದರೆ, ಚರ್ಚೆ-ಸಂವಾದಗಳ ಮೂಲಕ ಮುಖ್ಯ ಅಂಶಗಳನ್ನು ನಿರ್ಧರಿಸುವುದಕ್ಕಾಗಿ, ಪ್ರಸ್ತುತವಾದ ಎಲ್ಲ ವಿಶ್ವವಿದ್ಯಾಲಯಗಳು/ ಸಂಸ್ಥೆಗಳು/ ತಜ್ಞರನ್ನು ಒಂದೆಡೆ ಸೇರಿಸುವುದು.

ಶಿಕ್ಷಕ ಶಿಕ್ಷಣವನ್ನು ಕುರಿತಂತೆ ಒಂದಾದ ಮೇಲೊಂದರಂತೆ ನೇಮಿಸಲಾದ ಜಂಟಿ ಪರಿಶೀಲನಾ ನಿಯೋಗ(ಜೆಆರ್‌ಎಂ)ಗಳು ಗಮನಿಸಿದಂತೆ, ಶಿಕ್ಷಕ ಶಿಕ್ಷಣ ಮಹಾವಿದ್ಯಾಲಯಗಳು ಮತ್ತು ಡಯಟ್ ಬೋಧಕ ವರ್ಗದ ಜೊತೆಗೆ ಸೇರಿಕೊಂಡು ವಿಶ್ವವಿದ್ಯಾಲಯಗಳೊಂದಿಗೆ ವಿವರವಾದ ಚರ್ಚೆಗಳನ್ನು ನಡೆಸುವ, ಪಠ್ಯಕ್ರಮಗಳನ್ನು ಅರ್ಥಮಾಡಿಕೊಳ್ಳುವ ಹಾಗೂ ಸಂಪನ್ಮೂಲ ಸಾಮಗ್ರಿಗಳನ್ನು ತಯಾರಿಸುವ ನಿಟ್ಟಿನಲ್ಲಿ ಡಿಎಸ್‌ಇಆರ್‌ಟಿ ಸಂಸ್ಥೆಯು ಸಬಲವಾಗಬೇಕಿದೆ. ಬೋಧಕವರ್ಗಕ್ಕೆ ಇಂದಿನ ಜ್ಞಾನಸಿದ್ಧಾಂತಗಳು, ಕಲಿಕೆ ಮತ್ತು ಸಂಶೋಧನೆಯ ಹಿನ್ನೆಲೆಯಲ್ಲಿ ತಮ್ಮ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ಅವಕಾಶವನ್ನು ಒದಗಿಸಿಕೊಡಬೇಕಿದೆ. ಇದರಿಂದ ಅವರು ಶೈಕ್ಷಣಿಕ ಸಂಗತಿಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಹಾಗೂ ಉತ್ತಮ ಗುಣಮಟ್ಟದ ಸಂಪನ್ಮೂಲಗಳನ್ನು ವಿಶೇಷವಾಗಿ ಕನ್ನಡದಂತಹ ಸ್ಥಳೀಯ ಭಾಷೆಗಳಲ್ಲಿ ಸಿದ್ಧಪಡಿಸಲು ಅಗಾಧವಾದ ನೆರವು ಸಿಗುತ್ತದೆ. ನಲಿ-ಕಲಿಯಂತಹ ಉತ್ತಮ ಆಚರಣೆಗಳು ಹಾಗೂ ಶಿಕ್ಷಕರ ಬೋಧನಾ ವಿಧಾನಗಳು, ತಜ್ಞರ ಒಳನೋಟಗಳು ಇತ್ಯಾದಿಗಳನ್ನು ಅವುಗಳ ವಿದ್ಯುನ್ಮಾನ ರೂಪವೂ ಸೇರಿದಂತೆ ಸಂಪನ್ಮೂಲಗಳ ಭಾಗವನ್ನಾಗಿ ಮಾಡಬೇಕು.

ಸೇವಾಪೂರ್ವ ಹಾಗೂ ಸೇವಾನಿರತ ಶಿಕ್ಷಣಗಳೆರಡನ್ನೂ ಸಮ್ಮಿಳಿತಗೊಳಿಸಿ ನಿರಂತರ ವೃತ್ತಿಪರ ಅಭಿವೃದ್ಧಿಯು ನಡೆಯುವಂತೆ ನೋಡಿಕೊಳ್ಳಲು ಸಾಮರ್ಥ್ಯ ನಿರ್ಮಾಣದ ಪರಿಕಲ್ಪನೆಯನ್ನು ಮರುರೂಪಿಸುವ ಅಗತ್ಯವಿದೆ. ಇಲಾಖೆಯು ಕರ್ನಾಟಕದಲ್ಲಿ ಮುಂಚೂಣಿಯಲ್ಲಿರುವ ಸಂಸ್ಥೆಗಳ ಬೆಂಬಲವನ್ನು ಪಡೆಯಬಹುದು.

ಶಿಕ್ಷಕ ಶಿಕ್ಷಣ ಸಂಸ್ಥೆಗಳಲ್ಲಿ ನಾಯಕತ್ವದ, ಬೋಧಕ ವರ್ಗದ ಮತ್ತು ಭೌತಿಕ ಸೌಲಭ್ಯಗಳ ಗುಣಮಟ್ಟವನ್ನು ನೋಡಿಕೊಳ್ಳುವುದರಲ್ಲಿ ವಿಶ್ವವಿದ್ಯಾಲಯಗಳ ಪಾತ್ರವು ಮುಖ್ಯವಾದುದು. ಪ್ರತಿ ಶಿಕ್ಷಕ ಶಿಕ್ಷಣ ಸಂಸ್ಥೆಯನ್ನೂ ಶಾಲೆಗಳು ಮತ್ತು ಉನ್ನತ ಶಿಕ್ಷಣ ಸಂಸ್ಥೆಗಳ ಜೊತೆ ಸೂಕ್ತ ರೀತಿಯಲ್ಲಿ ಒಂದುಗೂಡಿಸುವ ಅಗತ್ಯವಿದೆ. ಸಂಸ್ಥೆಗಳಿಗೆ ಒಂದೆಡೆ ಸೇರಲು, ಅನುಭವಗಳನ್ನು ಹಂಚಿಕೊಳ್ಳಲು ಮತ್ತು ಪರಸ್ಪರ ಸಹಯೋಗದಲ್ಲಿ ಕೆಲಸ ಮಾಡುವಂತಹ ಉಪಕ್ರಮಗಳನ್ನು ಕೈಗೊಳ್ಳಲು ಅನುಕೂಲವಾಗುವಂತೆ ಶೈಕ್ಷಣಿಕ ವೇದಿಕೆಗಳು ಅಥವಾ ಆನ್‌ಲೈನ್ ವೇದಿಕೆಗಳನ್ನು ಸೃಷ್ಟಿಸಬೇಕು.

ವಿಶ್ವವಿದ್ಯಾಲಯಗಳು, ಶಿಕ್ಷಣಶಾಸ್ತ್ರದಲ್ಲಿನ ಉನ್ನತ ಅಧ್ಯಯನ ಸಂಸ್ಥೆ(ಐಎಎಸ್‌ಇ)ಗಳು, ಸಿಟಿಇಗಳು ಮತ್ತು ಡಯಟ್‌ಗಳಲ್ಲಿನ ಖಾಲಿ ಹುದ್ದೆಗಳನ್ನು ಭರ್ತಿಮಾಡುವುದರ ಜೊತೆಗೆ ರಾಜ್ಯ ಸರ್ಕಾರವು ಅಗತ್ಯವಾದ ಹಾಗೂ ಸಾಕಷ್ಟು ಪ್ರಮಾಣದ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕು. ನೀತಿನಿಯಮಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕಲ್ಲದೆ ಅಗತ್ಯ ಮಾನದಂಡಗಳನ್ನು ಹೊಂದಿಲ್ಲದ ಆದರೆ ಕೇವಲ ಲಾಭಗಳಿಸುವುದಕ್ಕಾಗಿಯೇ ಇರುವ ಸಂಸ್ಥೆಗಳನ್ನು ಮುಚ್ಚುವ ಕ್ರಮ ಕೈಗೊಳ್ಳಬೇಕು.

ಇಂತಹ ಸ್ಥಿರ ಮತ್ತು ದೃಢವಾದ ಕ್ರಮಗಳನ್ನು ತೆಗೆದುಕೊಂಡಾಗ ಮಾತ್ರ– 'ವಿಶ್ಲೇಷಣಾ ಮನೋಭಾವವನ್ನು ಹೊಂದಿರುವ ಸೃಜನಶೀಲ ವಿದ್ಯಾರ್ಥಿಗಳನ್ನು, ಹಾಗೆಯೇ ಭವಿಷ್ಯದ ವಯಸ್ಕರನ್ನು ತಯಾರು ಮಾಡುವಲ್ಲಿ ಇರುವ ಸವಾಲುಗಳನ್ನು ಎದುರಿಸಬೇಕಾದ ಭಾವಿ ಶಿಕ್ಷಕರ ಸಾಮರ್ಥ್ಯವನ್ನು ಶಿಕ್ಷಕ ಶಿಕ್ಷಣವು ಯಾವ ರೀತಿಯಲ್ಲಿ ಹೆಚ್ಚಿಸುತ್ತದೆ?' ಎಂಬ ಮುಖ್ಯವಾದ ಪ್ರಶ್ನೆಗೆ ಉತ್ತರ ನೀಡಬಹುದು.

■

ಬಿ ಫಸ್ಟ್, 26–09–2017



ಒಬ್ಬ ಅನುಭವಿ ವಿದ್ಯಾರ್ಥಿ–ಶಿಕ್ಷಕ, ಉತ್ತಮ ಶಿಕ್ಷಕನಾಗುವ ಪ್ರಕ್ರಿಯೆ ದೀರ್ಘವಾದದ್ದು. ಇದಕ್ಕೆ ವಿವಿಧ ಹಂತಗಳ ಅಭ್ಯಾಸ ಅಗತ್ಯ. ತರಗತಿ ವೀಕ್ಷಣೆ, ಸಹಪಠ್ಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದು, ನುರಿತ ಶಿಕ್ಷಕರಿಗೆ ಸಹಾಯಕನಾಗಿರುವುದು ಮತ್ತು ಅವರ ಮಾರ್ಗದರ್ಶನದಲ್ಲಿ ಸ್ವತಂತ್ರವಾಗಿ ಬೋಧಿಸುವುದು, ಹೀಗೆ ಒಂದೊಂದೇ ಮೆಟ್ಟಿಲನ್ನು ಕ್ರಮಿಸಿ 'ಸ್ವತಂತ್ರ ಶಿಕ್ಷಕನ' ಸ್ಥಾನಕ್ಕೇರಬೇಕಾಗುತ್ತದೆ.

# ಶಿಕ್ಷಕರ ಶಿಕ್ಷಣ – ಸುಧಾರಣೆಗೆ ದೊರೆತ ಸದವಕಾಶ

ಶಿಕ್ಷಕರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಚರ್ಚೆಗಳು ಆರಂಭವಾಗಿ ವರ್ಷಗಳುರುಳಿದವು. ಬೋಧನೆಯ ಗುಣಮಟ್ಟ ಹೆಚ್ಚುವುದಕ್ಕೆ ಶಿಕ್ಷಕರ ಶಿಕ್ಷಣದ ಮಾದರಿಯೂ ಬದಲಾಗಬೇಕು ಎನ್ನುವುದು ಎಲ್ಲರೂ ಒಪ್ಪುವ ಸಂಗತಿ. ಇದಕ್ಕೆ ಸಂಬಂಧಿಸಿದಂತೆ ರಾಷ್ಟ್ರೀಯ ಶಿಕ್ಷಕರ ಶಿಕ್ಷಣ ಮಂಡಳಿಯು ಕಳೆದ ವರ್ಷದ ಕೊನೆಯಲ್ಲಿಯೇ ಶಿಕ್ಷಕರ ಶಿಕ್ಷಣ ಮತ್ತು ತರಬೇತಿಗೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ಮುಂದಿಟ್ಟಿತ್ತು. ಮಂಗಳವಾರ (ಜ. 6, 2014) ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರ ನೇತೃತ್ವದಲ್ಲಿ ನಡೆದ ರಾಜ್ಯಗಳ ಶಿಕ್ಷಣ ಸಚಿವರ ಸಭೆಯಲ್ಲಿ ಈ ವಿಚಾರದ ಚರ್ಚೆ ನಡೆಯಿತು. ಈ ವರ್ಷದಿಂದ ಜಾರಿಯಾಗಬೇಕಾದ ಸುಧಾರಣೆಗಳು ಹೀಗಿವೆ: ಸದ್ಯ ಒಂದು ವರ್ಷದ ಅವಧಿಯ ಬಿಎಡ್ ಮತ್ತು ಎಮ್ಎಡ್ ಕೋರ್ಸ್‌ಗಳನ್ನು ಎರಡು ವರ್ಷದ ಕೋರ್ಸ್‌ಗಳನ್ನಾಗಿ ಮಾರ್ಪಡಿಸಬೇಕು. ಪದವಿಯ ಜೊತೆಗೇ ಸೇರಿಕೊಂಡಿರುವ ಸಮಗ್ರ ಶಿಕ್ಷಕರ ಶಿಕ್ಷಣ ಕೋರ್ಸ್‌ಗಳನ್ನು ಪರಿಚಯಿಸಬೇಕು. ಅಂದರೆ ನಾಲ್ಕು ವರ್ಷಗಳ ಅವಧಿಯ ಬಿಎ–ಬಿಎಡ್, ಬಿಎಸ್ಸಿ–ಬಿಎಡ್ ಕೋರ್ಸ್‌ಗಳನ್ನು ಆರಂಭಿಸುವುದು. ಸದ್ಯ ದೂರಶಿಕ್ಷಣದಲ್ಲಿಯೂ ಎಮ್ಎಡ್ ಪದವಿಯನ್ನು ಪಡೆಯಲು ಸಾಧ್ಯವಿದೆ. ಇದನ್ನು ರದ್ದುಪಡಿಸುವುದು, ಹಾಗೆಯೇ

ಬೋಧನೆಯಲ್ಲಿ ತರಬೇತಿ ಪಡೆಯದ ಅಧ್ಯಾಪಕರಿಗೆ ಅರೆಕಾಲಿಕ ಕೋರ್ಸ್‌ಗಳನ್ನು ರೂಪಿಸುವುದು.

ಈ ಸುಧಾರಣಾ ಕ್ರಮಗಳಿಗೊಂದು ಹಿನ್ನೆಲೆ ಇದೆ. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ ಆಶಯಗಳನ್ನು ಕಾರ್ಯರೂಪಕ್ಕೆ ತರುವ ದಿಸೆಯಲ್ಲಿ ನ್ಯಾಯಮೂರ್ತಿ ಜೆ.ಎಸ್. ವರ್ಮ ಆಯೋಗವು ಆಗಸ್ಟ್ 2012ರಲ್ಲಿ ವರದಿಯನ್ನು ಸಲ್ಲಿಸಿತು. ಇದನ್ನು ಸುಪ್ರೀಂ ಕೋರ್ಟ್ ಅಂಗೀಕರಿಸಿತು. ರಾಷ್ಟ್ರೀಯ ಶಿಕ್ಷಕರ ಶಿಕ್ಷಣ ಮಂಡಳಿಗೆ ಅನುಷ್ಠಾನ ಪ್ರಕ್ರಿಯೆಯನ್ನು ಸೂಚಿಸುವಂತೆ ಕೇಳಿತು. ಅದರ ಅನ್ವಯ ಸರ್ಕಾರವು ಈ ಕ್ರಮಗಳನ್ನು ಕೈಗೊಳ್ಳುತ್ತಿದೆ. ಕೋರ್ಸ್‌ನ ಅವಧಿಯ ವಿಸ್ತರಣೆಯನ್ನು 2015–16ರಿಂದ ಆರಂಭಿಸಿ ಐದು ವರ್ಷಗಳಲ್ಲಿ ಅನುಷ್ಠಾನಗೊಳಿಸಬೇಕೆಂದು ರಾಷ್ಟ್ರೀಯ ಶಿಕ್ಷಕರ ಶಿಕ್ಷಣ ಮಂಡಳಿಯು ರಚಿಸಿದ್ದ 'ಪೂನಮ್ ಬಾತ್ರ ಸಮಿತಿ'ಯು ಕೂಡ ಶಿಫಾರಸು ಮಾಡಿತ್ತು.

ಕೋರ್ಸ್‌ನ ಅವಧಿಯನ್ನು ಎರಡು ವರ್ಷಕ್ಕೆ ಹೆಚ್ಚಿಸುವುದರಿಂದ ಮಾತ್ರ ಶಿಕ್ಷಕರ ಶಿಕ್ಷಣ ಕ್ಷೇತ್ರದಲ್ಲಿ ಗುಣಾತ್ಮಕ ಬದಲಾವಣೆ ಉಂಟಾಗುತ್ತದೆಯೆಂದು ನಿರೀಕ್ಷಿಸಬಹುದೇ? ಸೇವಾಪೂರ್ವ ಶಿಕ್ಷಕರ ಸಿದ್ಧತೆಗೆ ಸಂಬಂಧಿಸಿದಂತೆ ಈಗಿರುವ ಸಾಂಸ್ಥಿಕ ನೆಲೆಗಟ್ಟು ಮತ್ತು ಪ್ರಕ್ರಿಯೆಯಲ್ಲಿ ತೊಡಗಿಕೊಂಡ ಪ್ರಮುಖ ಪಾತ್ರಧಾರಿಗಳ ಧೋರಣೆಗಳು ಈ ಬದಲಾವಣೆಗಳನ್ನು ಎಷ್ಟರ ಮಟ್ಟಿಗೆ ಸ್ವಾಗತಿಸುತ್ತವೆ? ಎಂಬ ಪ್ರಶ್ನೆಗಳ ಜೊತೆಗೇ ಈ ಸುಧಾರಣೆಗಳನ್ನು ಅರ್ಥಮಾಡಿಕೊಳ್ಳಬೇಕಾಗಿದೆ.

ಸದ್ಯ ಶಿಕ್ಷಕರ ಶಿಕ್ಷಣ ವ್ಯವಸ್ಥೆಯಲ್ಲಿ ಬಳಸುತ್ತಿರುವ ಪಠ್ಯಕ್ರಮ ಮತ್ತು ಬೋಧನಾ ವಿಧಾನಗಳು ಇಂದಿನ ನೈಜ ಅಗತ್ಯವನ್ನು ಪರಿಗಣಿಸದೆ, ದಶಕಗಳ ಹಿಂದಿನ ಪದ್ಧತಿಯನ್ನೇ ಅನುಸರಿಸುತ್ತಿವೆ. ರಾಜ್ಯದಲ್ಲೆಲ್ಲೆಡೆ ಶಿಕ್ಷಕರ ಶಿಕ್ಷಣ ಸಂಸ್ಥೆಗಳು ವ್ಯಾಪಕವಾಗಿ ಹಬ್ಬಿವೆ. ಆದರೆ ಅವು ಹಲವು ಮೂಲಭೂತ ಸೌಕರ್ಯಗಳ ಕೊರತೆಯಿಂದ ಬಳಲುತ್ತಿವೆ. ಮೌಲ್ಯ ಕುಂದಿದ ಬಿಎಡ್ ಪದವಿಗಳನ್ನು ಮಾರಾಟ ಮಾಡುತ್ತಿವೆ.

ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕರ ನೇಮಕಾತಿ ಪ್ರಕ್ರಿಯೆಗೆ ಹಲವು ವರ್ಷಗಳಿಂದ ಚಾಲನೆ ದೊರೆತಿಲ್ಲ. ಆದ್ದರಿಂದ ಶೈಕ್ಷಣಿಕ ಪದವಿಗಳನ್ನು ಪಡೆದ ಸಾವಿರಾರು ಮಂದಿ ಉದ್ಯೋಗರಹಿತರಾಗಿದ್ದಾರೆ. ಕಾಲೇಜುಗಳು ವಿದ್ಯಾರ್ಥಿಗಳ ಬರುವಿಕೆಗಾಗಿ ಹಾತೊರೆಯುತ್ತಿವೆ. ಇತ್ತೀಚೆಗೆ ಬಿಕಾಮ್, ಬಿಬಿಎಮ್ ಮತ್ತು ಇನ್ನಿತರ ಪದವಿಗಳನ್ನು ಪಡೆದ ವಿದ್ಯಾರ್ಥಿಗಳಿಗೂ ಬಿಎಡ್ ಸೇರುವ ಅವಕಾಶ ಕಲ್ಪಿಸಲಾಗಿದೆ. ಇಂಥ ಸ್ಥಿತಿಯಲ್ಲಿ ಸಂಶೋಧನೆಯನ್ನು ನಿರೀಕ್ಷಿಸುವುದೇ ತಪ್ಪಾಗಿಬಿಡುತ್ತದೆ. ಈ ವ್ಯವಸ್ಥೆ ಸೃಷ್ಟಿಸಿರುವ ಶಿಕ್ಷಕರಲ್ಲಿ ಅಗತ್ಯಕ್ಕನುಗುಣವಾದ ಜ್ಞಾನ ವಿಸ್ತಾರ, ಪರಿಣತಿಯ

ಕೊರತೆ ಎದ್ದು ಕಾಣಿಸುತ್ತದೆ. ಅದರಲ್ಲೂ ಗಣಿತ, ವಿಜ್ಞಾನ, ಇಂಗ್ಲಿಷ್ ಮತ್ತು ಸಮಾಜ ವಿಜ್ಞಾನ ವಿಷಯಗಳಲ್ಲಿ ಗುಣಮಟ್ಟದ ಬೋಧಕರ ಕೊರತೆಯಿದೆ. ವೃತ್ತಿಪರತೆಯೂ ತೀರಾ ಕಡಿಮೆ.

ಈ ಸ್ಥಿತಿ ಬದಲಾಗದಿದ್ದರೆ ನಮ್ಮ ಶೈಕ್ಷಣಿಕ ಸ್ಥಿತಿಗತಿ ಬದಲಾಗುವುದಿಲ್ಲ. ಆದರೆ ಇದಕ್ಕೆ ಕೇವಲ ಕೋರ್ಸ್‌ಗಳ ಅವಧಿಯನ್ನು ಹೆಚ್ಚಿಸಿದರಷ್ಟೇ ಸಾಕೇ? ಎನ್‌ಸಿಟಿಇಯ ಮಾದರಿ ಬಿಎಡ್ ಪಠ್ಯಕ್ರಮವು ನಿರ್ದಿಷ್ಟ ವಿಷಯ ಜ್ಞಾನ, ಮಾನವ ಸಂಪನ್ಮೂಲ ಅಭಿವೃದ್ಧಿ, ಬೋಧನಾ ವಿಧಾನದ ಬಗೆಗಿನ ಅಧ್ಯಯನ ಮತ್ತು ಸಂವಹನ ಕೌಶಲ್ಯಗಳನ್ನು ಒಳಗೊಂಡಿರುತ್ತದೆ. ಇವು ಶೈಕ್ಷಣಿಕ ದೃಷ್ಟಿಕೋನ, ಪಠ್ಯ ಮತ್ತು ಬೋಧನಾ ವಿಧಾನಗಳ ಬಗೆಗಿನ ಅಧ್ಯಯನ ಹಾಗೂ ಕಾರ್ಯಕ್ಷೇತ್ರದೊಂದಿಗೆ ನಿರಂತರ ಸಂಪರ್ಕ ಈ ಮೂರು ಮುಖ್ಯ ಪಠ್ಯ ವಿಷಯಗಳಡಿ ಅಭ್ಯಾಸಕ್ಕೆ ಒಳಗಾಗುತ್ತವೆ. ಈ ಸೈದ್ಧಾಂತಿಕ ವಿಚಾರಗಳು ಕಾರ್ಯರೂಪಕ್ಕೆ ಬರುವ ಹೊತ್ತಿಗೆ ಏನಾಗುತ್ತದೆ?

ಮುಂದಿನ ವರ್ಷದಿಂದ ಬಿಎಡ್ ಅಧ್ಯಯನ ಅವಧಿ ಹೆಚ್ಚಾಗುತ್ತದೆ ಎಂಬ ಕಾರಣಕ್ಕೆ ಈ ವರ್ಷದ ಬಿಎಡ್ ದಾಖಲಾತಿ ಪ್ರಮಾಣ ಹೆಚ್ಚಾಗಿದೆ ಎಂಬ ವಾಸ್ತವವೇ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಲು ಹೊರಟಿರುವವರು ಸುಧಾರಣೆಯನ್ನು ಹೇಗೆ ಸ್ವಾಗತಿಸುತ್ತಿದ್ದಾರೆ ಎಂಬುದನ್ನು ಸೂಚಿಸುತ್ತಿದೆ. ಇಂಥದ್ದೊಂದು ಬದಲಾವಣೆಯ ವಿಚಾರ ವರ್ಷದಿಂದಲೇ ಚರ್ಚೆಯಲ್ಲಿದ್ದರೂ ಇದಕ್ಕೆ ಅಗತ್ಯವಿರುವ ಪ್ರಾಥಮಿಕ ತಯಾರಿಯಲ್ಲಿ ವಿಶ್ವವಿದ್ಯಾಲಯಗಳಿಂದ ಆರಂಭಿಸಿ ಕಾಲೇಜುಗಳ ತನಕ ಯಾರೂ ತಮ್ಮನ್ನು ತೊಡಗಿಸಿಕೊಂಡಂತೆ ಕಾಣಿಸುವುದಿಲ್ಲ. ಸುಧಾರಣೆಯು ಅಧ್ಯಯನದ ಅವಧಿಯ ಹೆಚ್ಚಳದಲ್ಲೇ ಕೊನೆಗೊಂಡರೆ ಹೇಗೆ?

ಇಂಥದ್ದೊಂದು ಸ್ಥಿತಿ ಉದ್ಭವಿಸದೇ ಇರಲು ಹಾಗೂ ಶಿಕ್ಷಕರ ಶಿಕ್ಷಣವನ್ನು ಪರಿಣಾಮಕಾರಿಯಾಗಿಸಲು ಸರ್ಕಾರವು ಕೆಲವು ಕ್ರಮಗಳನ್ನು ಕೈಗೊಳ್ಳುವುದಕ್ಕೆ ಮುಂದಾಗಬೇಕು. ಪಾಶ್ಚಾತ್ಯ ಮತ್ತು ಭಾರತೀಯ ಮೂಲದ ವಿವಿಧ ತತ್ವಜ್ಞಾನಿ ಚಿಂತಕರು ಪ್ರಸ್ತುತಪಡಿಸಿರುವ ಚಿಂತನೆಗಳ ಮೂಲಕ ಶಿಕ್ಷಣದ ಮೂಲಭೂತ ಗುರಿಗಳನ್ನು ಅರ್ಥೈಸಿಕೊಳ್ಳುವಾಗ ಪ್ರಸ್ತುತ ಕಾಲಮಾನದ ಸಾಮಾಜಿಕ ನೆಲೆಯೊಂದಿಗೆ ಸಮೀಕರಿಸಿ ಪರೀಕ್ಷಿಸುವಂತಾಗಬೇಕು. ವಾಸ್ತವದ ತರಗತಿ ಕೋಣೆಯಲ್ಲಿ ಅನುಷ್ಠಾನಗೊಳ್ಳುವ 'ನಲಿ-ಕಲಿ' ಮುಂತಾದ ವಿಧಾನಗಳನ್ನು ಸೇವಾಪೂರ್ವ ತರಬೇತಿ ವಿಧಾನದಲ್ಲಿ ಜಾರಿಗೊಳಿಸಬೇಕು.

ಎನ್‌ಸಿಟಿಇ ಮಾರ್ಗಸೂಚಿ ಅನ್ವಯ ಬಿಎಡ್ ಮತ್ತು ಎಮ್‌ಎಡ್ ಪಠ್ಯಕ್ರಮಗಳ ಪುನಾರಚನೆ ಮಾಡುವ ಮೊದಲು ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ಪ್ರತಿನಿಧಿಗಳನ್ನು ಒಳಗೊಂಡ ಪಠ್ಯಕ್ರಮ ಪುನಾರಚನಾ ತಂಡವನ್ನು ರಚಿಸಬೇಕು.

ಅದರಲ್ಲಿ ಪ್ರಾದೇಶಿಕ ಶೈಕ್ಷಣಿಕ ಸಂಸ್ಥೆ(ಆರ್‌ಐಇ), ಬಾಹ್ಯ ಶಿಕ್ಷಣ ತಜ್ಞರು, ಸ್ವಯಂ ಸೇವಾ ಸಂಸ್ಥೆಗಳ ಪ್ರತಿನಿಧಿಗಳು ಇರಬೇಕು. ಈ ತಂಡ ಇಡೀ ರಾಜ್ಯಕ್ಕೆ ಅನ್ವಯಿಸಲು ಸಾಧ್ಯವಿರುವ ಒಂದು ಪಠ್ಯಕ್ರಮವನ್ನು ರೂಪಿಸಬೇಕು. ಆದರೆ ಇದು ವಿಶ್ವವಿದ್ಯಾಲಯಗಳ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳದೆ ಆಯಾ ವಿಶ್ವವಿದ್ಯಾಲಯಗಳು ನಡೆಸುವ ಪರೀಕ್ಷೆಗಳ ದೃಷ್ಟಿಯಿಂದ ನಿರ್ದಿಷ್ಟ ಪಠ್ಯಕ್ರಮವನ್ನು ರೂಪಿಸಬೇಕು. ನಿರಂತರ ಆಂತರಿಕ ಮೌಲ್ಯಮಾಪನಕ್ಕೆ ಶೇ. 20 ರಿಂದ ಶೇ. 30 ಅಂಕಗಳನ್ನು ಬಾಹ್ಯ ಪರೀಕ್ಷೆಗೆ ಶೇ. 70 ರಿಂದ ಶೇ. 80 ಅಂಕಗಳನ್ನು ಮೀಸಲಿಡಬೇಕೆಂಬ ಮಾರ್ಗಸೂಚಿಯನ್ನು ಅನುಷ್ಠಾನಗೊಳಿಸಬೇಕು.

ಒಬ್ಬ ಅನುಭವಿ ವಿದ್ಯಾರ್ಥಿ–ಶಿಕ್ಷಕ, ಉತ್ತಮ ಶಿಕ್ಷಕನಾಗುವ ಪ್ರಕ್ರಿಯೆ ದೀರ್ಘವಾದದ್ದು. ಇದಕ್ಕೆ ವಿವಿಧ ಹಂತಗಳ ಅಭ್ಯಾಸ ಅಗತ್ಯ. ಪರಾವಲಂಬಿ ಸ್ಥಿತಿಯಿಂದ ಸ್ವಾವಲಂಬಿ ಹಂತದವರೆಗೆ ತರಗತಿ ವೀಕ್ಷಣೆ, ಶಾಲೆಯ ಸಹಪಠ್ಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದು, ನುರಿತ ಅನುಭವಿ ಶಿಕ್ಷಕರಿಗೆ ಸಹಾಯಕನಾಗಿರುವುದು ಮತ್ತು ಅವರ ಮಾರ್ಗದರ್ಶನದಲ್ಲಿ ಸ್ವತಂತ್ರವಾಗಿ ಬೋಧಿಸುವುದು. ಹೀಗೆ ಕ್ರಮವಾಗಿ ಒಂದೊಂದೇ ಮೆಟ್ಟಿಲನ್ನು ಕ್ರಮಿಸಿ 'ಸ್ವತಂತ್ರ ಶಿಕ್ಷಕನ' ಸ್ಥಾನಕ್ಕೇರಬೇಕಾಗುತ್ತದೆ. ಬಿಎಡ್‌ನ ಎರಡು ವರ್ಷಗಳ ಅವಧಿಯ ಕೋರ್ಸ್‌ನಲ್ಲಿ ಮೊದಲ ವರ್ಷದಲ್ಲಿ ನಾಲ್ಕು ವಾರಗಳ ಕಾಲ, ಎರಡನೇ ವರ್ಷದಲ್ಲಿ ಹದಿನಾರು ವಾರಗಳ ಕಾಲಾವಧಿಯ ಇಂಟರ್ನ್‌ಶಿಪ್‌ನ್ನು ನೆರೆಹೊರೆಯ ಶಾಲೆಗಳಲ್ಲಿ ಕೈಗೊಳ್ಳುವ ಮೂಲಕ ವೈವಿಧ್ಯಮಯ ಅಗತ್ಯಗಳನ್ನುಳ್ಳ ವಿದ್ಯಾರ್ಥಿಗಳಿಗೆ ಬೋಧಿಸುವ ಸಾಮರ್ಥ್ಯವನ್ನು ವಿದ್ಯಾರ್ಥಿ–ಶಿಕ್ಷಕರು ಬೆಳೆಸಿಕೊಳ್ಳಬೇಕು.

ಈ ಹಂತದಲ್ಲಿ ಶಾಲೆಯು ಒಂದು ಸಾಮಾಜಿಕ ಸಂಸ್ಥೆಯಾಗಿ ಹೇಗೆ ಕಾರ್ಯನಿರ್ವಹಿಸುತ್ತದೆ, ವಿವಿಧ ಪ್ರಕ್ರಿಯೆಗಳು ವ್ಯಕ್ತವಾಗುವ ಬಗೆ, ಬೋಧನಾ ಕಲಿಕೆ ಹೇಗೆ ಉಂಟಾಗುತ್ತದೆ, ಮಕ್ಕಳ ಶೈಕ್ಷಣಿಕ ಪ್ರಗತಿ ಹೇಗೆ ಸಾಗಿದೆ, ಭಾಗೀದಾರರ ಪಾಲ್ಗೊಳ್ಳುವಿಕೆ ಯಾವ ಮಟ್ಟದಲ್ಲಿದೆ, ಇವೆಲ್ಲವನ್ನೂ ಹತ್ತಿರದಿಂದ ಗಮನಿಸುವ ಅವಕಾಶ ಅವರಿಗೆ ಇರಬೇಕಾಗುತ್ತದೆ. ಮುಖ್ಯವಾಗಿ ಅಭ್ಯಾಸ ಬೋಧನಾ ಅಂಶವನ್ನು ಶೇ. 70ರ ಪ್ರಮಾಣಕ್ಕೆ ಏರಿಸಬೇಕಾಗಿದೆ. ಶಿಕ್ಷಕನಾಗಿ ರೂಪುಗೊಳ್ಳುವ ಸಂದರ್ಭದಲ್ಲಿ ಅಭ್ಯಾಸದ ತಾಣ(ಶಾಲೆ), ವಾಸ್ತವಿಕ ಶಾಲೆಯ ಪ್ರತಿರೂಪದಂತೆಯೇ ಇರಬೇಕು. ಈ ದಿಸೆಯಲ್ಲಿ ಪೂನಮ್ ಬಾತ್ರ ಸಮಿತಿಯ ಶಿಫಾರಸ್ಸಿನಂತೆ ಪ್ರತಿಯೊಂದು ಶಿಕ್ಷಕರ ಶಿಕ್ಷಣ ಸಂಸ್ಥೆ ಕನಿಷ್ಠ ಹತ್ತು ಶಾಲೆಗಳೊಂದಿಗೆ ಒಡಂಬಡಿಕೆ ಮಾಡಿಕೊಂಡು, ಆ ಶಾಲೆಗಳಲ್ಲಿ ವಿದ್ಯಾರ್ಥಿ ಶಿಕ್ಷಕರಿಗೆ ತರಗತಿ ಕೋಣೆಯಲ್ಲಿ ಅಭ್ಯಾಸದ ಭಾಗವಾಗಿ ಬೋಧಿಸುವ ಏರ್ಪಾಟು ಮಾಡಬೇಕಾಗುತ್ತದೆ.

ಬೋಧನಾ ಶಿಕ್ಷಕರ ಅಭಿವೃದ್ಧಿಗಾಗಿ ದೀರ್ಘಕಾಲಿಕ ನೋಟವನ್ನು ಹೊಂದಿರಬೇಕಾದದ್ದು ಅತ್ಯಂತ ಅಗತ್ಯ. ಡಯಟ್, ಸಿಟಿಇಗಳಲ್ಲಿ ಬೋಧಿಸುವ ಸೇವಾನಿರತ ಬೋಧಕ ಸಿಬ್ಬಂದಿಗೂ ಇದು ಅನ್ವಯವಾಗುವುದರಿಂದ ಇವರಿಗೆ ಆಡಳಿತಾತ್ಮಕ ಕೆಲಸಗಳಿಂದ ಹೊರತಾದ, ಶೈಕ್ಷಣಿಕ ಬೆಳವಣಿಗೆಗೆ ಅನುಕೂಲವಾಗುವ ಪ್ರತ್ಯೇಕ ವೃತ್ತಿ ಮಾರ್ಗವನ್ನು ನಿರ್ಮಿಸಬೇಕಾಗಿದೆ. ವಿಷಯ ಪುನರ್‌ಮನನ ಕಾರ್ಯಾಗಾರಗಳು, ಆರನೆಯ ತರಗತಿಯಿಂದ ಹನ್ನೆರಡನೆಯ ತರಗತಿಯವರೆಗಿನ ಪಠ್ಯಪುಸ್ತಕಗಳ ವಿಶ್ಲೇಷಣೆ, ವ್ಯಕ್ತಿತ್ವ ವಿಕಸನ ತರಬೇತಿ, ಭಾಷೆ ಮತ್ತು ಸಂವಹನ ಕ್ರಿಯೆಗಳ ವೃದ್ಧಿ, ವಿಶ್ಲೇಷಣಾತ್ಮಕವಾಗಿ ವಿಷಯಗಳನ್ನು ಅವಲೋಕಿಸಿ, ತರ್ಕಬದ್ಧವಾಗಿ ಮಂಡಿಸುವ ಅವಕಾಶ, ಅನೌಪಚಾರಿಕ ವೃತ್ತಿಪರ ಗುಂಪುಗಳಲ್ಲಿ ಕಲಿಕೆ, ಅನುಭವಗಳನ್ನು ಹಂಚಿಕೊಳ್ಳುವ ವೇದಿಕೆಗಳ ನಿರ್ಮಾಣ ಹಾಗೂ ಸಂಶೋಧನಾ ಮನೋಭಾವ ಬೆಳೆಸಿಕೊಳ್ಳಲು ಮತ್ತು ತಂತ್ರಜ್ಞಾನ ಬಳಸಲು ವಿದ್ಯಾರ್ಥಿ–ಶಿಕ್ಷಕರ ಮತ್ತು ಬೋಧಕ–ಶಿಕ್ಷಕರ ವೇದಿಕೆಯನ್ನು ನಿರ್ಮಿಸಬೇಕಾಗಿದೆ.

ಎರಡು ವರ್ಷದ ಬಿಎಡ್ ಪದವಿಯಲ್ಲಿ ವಿವಿಧ ವಿಷಯ ಮತ್ತು ಹಂತಗಳಲ್ಲಿ ಐಚ್ಛಿಕ ವಿಷಯವನ್ನು ಆಯ್ಕೆ ಮಾಡಿಕೊಂಡು ಆಯಾ ಕ್ಷೇತ್ರಗಳಲ್ಲಿ ವಿಶೇಷ ಅಧ್ಯಯನ ಕೈಗೊಳ್ಳಲು ಅವಕಾಶವಿರಬೇಕು. ಅತ್ಯುತ್ತಮ ಮಟ್ಟದ ಕಲಿಕಾ ಸಾಮಗ್ರಿಗಳನ್ನು ಪುನರ್‌ರಚಿತ ಸೇವಾಪೂರ್ವ ಪಠ್ಯಕ್ರಮದಂತೆ ಕನ್ನಡದಲ್ಲಿ ತಯಾರಿಸಲು ಸಿದ್ಧತೆ ನಡೆಸಬೇಕು. ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳು ಉತ್ತಮ ಗುಣಮಟ್ಟದ ಭಾಷಾಂತರ ಕಾರ್ಯ ಕೈಗೊಳ್ಳಲು ಮುಂದಾಗಬೇಕು. ಉತ್ತಮ ಸಂಪನ್ಮೂಲ ವ್ಯಕ್ತಿಗಳ ವಿಡಿಯೋ ಭಾಷಣ, ಮಾದರಿ ಶಿಕ್ಷಕರ ಉತ್ತಮ ಅಭ್ಯಾಸಗಳು ಮತ್ತು ಬೋಧನಾ ವಿಧಾನಗಳ ಆಯ್ದ ಭಾಗಗಳನ್ನು ವಿದ್ಯುನ್ಮಾನ ರೂಪದಲ್ಲಿ ಸೇರಿಸಿ ಸಾಮಗ್ರಿಗಳನ್ನು ಆಯೋಜಿಸಬೇಕಿದೆ.

ಶಿಕ್ಷಕರ ಶಿಕ್ಷಣ ಸಂಸ್ಥೆಗಳ ಗುಣಮಟ್ಟವನ್ನು ಕಾಯ್ದುಕೊಳ್ಳಲು ನಿರ್ದಿಷ್ಟ ಮಾನದಂಡಗಳಿಂದ– ಉದಾಹರಣೆಗೆ, ಸಂಸ್ಥೆಯಲ್ಲಿನ ನಾಯಕತ್ವ, ಬೋಧನಾ ಸಿಬ್ಬಂದಿಯ ಗುಣಮಟ್ಟ, ಭೌತಿಕ ಸಂಪನ್ಮೂಲಗಳು, ಬೋಧನಾ ಸಂಪನ್ಮೂಲಗಳು ಇತ್ಯಾದಿಗಳನ್ನು ಮೌಲ್ಯಮಾಪನ ಮಾಡುವಂತಿರಬೇಕು. ಇಡೀ ರಾಜ್ಯದಲ್ಲಿ ಐದಾರು ಅತ್ಯುತ್ತಮ ವಿಶ್ವವಿದ್ಯಾಲಯಗಳು ಅಥವಾ ಶಿಕ್ಷಕರ ಶಿಕ್ಷಣ ಸಂಸ್ಥೆಗಳಿಗೆ ನೆರೆಹೊರೆಯ ಜಿಲ್ಲೆಗಳ ಇತರ ಶಿಕ್ಷಕರ ಶಿಕ್ಷಣ ಸಂಸ್ಥೆಗಳಿಗೆ ಮಾರ್ಗದರ್ಶನ ನೀಡುವ ಹೊಣೆಗಾರಿಕೆ ವಹಿಸಿ ಸಂಪನ್ಮೂಲ ಸಂಸ್ಥೆಗಳಾಗಿ ಕಾರ್ಯನಿರ್ವಹಿಸಲು ಪ್ರೇರೇಪಿಸಬೇಕಿದೆ. ನಿಯಮಾನುಸಾರ ಕಾರ್ಯ ನಿರ್ವಹಿಸದ ಶಿಕ್ಷಕ ಶಿಕ್ಷಣ

ಸಂಸ್ಥೆಗಳ ಮೇಲೆ ಕಾನೂನಿನ ಪ್ರಕಾರ ಕ್ರಮ ಕೈಗೊಳ್ಳಲು ಸರ್ಕಾರ ಮತ್ತು ವಿಶ್ವವಿದ್ಯಾಲಯಗಳು ಇಚ್ಛಾಶಕ್ತಿ ಪ್ರದರ್ಶಿಸಬೇಕಿದೆ.

ನಮ್ಮಲ್ಲಿರುವ ಎಷ್ಟು ಮಂದಿ ಉಜ್ವಲ, ಪ್ರತಿಭಾವಂತ ವಿದ್ಯಾರ್ಥಿಗಳು ಶಿಕ್ಷಕರಾಗಬಯಸುತ್ತಾರೆ? ಎಂಬುದು ಮೂಲಭೂತ ಪ್ರಶ್ನೆ. ಶಾಲಾ ಕಾಲೇಜುಗಳಲ್ಲಿ ವಿಜ್ಞಾನ, ಗಣಿತ, ಇಂಗ್ಲಿಷ್, ಭೂಗೋಳ ವಿಷಯಗಳಲ್ಲಿ ಪದವಿ ಪಡೆದ ಪ್ರತಿಭಾನ್ವಿತರನ್ನು ಶಿಕ್ಷಕರಾಗಲು ಪ್ರೇರೇಪಿಸುವುದು ಶಿಕ್ಷಣ ಇಲಾಖೆಯ ಮುಂದಿರುವ ದೊಡ್ಡ ಸವಾಲು. ಇದನ್ನು ಸಮರ್ಥವಾಗಿ ಎದುರಿಸದಿದ್ದಲ್ಲಿ, ಮುಂದಿನ ಪೀಳಿಗೆಯ ವಿದ್ಯಾರ್ಥಿಗಳು ಸಾಮರ್ಥ್ಯವಿಲ್ಲದ ಶಿಕ್ಷಕರಿಂದ ಅಥವಾ ಅನ್ಯ ವಿಷಯಗಳನ್ನು ಮುಖ್ಯ ವಿಷಯವಾಗಿ ಅಭ್ಯಸಿಸಿದವರಿಂದ ಪ್ರಮುಖ ವಿಷಯಗಳನ್ನು ಕಲಿಯಬೇಕಾದ ಪರಿಸ್ಥಿತಿ ಉಂಟಾಗುತ್ತದೆ.

ಕೇಂದ್ರ ಸರ್ಕಾರದ ನೀತಿಯಿಂದ ಒದಗಿಬಂದಿರುವ ಅವಕಾಶವನ್ನು ಸರ್ಕಾರ ಮತ್ತು ವಿಶ್ವವಿದ್ಯಾಲಯಗಳು ಸಮರ್ಥವಾಗಿ ಬಳಸಿಕೊಳ್ಳಬೇಕಿದೆ. ಈ ಬದಲಾವಣೆಯನ್ನು ದೀರ್ಘಾವಧಿಯ ಕಾಣ್ಕೆ, ಬದ್ಧತೆ, ಮತ್ತು ಇಚ್ಛಾಶಕ್ತಿಯಿಂದ ಕೈಗೊಂಡರೆ, ಗುಣಾತ್ಮಕ ಶಿಕ್ಷಣದ ಅಡಿಪಾಯವಾದ ಶಿಕ್ಷಕರ ಶಿಕ್ಷಣವನ್ನು ಬಲಪಡಿಸುವುದರಲ್ಲಿ ಪ್ರಮುಖ ಹೆಜ್ಜೆಯನ್ನಿಟ್ಟಂತಾಗುತ್ತದೆ.

■

ಪ್ರಜಾವಾಣಿ, 08–01–2015




28/29ನೇ ಡಿಸೆಂಬರ್ 2017– ಬೆಂಗಳೂರು ದಕ್ಷಿಣ 1 ಮತ್ತು 2ನೇ ಬ್ಲಾಕ್‌ಗಳ ಶಿಕ್ಷಕರೊಂದಿಗೆ ನಮ್ಮ ಸಂಪನ್ಮೂಲ ತಂಡ ಮೈಸೂರಿನ 'ಕಲಿಯುವ ಮನೆ' ಶಾಲೆಗೆ ಪ್ರವಾಸ ಕೈಗೊಂಡ ಸಂದರ್ಭದ ಚಿತ್ರ. ಪ್ರತಿಯೊಂದು ಮಗುವಿನ ಅಗತ್ಯವನ್ನರಿತು ಬೋಧನೆಯ ವಿಧಾನವನ್ನು ನಮನೀಯವಾಗಿ ಅಳವಡಿಸಿಕೊಳ್ಳುವ ಈ ಶಾಲೆಯಲ್ಲಿ ವಿವಿಧ ಜ್ಯಾಮಿತಿಯ ಆಕಾರಗಳನ್ನು ಗೋಡೆಯ ಮೇಲೆ ಮೂಡಿಸಿರುವ ಬಗೆ ವಿನೂತನವಾಗಿದೆ.

ತಮ್ಮ ಸ್ವಂತ ಬೆಳವಣಿಗೆಯ ದೃಷ್ಟಿಯಿಂದ ಶಿಕ್ಷಕರು ಅರಿವಿನ ದಿಗಂತವನ್ನು ವಿಸ್ತರಿಸಿಕೊಳ್ಳಲು ಹಾಗೂ ತಮ್ಮ ಆಸಕ್ತಿಯ ಕ್ಷೇತ್ರದಲ್ಲಿ ಉತ್ತಮವಾಗಿ ಸಜ್ಜುಗೊಳಿಸಿಕೊಳ್ಳಲು ಅವರು ಒತ್ತಡರಹಿತ ವಾತಾವರಣದಲ್ಲಿ ಸಮಯವನ್ನು ಅರ್ಥಪೂರ್ಣವಾಗಿ ಕಳೆಯುವ ಅಗತ್ಯವಿದೆ.

# ಶಿಕ್ಷಕರ ಅಭಿವೃದ್ಧಿಯ ಹೊಣೆ ಶಿಕ್ಷಕರದೇ

ಆ ತರಗತಿಯು ಈಶಾನ್ಯ ಕರ್ನಾಟಕದ ಯಾವುದೇ ಸಾಮಾನ್ಯ ಹಿರಿಯ ಪ್ರಾಥಮಿಕ ಶಾಲೆಯ ಐದನೆಯ ತರಗತಿಯ ಕೋಣೆಯಂತೆ ಕಾಣುತ್ತಿತ್ತು. ಶಿಕ್ಷಕಿಯೊಬ್ಬರು ಪ್ರಥಮ ಭಾಷೆ ಕನ್ನಡವನ್ನು ಪಾಠ ಮಾಡುತ್ತಿದ್ದರು. ಜನಪದ ಸಾಹಿತ್ಯದಿಂದ ಆಯ್ದು, ಪ್ರಖ್ಯಾತ 'ಭಾಗ್ಯದ ಬಳೆಗಾರ' ಹಾಡಿನ ಮೊದಲೆರಡು ಚರಣಗಳನ್ನು ಅವರು ಕಲಿಸುತ್ತಿದ್ದರು. ಸುಮಾರು ನಲವತ್ತು ವಿದ್ಯಾರ್ಥಿಗಳು ಅದನ್ನು ಗಮನವಿಟ್ಟು ಆಲಿಸುತ್ತಿದ್ದರು ಈ ಸುಂದರವಾದ ಪದ್ಯವನ್ನು ದೂರವಾಣಿ, ಮಿಂಚಂಚೆಗಳ್ಯಾವುದೂ ಇರದ ಕಾಲದಲ್ಲಿ, ತಮ್ಮ ಆಪ್ತೇಷ್ಟರಿಗೆ ಸಂದೇಶವನ್ನು ಕಳಿಸಲು, ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಿದ್ದ ಜನರನ್ನು ಸಂಪೂರ್ಣವಾಗಿ ಅವಲಂಬಿಸಬೇಕಾಗಿದ್ದ ಕಾಲದಲ್ಲಿ ರಚಿಸಲಾಗಿದೆ. ಹೊಸದಾಗಿ ಮದುವೆಯಾಗಿರುವ ಒಬ್ಬ ಹೆಣ್ಣುಮಗಳು ಮತ್ತು ಬಳೆಗಾರನೊಬ್ಬನ ನಡುವಿನ ಸಂಭಾಷಣೆಯನ್ನು ಈ ಹಾಡು ಚಿತ್ರಿಸುತ್ತದೆ. ಆ ಹೆಣ್ಣುಮಗಳು ತಾನು ಸೌಖ್ಯವಾಗಿದ್ದೇನೆ ಎಂದು ತನ್ನ ತವರಿಗೆ ಸಂದೇಶ ತಿಳಿಸುವಂತೆ ಬಳೆಗಾರನನ್ನು ಕೇಳಿಕೊಳ್ಳುತ್ತಾಳೆ. ಹಾಗೆ ಕೇಳುತ್ತಲೇ ಸ್ಪಷ್ಟ ವರ್ಣನೆಗಳ ಮೂಲಕ ನಿರ್ದಿಷ್ಟವಾಗಿ ತನ್ನ ತವರುಮನೆಗೆ ಹೋಗುವ ದಾರಿಯನ್ನು ಬಳೆಗಾರನಿಗೆ ತಿಳಿಸುತ್ತಾಳೆ.

ಶಿಕ್ಷಕಿಯು ಪದ್ಯದಲ್ಲಿ ಸಂಪೂರ್ಣ ತಲ್ಲೀನರಾಗಿ ಉತ್ಸಾಹದಿಂದ ಪಾಠ ಮಾಡುತ್ತಿದ್ದರು. ಮೊದಲೇ ಸಿದ್ಧತೆ ಮಾಡಿಕೊಂಡು ಬಂದಿದ್ದರು ಎಂಬುದು ಸ್ಪಷ್ಟವಾಗಿತ್ತು. ಹಲವಾರು ಕಠಿಣ ಪದಗಳ ಅರ್ಥವನ್ನು ಕಪ್ಪು ಹಲಗೆಯ ಮೇಲೆ ಬರೆದರು ಹಾಗೂ ಅವುಗಳ ಅರ್ಥವನ್ನು ವಿವರಿಸಿದರು. ಜೊತೆಗೆ ಪರಿಪೂರ್ಣ ಎನ್ನುವಷ್ಟರ ಮಟ್ಟಿಗೆ ಲಯಬದ್ಧವಾಗಿ, ಭಾವಪೂರ್ಣವಾಗಿ ಆ ಹಾಡನ್ನು ಸ್ವತಃ ಹಾಡಿದರು. ಹಾಡುವಾಗ ತನ್ನ ವಿದ್ಯಾರ್ಥಿಗಳು ಜೊತೆಗೂಡಿ ಹಾಡುವಂತೆ ಒಂದು ಉತ್ಸಾಹಪೂರ್ಣ ಕಲಿಕೆಯ ವಾತಾವರಣವನ್ನು ನಿರ್ಮಿಸಿದರು. ಪದಗಳ ವರ್ಗೀಕರಣ, ಸಮಾನಾರ್ಥಕ ಪದಗಳು ಇತ್ಯಾದಿ ಭಾಷೆಯ ಅಂಶಗಳು ಮಕ್ಕಳಿಂದಲೇ ಹೊರಬರುವಂತೆ ಮಾಡಿದರು. ಹಾಡಿನ ಸಾರತತ್ತ್ವವನ್ನು ಮಕ್ಕಳ ಆಡುನುಡಿಯಲ್ಲಿ ವರ್ಣಿಸಿದರು. ತರಗತಿಯ ಕೊನೆಯಲ್ಲಿ, ಮಕ್ಕಳು ಅದನ್ನು ಸರಿಯಾಗಿ ಕಲಿತಿದ್ದಾರೆಯೇ ಇಲ್ಲವೇ ಎಂಬುದನ್ನು ಖಚಿತಪಡಿಸಿಕೊಳ್ಳಲು ಮಕ್ಕಳಿಗೆ ಕೆಲವು ಪುನರಾವಲೋಕನದ ಪ್ರಶ್ನೆಗಳನ್ನು ಕೇಳಿದರು. ಮುಂದಿನ ತರಗತಿಯ ವೇಳೆಗೆ, ತಮ್ಮದೇ ಕಲ್ಪನೆಯ ಜನಪದ ಹಾಡುಗಳನ್ನು ಬರೆದುಕೊಂಡು ಬರುವಂತೆ ಹಾಗೂ ಮೂರ್ನಾಲ್ಕು ಹೊಸ ಜನಪದ ಹಾಡುಗಳನ್ನು ಗುರುತಿಸುವಂತೆ ಮಕ್ಕಳಿಗೆ ಮನೆಗೆಲಸ ವಹಿಸಿದರು.

ಮೇಲೆ ಉಲ್ಲೇಖಿಸಿದ ತರಗತಿಯ ಅನನ್ಯತೆಯೆಂದರೆ, ಅಲ್ಲಿನ ಕಲಿಕಾರ್ಥಿಗಳು ನಿಜವಾದ ವಿದ್ಯಾರ್ಥಿಗಳಾಗಿರಲಿಲ್ಲ. ಬದಲಿಗೆ, ಕಳೆದ ಬೇಸಿಗೆ ರಜೆಯಲ್ಲಿ ಹೈದರಾಬಾದ್‌ನ ಡಾನ್ ಬಾಸ್ಕೋ ತರಬೇತಿ ಕೇಂದ್ರದಲ್ಲಿ ನಡೆದ ಐದು ದಿನಗಳ ಸನಿವಾಸ ಕಾರ್ಯಾಗಾರದ ಅಂಗವಾದ ಭಾಷೆ ಮತ್ತು ಪದ್ಯ ಬೋಧನೆಯ ಅಧಿವೇಶನದಲ್ಲಿ ಭಾಗವಹಿಸಲು ಸ್ವಇಚ್ಛೆಯಿಂದ ಬಂದ ಕರ್ನಾಟಕದ ವಿವಿಧ ಜಿಲ್ಲೆಗಳ ಸರ್ಕಾರಿ ಶಾಲಾ ಶಿಕ್ಷಕರಾಗಿದ್ದರು. ಅತ್ಯುತ್ಸಾಹದಿಂದ ತರಗತಿಗೆ ಪಾಠ ಮಾಡಿದವರು, ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ಪಶ್ಚಿಮ ಇಳಕಲ್ ಕ್ಲಸ್ಟರ್‌ನ ವಡ್ಡರಹೊಸೂರಿನ ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕಿ.

ಮೇ ತಿಂಗಳಿನಲ್ಲಿ ಮೂರು ಬೇರೆ ಬೇರೆ ಜಾಗಗಳಲ್ಲಿ ನಡೆದ ಕಾರ್ಯಾಗಾರಗಳಲ್ಲಿ ಒಂಬತ್ತು ಜಿಲ್ಲೆಗಳಲ್ಲಿನ ವಿವಿಧ ಶಾಲೆಗಳಲ್ಲಿ ವಿವಿಧ ವಿಷಯಗಳನ್ನು ಬೋಧಿಸುತ್ತಿರುವ ಇನ್ನೂರಾ ಹತ್ತು ಪ್ರಾಥಮಿಕ ಶಾಲಾ ಶಿಕ್ಷಕರೆಲ್ಲರೂ ಸ್ವಇಚ್ಛೆಯಿಂದ ಭಾಗವಹಿಸಿದ್ದು ಗಮನಾರ್ಹ ಸಂಗತಿ. ತೊಂಬತ್ತು ಕನ್ನಡ ಭಾಷಾ ಶಿಕ್ಷಕರು ಮತ್ತು ಎಪ್ಪತ್ತೊಂಬತ್ತು ಸಮಾಜ ವಿಜ್ಞಾನದ ಶಿಕ್ಷಕರು ಹೈದರಾಬಾದ್‌ನ ಡಾನ್ ಬಾಸ್ಕೋ ಹಾಗೂ ಜೀವನ ಜ್ಯೋತಿ ಆಶ್ರಯಧಾಮಗಳಲ್ಲಿ ಸನಿವಾಸ ಕಾರ್ಯಾಗಾರಗಳಲ್ಲಿ ಭಾಗವಹಿಸಿದ್ದರು. ನಲವತ್ತೊಂದು ವಿಜ್ಞಾನ ಹಾಗೂ ಗಣಿತ ಶಿಕ್ಷಕರು ಕಲಬುರಗಿಯ ಕಮಲಾಪುರದ ಮೈರಾಡಾ ತರಬೇತಿ ಕೇಂದ್ರದಲ್ಲಿ ನಡೆದ

ಕಾರ್ಯಾಗಾರದಲ್ಲಿ ಪಾಲ್ಗೊಂಡರು. ಒಟ್ಟಾರೆ ಐದು ದಿನಗಳಲ್ಲಿ ಮೊದಲನೆಯ ನಾಲ್ಕು ದಿನಗಳನ್ನು ಶೈಕ್ಷಣಿಕ ದೃಷ್ಟಿಕೋನದ ವಿಷಯಗಳಿಗೆ ಹಾಗೂ ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದ ಸಂಗತಿಗಳಿಗೆ ಮೀಸಲಿಡಲಾಗಿತ್ತು. ಕೊನೆಯ ದಿನ ಪ್ರಸಿದ್ಧ ಸಾಲಾರ್‌ಜಂಗ್ ವಸ್ತುಸಂಗ್ರಹಾಲಯ, ವಿಜ್ಞಾನ ವಸ್ತುಸಂಗ್ರಹಾಲಯ ಮತ್ತು ಪ್ರಾಣಿಸಂಗ್ರಹಾಲಯಗಳಿಗೆ ಭೇಟಿಯನ್ನು ಆಯೋಜಿಸಲಾಗಿದ್ದು ಅದು ಶಿಕ್ಷಕರಿಗೆ ಆನಂದಕರ ಅನುಭವವನ್ನು ನೀಡಿತು.

ಸದ್ಯಕ್ಕೆ ಸೇವಾನಿರತ ಶಿಕ್ಷಕರಿಗೆ ಡಿಎಸ್‌ಇಆರ್‌ಟಿ/ಎಸ್‌ಎಸ್‌ಎ ವತಿಯಿಂದ ಪ್ರತಿವರ್ಷ ಹನ್ನೆರಡು ದಿನಗಳ ತರಬೇತಿಯನ್ನು ನೀಡಲಾಗುತ್ತಿದೆ. ಈ ಹನ್ನೆರಡು ದಿನಗಳಲ್ಲಿ, ಐದು ದಿನಗಳು ಕಾರ್ಯಾಗಾರಕ್ಕೆ ಮೀಸಲಾಗಿದ್ದವು. (ಅದರಲ್ಲಿ, ಒಂದರಿಂದ ಮೂರನೆಯ ತರಗತಿಯ ನಲಿ-ಕಲಿ ಶಿಕ್ಷಕರಿಗೆ 'ಸಂಭ್ರಮ'; ನಾಲ್ಕರಿಂದ ಐದನೆಯ ತರಗತಿಯ ಶಿಕ್ಷಕರಿಗೆ 'ಸಮಾಗಮ'; ಆರರಿಂದ ಏಳನೆಯ ತರಗತಿಯ ವಿಜ್ಞಾನ ಶಿಕ್ಷಕರಿಗೆ 'ವಿಕಸನ'; ಆರರಿಂದ ಏಳನೆಯ ತರಗತಿಯ ಗಣಿತ ಶಿಕ್ಷಕರಿಗೆ 'ಸಿಂಚನ' ಎಂಬ ವಿವಿಧ ತರಬೇತಿ ಮಾಡ್ಯೂಲ್*ಗಳನ್ನು ಆಯೋಜಿಸಲಾಗುತ್ತದೆ.). ಉಳಿದ ಏಳು ದಿನಗಳನ್ನು ಕ್ಲಸ್ಟರ್‌ಗಳಲ್ಲಿ ನಡೆಯುವ ಮಾಸಿಕ ಸಮಾಲೋಚನಾ ಸಭೆಗಳಿಗೆ ಬಳಸಿಕೊಳ್ಳಲಾಗುತ್ತಿದೆ.

ಕಳೆದ ಕೆಲವು ವರ್ಷಗಳ ಅನುಭವದಿಂದ ಹೇಳುವುದಾದರೆ, ಸಿಆರ್‌ಸಿಯ ಮಾಸಿಕ ಸಭೆಗಳಲ್ಲಿ ಮೊದಲಿನ ಎರಡು ತಾಸು ಇಲಾಖೆಯ ಆಡಳಿತಾತ್ಮಕ ಸಮಸ್ಯೆಗಳನ್ನು ಚರ್ಚಿಸುವುದರಲ್ಲಿ ಕಳೆಯುತ್ತದೆ. ಉಳಿದೆರಡು ತಾಸುಗಳನ್ನು ಶಿಕ್ಷಕರ ವೃತ್ತಿಪರ ಅಭಿವೃದ್ಧಿಯ ಅಗತ್ಯಗಳಿಗೆ ಮೀಸಲಿಡಲಾಗುತ್ತದೆ. ವಿವಿಧ ವಿಷಯಗಳನ್ನು ಕಲಿಸುವ ಶಿಕ್ಷಕರು ಈ ಸಭೆಗಳಲ್ಲಿ ಭಾಗವಹಿಸುವುದರಿಂದ, ಶಿಕ್ಷಕರ ವಿಭಿನ್ನ ಅಗತ್ಯಗಳನ್ನು ಇಲ್ಲಿ ಹೆಚ್ಚಾಗಿ ಚರ್ಚಿಸುವುದಿಲ್ಲ. ಶಿಕ್ಷಕರಿಗೆ ನೀಡಲಾಗುವ ವಾರ್ಷಿಕ ಐದು ದಿನಗಳ ತರಬೇತಿಗೆ ಸಂಬಂಧಿಸಿದಂತೆ ಗಮನಿಸಲಾದ ಒಂದು ಮುಖ್ಯ ಅಂಶವೆಂದರೆ, ಸಮಾಜ ವಿಜ್ಞಾನ ಹಾಗೂ ಭಾಷಾ ಶಿಕ್ಷಕರಿಗೆ ನಿರ್ದಿಷ್ಟ ಮಾಡ್ಯೂಲ್‌ಗಳಿಲ್ಲದಿರುವುದು. ಇದರರ್ಥ, ವಿಷಯ ಸಂಪನ್ನತೆಯನ್ನು ಹೆಚ್ಚಿಸಿಕೊಳ್ಳುವ ನಿಟ್ಟಿನಲ್ಲಿ ಈ ಶಿಕ್ಷಕರಿಗೆ ಇರುವ ಅಗತ್ಯಗಳನ್ನು ಸರಿಯಾಗಿ ಗುರುತಿಸಿಲ್ಲ ಹಾಗೂ ಇದನ್ನೊಂದು ಆದ್ಯತೆಯೆಂದು ಪರಿಗಣಿಸಲೇ ಇಲ್ಲ.

ಇದಲ್ಲದೆ ಶಾಲೆಯ ಕಾರ್ಯಾವಧಿಯಲ್ಲಿ ಶಿಕ್ಷಕರನ್ನು ತರಬೇತಿಗೆಂದು ಕಳಿಸುವುದು ಹಲವಾರು ಪ್ರತಿಕೂಲ ಪರಿಣಾಮಗಳನ್ನು ಬೀರುತ್ತದೆ.

---

* ಶಿಕ್ಷಕರ ತರಬೇತಿಗೆ ಬಳಸುವ ಪಠ್ಯಾಧಾರಿತ ಸಂಪನ್ಮೂಲ.

ಮೊದಲನೆಯದಾಗಿ, ತರಗತಿಯ ವೇಳೆಯಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಂದ ದೂರವಿರುವ ಕಾರಣ ವಿದ್ಯಾರ್ಥಿಗಳು ಕಲಿಕೆಯಲ್ಲಿ ನಿರಂತರತೆಯನ್ನು ಸಾಧಿಸುವುದು ಕಷ್ಟವಾಗುತ್ತದೆ. ಕಲಿಕೆಯಲ್ಲಿ ಅದಾಗಲೇ ಹಿಂದೆ ಬಿದ್ದಿರುವ ಮಕ್ಕಳ ಮೇಲೆ ಇದು ಬೀರುವ ಪರಿಣಾಮವು ಇನ್ನೂ ಹೆಚ್ಚು ಗಂಭೀರವಾದದ್ದು. ಎರಡನೆಯದಾಗಿ, ಶಿಕ್ಷಕರ ದೃಷ್ಟಿಯಿಂದ ನೋಡಿದರೆ, ಶಾಲೆಯ ಅವಧಿಯಲ್ಲಿ ನಿರ್ವಹಿಸಬೇಕಾದ ಹಲವಾರು ಶೈಕ್ಷಣಿಕ ಹಾಗೂ ಆಡಳಿತಾತ್ಮಕ ಕೆಲಸ ಕಾರ್ಯಗಳ ನಡುವೆ ನಿರಂತರವಾಗಿ ವೃತ್ತಿ ಅಭಿವೃದ್ಧಿಯಲ್ಲಿ ತೊಡಗಿಕೊಳ್ಳುವುದು ಅವರಿಗೆ ಕಷ್ಟವಾಗುತ್ತದೆ. ತಮ್ಮ ಸ್ವಂತ ಬೆಳವಣಿಗೆಯ ದೃಷ್ಟಿಯಿಂದ ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಳ್ಳಲು ಹಾಗೂ ತಮ್ಮ ಆಸಕ್ತಿಯ ಕ್ಷೇತ್ರದಲ್ಲಿ ತಮ್ಮನ್ನು ತಾವೇ ಉತ್ತಮವಾಗಿ ಸಜ್ಜುಗೊಳಿಸಿಕೊಳ್ಳಲು ಅವರು ಒತ್ತಡರಹಿತ ವಾತಾವರಣದಲ್ಲಿ ಸಮಯವನ್ನು ಅರ್ಥಪೂರ್ಣವಾಗಿ ಕಳೆಯುವ ಅಗತ್ಯವಿದೆ. ಮೂರನೆಯದಾಗಿ, ಶಿಕ್ಷಕರನ್ನು ಈ ರೀತಿ ತರಗತಿಯಿಂದ ದೂರಮಾಡುವುದರಿಂದ ಖಾಸಗಿ ಶಾಲೆಗಳು ಹೆಚ್ಚು ಶಿಸ್ತುಬದ್ಧವಾಗಿವೆ ಹಾಗೂ ಸಮಯ ಪರಿಪಾಲನೆಯನ್ನು ಸಾಕಷ್ಟು ಉತ್ತಮವಾಗಿ ಮಾಡುತ್ತವೆ ಎಂಬ ಪೋಷಕರ ಮತ್ತು ಭಾಗೀದಾರರ ನಂಬಿಕೆಯು ಇನ್ನಷ್ಟು ಬಲಗೊಳ್ಳುತ್ತದೆ.

ಈ ಸವಾಲುಗಳ ಹಿನ್ನಲೆಯಲ್ಲಿ ಮೇಲಿನ ಕಾರ್ಯಾಗಾರದಿಂದ ನಮಗೆ ದೊರೆತ ಒಳನೋಟಗಳು, ಸೇವಾನಿರತ ಶಿಕ್ಷಕರ ದೀರ್ಘಕಾಲೀನ ವೃತ್ತಿಪರ ಅಭಿವೃದ್ಧಿಯ ಅಗತ್ಯಗಳಿಗೆ ಪರಿಣಾಮಕಾರಿ ಪರ್ಯಾಯಮಾರ್ಗಗಳನ್ನು ಈ ಕೆಳಗಿನ ಆಯಾಮಗಳಲ್ಲಿ ಸೂಚಿಸಬಲ್ಲವು:

## ಅ. ಸಿದ್ಧತೆಯ ಹಂತ – ಸೂಕ್ತ ವಸ್ತುವಿಷಯದ ಆಯ್ಕೆ

ಕಾರ್ಯಾಗಾರದ ಮೊದಲೆರಡು ದಿನ ಶಿಕ್ಷಕರು ತರಗತಿಕೋಣೆಯಲ್ಲಿನ ತಮ್ಮ ಆಚರಣೆಯ ಹಿನ್ನೆಲೆಯಲ್ಲಿ, ತಮ್ಮದೇ ದೃಷ್ಟಿಕೋನಗಳನ್ನು ಪರಾಮರ್ಶಿಸಲು ಅನುಕೂಲವಾಗುವಂತೆ ಅವಕಾಶಗಳನ್ನು ಸೃಷ್ಟಿಸಲಾಗಿತ್ತು. ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯನ್ನು ಹೊಂದಿರುವ, ಶಿಕ್ಷಕಿಯೂ ಆಗಿರುವ ಕಮಲಾ ಮುಕುಂದ ಅವರು ಬರೆದ– 'ನೀನಿವತ್ತು ಶಾಲೆಯಲ್ಲಿ ಏನನ್ನು ಕೇಳಿದೆ?' ('ವಾಟ್ ಡಿಡ್ ಯು ಆಸ್ಕ್ ಅಟ್ ಸ್ಕೂಲ್ ಟುಡೇ?') ಎಂಬ ಪುಸ್ತಕದ ಮೂರು ಅಧ್ಯಾಯಗಳನ್ನು ಚರ್ಚಿಸಲಾಯಿತು. ಮೆದುಳಿನ ಸಂರಚನೆ, ಕಾರ್ಯ ಮತ್ತು ವಿಕಾಸ, ಮಗುವಿನ ಬೆಳವಣಿಗೆಯ ಹಂತಗಳು ಹಾಗೂ ಅರಿವಿನ ಬೆಳವಣಿಗೆಯಲ್ಲಿ ಅವುಗಳ ಪಾತ್ರ, ಕಲಿಕೆಯಲ್ಲಿ ಭಾವನಾತ್ಮಕ ಸಂವೇದನೆಗಳ ಪಾತ್ರ, ಮಗುವಿನ ಭಾವನೆಗಳಿಗೆ ಸೂಕ್ಷ್ಮವಾಗಿ ಸ್ಪಂದಿಸಬೇಕಾದ ಅಗತ್ಯ ಇತ್ಯಾದಿ

ವಿಷಯಗಳು ಚರ್ಚೆಯ ಮುಖ್ಯ ಅಂಶಗಳಾಗಿದ್ದವು. ಮುಖ್ಯವಾಗಿ ನಿರ್ದೇಶಿತ ಓದು, ಅರ್ಥಗ್ರಹಿಕೆ ಹಾಗೂ ಪರ್ಯಾಲೋಚನೆಗಳ ಮೂಲಕ ಒಟ್ಟಾರೆ ಸಂವಾದವನ್ನು ನಿರ್ವಹಿಸಲಾಯಿತು. ಇಂತಹ ಸಂಕೀರ್ಣ ಸಮಸ್ಯೆಗಳನ್ನು ಕೂಡ ವಯಸ್ಕ ಕಲಿಕಾರ್ಥಿಗಳ ಸ್ವಂತ ಅನುಭವಗಳ ಆಧಾರದಲ್ಲಿ ಚರ್ಚಿಸಬಹುದು ಎಂಬುದನ್ನು ನಾವು ಕಂಡುಕೊಂಡೆವು. ಇಪ್ಪತ್ತೆರಡು ವರ್ಷಗಳಷ್ಟು ಅನುಭವವನ್ನು ಹೊಂದಿರುವ ಹಿರಿಯ ಶಿಕ್ಷಕರೊಬ್ಬರು ತಮ್ಮ ದೀರ್ಘಕಾಲೀನ ಸೇವಾವಧಿಯಲ್ಲಿ ಕನಿಷ್ಠ ಐದಾರು ಬಾರಿ ತಾನು ವಿದ್ಯಾರ್ಥಿಗಳಿಗೆ ದೈಹಿಕ ಶಿಕ್ಷೆಯನ್ನು ನೀಡಿದ ಮತ್ತು ಇನ್ನು ಹಾಗೆ ಮಾಡುವುದಿಲ್ಲವೆಂದು ತೀರ್ಮಾನಿಸಿರುವ ಸಂಗತಿಯನ್ನು ಮುಕ್ತವಾಗಿ ಹಂಚಿಕೊಂಡಿದ್ದನ್ನು ನೋಡಿದರೆ, ಈ ಅಧಿವೇಶನಗಳು ಶಿಕ್ಷಕರ ಮೇಲೆ ಗಾಢ ಪರಿಣಾಮವನ್ನು ಬೀರಿವೆ ಎನ್ನುವುದು ಕಂಡುಬರುತ್ತದೆ.

ಉಳಿದೆರಡು ದಿನಗಳಿಗಾಗಿ ನಿರ್ದಿಷ್ಟ ವಿಷಯಗಳಲ್ಲಿ ಆಯ್ದುಕೊಂಡ ವಸ್ತುವಿಷಯಗಳು ಕೂಡ ಶಿಕ್ಷಕರಿಗೆ ಉತ್ತೇಜಕವಾಗಿದ್ದವು. ವಿಜ್ಞಾನದಲ್ಲಿ ಆಯ್ದುಕೊಂಡ 'ನೀರು' ಎಂಬ ವಿಷಯವನ್ನು ಕುರಿತಂತೆ, ದೈನಂದಿನ ಜೀವನದಲ್ಲಿ ಅದರ ಪಾತ್ರ, ಭೂಮಿಯಲ್ಲಿ ಅದರ ಮೂಲದ ಶೋಧನೆ, ಅದೊಂದು ಇಂಗಾಲರಹಿತ ಸಂಯುಕ್ತವಾಗಿರುವುದರ ಪರಿಕಲ್ಪನೆ, ಸಸ್ಯ ಮತ್ತು ಪ್ರಾಣಿಗಳಲ್ಲಿ ಅದರ ಜೈವಿಕ ಮಹತ್ವ ಹಾಗೂ ಅದರ ಮೇಲ್ಮೈ ಒತ್ತಡ ಮತ್ತು ಸಂಯೋಜಕ ಬಲ ಇತ್ಯಾದಿಗಳನ್ನು ವಿವಿಧ ಆಯಾಮಗಳಿಂದ ವಿಶ್ಲೇಷಿಸಲಾಯಿತು. ಹೀಗೆ ಒಂದೇ ವಿಷಯದ ಕುರಿತು ಜೀವವಿಜ್ಞಾನ, ರಸಾಯನವಿಜ್ಞಾನ ಮತ್ತು ಭೌತವಿಜ್ಞಾನಗಳನ್ನು ಸಂಯೋಜಿಸುವ ಪ್ರಯತ್ನ ಅಲ್ಲಿತ್ತು. ಅದೇ ರೀತಿ, ಗಣಿತದಲ್ಲಿ, 'ಮಾಪನದ ಮಹತ್ವ' ಎಂಬ ವಿಷಯವನ್ನು ಇಟ್ಟುಕೊಂಡು ಮುಖ್ಯವಾಗಿ ಕ್ಷೇತ್ರ ಮತ್ತು ಪರಿಧಿ ಹಾಗೂ ಅವುಗಳ ನಡುವಿನ ಸಂಬಂಧದ ಕುರಿತು ಚರ್ಚಿಸಲಾಯಿತು. ಸಮಾಜ ವಿಜ್ಞಾನದಲ್ಲಿ, 'ಇತಿಹಾಸಪೂರ್ವ' ಕಾಲದ ಬೇಟೆಗಾರರು ಹಾಗೂ ಸಂಗ್ರಹಕಾರರು' ಎನ್ನುವುದು ಚರ್ಚೆಯ ಪ್ರಧಾನ ವಿಷಯವಾಗಿತ್ತು.

ಈ ಹಂತದಲ್ಲಿ, ಸೂಕ್ತ ಓದಿನ ಸಾಮಗ್ರಿಯ ಪೂರೈಕೆ (ಇವುಗಳಲ್ಲಿ ಕೆಲವನ್ನು ಇಂಗ್ಲಿಷಿನಿಂದ ಭಾಷಾಂತರಿಸುವುದೂ ಸೇರಿದಂತೆ), ವಿಷಯತಜ್ಞ ಶಿಕ್ಷಕರನ್ನು ಒಟ್ಟಾಗಿಸಿ ವಿವಿಧ ಅಧಿವೇಶನಗಳನ್ನು ಬೆಸೆಯುವುದು, ಪ್ರಸ್ತುತ ಚಟುವಟಿಕೆಗಳನ್ನು ಪರಿಚಯಿಸುವುದು ಇತ್ಯಾದಿ ಸಂಪನ್ಮೂಲ ವ್ಯಕ್ತಿಗಳ ಸಮಗ್ರ ಹಾಗೂ ಆಳವಾದ ಸಿದ್ಧತೆಗೆ ಮಹತ್ವವನ್ನು ನೀಡಲಾಯಿತು. ಇವೆಲ್ಲವುಗಳ ಕಾರಣ ಶಿಕ್ಷಕರಿಗೆ ಕಾರ್ಯಾಗಾರದಿಂದ ಅತ್ಯಮೂಲ್ಯ ಅನುಭವಗಳು ದೊರೆಯುವಂತಾದವು.

## ಬ. ಕಾರ್ಯಾಗಾರದ ಅವಧಿಯಲ್ಲಿ

ಈ ಹಂತದಲ್ಲಿ ಹಲವಾರು ಅಂಶಗಳನ್ನು ಪರಿಗಣಿಸುವ ಅಗತ್ಯವಿದೆ. ವೃತ್ತಿಪರರಾಗಿರುವುದು ಹಾಗೂ ಸಮಯ ಪರಿಪಾಲನೆಯನ್ನು ಕಟ್ಟುನಿಟ್ಟಾಗಿ ಅನುಸರಿಸುವುದರ ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ತರಬೇತಿ ನೀಡುವವರ ಜ್ಞಾನ ಮತ್ತು ಪರಿಣಿತಿ, ಸಾಂದರ್ಭಿಕ ಉದಾಹರಣೆಗಳನ್ನು ಕೊಡುವ ಮೂಲಕ ಅಧಿವೇಶನಗಳು ತರಗತಿಕೋಣೆಯ ಬೋಧನೆಗೆ ಪ್ರಸ್ತುತವಾಗಿರುವಂತೆ ಮಾಡುವುದು, ಶಿಕ್ಷಕರು ತಮ್ಮದೇ ನಂಬಿಕೆ ಮತ್ತು ಆಚರಣೆಗಳನ್ನು ಪರಿಶೀಲಿಸಿಕೊಳ್ಳುವ ಹಾಗೆ ಅವಕಾಶಗಳನ್ನು ನಿರ್ಮಿಸುವುದು, ಅವರು ತಮ್ಮ ನಿಲುವು-ದೃಷ್ಟಿಕೋನಗಳನ್ನು ವ್ಯಕ್ತಪಡಿಸುವಂತೆ ಪ್ರೋತ್ಸಾಹಿಸುವುದು, ಮುಖ್ಯವಾದ ಕಲಿಕೆಯ ಅಂಶಗಳ ಮೇಲೆ ಒತ್ತು ನೀಡುವುದು ಹಾಗೂ ರಚನಾತ್ಮಕ ಹಿಮ್ಮಾಹಿತಿಗಳನ್ನು ಪಡೆದುಕೊಳ್ಳುವುದು, ಹೀಗೆ ಎಲ್ಲವೂ ಅತ್ಯಂತ ಮುಖ್ಯವಾಗುತ್ತವೆ. ಬಿಡುವಿನ ವೇಳೆಯಲ್ಲಿ ಉಚಿತ ಹಾಗೂ ಪ್ರಸ್ತುತವಾದ ಸಹಪಠ್ಯ ಚಟುವಟಿಕೆಗಳನ್ನು ಪರಿಚಯಿಸುವುದು, ಪರಸ್ಪರ ಭಾಗವಹಿಸುವವರ ನಡುವೆ ಹಾಗೂ ಅವರ ಮತ್ತು ತರಬೇತಿ ನೀಡುವವರ ನಡುವೆ ಬಾಂಧವ್ಯ ಏರ್ಪಡುವಂತೆ ನೋಡಿಕೊಳ್ಳುವುದು ಇತ್ಯಾದಿಗಳಿಗೆ ಗಮನವನ್ನು ನೀಡುವ ಅಗತ್ಯವಿದೆ. ಕಾರ್ಯಾಗಾರ ನಡೆಯುವ ತಾಣವು ಅದ್ದೂರಿಯಾಗಿ ಅಲ್ಲದಿದ್ದರೂ ಸನಿವಾಸ ತರಬೇತಿಯಲ್ಲಿ ಭಾಗವಹಿಸುವ ಮಹಿಳಾ ಮತ್ತು ಪುರುಷ ಶಿಕ್ಷಕರೆಲ್ಲರಿಗೂ ಎಲ್ಲ ತರಹದ ಮೂಲಭೂತ ಸೌಕರ್ಯಗಳನ್ನು ಒದಗಿಸುತ್ತಿದ್ದರೆ ಮಾತ್ರ ಇವೆಲ್ಲವೂ ಸಾಧ್ಯವಾಗುತ್ತದೆ.

## ಕ. ಕಾರ್ಯಾಗಾರದ ನಂತರ

ಇಂತಹ ಗುಣಮಟ್ಟದ ಕಾರ್ಯಾಗಾರಗಳನ್ನು ವರ್ಷಕ್ಕೆ ಕನಿಷ್ಠ ಎರಡು ಬಾರಿಯಾದರೂ ಆಯೋಜಿಸುವುದರ ಜೊತೆಗೆ ಶಿಕ್ಷಕರು ಕಲಿಕೆಯ ನಿರಂತರತೆಯನ್ನು ಕಾಯ್ದುಕೊಳ್ಳಲು ತಮ್ಮೊಳಗೇ ಸ್ವಇಚ್ಛೆಯಿಂದ ಕಲಿಕಾ ಗುಂಪುಗಳನ್ನು ರಚಿಸಿಕೊಳ್ಳುವುದಕ್ಕೆ ಒತ್ತು ನೀಡಬೇಕು. ಅವರು ಕಾರ್ಯಾಗಾರದಲ್ಲಿ ತಾವು ಕಲಿತ ದೃಷ್ಟಿಕೋನ, ಜ್ಞಾನ ಮತ್ತು ಕೌಶಲ್ಯಗಳ ಮುಖ್ಯ ಅಂಶಗಳನ್ನು ತಮ್ಮ ತರಗತಿಕೋಣೆಗಳಲ್ಲಿ ಅನ್ವಯಿಸುವುದಕ್ಕೆ ಬೆಂಬಲ ನೀಡಬೇಕು. ಶಾಲೆಗಳಲ್ಲಿ ಶಿಕ್ಷಕರಿಗೆ ಬೆಂಬಲ ನೀಡುವುದು ಹಾಗೂ ಕಲಿಕೆಯನ್ನು ಟೆಲಿಕಾನ್ಫರೆನ್ಸ್‌ಗಳ ಮೂಲಕ ಹಂಚಿಕೊಳ್ಳುವುದು ಶೋಧಿಸಬೇಕಾದ ಇನ್ನಿತರ ಸಾಧ್ಯತೆಗಳಾಗಿವೆ.

ಸಂಪೂರ್ಣವಾಗಿ ಸಂಪನ್ಮೂಲಭರಿತವಾದ ಶಿಕ್ಷಕ ಕಲಿಕಾ ಕೇಂದ್ರಗಳನ್ನು ಶಿಕ್ಷಕರು ವಾಸಿಸುವ ಪ್ರದೇಶಗಳ ಬಳಿಯೇ ನಿರ್ಮಿಸಬೇಕು ಹಾಗೂ ಚರ್ಚೆ,

ಕಲಿಕೆಯ ವಿನಿಮಯ, ಪ್ರಸ್ತುತ ಚಲನಚಿತ್ರ ಹಾಗೂ ವಿಡಿಯೋಗಳ ವೀಕ್ಷಣೆ ಮುಂತಾದವುಗಳನ್ನು ಶಾಲೆಯ ಕಾರ್ಯಾವಧಿಯ ನಂತರದಲ್ಲಿ ಸಾಯಂಕಾಲದ ಸಮಯ ಹಾಗೂ ವಾರಾಂತ್ಯಗಳಲ್ಲಿ ಆಯೋಜಿಸಬೇಕು. ಪ್ರತಿ ತಾಲ್ಲೂಕಿನಲ್ಲಿಯೂ ಕನಿಷ್ಠ ಎರಡು ಮೂರಾದರೂ ಇಂತಹ ಸಂಪನ್ಮೂಲ ಕೇಂದ್ರಗಳನ್ನು ಸ್ಥಾಪಿಸುವ ಅಗತ್ಯವಿದೆ.

ಶಾಲೆಗಳಲ್ಲಿ ಶಿಕ್ಷಕರೊಡನೆ ನಿಕಟವಾಗಿ ಕೆಲಸ ಮಾಡಿದ ನಮ್ಮ ಅನುಭವದ ಹಿನ್ನೆಲೆಯಲ್ಲಿ, ಸೇವಾನಿರತ ಶಿಕ್ಷಕರ ಅಭಿವೃದ್ಧಿಯ ಪ್ರಯತ್ನಗಳನ್ನು ಇನ್ನಷ್ಟು ಅರ್ಥಪೂರ್ಣವಾಗಿಸಲು ಕೆಳಗಿನ ಬದಲಾವಣೆಗಳನ್ನು ಅಳವಡಿಸಿಕೊಳ್ಳಬಹುದು:

ದೀರ್ಘಕಾಲೀನವಾದ ತಮ್ಮ ವೃತ್ತಿಪರ ಬೆಳವಣಿಗೆಯ ಹೊಣೆಯನ್ನು ಶಿಕ್ಷಕರು ತಾವೇ ವಹಿಸಿಕೊಳ್ಳುವ ಹಾಗೆ ಆಗಬೇಕು. ಇದರರ್ಥ, ಶಿಕ್ಷಕರಿಗೆ ಹಲವಾರು ಕೋರ್ಸ್‌ಗಳನ್ನು ಒದಗಿಸಿ ಅವರು ಅದರಲ್ಲಿ ಯಾವುದು ಅಗತ್ಯವೋ ಅದನ್ನು ಆರಿಸಿಕೊಳ್ಳುವ ಹಾಗೆ ಮಾಡಬೇಕು. ಇದರಿಂದ ಅವರಿಗೆ ತಾವು ಯಾವ ಹಂತದಲ್ಲಿ ಇದ್ದೇವೆ ಎನ್ನುವುದನ್ನು ಅವಲಂಬಿಸಿ, ತಮ್ಮ ಅಭಿವೃದ್ಧಿಯಲ್ಲಿ ತಮ್ಮದೇ ಗತಿಯಲ್ಲಿ ತೊಡಗಿಕೊಳ್ಳಲು ಅನುವು ಮಾಡಿಕೊಟ್ಟಂತೆ ಆಗುತ್ತದೆ.

ಇದಕ್ಕೆ ಒಂದರಿಂದ ಹತ್ತನೆಯ ತರಗತಿಯವರೆಗಿನ ಎಲ್ಲ ಪ್ರಸ್ತುತ ಪರಿಕಲ್ಪನೆಗಳನ್ನು ಗುರುತಿಸುವ ಸಮಗ್ರ ಸ್ವರೂಪದ ಪಠ್ಯಕ್ರಮವೊಂದನ್ನು ಅಭಿವೃದ್ಧಿಪಡಿಸುವ ಅಗತ್ಯವಿದೆ. ವಿಶೇಷವಾಗಿ ಜಿಲ್ಲೆ ಮತ್ತು ತಾಲ್ಲೂಕು ಮಟ್ಟಗಳಲ್ಲಿ ಪ್ರಸ್ತುತವಾಗಿರುವ ಸಾಂದರ್ಭಿಕ ಓದಿಗೆ ಬೇಕಾದ ಅಥವಾ ಪಠ್ಯಕ್ರಮಕ್ಕೆ ಅಗತ್ಯವಾದ ಸಾಮಗ್ರಿಗಳನ್ನು ಕೂಡ ಅಭಿವೃದ್ಧಿಪಡಿಸಬೇಕಿದೆ.

ರಾಜ್ಯದ ಉದ್ದಗಲಕ್ಕೂ ಇರುವ ಶಿಕ್ಷಕರು, ಶಿಕ್ಷಕ ಶಿಕ್ಷಕರು ಹಾಗೂ ಅಧಿಕಾರಿಗಳಲ್ಲಿ ಪಠ್ಯಕ್ರಮ ಹಾಗೂ ಮಾಡ್ಯೂಲ್‌ಗಳನ್ನು ಅಭಿವೃದ್ಧಿಪಡಿಸಲು ಹಾಗೂ ತರಬೇತಿ ನೀಡುವ ಸಾಮರ್ಥ್ಯವಿರುವ, ಕಾರ್ಯ ನಿರ್ವಹಿಸಲು ಸಮರ್ಥರಾದ ಹಾಗೂ ಬದ್ಧ ಸಂಪನ್ಮೂಲ ವ್ಯಕ್ತಿಗಳನ್ನು ಗುರುತಿಸಿ, ಅವರನ್ನು ನಿರ್ದಿಷ್ಟ ಕಾರ್ಯಗಳಲ್ಲಿ ತೊಡಗಿಸುವುದು ಹೆಚ್ಚಿನ ಗಮನವನ್ನು ಬೇಡುವ ಇನ್ನೊಂದು ಮುಖ್ಯ ಅಂಶವಾಗಿದೆ. ಈ ಗುಂಪಿನ ಅಭಿವೃದ್ಧಿಗೆ ಪ್ರತಿ ವರ್ಷ ಸಾಕಷ್ಟು ಸ್ಥಳ, ಸಮಯವನ್ನು ಕೊಟ್ಟು ಪ್ರಯತ್ನಗಳನ್ನು ಅಗತ್ಯವಾಗಿ ಮಾಡಬೇಕಾಗಿದೆ.

ಸೂಕ್ತ ವಸತಿ ಸೌಲಭ್ಯವನ್ನು ಹೊಂದಿರುವುದು ಹಾಗೂ ಶಿಕ್ಷಕರ ನಡುವೆ ಆರೋಗ್ಯಕರ ಶೈಕ್ಷಣಿಕ ಸಂವಾದ-ಚರ್ಚೆಗಳು ನಡೆಯಲು ಅಗತ್ಯವಾದ ಅನುಕೂಲಕರ ಸ್ಥಳಾವಕಾಶ ನಿರ್ಮಿಸುವುದರ ಮಹತ್ವವನ್ನು ಸರ್ಕಾರವು ಈಗಾಗಲೇ ಗುರುತಿಸಿದೆ. ಮೊದಲ ಹೆಜ್ಜೆಯಾಗಿ, ರಾಜ್ಯದಲ್ಲಿರುವ ಎಲ್ಲಾ ಡಯಟ್‌ಗಳು, ಶಿಕ್ಷಕ ಶಿಕ್ಷಣ ಮಹಾವಿದ್ಯಾಲಯ(ಸಿಟಿಇ)ಗಳು ಹಾಗೂ ಬ್ಲಾಕ್ ಸಂಪನ್ಮೂಲ ಕೇಂದ್ರಗಳು

ಸಂಪೂರ್ಣವಾಗಿ ಸುಸಜ್ಜಿತಗೊಳ್ಳಬೇಕು ಹಾಗೂ ಸೇವಾನಿರತ ತರಬೇತಿಗೆ ಅನುಕೂಲಕರವಾಗುವಂತೆ ಅವುಗಳನ್ನು ಸಜ್ಜುಗೊಳಿಸಬೇಕು.

ಶಿಕ್ಷಕರ ಅಭಿವೃದ್ಧಿಗಾಗಿ ಪ್ರಸಕ್ತ ಕೊಡಮಾಡುತ್ತಿರುವ ಪ್ರತಿ ದಿನದ ವೆಚ್ಚವು (ದಿನವೊಂದಕ್ಕೆ ಇನ್ನೂರು ರೂಪಾಯಿಗಳು) ಅತ್ಯಂತ ಕಡಿಮೆಯದಾಗಿದೆ. ರಾಜ್ಯ ಸರ್ಕಾರವು ಅತ್ಯಂತ ಮುಖ್ಯವಾದ ಈ ಉದ್ದೇಶಕ್ಕೆ ಹೆಚ್ಚುವರಿ ಹಣಕಾಸನ್ನು ಒದಗಿಸಲು ಮಾರ್ಗ ಹಾಗೂ ವಿಧಾನಗಳನ್ನು ಹುಡುಕಲೇಬೇಕು. ಹಣಕಾಸು ಸರಿಯಾದ ಸಮಯಕ್ಕೆ ವಿತರಣೆಯಾಗಬೇಕು, ಹಣವನ್ನು ಆರ್ಥಿಕ ವರ್ಷದ ಕೊನೆಯಲ್ಲಿ ಬಿಡುಗಡೆ ಮಾಡಬಾರದು.

ಕೇರಳದಲ್ಲಿ ಶಿಕ್ಷಕರ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ, ಶಾಲೆಗಳು ಕಾರ್ಯ ನಿರ್ವಹಿಸದ ದಿನಗಳಲ್ಲಿ ಅವಕಾಶವನ್ನು ನಿರ್ಮಿಸಲಾಗಿದೆ. ಕರ್ನಾಟಕದಲ್ಲಿಯೂ ಸರ್ಕಾರವು ಸೇವಾನಿರತ ತರಬೇತಿಯನ್ನು ಬೇಸಿಗೆ ಮತ್ತು ಅಕ್ಟೋಬರ್ ರಜೆಯ ಅವಧಿಯಲ್ಲಿ ನಡೆಸುವಂತೆ ಆಲೋಚಿಸಬಹುದು. ಶಿಕ್ಷಕರು ತಮ್ಮ ಕುಟುಂಬಗಳೊಡನೆ ಸಮಯವನ್ನು ಕಳೆಯುವುದಕ್ಕೆ ಧಕ್ಕೆಯಾಗದ ರೀತಿಯಲ್ಲಿ ಸುಸಂಬದ್ಧ ವೇಳಾಪಟ್ಟಿಯೊಂದನ್ನು ರಚಿಸಿ, ಅವರು ತಮ್ಮ ಸಮಯವನ್ನು ಸಮರ್ಪಕವಾಗಿ ಯೋಜಿಸಿಕೊಳ್ಳಲು ಅನುಕೂಲವಾಗುವಂತೆ ಸಾಕಷ್ಟು ಮುಂಚಿತ ವಾಗಿಯೇ ಅಧಿಸೂಚನೆಯನ್ನು ಕಳುಹಿಸಬಹುದು. ಶಿಕ್ಷಕರ ಸಂಘಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವುದು ಹಾಗೂ ಈ ನಿರ್ಣಯಗಳಲ್ಲಿ ಅವು ಕೂಡ ಭಾಗೀದಾರರಾಗಿರುವಂತೆ ನೋಡಿಕೊಳ್ಳುವುದು ಕೂಡ ಅಗತ್ಯ ಕ್ರಮವಾಗಿದೆ.

ಸಿಇಟಿಯಂತಹ ಪಾರದರ್ಶಕವಾದ, ಶಿಕ್ಷಕರ ಆಯ್ಕೆ ಪ್ರಕ್ರಿಯೆಯನ್ನು ಹೊಂದಿರುವ ವಿಷಯದಲ್ಲಿ ಕರ್ನಾಟಕ ರಾಜ್ಯವು ಮುಂಚೂಣಿಯಲ್ಲಿದೆ ಹಾಗೂ ಅನುತ್ತೀರ್ಣರಹಿತ ನೀತಿಯನ್ನು ದೃಢವಾಗಿ ಪಾಲಿಸುತ್ತಿದೆ. ಸದ್ಯದ ಆಡಳಿತ ವ್ಯವಸ್ಥೆಯು ಸೇವಾನಿರತ ಶಿಕ್ಷಕರ ಅಭಿವೃದ್ಧಿಯ ವಿಚಾರದಲ್ಲಿ ಮೂಲಭೂತ ಬದಲಾವಣೆಗಳನ್ನು ತರುವ ಉತ್ಸಾಹವನ್ನೂ ತೋರಿದೆ.

ಡಿಎಸ್‌ಇಆರ್‌ಟಿ ಮತ್ತು ಎಸ್‌ಎಸ್‌ಎಗಳು ಈ ಬದಲಾವಣೆಗಳಲ್ಲಿ ಬಹಳಷ್ಟನ್ನು ಮುಂದಿನ ಶೈಕ್ಷಣಿಕ ವರ್ಷದಲ್ಲಿಯೇ ಕಾರ್ಯಗತಗೊಳಿಸಲು ಸಾಧ್ಯವಾಗುತ್ತದೆ ಹಾಗೂ ಆ ಮೂಲಕ ಸರ್ಕಾರಿ ಶಾಲೆಗಳನ್ನು ಅವಕಾಶ ವಂಚಿತ ಮಕ್ಕಳ ಪಾಲಿಗೆ ಉತ್ಸಾಹಪೂರ್ಣ ಕಲಿಕೆಯ ತಾಣಗಳನ್ನಾಗಿಸುತ್ತವೆ ಎಂದು ಭಾವಿಸಬಹುದು.

■

ಬಿ.ಫಸ್ಟ್, 07-11-2016

ಸಾರ್ವಜನಿಕ ಶಿಕ್ಷಣ ಇಲಾಖೆಯಂಥ ಬೃಹತ್ ಸಾಂಸ್ಥಿಕ ವ್ಯವಸ್ಥೆಯೊಂದು 'ಗುರುಚೇತನ'ದಂಥ ದೂರದೃಷ್ಟಿಯುಳ್ಳ ಪರಿವರ್ತನಾ ಉಪಕ್ರಮವನ್ನು ಕೈಗೊಂಡು ಇಲಾಖೆಯ ಅತ್ಯುತ್ತಮ ಪ್ರತಿಭೆಗಳನ್ನು ತೊಡಗಿಸಲು ಮುಂದೆ ಬಂದಿರುವುದು ಶಿಕ್ಷಕರ ವೃತ್ತಿಪರ ಅಭಿವೃದ್ಧಿಗೆ ಬಲ ನೀಡಿದಂತಾಗಿದೆ.

# ಅತ್ಯುತ್ಕೃಷ್ಟ ಮನಸ್ಸುಗಳಾಗಲು ಶಿಕ್ಷಕರಿಗೆ ಸ್ಫೂರ್ತಿ

ಕೋಲಾರದ ಕಿರಿಯ ಪ್ರಾಥಮಿಕ ಶಾಲೆಯ ಸ್ವಪ್ರೇರಿತ ಶಿಕ್ಷಕಿಯೊಬ್ಬರು ತಾವು ಕೈಗೊಂಡ ಇಂಗ್ಲಿಷ್ ಬೋಧನೆಯ ಕುರಿತಾದ ಕ್ರಿಯಾಸಂಶೋಧನಾ ಕಾರ್ಯಯೋಜನೆಯನ್ನು ತೋರಿಸಿದರು. ಅವರಿಗೆ ಹದಿಮೂರು ವರ್ಷ ಕೆಲಸ ಮಾಡಿದ ಅನುಭವವಿದೆ. ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ, ಅದರಲ್ಲಿಯೂ ಮೊದಲನೆಯ ತರಗತಿಯ ಮಕ್ಕಳಿಗೆ ಇಂಗ್ಲಿಷನ್ನು ಪರಿಣಾಮಕಾರಿಯಾಗಿ ಬೋಧಿಸುವ ಕುರಿತಾಗಿ ತಾವು ಹೊಂದಿದ್ದ ತೀವ್ರ ಕಾಳಜಿಯ ಕಾರಣ, ಅವರು ಈ ಕಾರ್ಯಯೋಜನೆಯನ್ನು ಕೈಗೆತ್ತಿಕೊಂಡಿದ್ದರು. ತಾವು ಹನ್ನೆರಡು ಶಾಲೆಗಳಲ್ಲಿ ಕೈಗೊಂಡ ಈ ಪ್ರಯತ್ನಗಳನ್ನು ಪೂರೈಸಲು ತೀವ್ರ ತರಹದ ವೈಯಕ್ತಿಕ ಸಮಸ್ಯೆಗಳನ್ನು ಅವರು ಜಯಿಸಬೇಕಾಗಿತ್ತು. ಜೊತೆಗೆ ತಮ್ಮ ವೈಯಕ್ತಿಕ ಸಮಯ ಮತ್ತು ಶ್ರಮವನ್ನು ಅವರು ಇದಕ್ಕಾಗಿ ವ್ಯಯಿಸಿದ್ದರು.

ರಾಮನಗರದ, ಒಳಪ್ರದೇಶದಲ್ಲಿರುವ ಚಿಕ್ಕದೊಂದು ಹಳ್ಳಿಯಿಂದ ಬಂದ, ಶಿಕ್ಷಕ ವೃತ್ತಿಗೆ ಕೇವಲ ಒಂದು ವರ್ಷದ ಹಿಂದಷ್ಟೇ ಸೇರಿದ, ಯುವ ಶಿಕ್ಷಕರೊಬ್ಬರು ಕಲಿಯಲು ಹಾಗೂ ತನ್ನನ್ನೇ ತಾನು ಅಭಿವೃದ್ಧಿಪಡಿಸಿಕೊಳ್ಳಲು ತೋರಿದ ಆಸಕ್ತಿ ಅಗಾಧವಾದದ್ದು. ಶಿಕ್ಷಕರಿಗಾಗಿ ನಡೆದ ವೃತ್ತಿ ಬೆಳವಣಿಗೆ ಕಾರ್ಯಾಗಾರಗಳನ್ನು ನಿಭಾಯಿಸುವಲ್ಲಿ ಅವರು ಅಪಾರವಾದ ಧೈರ್ಯ ಮತ್ತು ನಂಬಿಕೆಯನ್ನು

ಪ್ರದರ್ಶಿಸಿದರು. ಕಾರ್ಯಾಗಾರದಲ್ಲಿ ಹಾಜರಿದ್ದ ಶಿಕ್ಷಕರಲ್ಲಿ ಹಲವರ ಸೇವಾ ಅನುಭವವೇ ಈ ಶಿಕ್ಷಕರ ವಯಸ್ಸಿನಷ್ಟು ಅಥವಾ ಅದಕ್ಕಿಂತಲೂ ಹೆಚ್ಚಿತ್ತು.

ಬೆಂಗಳೂರಿನ ಗ್ರಾಮೀಣ ಭಾಗವಾದ ನೆಲಮಂಗಲದಿಂದ ಬಂದ ಮತ್ತೊಬ್ಬ ಚಿಂತನಶೀಲ ಶಿಕ್ಷಕರು ಅದಾಗಲೇ ಇಲಾಖೆಯ ಕೆಲವು ತರಬೇತಿಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಕೆಲಸ ಮಾಡಿದ ಅನುಭವವನ್ನು ಹೊಂದಿದ್ದರು. ಮುಖ್ಯವಾಗಿ ಸಮಾಜದಲ್ಲಿರುವ ಮೂಢನಂಬಿಕೆಗಳನ್ನು ನಿವಾರಿಸುವ ಉದ್ದೇಶದಿಂದ, ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವ ಮಾರ್ಗವಾಗಿ ಅವರು ಶಿಕ್ಷಕ ತರಬೇತಿಯನ್ನು ಆಯ್ದುಕೊಂಡಿದ್ದರು.

ಕಳೆದ ವಾರ ನಾನು ಈ ಮೂವರನ್ನೂ ಭೇಟಿ ಮಾಡಿದೆ. ಬೆಂಗಳೂರು ಮತ್ತು ಅದರ ಸುತ್ತಮುತ್ತಲಿನ ಆರು ಜಿಲ್ಲೆಗಳಿಂದ ಬಂದ ನೂರಾಮೂವತ್ತೈದು ಜನರಲ್ಲಿ ಇವರೂ ಇದ್ದರು. ಒಬ್ಬೊಬ್ಬರೊಡನೆಯೂ ಪ್ರತ್ಯೇಕವಾಗಿ ಕನಿಷ್ಠ ಹದಿನೈದರಿಂದ ಇಪ್ಪತ್ತು ನಿಮಿಷಗಳನ್ನು ಕಳೆದಿದ್ದೆ. ಅವರಲ್ಲಿ ಶಿಕ್ಷಕರು, ಮುಖ್ಯ ಶಿಕ್ಷಕರು, ಇನ್ನಿತರ ಶೈಕ್ಷಣಿಕ ಅಧಿಕಾರಿಗಳು ಇದ್ದರು. ಅವರೆಲ್ಲರೂ ಕರ್ನಾಟಕದಲ್ಲಿ ಪುನರುಜ್ಜೀವಿತಗೊಂಡ ಶಿಕ್ಷಕರ ವೃತ್ತಿಪರ ಅಭಿವೃದ್ಧಿ ಪ್ರಕ್ರಿಯೆಗೆ ಸೂಕ್ತ ಸಂಪನ್ಮೂಲ ವ್ಯಕ್ತಿಗಳನ್ನು ಆಯ್ಕೆ ಮಾಡುವ ಅನನ್ಯವಾದ ರಾಜ್ಯವ್ಯಾಪಿ ಕಾರ್ಯವೊಂದರ ಭಾಗವಾಗಿದ್ದರು. ಡಿಎಸ್‌ಇಆರ್‌ಟಿಯು ಈ ಮೊದಲೇ ನಡೆಸಿದ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದರು. ಈ ಅನುಸಂಧಾನದ ಪ್ರಕ್ರಿಯೆಗೆ, ಮೌಲ್ಯಮಾಪನಕ್ಕೆ ಒಳಗಾಗುವುದಕ್ಕೆ ಹಾಗೂ ಸಂಪನ್ಮೂಲ ವ್ಯಕ್ತಿಗಳಾಗಿ ಆಯ್ಕೆಯಾಗುವುದಕ್ಕೆ, ಜಿಲ್ಲಾಮಟ್ಟದಲ್ಲಿ ಶಿಕ್ಷಕರಿಗೆ ತರಬೇತಿ ಕಾರ್ಯಾಗಾರಗಳನ್ನು ನಡೆಸುವಾಗ ಸುಗಮಕಾರರಾಗಿ ಕಾರ್ಯನಿರ್ವಹಿಸುವುದಕ್ಕೆ ತಾವೇ ಆಯ್ಕೆಯಾಗಿದ್ದರು.

ಸರ್ಕಾರ ಮತ್ತು ನಮ್ಮ ಸಂಸ್ಥೆಗಳೆರಡರಿಂದಲೂ ಬಂದ ರಾಜ್ಯ ಸಂಪನ್ಮೂಲ ವ್ಯಕ್ತಿ(ಎಸ್‌ಆರ್‌ಪಿ)ಗಳು ಹಾಗೂ ಡಯಟ್‌ನಿಂದ ಒಬ್ಬರು ಬೋಧಕ ಸಿಬ್ಬಂದಿಯನ್ನು ಒಳಗೊಂಡ ಸಂದರ್ಶಕರ ಸಮಿತಿಯಲ್ಲಿ ನಾನಿದ್ದೆ. ಈ ಸಮಿತಿಯನ್ನು ಬೆಂಗಳೂರು ಮತ್ತು ಅದರ ಸುತ್ತಮುತ್ತಲಿನ ಆರು ಜಿಲ್ಲೆಗಳ ಶಿಕ್ಷಕರು ಹಾಗೂ ಶೈಕ್ಷಣಿಕ ಅಧಿಕಾರಿಗಳೊಡನೆ ಸಂವಹಿಸಿ, ಅವರಲ್ಲಿ ಸಮರ್ಥ ಹಾಗೂ ಇಚ್ಛೆಯುಳ್ಳವರನ್ನು ಗುರುತಿಸುವುದಕ್ಕಾಗಿ ರಚಿಸಲಾಗಿತ್ತು. ಇದು ಒಂದಿಡೀ ವಾರದ ಗಹನವಾದ ಹಾಗೂ ಪರಿಶ್ರಮದ ಕೆಲಸವಾಗಿತ್ತು. ನಾವು ಒಂದೊಂದು ಜಿಲ್ಲೆಯಲ್ಲಿಯೂ ಒಂದೊಂದು ದಿನವನ್ನು ಕಳೆದೆವು. ಅಲ್ಲಿ ಅದೇ ಹೊತ್ತಿಗೆ ಕನ್ನಡ, ಹಿಂದಿ, ವಿಜ್ಞಾನ, ಗಣಿತ, ಸಮಾಜ ವಿಜ್ಞಾನ, ನಲಿ–ಕಲಿ ಮತ್ತು ಶೈಕ್ಷಣಿಕ

ದೃಷ್ಟಿಕೋನಗಳು ಹೀಗೆ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಸಂದರ್ಶಕರ ಏಳು ಸಮಿತಿಗಳಿದ್ದು ಅವು ಜನರನ್ನು ಒಬ್ಬೊಬ್ಬರಾಗಿ ಸಂದರ್ಶಿಸಿದವು. ಇಂತಹ ಸಂದರ್ಶಕರ ಐದು ಗುಂಪುಗಳಿದ್ದು, ಅವು ಏಕಕಾಲಕ್ಕೆ ರಾಜ್ಯದ ಐದು ವಿವಿಧ ಸ್ಥಳಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಹಾಗೆ ಆ ಒಂದು ವಾರದಲ್ಲಿ ಐದರಿಂದ ಆರು ಜಿಲ್ಲೆಗಳಂತೆ ಇಡೀ ರಾಜ್ಯದಲ್ಲಿ ಕಾರ್ಯನಿರ್ವಹಿಸಬೇಕಿತ್ತು. ನಮಗಿದ್ದ ಸ್ಥೂಲ ಆದೇಶವೆಂದರೆ, ಈ ವರ್ಷ ಐವತ್ತು ಸಾವಿರ ಶಿಕ್ಷಕರಿಗೆ ಅತ್ಯಂತ ಪರಿಣಾಮಕಾರಿ ವಿಧಾನದಲ್ಲಿ ತರಬೇತಿ ನೀಡಲು ಸಾಧ್ಯವಾಗುವಂತೆ, ಪ್ರತಿ ಜಿಲ್ಲೆಯಿಂದ ಸಮರ್ಥರಾದ, ಆಸಕ್ತಿಯುಳ್ಳ ಐವತ್ತಾರು ಜನರಂತೆ, ಇಡೀ ರಾಜ್ಯದಿಂದ ಸಕಾರಾತ್ಮಕ ಒಲವಿರುವ 1904 ದಕ್ಷ ಸಂಪನ್ಮೂಲ ವ್ಯಕ್ತಿಗಳನ್ನು ಆಯ್ಕೆ ಮಾಡುವುದು.

ರಾಜ್ಯ ಶಿಕ್ಷಣ ಇಲಾಖೆಯು ಸೇವಾನಿರತ ಶಿಕ್ಷಕರ ಅಭಿವೃದ್ಧಿ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಮಹತ್ತರ ಬದಲಾವಣೆಗಳನ್ನು ತರಲು ಕ್ರಮ ಕೈಗೊಂಡಿರುವುದರ ಕುರಿತು ಕೆಲವು ತಿಂಗಳುಗಳ ಹಿಂದೆ ನಾನು ಬಿ.ಫಸ್ಟ್ ಎಂಬ ಆನ್‌ಲೈನ್ ಪತ್ರಿಕೆಯ ಅಂಕಣವೊಂದರಲ್ಲಿ ಬರೆದಿದ್ದೆ. ಮಾನಸಿಕವಾಗಿ ಹಾಗೂ ದೈಹಿಕವಾಗಿ ಅದೆಷ್ಟೇ ನಿತ್ರಾಣಗೊಳಿಸುವಂಥದ್ದೇ ಆಗಿದ್ದರೂ ಇದರಲ್ಲಿ ಮೊದಲಿನಿಂದಲೂ ತೊಡಗಿಕೊಂಡಿರುವ ನಮಗೆ ಈ ಇಡೀ ವಿಧಾನವು ತುಂಬಾ ಉಲ್ಲಾಸಕರವಾದ, ನವೀನ ಉಪಕ್ರಮವಾಗಿತ್ತು. ಈ ಪ್ರಯತ್ನವು, ತರಬೇಕಾದ ಬದಲಾವಣೆಗಳ ಪ್ರಮಾಣ ಹಾಗೂ ತೀವ್ರತೆಗೆ ಅನುಗುಣವಾಗಿ, ಇನ್ನಿತರ ರಾಜ್ಯಗಳೂ ಅನುಕರಿಸಬಹುದಾದ ಮಾನದಂಡವನ್ನು ನಿರ್ಧರಿಸುವ ಸಾಧ್ಯತೆಯನ್ನು ಪಡೆದಿದೆ.

ಕಳೆದ ವರ್ಷದ ತನಕ ಶಿಕ್ಷಕ ಅಭಿವೃದ್ಧಿಗೆ ಸಂಬಂಧಿಸಿದಂತೆ ನಡೆದ ಪ್ರಯತ್ನಗಳನ್ನು ತುಲನಾತ್ಮಕವಾಗಿ ನೋಡೋಣ. ಸರ್ಕಾರವು ತರಬೇತಿ ಮಾಡ್ಯೂಲ್‌ಗಳನ್ನು ವಿನ್ಯಾಸಗೊಳಿಸುವ ವಿಷಯದಲ್ಲಿ 'ಮೇಲಿನಿಂದ – ಕೆಳಕ್ಕೆ' ಒಮ್ಮುಖವಾಗಿ ಹರಿದು ಬರುವ ವಿಧಾನವನ್ನು ಬಳಸುತ್ತಿತ್ತು. ಅದರರ್ಥ ಇಷ್ಟೇ, ರಾಜ್ಯ ಮಟ್ಟದಲ್ಲಿ ಅಧಿಕಾರವನ್ನು ಹೊಂದಿರುವವರೊಬ್ಬರು, ಕೇಂದ್ರ ಮಾನವ ಸಂಪನ್ಮೂಲ ಸಚಿವಾಲಯವು ಬಿಡುಗಡೆ ಮಾಡುವ ಹಣಕಾಸನ್ನು ಅವಲಂಬಿಸಿ, ಶಿಕ್ಷಕರು ಯಾವ ತಿಂಗಳಿನಲ್ಲಿ ಎಷ್ಟು ದಿನಗಳ ಕಾಲ ಯಾವ ತರಹದ ತರಬೇತಿಯನ್ನು ಪಡೆದುಕೊಳ್ಳಬೇಕು ಎಂಬುದನ್ನು ನಿರ್ಧರಿಸುತ್ತಾರೆ (ಸಾಧಾರಣವಾಗಿ ಅದು ಶೈಕ್ಷಣಿಕ ಅವಧಿಯ ತುತ್ತತುದಿಗಿದ್ದು ಆಗ ಶಿಕ್ಷಕರ ಮೇಲೆ ಪಠ್ಯಕ್ರಮವನ್ನು ಮುಗಿಸುವ ತೀವ್ರ ಒತ್ತಡವಿರುತ್ತದೆ.). ಅದಕ್ಕೂ ಮುಖ್ಯವಾಗಿ, ತರಬೇತಿಯ ವಸ್ತುವಿಷಯದ ಆಳವಾದ ತರಬೇತಿಯನ್ನು ನೀಡುವ ಬೋಧಕವರ್ಗದ

ಜ್ಞಾನಸಂಪನ್ನತೆ, ಚರ್ಚೆಗಳ ಗುಣಮಟ್ಟ ಹಾಗೂ ತರಬೇತಿ ನೀಡುವ ತಾಣಗಳಲ್ಲಿ ಮೂಲಭೂತ ಸೌಕರ್ಯಗಳ ಲಭ್ಯತೆ ಮುಂತಾದವುಗಳ ಕಾಳಜಿಯನ್ನು ಅಗತ್ಯ ಮಟ್ಟದಲ್ಲಿ ತೆಗೆದುಕೊಳ್ಳುತ್ತಿರಲಿಲ್ಲ. ಇಂತಹ ಯಾವುದೇ ತರಬೇತಿಯು ಲಭ್ಯವಿದ್ದರೂ ಕೂಡ ಬಹಳಷ್ಟು ಸೇವಾನಿರತ ಶಿಕ್ಷಕರು ಅಂತಹವುಗಳಲ್ಲಿ ಭಾಗವಹಿಸುವ ಯಾವುದೇ ನೈಜ ಉದ್ದೇಶವನ್ನೂ ಹೊಂದಿರದ ಹಂತವನ್ನು ತಲುಪಿಬಿಟ್ಟಿರುತ್ತಾರೆ ಎನ್ನುವುದು ತರಬೇತಿಯ ಪರಿಣಾಮಕಾರಿತ್ವವನ್ನು ಕುರಿತಂತೆ ಕೈಗೊಂಡ ಹಲವಾರು ಅಧ್ಯಯನಗಳಲ್ಲಿ ಕಂಡುಬಂದ ಸಂಗತಿ.

ಈ ವರ್ಷದಿಂದ ರಾಜ್ಯವು ಸೇವಾನಿರತ ತರಬೇತಿಯ ಪರಿಕಲ್ಪನೆ ಹಾಗೂ ಅದು ಅನುಷ್ಠಾನಗೊಳ್ಳುವ ರೀತಿಯಲ್ಲಿ ಕೆಲವು ಮೂಲಭೂತ ಬದಲಾವಣೆಗಳನ್ನು ತಂದಿದೆ. ತಮ್ಮ ಆಸಕ್ತಿಗನುಗುಣವಾಗಿ ಆಯ್ಕೆಯ ಪಟ್ಟಿಯಿಂದ ತಾವು ಭಾಗವಹಿಸಲು ಇಷ್ಟಪಡುವ ನಿರ್ದಿಷ್ಟ ಮಾಡ್ಯೂಲ್‌ಗಳನ್ನು ಆಯ್ದುಕೊಳ್ಳಲು ಅನುವು ಮಾಡಿಕೊಡಲಾಗಿದೆ. ಈ ಮೂಲಕ ವೃತ್ತಿಪರ ಅಭಿವೃದ್ಧಿಯ ಹೊಣೆಯನ್ನು ಈಗ ಶಿಕ್ಷಕರಿಗೇ ವಹಿಸಲಾಗಿದೆ. ಮಾಡಲಾದ ಇನ್ನೆರಡು ಮುಖ್ಯ ಬದಲಾವಣೆಗಳು ಮಾಡ್ಯೂಲ್‌ಗಳ ಪರಿಕಲ್ಪನೆ, ವಿನ್ಯಾಸ ಹಾಗೂ ಶಿಕ್ಷಕರಿಗೆ ತರಬೇತಿ ನೀಡುವ ಸಂಪನ್ಮೂಲ ವ್ಯಕ್ತಿಗಳ ಗುಣಮಟ್ಟವನ್ನು ಹೆಚ್ಚಿಸುವುದಕ್ಕೆ ಸಂಬಂಧಿಸಿದ್ದಾಗಿವೆ. ಜೊತೆಗೆ ಜಿಲ್ಲೆಗಳಲ್ಲಿ ತರಬೇತಿ ನಡೆಯುವ ಸ್ಥಳಗಳಲ್ಲಿ ಸೌಕರ್ಯಗಳನ್ನು ಸಾಧ್ಯವಾದಷ್ಟೂ ಸುಧಾರಿಸುವ ಪ್ರಯತ್ನಗಳಾಗಿವೆ. ಶಿಕ್ಷಣ ಇಲಾಖೆಯಲ್ಲಿಯೇ ಈ ಪ್ರಯತ್ನದ ಕುರಿತು ಸಕಾರಾತ್ಮಕ ಪರಿಸರವನ್ನು ಹುಟ್ಟುಹಾಕಲು ಅಗಾಧ ಪ್ರಮಾಣದ ಪ್ರಚಾರಾಂದೋಲನವು ನಡೆಯುತ್ತಿದೆ.

ಮಾಡ್ಯೂಲ್‌ಗಳ ಅಭಿವೃದ್ಧಿ ಕುರಿತಂತೆ ಹೇಳುವುದಾದರೆ, ಶಿಕ್ಷಕರ ತತ್‌ಕ್ಷಣದ ತರಗತಿಕೋಣೆ ಅಗತ್ಯಗಳನ್ನು ಪೂರೈಸಲು ಹಾಗೂ ಅವರ ದೀರ್ಘಕಾಲೀನ ಅಭಿವೃದ್ಧಿಯತ್ತಲೂ ಕಾಳಜಿ ವಹಿಸಲು ಎಸ್‌ಆರ್‌ಪಿಗಳ ತಂಡವೊಂದನ್ನು ರಚಿಸಲಾಗಿದೆ. ಅದರಲ್ಲಿ ಸುಮಾರು ಎಂಬತ್ತು ಜನ ಶಿಕ್ಷಕರಿದ್ದಾರೆ. ಇವರು ಏಳು ವಿಷಯಗಳಲ್ಲಿನ ಇಪ್ಪತ್ತೆಂಟು ಮಾಡ್ಯೂಲ್‌ಗಳನ್ನು ಹೆಚ್ಚು ಸಮೃದ್ಧವಾದ ರೀತಿಯಲ್ಲಿ ಪರಿಕಲ್ಪಿಸಲು ಹಾಗೂ ವಿನ್ಯಾಸಗೊಳಿಸಲು ಕಳೆದ ಎಂಟು ತಿಂಗಳುಗಳ ಕಾಲ ಶ್ರಮಪಟ್ಟಿದ್ದಾರೆ. ಶಿಕ್ಷಕರಲ್ಲಿ ಇನ್ನಷ್ಟು ಕಲಿಯುವ ಆಸಕ್ತಿಯನ್ನು ಮತ್ತೆ ಹುಟ್ಟುಹಾಕುವುದೂ ಇದರ ಉದ್ದೇಶವಾಗಿದೆ.

ಆ ನಂತರದ ಅತಿ ಮುಖ್ಯ ಸಂಗತಿಯೆಂದರೆ, ಪಠ್ಯವಿಷಯಗಳನ್ನು ನಿಭಾಯಿಸಬೇಕಾದ ಸಂಪನ್ಮೂಲ ವ್ಯಕ್ತಿಗಳ ಗುಣಮಟ್ಟ. ಪಠ್ಯಕ್ರಮ ಮತ್ತು ವಸ್ತುವಿಷಯಗಳು ಎಷ್ಟೇ ಉತ್ತಮವಾಗಿದ್ದರೂ ಕೂಡ ಸುಗಮಕಾರರು ಅಪೇಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸದಿದ್ದರೆ ಅಥವಾ ಅಂತರ್ಗತ ಮಿತಿಗಳನ್ನು

ಹೊಂದಿದ್ದರೆ ನಿರ್ದಿಷ್ಟ ಕಾರ್ಯಾಗಾರದ ಧ್ಯೇಯೋದ್ದೇಶಗಳು ಈಡೇರಲಾರವು ಎನ್ನುವುದು ಒಪ್ಪಿರುವ ವಿಚಾರ. ವಾಸ್ತವಿಕ ಸನ್ನಿವೇಶವು ಹೀಗಿದ್ದಾಗ, ಲಿಖಿತ ಪರೀಕ್ಷೆ, ಮುಖಾಮುಖಿ ಸಂವಹನಗಳನ್ನು (ಸಂದರ್ಶನ) ಒಳಗೊಂಡಂತೆ ಎಲ್ಲಾ ಜಿಲ್ಲೆಗಳಲ್ಲಿಯೂ ದಕ್ಷ ಸಂಪನ್ಮೂಲ ವ್ಯಕ್ತಿಗಳ ಆಯ್ಕೆ ಪ್ರಕ್ರಿಯೆಯ ಭಾಗವಾಗಿ ಕಠಿಣ ಮಾನದಂಡವನ್ನು ಬಳಸಲು ತೀರ್ಮಾನಿಸಲಾಯಿತು. ಇದರಿಂದ, ಆಯ್ಕೆಯಾದ ವ್ಯಕ್ತಿಗಳು ಸೂಕ್ತ ಮನೋಧೋರಣೆ ಮತ್ತು ಸಹಜ ಆಸಕ್ತಿಗಳನ್ನು ಹೊಂದಿದ್ದಾರೆಯೇ ಹಾಗೂ ಪರಿಕಲ್ಪನೆಗಳ ಅರ್ಥವನ್ನು ತಿಳಿದಿರುವುದು, ಕಲಿಯಲು ಬೇಕಾದ ತೆರೆದ ಮನಸ್ಸು, ಆಳವಾಗಿ ತೊಡಗಿಕೊಳ್ಳುವುದು, ಸುಗಮಕಾರರಾಗಿ ಕಾರ್ಯನಿರ್ವಹಿಸಲು ಅಗತ್ಯವಾದ ಕೌಶಲ, ಭಾಗವಹಿಸುವ ವಿವಿಧ ರೀತಿಯ ಶಿಕ್ಷಕರೊಡನೆ ವ್ಯವಹರಿಸುವ ಹಾಗೂ ಸವಾಲುಗಳನ್ನು ಎದುರಿಸುವ ಸಾಮರ್ಥ್ಯ, ಆತ್ಮವಿಶ್ವಾಸ ಹಾಗೂ ಶಿಕ್ಷಕರ ಮೇಲೆ ಬೀರುವ ಪ್ರಭಾವ ಇತ್ಯಾದಿ ಆವಶ್ಯಕ ಗುಣಗಳನ್ನು ಹೊಂದಿದ್ದಾರೆಯೇ ಎನ್ನುವುದನ್ನು ಖಚಿತಪಡಿಸುವುದಾಗಿತ್ತು. ಲಿಖಿತ ಪರೀಕ್ಷೆಯನ್ನು ವಿನ್ಯಾಸಗೊಳಿಸುವ, ಅದನ್ನು ವಿವಿಧ ಜಿಲ್ಲೆಗಳಲ್ಲಿ ನಡೆಸುವ, ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮಾಡುವ ಹಾಗೂ ಸಂದರ್ಶನಗಳ ಮೂಲಕ ಸೂಕ್ತ, ತಜ್ಞ ಸಂಪನ್ಮೂಲ ವ್ಯಕ್ತಿಗಳನ್ನು ಆಯ್ಕೆ ಮಾಡುವ ಎಲ್ಲಾ ಜವಾಬ್ದಾರಿಗಳನ್ನೂ ಎಸ್‌ಆರ್‌ಪಿಗಳ ತಂಡಕ್ಕೆ ವಹಿಸಲಾಗಿತ್ತು (ನಾನೂ ಅದರ ಭಾಗವಾಗಿದ್ದೆ.). ದಕ್ಷ, ತಜ್ಞ ಸಂಪನ್ಮೂಲ ವ್ಯಕ್ತಿಗಳನ್ನು ಅಭಿವೃದ್ಧಿ ಪಡಿಸುವ ಜವಾಬ್ದಾರಿಯೂ ಇದೇ ಎಸ್‌ಆರ್‌ಪಿಗಳ ಮೇಲಿದೆ.

ಆರು ಜಿಲ್ಲೆಗಳುದ್ದಕ್ಕೂ ಓಡಾಡಿ ಸಂವಹಿಸುವುದರ ಮೂಲಕ ನಾನು ಪಡೆದುಕೊಂಡ ಒಳನೋಟಗಳು ನನ್ನ ಅರಿವನ್ನು ಹೆಚ್ಚಿಸುವಂತದ್ದಾಗಿದ್ದವು. ಬೇರೆ ಜಿಲ್ಲೆಗಳಲ್ಲಿ ಇನ್ನಷ್ಟು ಬೇರೆ ಬೇರೆ ಅನುಭವಗಳಾಗಿವೆ. ಅವುಗಳಲ್ಲಿ ಕೆಲವು ವಿಭಿನ್ನವಾಗಿಯೂ ಇವೆ. ಆದರೆ ನಾನು ಹಂಚಿಕೊಳ್ಳುತ್ತಿರುವ ಕೆಲವು ಅನುಭವಗಳು ರಾಜ್ಯದಾದ್ಯಂತ ಕಂಡುಬರುವಂತಹವುಗಳಾಗಿವೆ.

ಅನುಸಂಧಾನ ಪ್ರಕ್ರಿಯೆಯಲ್ಲಿ ಭಾಗವಹಿಸಿದವರೆಲ್ಲರಿಂದಲೂ ಪ್ರಚಂಡವಾದ ಧನಾತ್ಮಕ ಸ್ಪಂದನೆ ಸಿಕ್ಕಿತು. ತಮಗೂ ಬೆಲೆಯಿದೆ, ಪ್ರಾಮುಖ್ಯತೆಯಿದೆ ಎಂದು ಅವರಿಗೆ ಅನ್ನಿಸಿತು. ಅದಕ್ಕಿಂತ ಮುಖ್ಯವಾಗಿ ಅವರಿಗೆ ತಾವು ಮಾಡಿದ ಕೆಲಸವನ್ನು ಹಂಚಿಕೊಳ್ಳಲು ಹಾಗೂ ತಮಗಿರುವ ಕಾಳಜಿಗಳನ್ನು ವ್ಯಕ್ತಪಡಿಸಲು ಸ್ಥಳಾವಕಾಶ ಸಿಕ್ಕಿತು. ಇಡೀ ಆಯ್ಕೆ ಪ್ರಕ್ರಿಯೆಯು ವೃತ್ತಿಪರವಾಗಿಯೂ ಪಾರದರ್ಶಕವಾಗಿಯೂ ಇತ್ತು. ತಾವಿನ್ನೂ ಜವಾಬ್ದಾರಿಯನ್ನು ಹೊರಲು ಸಿದ್ಧರಾಗಿಲ್ಲ ಎಂದು ಯಾರಿಗೆಲ್ಲ ಅನ್ನಿಸಿತೋ ಅವರು ಅಥವಾ ಯಾರಿಗೆ ಇನ್ನೂ ಅಂತಹ ಸಾಮರ್ಥ್ಯ ಸಾಲದು ಎಂದು ಕಂಡುಬಂದಿತೋ ಅವರು ಕೂಡ ಅವಕಾಶವು ದೊರಕಿದ ಭಾವನೆಯಲ್ಲಿ

ತೆರಳಿದರು. ಈ ಕುರಿತು ಸಮಯವನ್ನು ವ್ಯಯಿಸಲು ಆಸಕ್ತಿಯಿಲ್ಲದಿದ್ದವರು ಅಥವಾ ವೈಯಕ್ತಿಕ ತೊಂದರೆಗಳಿದ್ದವರನ್ನು ಪ್ರಕ್ರಿಯೆಯೊಳಗೆ ಬಲವಂತವಾಗಿ ನೂಕಲಿಲ್ಲ. ವೈಯಕ್ತಿಕ ಹಾಗೂ ವೃತ್ತಿಪರ ಅಡೆತಡೆಗಳನ್ನು ಗೆಲ್ಲುವುದಕ್ಕೆ ಯಾರು ವಿಶೇಷವಾದ ಧೈರ್ಯವನ್ನು ತೋರಿದರೋ ಅವರಿಗೆ ಮೆಚ್ಚುಗೆ ವ್ಯಕ್ತಪಡಿಸಲಾಯಿತು. ಅನೌಪಚಾರಿಕ ವ್ಯವಸ್ಥೆಯು ಮುಕ್ತ ಹಾಗೂ ಹಿತಕರ ವಾತಾವರಣವನ್ನು ಉಂಟುಮಾಡುವಲ್ಲಿ ನೆರವಾಯಿತು. ಅವರಲ್ಲಿ ಕೆಲವರು ಆ ಮುಂದಿನ ಪ್ರಕ್ರಿಯೆಗಳ ಬಗ್ಗೆ ಹಾಗೂ ಇದು ಮೊದಲು ತಮಗೆ ಹೇಗೆ ಉತ್ತಮ ಕಲಿಕೆಯಾಗಿ ಮಾರ್ಪಡಬಲ್ಲದು, ತಮ್ಮ ಮೂಲಕ ತದನಂತರದಲ್ಲಿ ಮಕ್ಕಳಿಗೆ ತಲುಪಬಲ್ಲದು ಎಂಬುದರ ಕುರಿತು ಕಾಳಜಿಯನ್ನು ಕೂಡ ವ್ಯಕ್ತಪಡಿಸಿದರು.

ಈ ಇಡೀ ಆಯ್ಕೆ ಪ್ರಕ್ರಿಯೆಯಿಂದ ದೊರೆತ ಮಹತ್ವದ ಒಳನೋಟವೆಂದರೆ, ವ್ಯವಸ್ಥೆಗೆ ಸಂಬಂಧಿಸಿದಂತೆ ತನ್ನೊಳಗೇ ಅಗಾಧ ಸಮಸ್ಯೆಗಳನ್ನು ಹೊಂದಿರುವ ಸಾರ್ವಜನಿಕ ಶಿಕ್ಷಣ ಇಲಾಖೆಯಂತಹ ಬೃಹತ್ ಸಾಂಸ್ಥಿಕ ವ್ಯವಸ್ಥೆಯೊಂದು ಇಂತಹ ದೂರದೃಷ್ಟಿಯನ್ನುಳ್ಳ ಪರಿವರ್ತನಾ ಉಪಕ್ರಮವನ್ನು ಕೈಗೊಳ್ಳಲು ಹಾಗೂ ಇಲಾಖೆಯೊಳಗೇ ಲಭ್ಯವಿರುವ ಅತ್ಯುತ್ತಮ ಪ್ರತಿಭೆಗಳನ್ನು ಗುರುತಿಸುವುದಕ್ಕಾಗಿ ತನ್ನ ಸಂಪನ್ಮೂಲಗಳನ್ನು ತೊಡಗಿಸಲು ಮುಕ್ತವಾಗಿ ಮುಂದೆ ಬಂದಿದೆ ಎನ್ನುವುದು. ಅವರು ದೀರ್ಘಾವಧಿಯಲ್ಲಿ ಶಿಕ್ಷಕರ ವೃತ್ತಿಪರ ಅಭಿವೃದ್ಧಿಯನ್ನು ಗಮನಾರ್ಹವಾಗಿ ಬಲಪಡಿಸುವ ಈ ಪ್ರಯಾಣದಲ್ಲಿ ತಮ್ಮನ್ನೇ ತಾವು ಬದ್ಧರಾಗಿಸಿಕೊಂಡಿದ್ದಾರೆ.

ರಾಜ್ಯದ ಅನೇಕ ಜಿಲ್ಲೆಗಳಲ್ಲಿ ಪ್ರವಾಸ ಮಾಡುತ್ತಿದ್ದಾಗ ನಾನು ಗಮನಿಸಿದ ಮತ್ತೊಂದು ಪ್ರಮುಖ ಪ್ರವೃತ್ತಿಯೆಂದರೆ, ನಗರ ಜಿಲ್ಲೆಗಳಲ್ಲಿ ಶೇಕಡಾವಾರು ಗಮನಾರ್ಹ ಸಂಖ್ಯೆಯ ಜನ ತಮ್ಮ ಅಭಿವೃದ್ಧಿಗೆ ಸಮಯವನ್ನು ತೊಡಗಿಸಲು ಯಾವುದೇ ಆಸಕ್ತಿಯನ್ನು ತೋರಿಸುತ್ತಿಲ್ಲ ಎನ್ನುವುದು. ಉತ್ತರ ಮತ್ತು ದಕ್ಷಿಣ ಶೈಕ್ಷಣಿಕ ಜಿಲ್ಲೆಗಳನ್ನು ಒಳಗೊಂಡಿರುವ ಬೆಂಗಳೂರು ನಗರ ಜಿಲ್ಲೆಯಲ್ಲಿ ಸುಮಾರು ಶೇ. 40 ಶಿಕ್ಷಕರು ಲಿಖಿತ ಪರೀಕ್ಷೆಯಲ್ಲಿ ಸಾಕಷ್ಟು ಚೆನ್ನಾಗಿ ಮಾಡಿದ್ದರೂ ಸಂಪನ್ಮೂಲ ವ್ಯಕ್ತಿಗಳಾಗಲು ತಮಗೆ ಆಸಕ್ತಿಯಿಲ್ಲದಿರುವುದನ್ನು ವ್ಯಕ್ತಪಡಿಸಿದರು. ಹೋಲಿಸಿ ನೋಡಿದರೆ, ಗ್ರಾಮೀಣ ಜಿಲ್ಲೆಗಳಲ್ಲಿ ಬದ್ಧತೆಯ ಮಟ್ಟವು ಹೆಚ್ಚು. ಆದರೆ ಅವರಿಗೆ ಹೆಚ್ಚಿನ ಮಟ್ಟದ ಸಂಪನ್ಮೂಲ ವ್ಯವಸ್ಥೆಯ, ಬೆಂಬಲದ ಅಗತ್ಯವಿದೆ. ಈ ಪ್ರವೃತ್ತಿಯೇನೂ ಆಶ್ಚರ್ಯಕರವಾದುದಲ್ಲ. ಆದರೂ ಸರ್ಕಾರಿ ಶಾಲೆಗಳು ಅಳಿವಿನ ಭಯವನ್ನು ಎದುರಿಸುತ್ತಿರುವ ನಗರ ಪ್ರದೇಶಗಳಲ್ಲಿ ಕೆಲವು ಶಿಕ್ಷಕರ ಹಾಗೂ ಅಧಿಕಾರಿಗಳ ನಿರ್ಲಕ್ಷ್ಯದ ಮನೋಭಾವವನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಕಠಿಣವಾದ ಕೆಲವು ಕ್ರಮಗಳನ್ನು ತೆಗೆದುಕೊಳ್ಳಲೇಬೇಕಾಗಿದೆ.

'ನೀರಸವಾದ, ಏಕತಾನತೆಯಿಂದ ಕೂಡಿದ, ಪ್ರೇರಣಾತ್ಮಕವಾಗಿರದ ಶಾಲಾಬೋಧನೆಗೆ ಉಳಿದೆಲ್ಲವುಗಳ ಜೊತೆ ಶಿಕ್ಷಕರ ಕಳಪೆ ಸಾಮರ್ಥ್ಯವೇ ಕಾರಣ', ಹಾಗೂ 'ಶಿಕ್ಷಣದ ಗುಣಾತ್ಮಕ ಸುಧಾರಣೆಗೆ ಶಿಕ್ಷಕರ ವೃತ್ತಿಪರ ಶಿಕ್ಷಣ ಕಾರ್ಯಕ್ರಮವು ಉತ್ತಮವಾಗಿರಬೇಕಾದುದು ಅತ್ಯಂತ ಅವಶ್ಯಕ' ಎಂದು 1968ರಷ್ಟು ಹಿಂದೆಯೇ ಕೊಠಾರಿ ಶಿಕ್ಷಣ ಆಯೋಗವು ಅಭಿಪ್ರಾಯಪಟ್ಟಿತ್ತು.

ರಾಜ್ಯದಾದ್ಯಂತ ಸಮರ್ಥರಾದ ತಜ್ಞ, ದಕ್ಷ ಸಂಪನ್ಮೂಲ ವ್ಯಕ್ತಿಗಳನ್ನು ಅಭಿವೃದ್ಧಿಪಡಿಸುವ ಪ್ರಕ್ರಿಯೆಯು ದೃಢಸಂಕಲ್ಪದಿಂದ ಆರಂಭವಾಗಿದೆ. ಶಿಕ್ಷಕರ ತರಬೇತಿ ಕಾರ್ಯಕ್ರಮದ ಸ್ವರೂಪವನ್ನು ಬದಲಾಯಿಸಲಾಗಿದೆ. ವಾಸ್ತವಿಕವಾಗಿ ಸಪ್ಟೆಂಬರ್ ಐದರಂದು ಅದನ್ನು ಆರಂಭಿಸಲು ಯೋಜಿಸಿದ್ದು, ಅದನ್ನು 'ಗುರುಚೇತನ' ಎಂದು ಹೆಸರಿಸಿರುವುದು ಸೂಕ್ತವಾಗಿಯೇ ಇದೆ. ಡಾ.ರಾಧಾಕೃಷ್ಣನ್ ಅವರು ಆಶಿಸಿದ್ದ ಹಾಗೆ, ಈ ಅಭಿವೃದ್ಧಿ ಪ್ರಕ್ರಿಯೆಯು ಸಾವಿರಾರು ಶಿಕ್ಷಕರಿಗೆ 'ದೇಶದ ಅತ್ಯುತ್ಕೃಷ್ಟ ಮನಸ್ಸು'ಗಳಾಗಲು ಸ್ಫೂರ್ತಿ ನೀಡುತ್ತದೆ ಎಂಬ ನಿರೀಕ್ಷೆಯಿದೆ.

■

ಬಿ ಫಸ್ಟ್, 04-08-2017



**13ನೇ ಸೆಪ್ಟೆಂಬರ್ 2017**– ಆನೇಕಲ್ ಬ್ಲಾಕ್‌ನ ಗಣಿತ ಶಿಕ್ಷಕರಿಗಾಗಿ ಬೋಧನಾ–ಕಲಿಕೆ ಸಾಮಗ್ರಿಗಳ ತಯಾರಿ ಕುರಿತ ಕಾರ್ಯಾಗಾರದಲ್ಲಿ ಶಿಕ್ಷಕರೊಬ್ಬರು ಕಾರ್ಯನಿರತರಾಗಿರುವುದು. ಸ್ವ–ಅವಲೋಕನ ಆಧರಿತ ಹಾಗೂ ತರಗತಿ ಬೋಧನೆಗೆ ಪೂರಕವಾದ ಚಟುವಟಿಕೆಗಳಿಗೆ ಒತ್ತು ನೀಡಿದಾಗ ಇಂತಹ ಕಾರ್ಯಾಗಾರಗಳಲ್ಲಿ ಶಿಕ್ಷಕರ ಸಕ್ರಿಯ ಭಾಗವಹಿಸುವಿಕೆಯನ್ನು ಕಾಣಬಹುದು.

**4 ಮತ್ತು 5ನೇ ಡಿಸೆಂಬರ್ 2017** – ಮೇಲಿನ ಚಿತ್ರದಲ್ಲಿ ಬೆಂಗಳೂರು ದಕ್ಷಿಣ–1 ಬ್ಲಾಕ್‌ನ ಗಣಿತ ಶಿಕ್ಷಕಿಯರು ಜ್ಯಾಮಿತಿ ಪರಿಕಲ್ಪನೆಯ ಮೇಲೆ ಹಮ್ಮಿಕೊಂಡ ಕಾರ್ಯಾಗಾರದಲ್ಲಿ ತೊಡಗಿರುವುದು.

ನಂಬಿಕೆಯೆನ್ನುವುದು, ನಸುಕಿನಲ್ಲಿ ಇನ್ನೂ ಕತ್ತಲೆ
ಇರುವಾಗಲೇ ಬೆಳಕನ್ನು ಗ್ರಹಿಸಿ ಹಾಡುವ ಹಕ್ಕಿಯಂತೆ.

**– ರವೀಂದ್ರನಾಥ್ ಟಾಗೋರ್**

# ಪ್ರಮುಖ ಶೈಕ್ಷಣಿಕ ಸುಧಾರಣೆಯ ಹರಿಕಾರ – ಕರ್ನಾಟಕ

### ಸೇವಾನಿರತ ಶಿಕ್ಷಕರ ಅಭಿವೃದ್ಧಿಯಲ್ಲಿ ಮೂಲಭೂತ ಬದಲಾವಣೆಗಳು

ಪ್ರಮುಖ ನೀತಿನಿರೂಪಣಾ ದಾಖಲೆಗಳಾದ, ಎನ್‌ಸಿಎಫ್‌ಟಿಇ 2009 ಹಾಗೂ ಜಸ್ಟಿಸ್ ವರ್ಮಾ ಸಮಿತಿಯ ವರದಿಗಳು ಹೊಂದಿರುವ ಆಶೋತ್ತರಗಳಿಗನುಗುಣವಾಗಿ ಸೇವಾನಿರತ ಶಿಕ್ಷಕರ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸುಧಾರಣೆಗಳನ್ನು ತರುತ್ತಿರುವ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ರಾಜ್ಯದಲ್ಲೀಗ ಈ ಸಂಬಂಧವಾಗಿ, ಮಾರ್ಗ ಪ್ರವರ್ತಕ ವಿಧಾನವೊಂದನ್ನು ಕಾರ್ಯಗತಗೊಳಿಸಲಾಗುತ್ತಿದೆ. ಡಿಎಸ್‌ಇಆರ್‌ಟಿಯು ರಾಜ್ಯಮಟ್ಟದ ಸಂಪನ್ಮೂಲ ವ್ಯಕ್ತಿಗಳನ್ನು ಹೊಂದಿರುವ ತಂಡವೊಂದನ್ನು ರಚಿಸುವಲ್ಲಿ ಮುಂದಾಳತ್ವ ವಹಿಸಿದೆ. ಅದರಲ್ಲಿ ಹೆಚ್ಚಿನ ಜನರನ್ನು ಸರ್ಕಾರಿ ಶಾಲಾ ವ್ಯವಸ್ಥೆಯೊಳಗಿನಿಂದಲೂ ಉಳಿದವರನ್ನು ನಮ್ಮ ಸಂಸ್ಥೆಯಿಂದಲೂ ತೆಗೆದುಕೊಳ್ಳಲಾಗಿದೆ. ಈ ಹೊಸ ವಿಧದ ಮಾಡ್ಯೂಲ್‌ಗಳ ಅಭಿವೃದ್ಧಿ ಪ್ರಯತ್ನವು ನಾಲ್ಕು ತಿಂಗಳುಗಳ ಕಾಲಾವಧಿಯದಾಗಿದ್ದು ಪರಿಶ್ರಮವನ್ನು ಬೇಡುವಂತಹದಾಗಿದೆ ಹಾಗೂ ಪುನರಾವರ್ತನೆಯ ಪ್ರಕ್ರಿಯೆಯನ್ನು ಒಳಗೊಂಡಿದೆ. 2017–18ನೆಯ ಶೈಕ್ಷಣಿಕ ವರ್ಷದ ಅವಧಿಯಲ್ಲಿ ಹತ್ತು ದಿನಗಳ ಕಾರ್ಯಾಗಾರದಲ್ಲಿ ತಜ್ಞ ಸಂಪನ್ಮೂಲ ವ್ಯಕ್ತಿಗಳು ಈ ಕುರಿತು ಶಿಕ್ಷಕರಿಗೆ ತರಬೇತಿ ನೀಡಲಿದ್ದಾರೆ.

**ಗತಕಾಲದಿಂದ ಹೊಸತಿಗೆ ಪದಾರ್ಪಣೆ**

ಶಾಲಾ ಶಿಕ್ಷಣ ಇಲಾಖೆಯು ಆಯ್ದುಕೊಂಡು ಅನುಸರಿಸುತ್ತಿರುವ ಪ್ರಕ್ರಿಯೆಯು ಹಲವಾರು ಕಾರಣಗಳಿಂದ ಈಗಿರುವ ಆಚರಣೆಗಳನ್ನು ಬಿಟ್ಟು ಹೊಸತೊಂದಕ್ಕೆ ಮುನ್ನಡೆಯುವುದಾಗಿದೆ. ಅದರಲ್ಲಿ ಮುಖ್ಯವಾದ ಕೆಲವು ಅಂಶಗಳು ಹೀಗಿವೆ:

(ಅ) ಏಳು ವಿಷಯಗಳಲ್ಲಿಯೂ ಮಾಡ್ಯೂಲ್‌ಗಳನ್ನು ಅಭಿವೃದ್ಧಿಪಡಿಸುವಾಗ, ನಲಿ–ಕಲಿ ಮತ್ತು ಶೈಕ್ಷಣಿಕ ದೃಷ್ಟಿಕೋನಗಳಲ್ಲದೆ (ಮೊದಲ ಬಾರಿಗೆ ಸೇವಾನಿರತ ತರಬೇತಿಯಲ್ಲಿ ಈ ವಿಷಯವನ್ನು ಪರಿಚಯಿಸಲಾಗುತ್ತಿದೆ) ಕನ್ನಡ ಮತ್ತು ಹಿಂದಿ (ಇಂಗ್ಲಿಷನ್ನು ಪ್ರತ್ಯೇಕವಾಗಿ ತೆಗೆದುಕೊಳ್ಳಲಾಗುತ್ತದೆ. ಅದಕ್ಕಾಗಿ, ಶಿಕ್ಷಕರಿಗೆ ಹೆಚ್ಚಿನ ಅವಧಿಯ, ಆಳ ಹಾಗೂ ಸಮಗ್ರವಾದ ಸಿದ್ಧತೆಯನ್ನು ಯೋಜಿಸಲಾಗುತ್ತಿದೆ) ಎರಡು ಭಾಷೆಗಳಲ್ಲಿ ಹಾಗೂ ವಿಜ್ಞಾನ, ಗಣಿತ, ಸಮಾಜ ವಿಜ್ಞಾನ ಈ ಮೂರು ಮುಖ್ಯ ವಿಷಯಗಳಲ್ಲಿ ಅವು ಪಠ್ಯಕ್ರಮಕ್ಕೆ ಪ್ರಸ್ತುತವಾಗಿರುವಂತೆ ಹಾಗೂ ತರಗತಿಯ ಸಂದರ್ಭ, ಶಿಕ್ಷಕರ ಅನುಭವಗಳ ಮೇಲೆ ಕೇಂದ್ರೀಕೃತವಾಗಿರುವಂತೆ ಪ್ರಯತ್ನಿಸಲಾಗುತ್ತಿದೆ.

(ಆ) ವಿಷಯದ ಸ್ವರೂಪ, ವಸ್ತುವಿಷಯ, ಬೋಧನಾವಿಧಾನ ಹಾಗೂ ಮೌಲ್ಯಮಾಪನಗಳನ್ನು ಒಳಗೊಂಡಂತೆ ಈ ಮಾಡ್ಯೂಲ್‌ಗಳನ್ನು ಬಿಗಿಯಾಗಿ ಹೆಣೆಯಲಾಗಿದೆ ಹಾಗೂ ಪ್ರಸ್ತುತ ಮುಖ್ಯ ವಿಷಯಗಳ ಸುತ್ತ ಪರಿಕಲ್ಪಿಸಲಾಗಿದೆ. ಉದಾಹರಣೆಗೆ, ಈ ವರ್ಷ ಕನ್ನಡದಲ್ಲಿ ನಾಲ್ಕು ಮುಖ್ಯ ವಿಷಯಗಳಲ್ಲಿ 'ಭಾಷೆಯ ಸ್ವರೂಪ' ಹಾಗೂ ಭಾಷೆ ಮತ್ತು ಸಮಾಜ' ಎಂಬ ಎರಡನ್ನು ಆಯ್ದುಕೊಂಡಿದ್ದು, ವಿಜ್ಞಾನದಲ್ಲಿ 'ಭೌತವಸ್ತುವಿನ ತಿಳುವಳಿಕೆ'ಯನ್ನು ಪರಿಶೋಧಿಸಲಾಗುತ್ತಿದೆ.

(ಇ) ಮಾಡ್ಯೂಲ್‌ಗಳ ಅಭಿವೃದ್ಧಿಯ ಕಾರ್ಯವನ್ನು ಒಂದೊಂದಾಗಿ ಸರಣಿಯಲ್ಲಿ ನಡೆದ ಸನಿವಾಸ ಕಾರ್ಯಾಗಾರಗಳಲ್ಲಿ ತೀವ್ರ ರೀತಿಯಿಂದ ಕೈಗೊಳ್ಳಲಾಯಿತು. ಅದೇ ಹೊತ್ತಿಗೆ ಸಂಬಂಧಪಟ್ಟ ವಿಷಯ ತಂಡಗಳು ಪ್ರತೀ ಬಾರಿಗೂ ಸುಮಾರು ಒಂದು ವಾರದ ಕಾಲದಂತೆ, ತಿಂಗಳಿಗೆ ಕನಿಷ್ಠ ಎರಡು ಬಾರಿಯಾದರೂ ಒಂದೆಡೆ ಸೇರುತ್ತಿದ್ದವು. ಗುರುತಿಸಲಾದ ರಾಜ್ಯ ಸಂಪನ್ಮೂಲ ವ್ಯಕ್ತಿಗಳು ಬಹುಮಟ್ಟಿಗೆ ನವೆಂಬರ್‌ನಿಂದ ಮಾರ್ಚ್‌ವರೆಗಿನ ಅವಧಿಯಲ್ಲಿ, ಅದು ಅತ್ಯಂತ ಗರಿಷ್ಠ ಶೈಕ್ಷಣಿಕ ಚಟುವಟಿಕೆಗಳ ಅವಧಿಯಾಗಿದ್ದರೂ ಕೂಡ ಮೂರ್ನಾಲ್ಕು

ತಿಂಗಳುಗಳ ಕಾಲ ನಿರಂತರವಾಗಿ ಸಮಯವನ್ನು ನೀಡುವಂತೆ ಡಿಎಸ್‌ಇಆರ್‌ಟಿಯು ನೋಡಿಕೊಂಡಿತು. ವಿಮರ್ಶಾತ್ಮಕವಾದ ಹಿಮ್ಮಾಹಿತಿಯನ್ನು ಪಡೆದುಕೊಳ್ಳುವ ಹಾಗೂ ಮಾಡ್ಯೂಲ್‌ಗಳನ್ನು ಬಲಪಡಿಸುವ ನಿಟ್ಟಿನಲ್ಲಿ ರಾಜ್ಯದ ಎಲ್ಲೆಡೆಯಿಂದ ಬಂದ ಆಯ್ದ ಶಿಕ್ಷಕರಿಗೆ ಕಾರ್ಯಾಗಾರದಲ್ಲಿಯೇ ಎಲ್ಲಾ ಮಾಡ್ಯೂಲ್‌ಗಳನ್ನು ಪ್ರಯೋಗಾತ್ಮಕವಾಗಿ ಒದಗಿಸುವಂತೆ ಕಾರ್ಯಾಗಾರಗಳನ್ನು (Pilot Workshops) ನಡೆಸಲಾಯಿತು.

(ಈ) ಮಾಡ್ಯೂಲ್‌ಗಳನ್ನು ಅಭಿವೃದ್ಧಿಪಡಿಸುವ ಶಿಕ್ಷಕರ ಜಾಗದಲ್ಲಿ ಬೇರೆ ಶಿಕ್ಷಕರನ್ನು ನಿಯೋಜಿಸುವ ವಿಷಯದಲ್ಲಿ ಕಾಳಜಿ ವಹಿಸಲಾಯಿತು. ವಿಶೇಷವಾಗಿ ಅತ್ಯಂತ ಮುಖ್ಯವಾದ ಎಸ್‌ಎಸ್‌ಎಲ್‌ಸಿ ಪರೀಕ್ಷೆಯ ಸಂದರ್ಭದಲ್ಲಿ ಕೆಲವು ಅಡಚಣೆಗಳು ಉಂಟಾದವು. ಆದರೆ ಮಾಡ್ಯೂಲ್ ರಚನಾಕಾರರು ಸಮಯವನ್ನು ಪರಿಣಾಮಕಾರಿಯಾಗಿ ನಿಭಾಯಿಸಿದರು. ಸಹಶಿಕ್ಷಕರ ತಂಡಗಳ ಜೊತೆ ಮಾಡ್ಯೂಲ್‌ಗಳನ್ನು ಸಿದ್ಧಪಡಿಸುವಾಗ ಮತ್ತು ಅದನ್ನು ಪ್ರಾಯೋಗಿಕ ಕಾರ್ಯಾಗಾರಗಳಲ್ಲಿ ಅನುಕೂಲಿಸುವಾಗ, ಪ್ರತಿದಿನ ಹನ್ನೆರಡರಿಂದ ಹದಿನಾಲ್ಕು ಗಂಟೆಗಳ ಕಾಲ ಓದುವುದರಲ್ಲಿ–ಅರ್ಥೈಸಿಕೊಳ್ಳುವುದರಲ್ಲಿ–ಸೃಜನಾತ್ಮಕ ಅನುವಾದ ಕಾರ್ಯದಲ್ಲಿ ತೊಡಗಿಕೊಂಡರು. ಸಾಮಗ್ರಿಯನ್ನು ಸಂದರ್ಭಕ್ಕೆ ಸೂಕ್ತವಾಗಿ ಹೊಂದಿಸಿ, ಪ್ರಸ್ತುತವಾದ ತರಗತಿಕೋಣೆ ಉದಾಹರಣೆಗಳನ್ನು ಪರಿಚಯಿಸುವುದರಲ್ಲಿ, ಅವರು ಆಳವಾಗಿ ಕೆಲಸ ಮಾಡಿದರು. ಇದೆಲ್ಲವನ್ನೂ ಕನ್ನಡದಲ್ಲಿಯೇ ಮಾಡಲಾಯಿತು. ಈ ರೀತಿಯಾಗಿ, ಮಾಡ್ಯೂಲ್‌ನ್ನು ಸಿದ್ಧಪಡಿಸುವವರು ಅವುಗಳ ಸಾರ–ಸತ್ವವನ್ನು ಬಹುಮಟ್ಟಿಗೆ ಗ್ರಹಿಸಲು ಹಾಗೂ ಅವುಗಳ ಗುಣಮಟ್ಟದಲ್ಲಿ ಇನ್ನಷ್ಟು ಸಮೃದ್ಧವಾದ ಅಂಶಗಳನ್ನು ತರಲು ಸಾಧ್ಯವಾಯಿತು.

(ಉ) 'ಎಲ್ಲರಿಗೂ ಒಂದೇ' ಅಳತೆ ಎನ್ನುವ ರೀತಿಯ ತರಬೇತಿಯ ವಿಧಾನಕ್ಕೆ ಅಂಟಿಕೊಳ್ಳುವುದರ ಬದಲಾಗಿ, ಈ ಬಾರಿ ಶಿಕ್ಷಕರು ತಮ್ಮ ವೃತ್ತಿಪರ ಅಭಿವೃದ್ಧಿಗೆ ಮಾಡ್ಯೂಲ್‌ಗಳನ್ನು ಆಯ್ಕೆ ಮಾಡಿಕೊಳ್ಳುವ ಸಂಬಂಧದಲ್ಲಿ ಅವರಿಗೆ ವಿವಿಧ ಆಯ್ಕೆಗಳು ಲಭ್ಯವಿರುವಂತೆ ನೋಡಿಕೊಳ್ಳಲಾಯಿತು. ಅದಕ್ಕನುಗುಣವಾಗಿ, ಈ ವರ್ಷದಿಂದ ಪ್ರತಿ ಮಾಡ್ಯೂಲ್‌ನ ಒಂದು ಪುಟದ ಸಾರಾಂಶವನ್ನು ಆಧರಿಸಿದ ಮಾಹಿತಿಯನ್ನು ನೀಡುವ ಮೂಲಕ ಶಿಕ್ಷಕರಿಗೆ ತಮ್ಮ ಇಷ್ಟದ ವಿಷಯಗಳನ್ನು ಮುಂಚಿತವಾಗಿಯೇ ಆಯ್ದುಕೊಳ್ಳಲು ಅವಕಾಶ ಮಾಡಿಕೊಡಲಾಗುತ್ತಿದೆ. ಈ ವರ್ಷ ಅದು,

ಲಭ್ಯವಿರುವ ಆಯ್ಕೆಗಳಲ್ಲಿ ಯಾವುದೇ ಎರಡು ಪಠ್ಯಘಟಕಗಳನ್ನು ಆಯ್ದುಕೊಳ್ಳುವುದಾಗಿರುತ್ತದೆ. ಚಿಕ್ಕ ಪ್ರಮಾಣದಲ್ಲಿಯೇ ಆದರೂ ಸ್ವಇಚ್ಛೆ ಮತ್ತು ಶಿಕ್ಷಕರ ಕರ್ತೃತ್ವಶಕ್ತಿಯನ್ನು ಮರಳಿ ಸ್ಥಾಪಿಸುವ ನಿಟ್ಟಿನಲ್ಲಿ ಇದು ಮಹತ್ವದ ಹೆಜ್ಜೆಯಾಗಿದೆ.

(ಊ) ಶಿಕ್ಷಕರ ವೃತ್ತಿಪರ ಅಭಿವೃದ್ಧಿಯು ನಾಲ್ಕರಿಂದ ಐದು ವರುಷಗಳಷ್ಟು ದೀರ್ಘಕಾಲಾವಧಿಯಲ್ಲಿ ಆಗುವಂತಹದ್ದು ಎಂಬುದನ್ನು ಗಮನಿಸಿ, ಒಂದರಿಂದ ಐದು ದಿನಗಳ ವ್ಯಾಪ್ತಿಯಲ್ಲಿ ಎಲ್ಲಾ ವಿಷಯಗಳ ನೂರೈವತ್ತಕ್ಕೂ ಹೆಚ್ಚು ಮಾಡ್ಯೂಲ್‌ಗಳು ಲಭ್ಯವಾಗುವಂತೆ ಮಾಡುವ ಆಲೋಚನೆ ಇದೆ. ಹಾಗಾಗಿ ಈ ವರ್ಷ ಒದಗಿಸಲಾದ ಇಪ್ಪತ್ತೆಂಟು ಮಾಡ್ಯೂಲ್‌ಗಳು ಕೇವಲ ಆರಂಭಿಕ ಬಿಂದುವಾಗಿದ್ದು ಉಳಿದವುಗಳನ್ನು ನಿರಂತರ ಅಭಿವೃದ್ಧಿ ಪ್ರಯತ್ನಗಳ ಭಾಗವಾಗಿ ಮುಂಬರುವ ಎಲ್ಲ ವರ್ಷಗಳಲ್ಲಿ ಲಭ್ಯವಾಗುವಂತೆ ಹಂಚಿಕೆಯ ಯೋಜನೆಯನ್ನು ಮಾಡಲಾಗಿದೆ.

(ಎ) ದೀರ್ಘಕಾಲೀನವಾದ ಶಿಕ್ಷಕರ ಅಭಿವೃದ್ಧಿಯ ಪ್ರಕ್ರಿಯೆಯನ್ನು ಪರಿಕಲ್ಪಿಸಿ, ಯೋಜಿಸಿ, ಕಾರ್ಯಗತಗೊಳಿಸಿ ಅವುಗಳ ಉಸ್ತುವಾರಿ ನೋಡಿಕೊಳ್ಳಲು ರಾಜ್ಯಮಟ್ಟದ ಒಂದು ಸಂರಚನೆಯನ್ನು ರೂಪಿಸಲಾಗಿದೆ. ಪ್ರಧಾನ ತಂಡವೊಂದನ್ನು ರಚಿಸಲಾಗಿದ್ದು ಅದು ಪಠ್ಯಕ್ರಮ ಚೌಕಟ್ಟೊಂದನ್ನು ಸಿದ್ಧಪಡಿಸಿದೆ ಹಾಗೂ ಶಿಕ್ಷಕರ ಅಗತ್ಯಗಳನ್ನು ಕಂಡುಕೊಂಡು, ಅವುಗಳನ್ನಾಧರಿಸಿ ಮುಂಬರುವ ಕೆಲ ವರ್ಷಗಳಲ್ಲಿ ಕೋರ್ಸ್ ಹಾಗೂ ಮಾಡ್ಯೂಲ್‌ಗಳನ್ನು ಹಂತಹಂತವಾಗಿ ಅಭಿವೃದ್ಧಿಪಡಿಸುವಂತೆ ಮಾಡಿದೆ.

(ಏ) ಈ ಮೂಲಭೂತ ಬದಲಾವಣೆಗಳನ್ನು ಶಿಕ್ಷಕರು, ಕ್ಲಸ್ಟರ್, ಬ್ಲಾಕ್ ಮತ್ತು ಜಿಲ್ಲಾಮಟ್ಟದ ಅಧಿಕಾರಿಗಳು ಹೀಗೆ ಎಲ್ಲ ಭಾಗೀದಾರರಿಗೂ ಲಿಖಿತ ಹಾಗೂ ದೃಶ್ಯಮಾಧ್ಯಮಗಳ ಮೂಲಕ ತಲುಪುವಂತೆ ಮಾಡಲು ಒಂದು ವಿವರವಾದ ಸಂವಹನಾ ಯೋಜನೆಯನ್ನು ವಿನ್ಯಾಸಗೊಳಿಸಲಾಗಿದೆ.

(ಐ) ಕಾಲಕ್ರಮದಲ್ಲಿ ಸಂಕೀರ್ಣವಾದ ಈ ರಾಜ್ಯವ್ಯಾಪಿ ಪ್ರಯತ್ನದ ಜಾಡನ್ನು ಅನುಸರಿಸಲು ಸಾಧ್ಯವಾಗುವಂತೆ ಹಾಗೂ ಅದನ್ನು ಉಸ್ತುವಾರಿ ಮಾಡಲು ಆಗುವಂತೆ ಶಿಕ್ಷಕ ತರಬೇತಿ ನಿರ್ವಹಣಾ ವ್ಯವಸ್ಥೆ(ಟಿಟಿಎಮ್‌ಎಸ್) ಯೊಂದನ್ನು ಸಮಾನಾಂತರವಾಗಿ ರೂಪಿಸಲಾಗುತ್ತಿದೆ.

(ಒ) ಇಡೀ ಪ್ರಕ್ರಿಯೆಯುದ್ದಕ್ಕೂ ಆಡಳಿತ ವ್ಯವಸ್ಥೆಯು ಒಂದು ಸಶಕ್ತವಾದ ಬದ್ಧತೆ ಹಾಗೂ ಬೆಂಬಲವನ್ನು ತೋರುತ್ತಿದೆ. ಪ್ರಾಥಮಿಕ ಮತ್ತು

ಪ್ರೌಢ ಶಿಕ್ಷಣ ಇಲಾಖೆಯ ಹೆಚ್ಚುವರಿ ಪ್ರಧಾನ ಕಾರ್ಯದರ್ಶಿಗಳು ಸ್ವತಃ ಮುಂಚೂಣಿಯಲ್ಲಿದ್ದು ತನ್ನ ನಾಯಕತ್ವದ ತಂಡದೊಂದಿಗೆ ಈ ಪ್ರಯತ್ನಗಳ ಪ್ರಗತಿಯನ್ನು ನಿಕಟವಾಗಿ ಅವಲೋಕಿಸುತ್ತಿದ್ದಾರೆ ಮತ್ತು ಮಾರ್ಗದರ್ಶನ ಮಾಡುತ್ತಿದ್ದಾರೆ.

## ಸವಾಲುಗಳು ಹಾಗೂ ಸಂಭಾವ್ಯ ಪರಿಹಾರಗಳು

ಮೇಲಿನ ಧನಾತ್ಮಕ ಚಿತ್ರಣದ ಹೊರತಾಗಿಯೂ ಈ ಉಪಕ್ರಮವು ದೀರ್ಘಾವಧಿಯಲ್ಲಿ ಹೇಗೆ ಮುಂದುವರೆಯುತ್ತದೆ ಎಂಬುದರ ಕುರಿತು ಹಲವಾರು ತಾರ್ಕಿಕ ಪ್ರಶ್ನೆಗಳು ಎದ್ದೇ ಏಳುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ವಿಶ್ಲೇಷಿಸಿದ್ದೇನೆ.

(1) *ಮೇಲಿನವರ ನಿರಂತರ ಬೆಂಬಲದ ಮುಂದುವರಿಕೆ – ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತರುವ ಯಾವುದೇ ದೀರ್ಘಕಾಲೀನ ಉಪಕ್ರಮಕ್ಕೆ ಇಲಾಖೆಯ ಹಿರಿಯ ಮಟ್ಟದ ಅಧಿಕಾರಿಗಳಿಂದ ಬದ್ಧತೆ ಹಾಗೂ ಬೆಂಬಲದ ಅಗತ್ಯವಿದೆ ಎನ್ನುವುದು ಎಲ್ಲರಿಗೂ ತಿಳಿದಿರುವ ಸಂಗತಿ. ಎಲ್ಲ ಸುಧಾರಣೆಗಳ ವಿಷಯದಲ್ಲಿಯೂ ಸರ್ಕಾರವು ಮುಂದಾಳತ್ವ ವಹಿಸುತ್ತದೆ. ಆದರೆ ಶಿಕ್ಷಣ ಕ್ಷೇತ್ರದಲ್ಲಿನ ಸುಧಾರಣೆಗಳು ಇನ್ನಿತರ ಕ್ಷೇತ್ರಗಳಲ್ಲಿನ ಸುಧಾರಣೆಗಳಿಗಿಂತ ವಿಭಿನ್ನ. ಅಲ್ಲಿ ಆಗಬೇಕಾದ ದೀರ್ಘಕಾಲೀನ ಬದಲಾವಣೆಯು ಹೆಚ್ಚು ಸಂಕೀರ್ಣವೂ ಕ್ರಿಯಾಶೀಲ ಪ್ರಕ್ರಿಯೆಯೂ ಆಗಿದೆ. ಏಕೆಂದರೆ, ಶೈಕ್ಷಣಿಕ ಬದಲಾವಣೆಯ ಪ್ರಕ್ರಿಯೆಯು ಅಧಿಕಾರದಲ್ಲಿರುವ ಜನರ ವ್ಯಾಪ್ತಿಯಾಚೆಗೆ ತನ್ನ ಕೇಂದ್ರವನ್ನು ಹೊಂದಿದೆ. ಪೋಷಕರು, ಸಮುದಾಯ, ಸಮೂಹ ಮಾಧ್ಯಮಗಳು, ಸರ್ಕಾರ ಮತ್ತು ಚುನಾಯಿತ ಪ್ರತಿನಿಧಿಗಳು ಇವರೆಲ್ಲರ ಆಶೋತ್ತರ ಮತ್ತು ಅನುಸಂಧಾನವನ್ನು ಇದು ಒಳಗೊಳ್ಳುತ್ತದೆ. ಎಲ್ಲಾ ಮಟ್ಟಗಳಲ್ಲಿಯೂ ಜನರನ್ನು ತೊಡಗಿಸಲು, ಮಾರ್ಗದಲ್ಲಿನ ಅಡೆತಡೆಗಳನ್ನು ನಿವಾರಿಸಲು ಹಾಗೂ ಗುರಿಯತ್ತ ಗಮನವನ್ನು ದೃಢವಾಗಿ ಕೇಂದ್ರೀಕರಿಸಲು ಮುಖ್ಯವಾಗಿ ಬದಲಾವಣೆಯನ್ನು ಪರಿಚಯಿಸುವವರು ತಮ್ಮ ಹುದ್ದೆಯಲ್ಲಿ ದೀರ್ಘ ಅವಧಿಯವರೆಗೆ ಮುಂದುವರೆಯುವುದು ಅಗತ್ಯವಾಗಿರುತ್ತದೆ. ಸರ್ಕಾರಿ ಯಂತ್ರವು ಹೇಗೆ ಕಾರ್ಯ ನಿರ್ವಹಿಸುತ್ತದೆ ಎಂಬುದರ ಅರಿವು ಇರುವ ಯಾರೊಬ್ಬರೂ ಇದಾಗಬೇಕೆಂದು ಬೇಡಿಕೆ ಇಡಲಾರರು. ಪ್ರಸಕ್ತ ವಿಚಾರದಲ್ಲಿ ವಿಧಾನಗಳಲ್ಲಿನ ಮೂಲಭೂತ ಬದಲಾವಣೆಗಳನ್ನು*

ಈಗಾಗಲೇ ವಿನ್ಯಾಸದ ಅಂಶದಲ್ಲಿ ಸೇರಿಸಿರುವುದರಿಂದ ಸಂದರ್ಭಗಳು ಬದಲಾದರೂ ಈ ಬದಲಾವಣೆಗಳಿಂದ ಹಿಂದೆ ಸರಿಯುವುದಿಲ್ಲ ಎಂದು ಆಶಿಸಲಾಗಿದೆ.

(2) ಕಾರ್ಯಾಗಾರಗಳ ಸಮಯ ಮತ್ತು ಅವು ನಡೆಯುವ ಸ್ಥಳ – ಶಿಕ್ಷಕರ ಸಾಮರ್ಥ್ಯ ಅಭಿವೃದ್ಧಿ ಕಾರ್ಯಾಗಾರಗಳು ವಸತಿ ಸೌಕರ್ಯಗಳಿರುವ ಜಾಗದಲ್ಲಿ, ಅದರಲ್ಲಿಯೂ ರಜೆಯ ಅವಧಿಯಲ್ಲಿ ನಡೆಯುವುದು ಒಳ್ಳೆಯದು. ಶಿಕ್ಷಕರು ಶಾಲಾ ದಿನಗಳಲ್ಲಿ ಮಕ್ಕಳಿಂದ ದೂರವಿರಬೇಕಾದ ಅನಿವಾರ್ಯತೆಯನ್ನು ಇದು ತಪ್ಪಿಸುತ್ತದೆ. ಜೊತೆಗೆ, ಶಿಕ್ಷಕರಿಗೆ ಅನುಕೂಲಕರವಾದ ಕಲಿಕೆಯ ವಾತಾವರಣವನ್ನು ಒದಗಿಸುತ್ತದೆ. ರಜೆಯ ಅವಧಿಯಲ್ಲಿ ಶಿಕ್ಷಕರು ತರಬೇತಿಯಲ್ಲಿ ಭಾಗವಹಿಸಬೇಕಾದಾಗ ಅದಕ್ಕನುಗುಣವಾಗಿ ಅವರಿಗೆ ವ್ಯವಸ್ಥಿತ ಯೋಜನೆ ಹಾಗೂ ಮೊದಲೇ ಮಾಹಿತಿ ನೀಡುವ ಮೂಲಕ ಅವರು ತಮ್ಮ ಸಾಮಾಜಿಕ ಜೀವನವನ್ನು ಕೂಡ ಯಾವುದೇ ತೊಂದರೆ ಇಲ್ಲದೆ ನಿಭಾಯಿಸುವಂತಹ ವ್ಯವಸ್ಥೆಯನ್ನು ರೂಪಿಸುವುದು ಹೆಚ್ಚು ಸಹಾಯಕಾರಿಯಾಗಬಲ್ಲದು.

(3) ಹಣಕಾಸಿನ ಹಂಚಿಕೆ – ಶಿಕ್ಷಕರ ಉನ್ನತ ಗುಣಮಟ್ಟದ ನಿರಂತರ ಶೈಕ್ಷಣಿಕ ಬೆಳವಣಿಗೆಯಲ್ಲಿ ಹೂಡಿಕೆ ಮಾಡುವುದರಿಂದಲೇ ಒಟ್ಟಾರೆ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವುದಕ್ಕೆ ಸಾಧ್ಯ. ಡಯಟ್ ಹಾಗೂ ಬಿಆರ್‌ಸಿ ಗಳಲ್ಲಿ ತರಬೇತಿಯನ್ನು ಮತ್ತು ವಸತಿ ಸೌಕರ್ಯಗಳನ್ನು ಸುಧಾರಿಸಲು ದೀರ್ಘಕಾಲೀನ ಹೂಡಿಕೆ ಮಾಡುವುದು ಮತ್ತು ತರಬೇತಿ ಸಾಮಗ್ರಿ, ವಸತಿ, ಪ್ರಯಾಣವೆಚ್ಚಗಳಿಗೆ ಸಂಬಂಧಿಸಿದಂತೆ ತಲಾ ವ್ಯಕ್ತಿಗೆ ದಿನವೊಂದಕ್ಕೆ ತಗಲುವ ವೆಚ್ಚವನ್ನು ಹೆಚ್ಚಿಸುವುದು ತುಂಬಾ ಅಗತ್ಯ. ಅಷ್ಟೇ ಮುಖ್ಯವಾದ ಇನ್ನೊಂದು ಅಂಶವೆಂದರೆ, ಹಣಕಾಸನ್ನು ಸಕಾಲಕ್ಕೆ ಬಿಡುಗಡೆ ಮಾಡುವುದು. ಬಹುಶಃ ರಾಜ್ಯ ಸರ್ಕಾರವು ಇಂತಹ ಮುಖ್ಯವಾದ ಪ್ರಯತ್ನಗಳಿಗೆ ತನ್ನದೇ ಹಣಕಾಸಿನ ಮೂಲಗಳಿಂದ ಹೆಚ್ಚಿನ ಹಣಕಾಸು ಲಭ್ಯವಾಗುವಂತೆ ಮಾಡುವುದಕ್ಕೆ ಇದು ಸೂಕ್ತ ಸಮಯ. ಈ ವರ್ಷ ಹೊಸ ತರಬೇತಿ ವಿನ್ಯಾಸಕ್ಕೆ ಪ್ರೋತ್ಸಾಹದಾಯಕ ಸ್ಪಂದನೆಗಳು ಬರುತ್ತಿರುವುದರಿಂದ, ರಾಜ್ಯ ಸರ್ಕಾರವು ಇಂತಹ ಹಣಕಾಸಿನ ಹಂಚಿಕೆಯನ್ನು ಹೆಚ್ಚಿಸಬೇಕು ಎನ್ನುವ ವಿಚಾರದ ತಾರ್ಕಿಕತೆ ಬಲವಾಗುತ್ತದೆ ಹಾಗೂ ಕ್ರಮೇಣ ಹೆಚ್ಚಿನ ಹಣಕಾಸಿನ ನೆರವಿಗೆ ಬೇಡಿಕೆ ಕಡಿಮೆಯಾಗುತ್ತದೆ ಎಂದು ಭಾವಿಸಬಹುದು.

(4) ಮೇಲಿನಿಂದ ಗುಣಮಟ್ಟದ ಹರಿವು ಕ್ಷೀಣಿಸದಂತೆ ನೋಡಿಕೊಳ್ಳುವುದು– ಡಿಎಸ್‌ಇಆರ್‌ಟಿಯು ಮಾಡ್ಯೂಲ್‌ಗಳ ಅಭಿವೃದ್ಧಿಗಾಗಿ ರಾಜ್ಯ ಸಂಪನ್ಮೂಲ ವ್ಯಕ್ತಿಗಳ ಕ್ರಿಯಾಶೀಲ ತಂಡವೊಂದನ್ನು ಆಯ್ಕೆಮಾಡುವಲ್ಲಿ ಗಮನಾರ್ಹ ಕಾರ್ಯವನ್ನು ಮಾಡಿದೆ. ಇಡೀ ಸಂಪನ್ಮೂಲ ತಂಡವು ಕ್ಷೇತ್ರದಲ್ಲಿನ ನೈಜ ಅನುಭವಗಳನ್ನು ತರುವ ಮೂಲಕ ಹಾಗೂ ಎಲ್ಲದಕ್ಕಿಂತ ಹೆಚ್ಚಾಗಿ ವಸ್ತುವಿಷಯವನ್ನು ಶಿಕ್ಷಕರಿಗೆ ಅವರ ಅಗತ್ಯಕ್ಕೆ ತಕ್ಕಂತೆ ರೂಪಿಸುವುದಕ್ಕಿಂತ ಮೊದಲು ತಾವು ಆಳವಾಗಿ ಅಂತರ್ಗತಗೊಳಿಸಿಕೊಳ್ಳುವುದರ ಮೂಲಕ ಓದುವ, ಸೃಜನಾತ್ಮಕವಾಗಿ ಅನುವಾದಿಸುವ ಹಾಗೂ ಸಾಂದರ್ಭೀಕರಿಸುವ ಕಠಿಣ ಪ್ರಕ್ರಿಯೆಯಲ್ಲಿ ಪ್ರಚಂಡವಾದ ಬದ್ಧತೆ, ಕಲಿಕೆಯಲ್ಲಿನ ಸಾಮರ್ಥ್ಯ ಹಾಗೂ ಅನ್ವಯಿಸುವಿಕೆಗಳನ್ನು ತೋರಿತು. ಅವರು ಇದನ್ನು ಮಾಡಿದ್ದು ಮಕ್ಕಳ ಕುರಿತಾದ ನೈಜ ಕಾಳಜಿಯಿಂದ, ಶಿಕ್ಷಕರ ಮೂಲಕ ಅವರಿಗೆ ಅತ್ಯುತ್ತಮವಾದುದನ್ನು ಕೊಡುವ ಇಚ್ಛೆಯಿಂದ. ಕಳೆದ ಕೆಲವು ತಿಂಗಳುಗಳ ಕಾಲ ಶೈಕ್ಷಣಿಕ ದೃಷ್ಟಿಕೋನಗಳ ತಂಡದಲ್ಲಿನ ಕೆಲವರೊಂದಿಗೆ ನಿಕಟವಾಗಿ ಕೆಲಸ ಮಾಡಿದ ನನ್ನ ಸ್ವಂತ ಅನುಭವಗಳ ಆಧಾರದ ಮೇಲೆ ಹೇಳುವುದಾದರೆ, ಪ್ರಕ್ರಿಯೆಯು ಸಾಕಷ್ಟು ಗುಣಮಟ್ಟದ್ದಾಗಿರುವ ಕಾರಣ, ಅದನ್ನು ತಜ್ಞ, ದಕ್ಷ ಸಂಪನ್ಮೂಲ ವ್ಯಕ್ತಿಗಳನ್ನು ಅಭಿವೃದ್ಧಿಪಡಿಸುವ ಮುಂದಿನ ಹಂತಗಳಿಗೆ ತೆಗೆದುಕೊಂಡು ಹೋಗುವಾಗ ಮತ್ತು ಶಿಕ್ಷಕ ಅಭಿವೃದ್ಧಿ ಕಾರ್ಯಾಗಾರಗಳನ್ನು ನಡೆಸುವಾಗ ಗುಣಮಟ್ಟದ ಹರಿವು ದುರ್ಬಲವಾಗುವ ಸಾಧ್ಯತೆಯು ಕಡಿಮೆ ಇರುತ್ತದೆ ಎನ್ನುವ ಆಶಾಭಾವನೆ ನನ್ನದಾಗಿದೆ.

(5) ಮುಂದುವರಿಕೆ ಅನುಪಾಲನೆ – ಈ ಎಲ್ಲ ಪ್ರಯತ್ನಗಳು ನಿರಂತರವಾಗಿ ಮುಂದುವರೆಯಲು ಬ್ಲಾಕ್ ಮತ್ತು ಜಿಲ್ಲಾಮಟ್ಟಗಳಲ್ಲಿ ವ್ಯವಸ್ಥಿತವಾದ ಅನುಪಾಲನೆ ಮತ್ತು ಅವಲೋಕನದ ಪ್ರಕ್ರಿಯೆಗಳನ್ನು ಆರಂಭಿಸುವುದು ಮುಖ್ಯ. ಬಹುಶಃ ಸಿಆರ್‌ಪಿ ಮತ್ತು ಬಿಆರ್‌ಪಿಗಳು, ಶೈಕ್ಷಣಿಕ ಸಂಯೋಜಕರು(ಇಸಿಓ), ವಿಷಯ ಪರಿಶೀಲಕರು(ಎಸ್‌ಐ), ಕ್ಷೇತ್ರ ಸಂಪನ್ಮೂಲ ಕೇಂದ್ರ ಸಂಯೋಜಕರು (ಬಿಆರ್‌ಸಿಸಿ) ಹಾಗೂ ಡಯಟ್ ಬೋಧಕ ವರ್ಗವನ್ನು ಒಳಗೊಂಡಿರುವ, ಕ್ಲಸ್ಟರ್‌ನಿಂದ ಜಿಲ್ಲಾಮಟ್ಟದ ತನಕ ಈಗ ಇರುವ ಶೈಕ್ಷಣಿಕ ಸಂರಚನೆಗಳು ತರಬೇತಿ ಪಡೆದ ಶಿಕ್ಷಕರಿಗೆ ಬೆಂಬಲ ನೀಡುವಂತೆ ಅವರನ್ನು

ಅಣಿಗೊಳಿಸಬೇಕಿದೆ. ಅವರು ಶಿಕ್ಷಕರಿಗೆ ಉತ್ತೇಜನವನ್ನು ನೀಡಬೇಕು ಮತ್ತು ತಮ್ಮ ತರಗತಿಕೋಣೆಗಳಲ್ಲಿ ಮಗುಸ್ನೇಹಿ ಬೋಧನಾಕ್ರಮವನ್ನು ಅನ್ವೇಷಿಸಿ, ಪ್ರಯತ್ನಿಸಲು ಸ್ಥಳಾವಕಾಶವನ್ನು ಒದಗಿಸಬೇಕು.

**ಫಲಿತಗಳು:** ಕೊನೆಯದಾಗಿ, ಈ ಬದಲಾವಣೆಗಳು ನಿಜಕ್ಕೂ ಯಶಸ್ವಿಯಾಗಲು ಅವು ಶಿಕ್ಷಕರ ತರಗತಿ ಕೋಣೆಯಲ್ಲಿನ ಆಚರಣೆ – ಅಭ್ಯಾಸಗಳಲ್ಲಿ ಹಾಗೂ ಮಕ್ಕಳ ಕಲಿಕಾ ಮಟ್ಟಗಳಲ್ಲಿ ಕಂಡುಬರಬೇಕಿದೆ. ಈ ಆಯಾಮಗಳಲ್ಲಿ ಆದ ಬದಲಾವಣೆಗಳನ್ನು ಗುರುತಿಸಲು ಹಾಗೂ ಅವುಗಳನ್ನು ದಾಖಲಿಸಲು ಸೂಕ್ತವಾದ ಮೌಲ್ಯಮಾಪನದ ಮಾನದಂಡವನ್ನು ರೂಪಿಸುವ ಅಗತ್ಯವಿದೆ.

## ನಂಬಿಕೆಯನ್ನಿಟ್ಟುಕೊಳ್ಳೋಣ

ಕರ್ನಾಟಕದಲ್ಲಿ, ದೀರ್ಘಕಾಲದಿಂದ ನಿರೀಕ್ಷಿಸುತ್ತಿದ್ದ ಸುಧಾರಣಾ ಉಪಕ್ರಮವೊಂದಕ್ಕೆ ಶಿಕ್ಷಣ ಇಲಾಖೆಯು ಚಾಲನೆ ನೀಡಿದೆ. ಇಲಾಖೆಯೊಳಗೇ ಲಭ್ಯವಿರುವ ಪ್ರತಿಭೆಗಳನ್ನು ಉಪಯೋಗಿಸಿಕೊಂಡು ತರಲು ಪ್ರಯತ್ನಿಸುತ್ತಿರುವ ಇಂತಹ ಆಳವಾದ ಹಾಗೂ ವಿಸ್ತಾರವಾದ ಬದಲಾವಣೆಗಳಿಗೆ ಅವು ಯಶಸ್ವಿಯಾಗಲು ಸಾಕಷ್ಟು ಸಮಯವನ್ನು ನೀಡಬೇಕು ಎನ್ನುವುದನ್ನು ಅರಿಯುವುದು ಮುಖ್ಯ. ತಪ್ಪುಗಳಿಂದ ಕಲಿಯಲು ಹಾಗೂ ತಿದ್ದುಪಡಿಗಳನ್ನು ಮಾಡಿಕೊಳ್ಳಲು ಕೆಲವಷ್ಟು ಅವಕಾಶಗಳನ್ನೂ ಕೊಡಬೇಕಾಗುತ್ತದೆ. ಈಗ ಜಾರಿಯಲ್ಲಿರುವ ಸೇವಾನಿರತ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳು ಶಿಕ್ಷಕರ ನಿರ್ದಿಷ್ಟ ಅಗತ್ಯಗಳ ಬಗ್ಗೆ ಕಾಳಜಿ ವಹಿಸುವಲ್ಲಿ ಶೋಚನೀಯ ರೀತಿಯಲ್ಲಿ ವಿಫಲವಾಗಿವೆ ಎನ್ನುವುದನ್ನು ಗಮನಿಸಿದರೆ, ಎರಡು ದಶಕಗಳಿಂದ ಕಾರ್ಯನಿರತವಾಗಿದ್ದರೂ ಅವು ವ್ಯಕ್ತಿಯೊಬ್ಬನಿಗೆ ಪರಿಣಾಮಕಾರಿಯಾದ ಶಿಕ್ಷಕನಾಗಲು ಬೇಕಾದ ಬೋಧನಾ ವಿಧಾನದ ತಿಳುವಳಿಕೆ ಅಥವಾ ಸಾಮರ್ಥ್ಯ, ಮನೋಧರ್ಮಗಳನ್ನು ನೀಡಲೂ ಇಲ್ಲ. ಬೆಂಬಲ ಸಿಗದಿದ್ದರೂ ಕೂಡ ಇತ್ತೀಚಿನ ಕೆಲವು ಪ್ರಯತ್ನಗಳತ್ತ ಭರವಸೆಯ ನೋಟವನ್ನು ಹಾಯಿಸುವುದಕ್ಕೆ ಬಲವಾದ ಕಾರಣಗಳಿವೆ. ಟಾಗೋರರು ಹೇಳಿದಂತೆ, 'ನಂಬಿಕೆಯೆನ್ನುವುದು, ನಸುಕಿನಲ್ಲಿ ಇನ್ನೂ ಕತ್ತಲೆ ಇರುವಾಗಲೇ ಬೆಳಕನ್ನು ಗ್ರಹಿಸಿ ಹಾಡುವ ಹಕ್ಕಿಯಂತೆ.'

■

ಬಿ ಫಸ್ಟ್, 02-05-2017

ಅತ್ಯುತ್ತಮ ವಿದ್ಯಾರ್ಥಿಗಳನ್ನು ಶಿಕ್ಷಕ ವೃತ್ತಿಗೆ ಆಕರ್ಷಿಸುವುದು, ಶಿಕ್ಷಕ ಸಮುದಾಯದ ಕೊಡುಗೆಯನ್ನು ಗುರುತಿಸಿ, ಗೌರವಿಸುವುದರ ಮೂಲಕ ಆತ್ಮಗೌರವವನ್ನು ಪುನಃಸ್ಥಾಪಿಸುವುದು, ಸುಧಾರಣೆಗಳ ವಿಷಯದಲ್ಲಿ ಹಿಂದಡಿಯಿಡದಿರುವುದು ಸರ್ಕಾರವು ದೀರ್ಘಕಾಲೀನ ಸುಧಾರಣೆಗಳ ಅನುಷ್ಠಾನದ ಪರವಾಗಿದೆ ಎಂಬುದನ್ನು ಸಾಬೀತುಪಡಿಸುತ್ತದೆ.

## ಮಿಷಿಗನ್ ಡೈರಿ ಭಾಗ – 2

# ಅಮೆರಿಕದಲ್ಲಿನ ಶಿಕ್ಷಕ ಶಿಕ್ಷಣ ಕಾರ್ಯಕ್ರಮಗಳ ಸ್ವರೂಪದಿಂದ ಪಡೆದ ಒಳನೋಟಗಳು

ಈ ಬರಹವು 2015ರ ಏಪ್ರಿಲ್‌ನಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನಕ್ಕೆ ನಾನು ಕೈಗೊಂಡ ಪ್ರವಾಸದ ಅವಧಿಯಲ್ಲಿ ಪಡೆದ ವೈಯಕ್ತಿಕ ಅನುಭವಗಳನ್ನು ಆಧರಿಸಿದೆ. ಅಲ್ಲಿನ ಶಾಲಾ ಶಿಕ್ಷಣ ಪದ್ಧತಿಯ ಕಾರ್ಯವೈಖರಿಯನ್ನು ಅರಿಯುವುದು ಪ್ರವಾಸದ ಮುಖ್ಯ ಉದ್ದೇಶವಾಗಿತ್ತು. ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಯು ದೇಶದಲ್ಲಿ ಶಿಕ್ಷಕ–ಶಿಕ್ಷಣ ಕೋರ್ಸ್‌ನ್ನು ಹೊಂದಿರುವ ಅಗ್ರಶ್ರೇಣಿಯ ಸಂಸ್ಥೆಗಳಲ್ಲಿ ಒಂದು. ಅಲ್ಲಿನ ಬೋಧಕವರ್ಗದೊಡನೆ ನಡೆಸಿದ ವಿಚಾರ ವಿನಿಮಯದ ಜೊತೆಗೆ ವ್ಯವಸ್ಥೆಯ ಒಳಗೆ ಹಾಗೂ ಹೊರಗೆ ಇರುವ ತಜ್ಞರೊಡನೆ ಚರ್ಚಿಸಿ, ಶಾಲೆಗಳಿಗೆ ಭೇಟಿ ನೀಡಿ, ವಿಷಯವನ್ನು ಸಂಗ್ರಹಿಸಿ, ವಿಶ್ಲೇಷಿಸಿದ್ದೇನೆ. ಎರಡು ಭಾಗಗಳನ್ನು ಹೊಂದಿರುವ ಸರಣಿ ಬರಹದಲ್ಲಿ ಇದು ಎರಡನೆಯದು.

*

### ಅ. ಶಿಕ್ಷಕ ಶಿಕ್ಷಣ ಕಾರ್ಯಕ್ರಮಗಳ ಸ್ಥೂಲನೋಟ:

ಅಮೆರಿಕದಲ್ಲಿನ ಶಿಕ್ಷಕ ಶಿಕ್ಷಣ ಕಾರ್ಯಕ್ರಮದ ಕಾಲಾವಧಿ ಹಾಗೂ ಗುಣಮಟ್ಟದ ಕಡೆ ಗಮನಹರಿಸಿದಾಗ ಕಂಡುಬರುವುದೇನೆಂದರೆ, ಭಾರತದಲ್ಲಿನ ಸ್ಥಿತಿಗೆ ಹೋಲಿಸಿದಾಗ ಅಲ್ಲಿನ ಕಾರ್ಯಕ್ರಮವು ಹೆಚ್ಚು ಆಳವೂ

ಆಲೋಚನೆಯಿಂದ ಕೂಡಿದುದೂ ಆಗಿದೆ. ಅಮೆರಿಕದಲ್ಲಿ ಇದು ಹನ್ನೆರಡನೆಯ ತರಗತಿಯ ಮಟ್ಟದ ನಂತರ ಐದು ವರ್ಷದ (ನಾಲ್ಕು ವರ್ಷದ ಪದವಿ ಹಾಗೂ ಒಂದು ವರ್ಷದ ಇಂಟರ್ನ್‌ಶಿಪ್ ತರಬೇತಿ) ಅವಧಿಯಾಗಿದ್ದರೆ, ಭಾರತದಲ್ಲಿ ಪದವಿಯ ನಂತರದಲ್ಲಿ ಕೇವಲ ಎರಡು ವರ್ಷ ಅವಧಿಯ ಬಿಎಡ್ (ಶಿಕ್ಷಕ ಸಿದ್ಧತಾ ಕಾರ್ಯಕ್ರಮವು) ಕಳೆದ ಮೂರು ವರ್ಷಗಳಿಂದಲೂ ಜಾರಿಯಲ್ಲಿದೆ. ಶಿಕ್ಷಕ ಶಿಕ್ಷಣ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಈ ಎರಡು ದೇಶಗಳಲ್ಲಿ ಇರುವ ಒಂದು ಪ್ರಮುಖ ವ್ಯತ್ಯಾಸವೆಂದರೆ, ಅಮೆರಿಕದಲ್ಲಿ ಶಿಕ್ಷಕ ಶಿಕ್ಷಣವನ್ನು ಪಡೆಯುವ ವಿದ್ಯಾರ್ಥಿಯು ಆರಂಭದಿಂದಲೇ ತನ್ನ ಆಸಕ್ತಿಯ ಪ್ರಧಾನ ವಿಷಯವನ್ನು (ವಿಜ್ಞಾನ, ಭಾಷೆ ಇತ್ಯಾದಿ) ತಾನೇ ಆಯ್ಕೆ ಮಾಡಿಕೊಳ್ಳಬಹುದು ಹಾಗೂ ಅದನ್ನು ತಾನು ಯಾವ ಮಟ್ಟದ, ಅಂದರೆ ಪೂರ್ವಪ್ರಾಥಮಿಕ, ಪ್ರಾಥಮಿಕ ಅಥವಾ ಪ್ರೌಢಶಾಲಾ ಮಟ್ಟದ ತರಗತಿಗಳಿಗೆ ಬೋಧಿಸಲು ಇಷ್ಟಪಡುತ್ತೇನೆ ಎಂಬುದನ್ನು ನಿರ್ಧರಿಸಬಹುದು. ತಮ್ಮ ಪದವಿ ತರಗತಿಯ ಮೊದಲ ಮೂರು ವರ್ಷಗಳಲ್ಲಿ ವಿದ್ಯಾರ್ಥಿಗಳು ವಿಶ್ವವಿದ್ಯಾಲಯದ ಯಾವುದಾದರೂ ಒಂದು ವಿಭಾಗದಲ್ಲಿ, ಉದಾಹರಣೆಗೆ, ಭಾಷಾ ವಿದ್ಯಾಲಯದಲ್ಲಿ ಮುಖ್ಯ ವಿಷಯವಾಗಿ ಪ್ರಾಥಮಿಕ ಇಂಗ್ಲಿಷನ್ನು ಅಥವಾ ಗಣಿತ ವಿದ್ಯಾಲಯದಲ್ಲಿ ಮುಖ್ಯ ವಿಷಯವಾಗಿ ಪ್ರೌಢ ಹಂತದ ಗಣಿತವನ್ನು ಅಧ್ಯಯನ ಮಾಡುತ್ತಾರೆ. ನಾಲ್ಕನೆಯ ವರ್ಷದಲ್ಲಷ್ಟೇ ವಿಷಯಜ್ಞಾನದ ಜೊತೆಗೆ ಬೋಧನಾ ವಿಧಾನವನ್ನು ಕಲಿಯಲು ಶಿಕ್ಷಕ ಶಿಕ್ಷಣ ಕಾಲೇಜಿಗೆ ಬರುತ್ತಾರೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಪದವಿಯನ್ನು ಪಡೆಯುತ್ತಿರುವಾಗಲೇ ಅವರಿಗೆ ತಾವು ಪ್ರಾಥಮಿಕ ಶಾಲಾ ಮಟ್ಟದ ಇಂಗ್ಲಿಷನ್ನು ಬೋಧಿಸುತ್ತೇವೆಯೇ ಅಥವಾ ಪ್ರೌಢಶಾಲಾ ಮಟ್ಟದ ಗಣಿತವನ್ನೋ ಎನ್ನುವುದು ಸ್ಪಷ್ಟವಾಗಿ ತಿಳಿದಿರುತ್ತದೆ.

ವಿದ್ಯಾರ್ಥಿಗಳು ಶಿಕ್ಷಕರಾಗಲು ಸಿದ್ಧತೆ ನಡೆಸುತ್ತಿದ್ದಾಗಲೇ ಅವರಿಗೆ ತಮ್ಮದೇ ನಂಬಿಕೆಗಳನ್ನು, ಜ್ಞಾನ, ಮನೋಧರ್ಮಗಳನ್ನು ಪರೀಕ್ಷಿಸಿಕೊಳ್ಳುವ ಹಾಗೂ ವಿಷಯಜ್ಞಾನ, ಮೌಲ್ಯಮಾಪನಗಳನ್ನು ಕುರಿತ ತಿಳುವಳಿಕೆಯನ್ನು ಒರೆಗೆ ಹಚ್ಚಿ ನೋಡಿಕೊಳ್ಳುವ ಅವಕಾಶ ಸಿಗುತ್ತದೆ. ಜೊತೆಗೆ ಭಾಷಾ ಸಾಮರ್ಥ್ಯವನ್ನೂ (ಓದು ಹಾಗೂ ಬರಹ) ಒಳಗೊಂಡಂತೆ ತಮ್ಮ ಕೌಶಲದ ಭಂಡಾರವನ್ನು ವೃದ್ಧಿಸಿಕೊಳ್ಳಲು, ಸಾಧನಗಳನ್ನು ಅಭಿವೃದ್ಧಿಪಡಿಸಿಕೊಳ್ಳಲು ಸಾಧ್ಯವಾಗುತ್ತದೆ. ಇವೆಲ್ಲದರ ಜೊತೆ ತಂತ್ರಜ್ಞಾನವು ಉದ್ದಕ್ಕೂ ಹೆಣೆದುಕೊಂಡೇ ಇರುತ್ತದೆ. ಐದನೆಯ ವರ್ಷವು ಸಂಪೂರ್ಣವಾಗಿ ವಿದ್ಯಾರ್ಥಿಗಳಿಗೆ ಇಂಟರ್ನ್‌ಶಿಪ್ ತರಬೇತಿಯ ಅವಧಿಯಾಗಿದ್ದು ಅವರು ಇಡೀ ವರ್ಷವೂ, ವಾರದಲ್ಲಿ ನಾಲ್ಕು ದಿನ ಒಂದೇ ಶಾಲೆಗೆ ಬೋಧಿಸಲು ಹೋಗುತ್ತಾರೆ ಹಾಗೂ ಪರ್ಯಾಲೋಚನೆಗೆಂದು ಒಂದು

ದಿನವನ್ನು ಶಿಕ್ಷಕ ಶಿಕ್ಷಣ ಇಲಾಖೆಯಲ್ಲಿ ಕಳೆಯುತ್ತಾರೆ. ಅಮೆರಿಕದಲ್ಲಿ ಎಲ್ಲೆಡೆ ಶಿಕ್ಷಕ ಶಿಕ್ಷಣ ವಿದ್ಯಾಲಯಗಳು ಉನ್ನತ ಶಿಕ್ಷಣ ಸಂಸ್ಥೆಗಳಡಿ ಬರುತ್ತವೆ. ಆದರೆ ಭಾರತದಲ್ಲಿ ಹಾಗಿಲ್ಲ. ಸದ್ಯ ಅಮೆರಿಕದಲ್ಲಿ ಸುಮಾರು 1300 ಶಾಲೆ, ವಿದ್ಯಾಲಯ ಹಾಗೂ ವಿಶ್ವವಿದ್ಯಾಲಯಗಳು ಶಿಕ್ಷಣದಲ್ಲಿ ಪದವಿ ಅಥವಾ ಸ್ನಾತಕೋತ್ತರ ಪದವಿಗಳನ್ನು ನೀಡುತ್ತಿವೆ.

ಶಿಕ್ಷಣಶಾಸ್ತ್ರ ಶಾಲೆಗಳು ಹೊಂದಿರುವ ಆಸಕ್ತಿಯ ಎರಡು ಕ್ಷೇತ್ರಗಳೆಂದರೆ, ಬೋಧನಾ ಆಚರಣೆ ಮತ್ತು ಸಂಶೋಧನೆಗಳು. ಈ ಶಾಲೆಗಳು ದೊಡ್ಡ ಪ್ರಮಾಣದಲ್ಲಿ ಪ್ರಶಿಕ್ಷಣಾರ್ಥಿಗಳಿಗೆ ತರಬೇತಿ ನೀಡುತ್ತವೆ. ಜೊತೆಗೆ ಇವು ಶಾಲಾ ಆಡಳಿತಕ್ಕೆ ಸಂಬಂಧಿಸಿದಂತೆ ಶಾಲಾ ಪ್ರಾಂಶುಪಾಲರು ಹಾಗೂ ಶಾಲಾ ಜಿಲ್ಲೆಯ ಮೇಲ್ವಿಚಾರಕರಿಗೆ ತರಬೇತಿ ನೀಡುವ ಮುಖ್ಯ ಸಂಸ್ಥೆಗಳೂ ಆಗಿವೆ. ಹಾಗಾಗಿ, ಒಬ್ಬ ಶಿಕ್ಷಕನು ಆಡಳಿತದಲ್ಲಿ ಹೆಚ್ಚುವರಿ ಕೋರ್ಸ್ ಹಾಗೂ ಪರೀಕ್ಷೆಗಳನ್ನು ತೆಗೆದುಕೊಳ್ಳುವುದರ ಮೂಲಕ ಪ್ರಾಂಶುಪಾಲನಾಗಬಹುದು. ಆಸಕ್ತಿಯ ಮೂರನೆಯ ಕ್ಷೇತ್ರವೆಂದರೆ, ಶಿಕ್ಷಣ ನೀತಿ ಹಾಗೂ ಸುಧಾರಣೆ. ಹಲವಾರು ಶಿಕ್ಷಣಶಾಸ್ತ್ರ ಶಾಲೆಗಳಲ್ಲಿ ಸಂಶೋಧನಾ ಅಧ್ಯಯನಗಳ ಗಮನವು ಸಮತೆಯಂತಹ ಸಂಗತಿಗಳ ಮೇಲೆ ಹರಿದಿದೆ(ಇದು ನಿರ್ದಿಷ್ಟವಾಗಿ ಕಡಿಮೆ ಆದಾಯವಿರುವ ಜನರು, ಅಲ್ಪಸಂಖ್ಯಾತರು ಹಾಗೂ ವಲಸಿಗ ಸಮುದಾಯಗಳಲ್ಲಿ ಕಂಡಬರುತ್ತದೆ.).

ಅಮೆರಿಕ ಸಂಯುಕ್ತ ಸಂಸ್ಥಾನದ ಸುದ್ದಿ ಮತ್ತು ಜಾಗತಿಕ ವರದಿ(US News and World Report)ಯು ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಯ ಶಿಕ್ಷಕ ಶಿಕ್ಷಣ ವಿಭಾಗಕ್ಕೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದಲ್ಲಿ ಸತತವಾಗಿ ಮೊದಲನೆಯ ಶ್ರೇಣಿ ನೀಡಿದೆ. ಆ ವಿಭಾಗವು ಗಳಿಸಿರುವ ಉನ್ನತ ಶ್ರೇಣಿಯ ಹಿಂದಿನ ಕಾರಣಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದಾಗಿದೆ.

ಒಟ್ಟಾರೆ ಕಾರ್ಯಕ್ರಮವನ್ನು ಉತ್ತಮ ರೀತಿಯಲ್ಲಿ ರೂಪಿಸಲಾಗಿದೆ. ವಿಷಯ ಸಾಮರ್ಥ್ಯಕ್ಕೆ, ವಿದ್ಯಾರ್ಥಿಗಳ ದೃಷ್ಟಿಕೋನವನ್ನು ರೂಪಿಸುವುದಕ್ಕೆ, ಬೋಧನಾವಿಧಾನದ ಕೌಶಲಗಳಿಗೆ ಹಾಗೂ ಕ್ಷೇತ್ರ ಆಚರಣೆಗಳ ಕುರಿತಾಗಿ ಅಗತ್ಯವಿರುವಷ್ಟು ಒತ್ತನ್ನು ನೀಡಲಾಗಿದೆ. ಯಾವುದೇ ಸಮಯದಲ್ಲಿಯೂ ಒಂದೂವರೆ ಸಾವಿರ ವಿದ್ಯಾರ್ಥಿಗಳಿದ್ದು ನಾನೂರೈವತ್ತರಿಂದ ಐನೂರು ವಿದ್ಯಾರ್ಥಿಗಳು ಐದನೆಯ ವರ್ಷದ ಇಂಟರ್ನ್‌ಶಿಪ್ ಅವಧಿಯಲ್ಲಿರುತ್ತಾರೆ. ಇವರೆಲ್ಲರಿಗೂ ಬೋಧನಾ ಸೌಲಭ್ಯವು ದೊರಕುವಂತೆ ಮಾಡಲು ತರಬೇತಿ ಹಂತದ ಎರಡರಿಂದ ಆರು ಪ್ರಶಿಕ್ಷಣಾರ್ಥಿಗಳನ್ನು ನಿರ್ದಿಷ್ಟ ಶಾಲೆಗೆ ಬೇರೆ ಬೇರೆ ವಿಷಯಗಳನ್ನು ಬೋಧಿಸಲು ಕಳಿಸುತ್ತಾರೆ.

ಅ. ವಿಶ್ವವಿದ್ಯಾಲಯವು ತನ್ನ ವಿದ್ಯಾರ್ಥಿ-ಶಿಕ್ಷಕರಿಗೆ ಸಶಕ್ತ ಕಲಿಕೆಯ ಅವಕಾಶಗಳನ್ನು ಒದಗಿಸುವ ವಿವಿಧ ಶಾಲೆಗಳ ಜೊತೆಗೆ ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿದಂತೆ ಅತ್ಯುತ್ತಮವಾದ ಸಂಪರ್ಕವನ್ನು ಹೊಂದಿರುತ್ತದೆ. ಇಂತಹ ಸಂಪರ್ಕವನ್ನು ವೃದ್ಧಿಸಬೇಕೆಂಬುದರಲ್ಲಿ ವಿಶ್ವವಿದ್ಯಾಲಯವು ಹೆಚ್ಚಿನ ನಂಬಿಕೆಯಿರಿಸಿದೆ.

ಆ. ವಿಶ್ವವಿದ್ಯಾಲಯದ ಶಿಕ್ಷಕ ಶಿಕ್ಷಣ ಇಲಾಖೆಯ ವತಿಯಿಂದ ಕೋರ್ಸ್ ಬೋಧಕರಲ್ಲೊಬ್ಬರು ಶಾಲೆಯಲ್ಲಿ ಕನಿಷ್ಠ ಹತ್ತು ವರ್ಷ ಬೋಧನಾ ಅನುಭವವಿರುವ, ಕ್ಷೇತ್ರ ಮಾರ್ಗದರ್ಶಕರಾದ ಹಿರಿಯ ಶಿಕ್ಷಕರೊಬ್ಬರ ಜೊತೆಗೂಡಿ ವಿದ್ಯಾರ್ಥಿಗಳ ಮೇಲೆ ಗಮನ ಇಡುತ್ತಾರೆ. ಬೋಧನಾ ಸಾಮರ್ಥ್ಯ ಮತ್ತು ವ್ಯಕ್ತಿತ್ವದ ಆಧಾರದ ಮೇಲೆ ಪ್ರಾಂಶುಪಾಲರು ಶಾಲಾ ಶಿಕ್ಷಕರನ್ನು ಆಯ್ಕೆ ಮಾಡಿರುತ್ತಾರೆ. ಕ್ಷೇತ್ರ ಮಾರ್ಗದರ್ಶಕರು ಪ್ರತಿ ವಿದ್ಯಾರ್ಥಿಗೆ ತಾವು ವೆಚ್ಚ ಮಾಡುವ ಸಮಯಕ್ಕೆ ಪ್ರತಿಯಾಗಿ ಎಪ್ಪತ್ತೈದು ಅಮೆರಿಕನ್ ಡಾಲರ್‌ಗಳನ್ನು (ಚಿಕ್ಕ ಮೊತ್ತವಾದರೂ) ಪಡೆಯುತ್ತಾರೆ. ಆದರೆ ಅವರು ಮಾರ್ಗದರ್ಶಕರಾಗುವುದಕ್ಕೆ, ಶಿಕ್ಷಕರ ವೃತ್ತಿಪರ ಅಭಿವೃದ್ಧಿಗೆ ಕೊಡುಗೆ ನೀಡುವುದರ ಮೂಲಕ ತಾವು ತಮ್ಮ ವೃತ್ತಿಗೆ ಮರಳಿ ಏನನ್ನಾದರೂ ಕೊಡಬೇಕೆನ್ನುವ ಉತ್ಕಟ ಅಪೇಕ್ಷೆಯೇ ಪ್ರಮುಖ ಕಾರಣವಾಗಿರುತ್ತದೆ.

ಇ. ಪ್ರಶಿಕ್ಷಣಾರ್ಥಿಗಳು ತಾವೇ ಜವಾಬ್ದಾರರಾಗಿರುವಂತೆ ಕಾರ್ಯಕ್ರಮದ ಪ್ರಮಾಣಿತ ಮಟ್ಟಗಳನ್ನು ನಿಗದಿಪಡಿಸಲಾಗಿದೆ. ಇಡೀ ಕಾರ್ಯಕ್ರಮವು ವಿದ್ಯಾರ್ಥಿಗಳಲ್ಲಿ ಹಂತಹಂತವಾದ ಪ್ರಗತಿ ಉಂಟಾಗುವುದನ್ನು ನಿರೀಕ್ಷಿಸುತ್ತದೆ. ಅದೆಂದರೆ, ಮಾರ್ಗದರ್ಶಕರಿಂದ ನಿರ್ದೇಶನ ಪಡೆಯುವ ಹಂತದಿಂದ ಆರಂಭಿಸಿ, ಮಾರ್ಗದರ್ಶಕರ ಬೆಂಬಲ ಪಡೆಯುವುದು, ತರಗತಿ ಶಿಕ್ಷಕರಿಗೆ ಸಹಾಯಕರಾಗಿ ಪಾತ್ರ ನಿರ್ವಹಿಸುವ ಹಂತವನ್ನು ದಾಟಿ, ಅಂತಿಮವಾಗಿ ತಾವೇ ಶಿಕ್ಷಕರಾಗುವುದು.

ಈ. ಕಲಿಕೆಯ ಗುರಿಗಳನ್ನು 'ಯೋಜಿಸು-ಕಲಿಸು-ಪರ್ಯಾಲೋಚಿಸು'ವ ಚಕ್ರೀಯ ರೂಪದಲ್ಲಿ ನಿಗದಿಪಡಿಸಲಾಗಿದೆ. ಘಟಕ ಯೋಜನೆ ಮತ್ತು ಪಾಠ ಯೋಜನೆಯ ಮೇಲೆ ಒತ್ತು ಇದೆ. ವಿದ್ಯಾರ್ಥಿಗಳು ತಮ್ಮ ಇಂಟರ್ನ್‌ಶಿಪ್ ಅವಧಿಯಲ್ಲಿ ಮೂರು ತರಹದ ಕಾರ್ಯಯೋಜನೆ(Assignment) ಗಳನ್ನು ತಯಾರಿಸಿಕೊಂಡು ಮಾಡಬೇಕಾಗಿರುತ್ತದೆ.

(i) ಒಬ್ಬೊಬ್ಬ ವಿದ್ಯಾರ್ಥಿಯೊಂದಿಗೂ ಪ್ರತ್ಯೇಕವಾದ ಸಂದರ್ಶನ: ಅವರು ಅದನ್ನು ಯೋಜಿಸಿ, ವಿಡಿಯೋ ಟೇಪ್ ಮಾಡಿ ಅದರ ಕುರಿತಾಗಿ ಪರ್ಯಾಲೋಚಿಸಬೇಕಾಗಿರುತ್ತದೆ.

(ii) ನಾಲ್ಕೈದು ಮಕ್ಕಳಿಗೆ 'ಚಿಕ್ಕ ಗುಂಪು ಪಾಠ' ವನ್ನು ತೆಗೆದುಕೊಳ್ಳುವುದು ಮತ್ತು ಕೊನೆಯಲ್ಲಿ

(iii) ಇಡೀ ತರಗತಿಯನ್ನು ನಿಭಾಯಿಸುವುದು.

ಪ್ರಶಿಕ್ಷಣಾರ್ಥಿಗಳು ಪ್ರತಿ ಹಂತದಲ್ಲಿಯೂ ತಮ್ಮ ಮತ್ತು ತಮ್ಮ ವಿದ್ಯಾರ್ಥಿಗಳ ನಡುವೆ ತರಗತಿಕೋಣೆಯಲ್ಲಿ ನಡೆದ ಸಂಭಾಷಣೆಯನ್ನು ಅದು ಹೇಗಿದೆಯೋ ಹಾಗೇ ಬರೆದು ದಾಖಲಿಸುತ್ತಾರೆ. ಪ್ರತಿ ಪಾಠ ಯೋಜನೆ ಮತ್ತು ಸ್ವ-ಪರ್ಯಾಲೋಚನೆಯ ಟಿಪ್ಪಣಿಗಳನ್ನು ಕ್ಷೇತ್ರ ಮಾರ್ಗದರ್ಶಕರು ಮೌಲ್ಯಮಾಪನ ಮಾಡುತ್ತಾರೆ.

ಉ. ಕೋರ್ಸ್ ಬೋಧಕರು, ಮಾರ್ಗದರ್ಶಕ ಶಿಕ್ಷಕರು ಮತ್ತು ತರಬೇತಿ ಪಡೆಯುತ್ತಿರುವ ಪ್ರಶಿಕ್ಷಣಾರ್ಥಿಗಳ ನಡುವೆ ಸಾಮೂಹಿಕ ಹೊಣೆಗಾರಿಕೆ ಏರ್ಪಟ್ಟಿರುವ ಕಾರಣ ಮೌಲ್ಯಮಾಪನವು ಕಟ್ಟುನಿಟ್ಟಾಗಿರುತ್ತದೆ. ಮೌಲ್ಯಮಾಪನವು ಸರ್ವಸಮ್ಮತಿಯನ್ನು ಪಡೆಯಬೇಕು ಎಂಬ ಉದ್ದೇಶದಿಂದ ಅವರು ವರ್ಷಕ್ಕೆ ನಾಲ್ಕು ಬಾರಿ ಒಂದೆಡೆ ಸೇರಿ ಸಭೆ ನಡೆಸುತ್ತಾರೆ. ಅವರಲ್ಲಿ ಪ್ರತಿಯೊಬ್ಬರೂ ತಮ್ಮ ಅನುಭವಗಳನ್ನು ಲಿಖಿತ ರೂಪದಲ್ಲಿ ದಾಖಲಿಸಿ ಇಟ್ಟುಕೊಂಡಿರುತ್ತಾರೆ. ವಿದ್ಯಾರ್ಥಿಗಳ ಸ್ವ-ಮೌಲ್ಯಮಾಪನ (ಪರ್ಯಾಲೋಚನೆಗಳು), ಶಾಲಾ ಮಾರ್ಗದರ್ಶಕರು ಗಮನಿಸಿರುವ ಅಂಶಗಳು, ವಿಶ್ವವಿದ್ಯಾಲಯದ ಬೋಧಕರು ಹಾಗೂ ಸಹಪಾಠಿಗಳ ಅವಲೋಕನಗಳನ್ನು ಒಳಗೊಳ್ಳುವ ಹಾಗೆ ಮೌಲ್ಯಮಾಪನದ ಮಾನದಂಡ(Assessment Rubrics)ಗಳನ್ನು ವಿಂಗಡಣೆ ಮಾಡಿ, ಅವುಗಳ ಶೀರ್ಷಿಕೆಗಳನ್ನು ವಿನ್ಯಾಸಗೊಳಿಸಲಾಗಿದೆ. ಕೋರ್ಸ್ ಬೋಧಕರು ವಿದ್ಯಾರ್ಥಿ ಶಿಕ್ಷಕರು ನಿರ್ವಹಿಸುವ ಕನಿಷ್ಠ ಹತ್ತು ತರಗತಿಗಳನ್ನು ಗಮನಿಸುತ್ತಾರೆ.

ಸುಂದರವಾಗಿರುವಂತೆ ತೋರುವ ಮೇಲಿನ ಚಿತ್ರಣದ ಹೊರತಾಗಿಯೂ ಅಮೆರಿಕದಲ್ಲಿ ಇಂದು ಕಂಡುಬರುತ್ತಿರುವ ಸನ್ನಿವೇಶವೆಂದರೆ, ಶಿಕ್ಷಣಶಾಸ್ತ್ರ ಶಾಲೆ ಅಥವಾ ವಿದ್ಯಾಲಯಗಳು ಶಿಕ್ಷಕರಿಗಿರುವ ಬೇಡಿಕೆಯನ್ನು ಪೂರೈಸಲು ಕಷ್ಟಪಡುತ್ತಿವೆ. ಹಾಗಾಗಿ ಬಹಳಷ್ಟು ಶಿಕ್ಷಕ ಹುದ್ದೆಗಳು ಖಾಲಿ ಬೀಳುತ್ತಿವೆ. ಹೊಸ ವಿದ್ಯಾರ್ಥಿಗಳು ಸೇರುವ ಪ್ರಮಾಣವೂ ವರ್ಷದಿಂದ ವರ್ಷಕ್ಕೆ ಗಮನಾರ್ಹವಾಗಿ ಕಡಿಮೆಯಾಗುತ್ತಿದೆ. ಉದಾಹರಣೆಗೆ, ಮಿಷಿಗನ್ ಸ್ಟೇಟ್ ಯೂನಿವರ್ಸಿಟಿ ಒಂದರಲ್ಲೇ ಪ್ರೌಢ ಶಿಕ್ಷಣವನ್ನು ಆಯ್ದುಕೊಳ್ಳುವ ಪ್ರಶಿಕ್ಷಣಾರ್ಥಿಗಳ ಸಂಖ್ಯೆಯು ಮೂರು ವರ್ಷಗಳಲ್ಲಿ ಮುನ್ನೂರರಿಂದ ಇನ್ನೂರಕ್ಕೆ ಇಳಿದಿದೆ. ಅದೇ ರೀತಿ, 2014–15ರ ಅವಧಿಯಲ್ಲಿ ಪ್ರಾಥಮಿಕ ಮಟ್ಟದಲ್ಲಿ ತರಬೇತಿ ಪಡೆಯುವ ಶಿಕ್ಷಕ

ವಿದ್ಯಾರ್ಥಿಗಳ ದಾಖಲಾತಿಯು ತೊಂಬತ್ತರಿಂದ ಐವತ್ತಕ್ಕೆ ಇಳಿದಿದೆ. ಶೇ. 5–6 ವಿದ್ಯಾರ್ಥಿಗಳು, ಸೇರಿದ ನಂತರ ಬಿಟ್ಟು ಹೋಗುವುದಿದೆ. ಸಮಾಜ ವಿಜ್ಞಾನದ ಹಿನ್ನೆಲೆಯಿಂದ ಬರುವ ಎಂಬತ್ತರಿಂದ ತೊಂಬತ್ತು ಪ್ರಶಿಕ್ಷಣಾರ್ಥಿಗಳ ತಂಡವೇ ಅತಿ ದೊಡ್ಡದಾಗಿದ್ದು ನಂತರದಲ್ಲಿ ನಲವತ್ತರಿಂದ ಅರವತ್ತು ವಿದ್ಯಾರ್ಥಿಗಳು ಇಂಗ್ಲಿಷ್ ಹಿನ್ನೆಲೆಯಿಂದಲೂ, ತಲಾ ಇಪ್ಪತ್ತರಿಂದ ಮೂವತ್ತು ವಿದ್ಯಾರ್ಥಿಗಳು ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ಆಯ್ಕೆಮಾಡಿಕೊಂಡು ಬರುತ್ತಾರೆ. ದೈಹಿಕ ಶಿಕ್ಷಣವು ಕಣ್ಮರೆಯೇ ಆಗಿದ್ದರೆ ಸಂಗೀತದಲ್ಲಿ ಅಲ್ಪಸ್ವಲ್ಪ ಆಸಕ್ತಿ ಮಾತ್ರ ಉಳಿದುಕೊಂಡಿದೆ.

ಪ್ರಶಿಕ್ಷಣಾರ್ಥಿಗಳ ಕಿರುಪರಿಚಯವು ಅವರು ಬಹುತೇಕವಾಗಿ ಮೇಲ್‌ಮಧ್ಯಮ ವರ್ಗಗಳಿಂದ/ಶ್ರೀಮಂತ ಹಿನ್ನೆಲೆಗಳಿಂದ ಬಂದವರು ಎನ್ನುವುದನ್ನು ಸೂಚಿಸುತ್ತದೆ. ಅಷ್ಟೇನೂ ವಿವಿಧತೆಗಳಿಲ್ಲದ ಇಂತಹ ವಿದ್ಯಾರ್ಥಿ ಸಮೂಹಗಳಿರುವುದು ವಿಶ್ವವಿದ್ಯಾಲಯಗಳನ್ನು ಚಿಂತೆಗೀಡುಮಾಡುತ್ತದೆ. ಏಕೆಂದರೆ, ನಗರಪ್ರದೇಶಗಳಲ್ಲಿ ಹೆಣಗಾಡುತ್ತಿರುವ ಹಲವಾರು ಶಾಲೆಗಳೊಡನೆ ಸಹಭಾಗಿತ್ವದಲ್ಲಿ ಕೆಲಸ ಮಾಡಬೇಕಾದ ಮಹದೋದ್ದೇಶವನ್ನು (ಸಂಸ್ಕೃತಿ ಮತ್ತು ಪರಿಸರ ವ್ಯವಸ್ಥೆಗಳ ಕಾರಣ ಅದೊಂದು ಸವಾಲಾಗಿದ್ದರೂ) ಈ ವಿಶ್ವವಿದ್ಯಾಲಯಗಳು ಹೊಂದಿವೆ. ನಗರಗಳಲ್ಲಿ ಪೋಷಕರು ನಿಯಮಿತ ಅವಧಿಯಲ್ಲದೇ ಯಾವ್ಯಾವುದೋ ಸಮಯದಲ್ಲಿ ಕೆಲಸ ಮಾಡುವವರಾಗಿರುತ್ತಾರೆ, ಅನೇಕಾನೇಕ ಕುಟುಂಬಗಳು ಒಂಟಿ ಕೋಣೆಯ ಮನೆಗಳಲ್ಲಿ ವಾಸಿಸುತ್ತವೆ ಹಾಗೂ ವಯಸ್ಕರೊಬ್ಬರ ನಿಗಾ ಇಲ್ಲದೆ ತಮ್ಮಷ್ಟಕ್ಕೇ ಮಕ್ಕಳನ್ನು ಬಿಟ್ಟುಹೋಗುವಂತೆ ಇರುವುದಿಲ್ಲ. ಪ್ರಶಿಕ್ಷಣ ತರಬೇತಿ ಹಂತದಲ್ಲಿರುವ ವಿದ್ಯಾರ್ಥಿಗಳು ಬಹುಶಃ ಈ ಸನ್ನಿವೇಶಗಳೊಡನೆ ಏಗಲಾಗದೆ, ಅದರಲ್ಲಿಯೂ ವಿಶೇಷವಾಗಿ ಅವರ ಹಿನ್ನೆಲೆ ಹಾಗೂ ಮನೋಧರ್ಮಗಳು ಅಷ್ಟು ಸ್ಪಷ್ಟವಾಗಿಲ್ಲದೆ ಇದ್ದಾಗ ತರಬೇತಿಯನ್ನು ಬಿಟ್ಟುಹೋಗಿಬಿಡುತ್ತಾರೆ. ಅಧಿಕ ಮಟ್ಟದ ತರಬೇತಿ ವೆಚ್ಚ, ಕೈಗೊಳ್ಳಬೇಕಾದ ಸಂಶೋಧನಾ ಕಾರ್ಯ, ಮೌಲ್ಯಮಾಪನ ಕಾರ್ಯ, ಪಠ್ಯಕ್ರಮಕ್ಕೆ ಸಂಬಂಧಿಸಿದ ಹೊಣೆ ಹಾಗೂ ತಲುಪಬೇಕಾದ ಸರ್ಕಾರದ ನಿರೀಕ್ಷೆಯ ಮಟ್ಟ ಇತ್ಯಾದಿಗಳು ವಿದ್ಯಾರ್ಥಿಗಳ ಧೈರ್ಯವನ್ನು ಕುಗ್ಗಿಸಿಬಿಡುತ್ತವೆ. ಸನ್ನಿವೇಶದ ಗಂಭೀರತೆಯನ್ನು ಇನ್ನಷ್ಟು ಸಂಕೀರ್ಣಗೊಳಿಸುವ ಸಂಗತಿಯೆಂದರೆ, ಉನ್ನತ ಹಾಗೂ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಮೇಲೆ ಫೆಡರಲ್ / ರಾಜ್ಯ ಸರ್ಕಾರಗಳು ನಿರಂತರವಾಗಿ ವೆಚ್ಚವನ್ನು ಕಡಿತಗೊಳಿಸುತ್ತಿರುವುದು.

## ಆ. ಭಾರತಕ್ಕೆ ಸಂಬಂಧಿಸಿದಂತೆ ಕೆಲವು ಒಳನೋಟಗಳು ಹಾಗೂ ನಿಹಿತಾರ್ಥಗಳು

ನವಂಬರ್ 2014ರಲ್ಲಿ ಶಿಕ್ಷಕ ಶಿಕ್ಷಣವನ್ನು ಕುರಿತಾದ ರಾಷ್ಟ್ರೀಯ ಮಂಡಳಿಯು ಆದೇಶಿಸಿದ ಬದಲಾವಣೆಗಳನ್ನು ಆದಷ್ಟು ಬೇಗ ಜಾರಿಗೊಳಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ದೃಢವಾದ ಬದ್ಧತೆಯನ್ನು ತೋರಬೇಕು. ಈ ಮಾರ್ಗದರ್ಶನ ಸೂತ್ರಗಳು ಸರ್ವೋಚ್ಚ ನ್ಯಾಯಾಲಯದ ಮೇಲ್ವಿಚಾರಣೆಗೊಳಪಟ್ಟ ನ್ಯಾಯಮೂರ್ತಿ ವರ್ಮಾ ಸಮಿತಿಯ ಶಿಫಾರಸ್ಸುಗಳನ್ನು ಆಧರಿಸಿದ್ದವು. ದೇಶದುದ್ದಗಲಕ್ಕೂ ಬಿಎಡ್ ಮತ್ತು ಎಮ್‌ಎಡ್ ಕಾರ್ಯಕ್ರಮಗಳಲ್ಲಿ ತರಬೇಕಾದ ಕೆಲವು ಪ್ರಮುಖ ಬದಲಾವಣೆಗಳನ್ನು ಈ ಕೆಳಗೆ ಉಲ್ಲೇಖಿಸಲಾಗಿದೆ:

ಶಿಕ್ಷಕ ಶಿಕ್ಷಣ ಸಂಸ್ಥೆಗಳನ್ನು ಉನ್ನತ ಶಿಕ್ಷಣ ಸಂಸ್ಥೆಗಳಡಿ ತರಬೇಕು; ಹಾಗೂ ಶಿಕ್ಷಕ ಶಿಕ್ಷಣ ಸಂಸ್ಥೆಗಳು ಪ್ರಮಾಣಿತ ಮಟ್ಟಗಳನ್ನು ಕಾಯ್ದುಕೊಳ್ಳುವ ನಿಟ್ಟಿನಲ್ಲಿ ಮೇಲ್ವಿಚಾರಣೆ ಮಾಡುವ ಹೊಣೆಯನ್ನು ಉನ್ನತ ಶಿಕ್ಷಣ ಸಂಸ್ಥೆಗಳಿಗೆ ನೀಡಬೇಕು. ಶಿಕ್ಷಣಶಾಸ್ತ್ರ ವಿದ್ಯಾಲಯಗಳನ್ನು ಇನ್ನಿತರ ಅಧ್ಯಯನಶಿಸ್ತು, ವಿಷಯಗಳಲ್ಲಿ ಪರಿಣತಿ ಹೊಂದಿರುವ ಇಲಾಖೆಗಳೊಂದಿಗೆ ಸಂಯೋಜಿಸುವ ಅಗತ್ಯ ಹೆಚ್ಚಿದೆ.

ದೀರ್ಘಕಾಲದಿಂದ ಜಾರಿಗೊಳ್ಳದೆ ಇರುವ, ಶಿಕ್ಷಕ ಶಿಕ್ಷಣ ಕಾರ್ಯಕ್ರಮಗಳ ಗುಣಮಟ್ಟವನ್ನು ಕಾಯ್ದುಕೊಳ್ಳುವ ನಿಟ್ಟಿನಲ್ಲಿ ರೂಪಿಸಲಾದ ನೀತಿನಿಯಮಗಳನ್ನು ಜಾರಿಗೊಳಿಸಬೇಕು; ಇದರಲ್ಲಿ, ಗುಣಮಟ್ಟದ ಪ್ರಮಾಣಿತ ಅಂಶಗಳಿಗೆ ಅನುಗುಣವಾಗಿ ಮರುರೂಪಿಸಿಕೊಳ್ಳಲಾಗದ ಸಂಸ್ಥೆಗಳ, ಅಂದರೆ ನಿಗದಿತ ವೇಳಾಪಟ್ಟಿಯ ಪ್ರಕಾರ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸದ, ಅಗತ್ಯ ಪ್ರಮಾಣದ ಅರ್ಹ ಬೋಧಕ ಸಿಬ್ಬಂದಿಯನ್ನು ಹೊಂದಿಲ್ಲದ, ಕಳಪೆ ಮೂಲಭೂತ ಸೌಕರ್ಯಗಳನ್ನು ಒದಗಿಸುವ, ನಿಯಮಗಳನ್ನು ಪದೇಪದೇ ಉಲ್ಲಂಘಿಸುವ, ರಾಜಕೀಯ ಪ್ರಭಾವದಡಿಯಲ್ಲಿ ಎಲ್ಲ ತರಹದ ದುರಾಚಾರಗಳನ್ನು ಉತ್ತೇಜಿಸುವ ಹಾಗೂ ಕೇವಲ ಲಾಭದ ಉದ್ದೇಶದಿಂದ ಕಾರ್ಯ ನಿರ್ವಹಿಸುವಂತಹ ಸಂಸ್ಥೆಗಳ ಮೇಲೆ ಕಠಿಣ ನಿಲುವು ತಾಳುವುದು ಮತ್ತು ಅಂತಹ ಸಂಸ್ಥೆಗಳ ಅನುಮತಿಯನ್ನು ರದ್ದುಗೊಳಿಸುವುದೂ ಸೇರಿವೆ.

ಶಿಕ್ಷಕ ಶಿಕ್ಷಕರನ್ನು ಹೊಸದಾಗಿ ಪರಿಷ್ಕೃತವಾದ ಪಠ್ಯಕ್ರಮದಲ್ಲಿ ಸಮರ್ಥವಾಗಿ ಬೋಧಿಸಲು ಅನುಕೂಲವಾಗುವಂತೆ ತಯಾರು ಮಾಡುವುದು, ಉನ್ನತ ಗುಣಮಟ್ಟದ ಕಲಿಕಾ ಸಾಮಗ್ರಿಗಳನ್ನು ಅಭಿವೃದ್ಧಿಪಡಿಸುವುದು. ಉದಾಹರಣೆಗೆ, ಅತ್ಯುತ್ತಮ ಶಿಕ್ಷಕರ ಅಭ್ಯಾಸ-ಆಚರಣೆಗಳು, ಪ್ರಕರಣ ಅಧ್ಯಯನಗಳು, ಅತ್ಯುತ್ಕೃಷ್ಟ ಸಂಪನ್ಮೂಲ ವ್ಯಕ್ತಿಗಳಿಂದ ಸಿದ್ಧಪಡಿಸಲಾದ ಶ್ರವ್ಯ-ದೃಶ್ಯ ಮಾಧ್ಯಮದ ಸಾಮಗ್ರಿ

ಮುಂತಾದ ದಾಖಲೆಗಳು ಹಾಗೂ ಪ್ರಸ್ತುತ ಓದಿನ ಸಾಮಗ್ರಿಗಳು ಸ್ಥಳೀಯ ಭಾಷೆಗಳಲ್ಲಿ ಲಭ್ಯವಾಗುವಂತೆ ಅನುವಾದ ಮಾಡಿಸುವುದು.

ವಿದ್ಯಾರ್ಥಿಗಳ ಬದುಕಿನ ವಾಸ್ತವಿಕ ಸನ್ನಿವೇಶ ಹಾಗೂ ನೈಜ ತರಗತಿ ಪ್ರಕ್ರಿಯೆಗಳೊಂದಿಗೆ ಪಠ್ಯಕ್ರಮವು ಸಂಬಂಧ ಹೊಂದಿರುವಂತೆ ಮಾಡುವುದು ಹಾಗೂ ಅದನ್ನು ಸಂದರ್ಭೋಚಿತಗೊಳಿಸುವುದು.

ಅತ್ಯುತ್ತಮ ವಿದ್ಯಾರ್ಥಿಗಳನ್ನು ಶಿಕ್ಷಕ ವೃತ್ತಿಗೆ ಆಕರ್ಷಿಸುವುದು; ಶಿಕ್ಷಕ ಸಮುದಾಯದ ಕೊಡುಗೆಯನ್ನು ಗುರುತಿಸಿ, ಗೌರವಿಸುವುದರ ಮೂಲಕ ಹಾಗೂ ಅವರಿಗೆ ಸ್ವಾಯತ್ತತೆಯನ್ನು ಒದಗಿಸುವುದರ ಮೂಲಕ ಮುಖ್ಯವಾಗಿ ಅವರ ಆತ್ಮಗೌರವವನ್ನು ಪುನಃಸ್ಥಾಪಿಸುವುದು. ಶಿಕ್ಷಕರ ಮೇಲಿರುವ ಅಷ್ಟೇನೂ ಮುಖ್ಯವಲ್ಲದ ಹೊಣೆಗಾರಿಕೆಯನ್ನು ಕನಿಷ್ಠ ಮಟ್ಟಕ್ಕೆ ಇಳಿಸಿ, ಅವರು ತಾವು ಬೋಧಿಸುವ ವಿಷಯವನ್ನು ಹೆಚ್ಚು ಆಳವಾಗಿ ತಿಳಿದುಕೊಳ್ಳಲು ಸಾಧ್ಯವಾಗುವಂತೆ, ನಿರಂತರ ವೃತ್ತಿ ಅಭಿವೃದ್ಧಿಯ ಮೂಲಕ ಅತ್ಯುತ್ತಮ ಕಲಿಕೆಯ ಅವಕಾಶಗಳನ್ನು ನಿರ್ಮಿಸುವುದು.

ಇತ್ತೀಚಿನ ಸಮಾಚಾರ ವರದಿಗಳ ಪ್ರಕಾರ, ಕರ್ನಾಟಕದಲ್ಲಿ ವಿಶೇಷವಾಗಿ ಖಾಸಗಿ ವಿದ್ಯಾಲಯಗಳಲ್ಲಿ ಹೊಸದಾಗಿ ಆರಂಭಿಸಿದ ಬಿಎಡ್ ಕಾರ್ಯಕ್ರಮಗಳಿಗೆ (2016ರ ಶೈಕ್ಷಣಿಕ ವರ್ಷದ ನಂತರದಲ್ಲಿ ಆರಂಭಿಸಿದ) ದಾಖಲಾತಿಯು ಇಳಿದಿದೆ. ಬಹುತೇಕ ರಾಜಕೀಯ ಆಶ್ರಯದಡಿಯಲ್ಲಿ ಹಲವಾರು ಬಿಎಡ್ ವಿದ್ಯಾಲಯಗಳನ್ನು ನಡೆಸುವ ಖಾಸಗಿ ಕ್ಷೇತ್ರದ ಪ್ರಭಾವಿ ಗುಂಪು, ಈ ವಿದ್ಯಮಾನವನ್ನು ಆಧರಿಸಿ, ಕೋರ್ಸ್‌ನ ಕಾಲಾವಧಿಯನ್ನು ಒಂದು ವರ್ಷಕ್ಕೆ ಇಳಿಸುವಂತೆ ಸರ್ಕಾರದ ಮೇಲೆ ಅಗಾಧ ಒತ್ತಡವನ್ನು ಹೇರುವ ಸಾಧ್ಯತೆ ಇದೆ. ಮುಂಬರುವ ತಿಂಗಳುಗಳಲ್ಲಿ ಶಿಕ್ಷಣ ಕ್ಷೇತ್ರದ ಸುಧಾರಣೆಗೆ ಸಂಬಂಧಿಸಿದಂತೆ ಸರ್ಕಾರದ ಬದ್ಧತೆ ಹಾಗೂ ರಾಜಕೀಯ ಇಚ್ಛಾಶಕ್ತಿಗಳು ನಿಶ್ಚಿತವಾಗಿಯೂ ಪರೀಕ್ಷೆಗೆ ಒಳಗಾಗುತ್ತವೆ. ಪ್ರಭಾವೀ ಗುಂಪುಗಳು ಹೇರಬಹುದಾದ ಇಂತಹ ಒತ್ತಡಗಳಿಗೆ ಉತ್ತರವಾಗಿ ಸರ್ಕಾರವು ದೃಢಸಂಕಲ್ಪ ಹಾಗೂ ಪ್ರಬುದ್ಧತೆಯಿಂದ ಕ್ರಮ ಕೈಗೊಳ್ಳುತ್ತದೆಯೆಂದು ಆಶಿಸಲಾಗಿದೆ. ಸುಧಾರಣೆಗಳ ವಿಷಯದಲ್ಲಿ ಹಿಂದಡಿಯಿಡದಿರುವುದು ಸರ್ಕಾರವು ಶಿಕ್ಷಣದಂತಹ ಅತಿಮುಖ್ಯ ಸಾಮಾಜಿಕ ಕ್ಷೇತ್ರದಲ್ಲಿ ಗುಣಮಟ್ಟಕ್ಕೆ ಸಂಬಂಧಿಸಿದಂತೆ ದೀರ್ಘಕಾಲೀನ ಸುಧಾರಣೆಗಳನ್ನು ತರುವುದರ ಪರವಾಗಿದೆ ಎಂಬುದನ್ನು ಸ್ಪಷ್ಟವಾಗಿ ಸಾಬೀತುಪಡಿಸುತ್ತದೆ. ಅದು ನಡೆಯುವ ದಾರಿಯು ಲಕ್ಷಾಂತರ ಮಕ್ಕಳ ಭವಿಷ್ಯವನ್ನು ನಿರ್ಧರಿಸುತ್ತದೆ.

■

ಬಿ.ಫಸ್ಟ್, 31-04-2016

ಶಿಕ್ಷಕ ಶಿಕ್ಷಣ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ತಮ್ಮ ದೃಷ್ಟಿಕೋನ, ಆಲೋಚನೆ ಮತ್ತು ಕಾರ್ಯಾಚರಣೆಯ ಪ್ರಕ್ರಿಯೆಯಲ್ಲಿ ಮೂಲಭೂತ ಬದಲಾವಣೆಗಳನ್ನು ತಂದುಕೊಳ್ಳದಿದ್ದರೆ ನಿಜವಾದ ಅರ್ಥದಲ್ಲಿ ಶೈಕ್ಷಣಿಕ ಪರಿವರ್ತನೆ ಎನ್ನುವುದು ಹುಸಿಯಾಗುತ್ತದೆ.

# ನೂತನ ರಾಷ್ಟ್ರೀಯ ಶಿಕ್ಷಣ ನೀತಿ: ಭರವಸೆಯ ಆಶಾದೀಪ

ಆರ್.ಟಿ.ಇ. ಕಾಯಿದೆ 2009, ಪ್ರಾಥಮಿಕ ಶಾಲೆಗಳಿಗೆ ನೇಮಕಗೊಳ್ಳುವ ಶಿಕ್ಷಕರು ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿರಬೇಕೆಂಬುದನ್ನು ಕಡ್ಡಾಯಗೊಳಿಸಿತು. ಮುಂದುವರೆದು, ಶಿಕ್ಷಕರ ಕರ್ತವ್ಯಗಳೇನೆಂಬುದನ್ನು ಸಹ ನಿಗದಿಪಡಿಸಿತು. ಈ ಮಹತ್ತರ ಬದಲಾವಣೆಯನ್ನು ಅನುಸರಿಸಿ, 2012ರಲ್ಲಿ ಕರ್ನಾಟಕ ಜ್ಞಾನ ಆಯೋಗವು ರಾಜ್ಯ ಸರ್ಕಾರಕ್ಕೆ ಶಿಕ್ಷಕರ ವೃತ್ತಿಪರ ಅಭಿವೃದ್ಧಿಯನ್ನು ಕುರಿತ ಸಮಗ್ರ ನೀತಿಯನ್ನು ರೂಪಿಸಲು ಪೂರಕವಾಗಿ ವರದಿಯನ್ನು ಸಲ್ಲಿಸಿತು. ಆ ವರದಿಯ ಭಾಗವಾಗಿ ಹಲವಾರು ರಾಷ್ಟ್ರೀಯ, ರಾಜ್ಯ ಮಟ್ಟದ ನೀತಿ ನಿರೂಪಣಾ ವರದಿಗಳು, ಶಿಕ್ಷಕರ ಶಿಕ್ಷಣಕ್ಕೆ ಸಂಬಂಧಿಸಿದ ಅಂತರರಾಷ್ಟ್ರೀಯ ಸಮ್ಮೇಳನಗಳ ವರದಿಗಳು, ರಾಜ್ಯಾದ್ಯಂತ ಭಾಗೀದಾರರೊಂದಿಗೆ ಕೈಗೊಂಡ ಸಮಾಲೋಚನೆಗಳಿಂದ ಹೊರಬಂದ ಮುಖ್ಯಾಂಶಗಳನ್ನು ಉಲ್ಲೇಖಿಸಲಾಗಿತ್ತು.

ಈ ಎಲ್ಲ ಪ್ರಕ್ರಿಯೆಗಳಿಂದ ಮೂಡಿಬಂದ ಶಿಕ್ಷಕರ ಶಿಕ್ಷಣ ಕುರಿತಾದ ಚಿತ್ರಣವನ್ನು ಈ ರೀತಿ ಸಾರಾಂಶೀಕರಿಸಬಹುದು.

**ಸೇವಾಪೂರ್ವ ಶಿಕ್ಷಕ ಶಿಕ್ಷಣದ ಸ್ಥಿತಿ**

- ಶಿಕ್ಷಕರ ಸಿದ್ಧತೆಯ ಕಾರ್ಯಕ್ರಮಗಳು ವಿದ್ಯಾರ್ಥಿ ಶಿಕ್ಷಕರಲ್ಲಿ ಅಗತ್ಯ ದೃಷ್ಟಿಕೋನ ಅಥವಾ ಸಾಮರ್ಥ್ಯಗಳನ್ನು ನಿರ್ಮಿಸುತ್ತಿಲ್ಲ. ಬಹುತೇಕ ನೀರಸ ಚಟುವಟಿಕೆಗಳನ್ನೊಳಗೊಂಡ ತರಗತಿ ಪ್ರಕ್ರಿಯೆಗಳು ವಿದ್ಯಾರ್ಥಿಗಳ ಕಲಿಕೆಯ ಮೇಲೆ ಬೀರುವ ಪರಿಣಾಮ ಕನಿಷ್ಠ ಮಟ್ಟದ್ದಾಗಿದೆ.
- ಶಾಲಾ ಪಠ್ಯ ಬದಲಾದ ಗತಿಯಲ್ಲೇ ಶಿಕ್ಷಕ ಶಿಕ್ಷಣಕ್ಕೆ ಸಂಬಂಧಿಸಿದ ಪಠ್ಯಕ್ರಮ ಬದಲಾಗುತ್ತಿಲ್ಲ. ಇದರಿಂದ ಪಠ್ಯಕ್ರಮವು ಪ್ರಸ್ತುತತೆಯನ್ನು ಕಳೆದುಕೊಂಡು ಶಾಲಾ ಶಿಕ್ಷಣದ ವಿವಿಧ ಹಂತ ಮತ್ತು ಪರಿಣತಿ ಕ್ಷೇತ್ರಗಳ ಮೇಲೆ ಗಮನ ಹರಿಸುತ್ತಿಲ್ಲ.
- ಬೋಧನಾಭ್ಯಾಸ ಆಳವಾಗಿಲ್ಲದಿರುವುದು ಮತ್ತು ಶಾಲೆಗಳೊಂದಿಗೆ ಸಂಪರ್ಕಜಾಲವನ್ನು ನಿರ್ಮಿಸುವಲ್ಲಿ ಕೊರತೆ.
- ಶಾಲಾ ಶಿಕ್ಷಣ, ಶಿಕ್ಷಕರ ಶಿಕ್ಷಣ ಮತ್ತು ವಿಶ್ವವಿದ್ಯಾಲಯಗಳ ನಡುವಿನ ಸಹ–ಸಂಬಂಧ ಮರೆಯಾಗುತ್ತಿರುವುದು.

**ಶಿಕ್ಷಕ ಶಿಕ್ಷಕರು**

1. ಶಿಕ್ಷಕ ಶಿಕ್ಷಕರನ್ನಾಗಿ ರೂಪಿಸುವ ಪ್ರಕ್ರಿಯೆಯಲ್ಲಿ ತೀವ್ರತೆಯ ಕೊರತೆ.
2. ಶಿಕ್ಷಕ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸುತ್ತಿರುವ ಸಂಸ್ಥೆಗಳ ಕೊರತೆ.
3. ಉನ್ನತ ಶಿಕ್ಷಣದ ಇತರ ಕಾರ್ಯಕ್ರಮಗಳೊಂದಿಗಿನ ಸಂಬಂಧ ಮತ್ತು ಅರ್ಥಪೂರ್ಣ ಶಾಲಾ ಅಭ್ಯಾಸದ ಅನುಭವದ ಅಭಾವ.
4. ಸಂಶೋಧನಾ ಸಾಮರ್ಥ್ಯ ಬೆಳೆಸಿಕೊಳ್ಳಲು ಹೆಚ್ಚಿನ ಅವಕಾಶಗಳು ಇಲ್ಲದಿರುವುದು.
5. ವಿಷಯ ಪರಿಣತಿ ಮತ್ತು ಬೋಧನಾ ಶಾಸ್ತ್ರ ಸೇರಿದಂತೆ ವೃತ್ತಿಪರ ಬೆಳವಣಿಗೆಗೆ ಸಾಕಷ್ಟು ಅವಕಾಶಗಳಿಲ್ಲದಿರುವುದು.

**ಶಿಕ್ಷಕ ಶಿಕ್ಷಣ ಸಂಸ್ಥೆಗಳು**

- ಮೂಲಭೂತ ಸೌಕರ್ಯ ಮತ್ತು ಬೋಧನಾ ಸಿಬ್ಬಂದಿಯ ತೀವ್ರ ಕೊರತೆ.
- ಶಾಲಾ ಶಿಕ್ಷಣ ಮತ್ತು ವಿಶ್ವವಿದ್ಯಾಲಯಗಳೆರಡರಿಂದಲೂ ಪ್ರತ್ಯೇಕಗೊಂಡಿರುವುದು.

- ಪ್ರಸ್ತುತ ಸಂದರ್ಭಕ್ಕೆ ತಕ್ಕಂತೆ ಸಂಪನ್ಮೂಲ ಸಾಮಗ್ರಿಗಳ ಕೊರತೆಯಿರುವುದು.
- ಗುಣಮಟ್ಟದ ಮೇಲೆ ಗಮನಹರಿಸದೆ ಕೇವಲ ಪದವಿ ನೀಡುವ ವ್ಯಾಪಾರೋದ್ಯಮ ಕೇಂದ್ರಗಳಂತೆ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಗಳು ನಾಯಿಕೊಡೆಗಳಂತೆ ಅಸ್ತಿತ್ವದಲ್ಲಿರುವುದು.

**ವೃತ್ತಿಸಂಬಂಧಿ ಅಂಶಗಳು**

- ಗಣಿತ, ವಿಜ್ಞಾನ, ಇಂಗ್ಲಿಷ್, ಭೂಗೋಳ ಮುಂತಾದ ವಿಷಯಗಳಲ್ಲಿ ಅಗತ್ಯ ಸಂಖ್ಯೆಯ ಶಿಕ್ಷಕರ ಕೊರತೆ.
- ಪ್ರತಿಭಾವಂತ ವಿದ್ಯಾರ್ಥಿಗಳನ್ನು ಶಿಕ್ಷಕ ವೃತ್ತಿಗೆ ಆಕರ್ಷಿಸುವುದು. ಸರ್ಕಾರಿ ಶಾಲೆಗಳ ಶಿಕ್ಷಕರ ಹುದ್ದೆಗಳನ್ನು ಆದ್ಯತೆಯ ಮೇರೆಗೆ ಭರ್ತಿ ಮಾಡಲು ಕ್ರಮ ಕೈಗೊಳ್ಳುವುದರಿಂದ ಹೆಚ್ಚಿನ ಯುವಕರು ಶಿಕ್ಷಕ ವೃತ್ತಿಗೆ ಬರುವಂತೆ ಮಾಡುವುದು.
- ಬೋಧನೆಯನ್ನು 'ವೃತ್ತಿ'ಯಾಗಿ ಪರಿಗಣಿಸದಿರುವುದು; ಇದಕ್ಕೆ ಶಿಕ್ಷಕರು ಮತ್ತು ಶಿಕ್ಷಕ ಶಿಕ್ಷಣ ಸಂಸ್ಥೆಗಳಿಗೆಂದೇ ನಿಗದಿತ ಮಾನದಂಡಗಳಿಲ್ಲದಿರುವುದು ಕಾರಣ.
- ನೇಮಕಾತಿ, ವೃತ್ತಿ ಬೆಳವಣಿಗೆ, ವೇತನ ಮತ್ತು ಭತ್ಯೆ, ಸೇವಾನಿಯಮಗಳಿಗೆ ಸಂಬಂಧಿಸಿದಂತೆ ಸರ್ಕಾರಿ ಮತ್ತು ಖಾಸಗಿ ವಲಯಗಳ ನಡುವೆ ತಾರತಮ್ಯಗಳಿರುವುದು.
- ಶಿಕ್ಷಕರ ಕೊಡುಗೆಯನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ಮೌಲ್ಯಮಾಪನ ಮಾಡಲು ಸೂಕ್ತ ಪದ್ಧತಿಯನ್ನು ಅಳವಡಿಸುವುದು. ಮೇಲುಸ್ತುವಾರಿ ಅಧಿಕಾರಿಗಳ ಭೇಟಿ ಮತ್ತು ಅವರು ಒದಗಿಸುವ ಬೆಂಬಲ ವ್ಯವಸ್ಥೆಯು ಸಂವೇದನಾಶೀಲವಾಗಿರುವಂತೆ ನೋಡಿಕೊಳ್ಳುವುದು.
- ಬಹಳ ಮುಖ್ಯವಾಗಿ, ಅತ್ಯಂತ ಪ್ರತಿಕೂಲ ಪರಿಸ್ಥಿತಿಗಳ ನಡುವೆಯೂ ಮಕ್ಕಳ ಕಲಿಕೆಗಾಗಿ ಸೇವಾಬದ್ಧತೆಯಿಂದ ಕಾರ್ಯವೆಸಗುತ್ತಿರುವ ಸಾವಿರಾರು ಶಿಕ್ಷಕರನ್ನು ಶ್ಲಾಘಿಸಿ, ಅವರ ಕೆಲಸವನ್ನು ಮುನ್ನೆಲೆಗೆ ತರುವುದು.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಸೇವಾಪೂರ್ವ ಶಿಕ್ಷಕರ ಶಿಕ್ಷಣದಲ್ಲಿ ಮಹತ್ತರ ಬದಲಾವಣೆಗಳನ್ನು ತರಬೇಕೆಂದು ಜ್ಞಾನ ಆಯೋಗವು ಸಲಹೆ ನೀಡಿತ್ತು. ಅವುಗಳಲ್ಲಿ ಮುಖ್ಯವಾದವುಗಳೆಂದರೆ:

- ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸದೆ ಇರುವ, ಅಂದರೆ ಪೂರ್ಣಾವಧಿ ವಿದ್ಯಾರ್ಥಿಗಳು/ ತರಗತಿಗಳು/ ಬೋಧಕವರ್ಗವಿಲ್ಲದ, ನ್ಯಾಯಯುತ ರೀತಿಯಲ್ಲಿ ಪರೀಕ್ಷೆಗಳನ್ನು ನಡೆಸದ, ಕಳಪೆ ಮಟ್ಟದ ಮೂಲ ಸೌಕರ್ಯಗಳನ್ನು ಹೊಂದಿರುವ, ಬೋಧನಾಭ್ಯಾಸ ಚಟುವಟಿಕೆಯನ್ನು ಸಮರ್ಪಕವಾಗಿ ಪೂರೈಸದಿರುವ ಸಂಸ್ಥೆಗಳನ್ನು ಮುಚ್ಚುವುದು.
- ಪಠ್ಯಕ್ರಮವನ್ನು ಶಿಕ್ಷಕರ ಶಿಕ್ಷಣದ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ಎನ್‌ಸಿಟಿಇ.ಯ ಮಾದರಿ ಪಠ್ಯಕ್ರಮದ ಆಧಾರದ ಮೇಲೆ ಪುನರ್‌ರಚಿಸುವುದು.
- ಸೇವಾಪೂರ್ವ ಶಿಕ್ಷಣ ಕಾರ್ಯಕ್ರಮದ ರಚನೆ ಮತ್ತು ಅವಧಿಯನ್ನು ವಿಸ್ತರಿಸಿ ವಿದ್ಯಾರ್ಥಿಗಳಿಗೆ ಎರಡು ರೀತಿಯ ಆಯ್ಕೆಗಳನ್ನು ನೀಡುವುದು.
- ಪಿಯುಸಿ ನಂತರ ನಾಲ್ಕು ವರ್ಷದ ಸಮಗ್ರ ಬಿಎಡ್ ಕಾರ್ಯಕ್ರಮ.
- ಮೂರು ವರ್ಷದ ಸ್ನಾತಕ ಪದವಿ ನಂತರ ಎರಡು ವರ್ಷದ ಬಿಎಡ್ ಕಾರ್ಯಕ್ರಮ.
- ಇದನ್ನು ವಿಷಯಾಧಾರಿತ (ಭಾಷೆ, ಗಣಿತ, ಇತ್ಯಾದಿ) ಮತ್ತು ನಿರ್ದಿಷ್ಟ ಹಂತಕ್ಕೆ (ಪ್ರಾಥಮಿಕ, ಪ್ರೌಢ, ಆರಂಭಿಕ ಬಾಲ್ಯ) ಬೇಕಾದ ಪರಿಣತಿ ಪಡೆಯಲು ಪೂರಕವಾಗಿ ಆಯ್ಕೆಯ ಅವಕಾಶ ನೀಡುವುದು.
- ಶಿಕ್ಷಕ ಶಿಕ್ಷಣ ಸಂಸ್ಥೆಗಳನ್ನು ಮೇಲ್ದರ್ಜೆಗೇರಿಸಿ ಬಲಪಡಿಸಲು ನಿರ್ವಹಣಾ ಮಾನದಂಡಗಳನ್ನು ರಚಿಸುವುದು; ಅವು ನಾಯಕತ್ವ, ಬೋಧಕ ಸಿಬ್ಬಂದಿಯ ಗುಣಮಟ್ಟ, ಆಂತರಿಕ ಪ್ರಕ್ರಿಯೆಗಳು, ಮುಂತಾದ ಅಂಶಗಳನ್ನೊಳಗೊಂಡಿರಬೇಕು.
- ಪ್ರಾದೇಶಿಕ ಮಟ್ಟದಲ್ಲಿ ಸಂಸ್ಥೆಗಳಿಗೆ ನೆರವು ನೀಡುವ ರೀತಿಯಲ್ಲಿ ರಾಜ್ಯದಾದ್ಯಂತ ಕನಿಷ್ಠ ಐದಾರು ಶಿಕ್ಷಕ-ಶಿಕ್ಷಣ ಮಹಾವಿದ್ಯಾಲಯ ಗಳನ್ನು ಒಂದೊಂದಾಗಿ ಸಂಪನ್ಮೂಲ ಕೇಂದ್ರಗಳಾಗಿ ಅಭಿವೃದ್ಧಿ ಪಡಿಸುವುದು.
- ಮರುರೂಪಿತಗೊಳ್ಳುವ ಸೇವಾಪೂರ್ವ ಶಿಕ್ಷಕ ಶಿಕ್ಷಣದ ಪಠ್ಯಕ್ರಮವನ್ನಾಧರಿಸಿ ನಿರ್ದಿಷ್ಟ ವಿಶ್ವವಿದ್ಯಾಲಯಗಳು ಶಿಕ್ಷಣಶಾಸ್ತ್ರ / ಶಿಕ್ಷಕ ಶಿಕ್ಷಣ ವಿಭಾಗದ ಮೂಲಕ ನೆರೆಹೊರೆಯ ಶಾಲೆಗಳೊಂದಿಗೆ

ನೇರ ಸಂಪರ್ಕ ಹೊಂದಿ, ಪ್ರಾಯೋಗಿಕ ನೆಲೆಯಲ್ಲಿ ಬೋಧನಾ ಕೌಶಲಗಳನ್ನು ಬೆಳೆಸಿಕೊಳ್ಳುವ ತಾಣಗಳಾಗಿ ರೂಪುಗೊಳ್ಳುವುದು. ಅಲ್ಲದೆ ಪ್ರಶಿಕ್ಷಣಾರ್ಥಿಗಳು ಮತ್ತು ಶಿಕ್ಷಕ ಶಿಕ್ಷಕರಿಗೆ ಉತ್ಕೃಷ್ಟ ಮಟ್ಟದ ಸಂಪನ್ಮೂಲ ಸಾಮಗ್ರಿಗಳನ್ನು ಕನ್ನಡದಲ್ಲಿ ಅಭಿವೃದ್ಧಿ ಪಡಿಸಿ ಇದನ್ನು ಮುದ್ರಿತ ಮತ್ತು ಡಿಜಿಟಲ್ ರೂಪದಲ್ಲಿ ಒದಗಿಸಲು ವ್ಯವಸ್ಥೆ ಮಾಡುವುದು.

ಜಸ್ಟಿಸ್ ವರ್ಮಾ ಸಮಿತಿಯು 2012ರಲ್ಲಿ ನೀಡಿದ ವರದಿಯಲ್ಲಿ ಬಹುತೇಕ ಎಲ್ಲ ಅಂಶಗಳೂ ಅಡಕವಾಗಿದ್ದವು ಎನ್ನುವುದು ಗಮನಾರ್ಹ.

ಈ ಎಲ್ಲ ಆಯೋಗ/ಸಮಿತಿಗಳ ಶಿಫಾರಸುಗಳ ಆಶಯಗಳನ್ನು ಸಾಕಾರಗೊಳಿಸುವ ರೀತಿಯಲ್ಲಿ ನೂತನ ರಾಷ್ಟ್ರೀಯ ಶಿಕ್ಷಣ ನೀತಿಯು, ಶಿಕ್ಷಕರ ಶಿಕ್ಷಣದಲ್ಲಿ ಮಹತ್ತರ ಬದಲಾವಣೆಗಳನ್ನು ಒಳಗೊಂಡಿದೆ.

ನೂತನ ರಾಷ್ಟ್ರೀಯ ಶಿಕ್ಷಣ ನೀತಿ 2020ರಂತೆ ಶಿಕ್ಷಕರಿಗೆ ವಿಷಯವಸ್ತು ಮತ್ತು ಬೋಧನಾ ವಿಧಾನಗಳಲ್ಲಿ ಉನ್ನತ ಗುಣಮಟ್ಟದ ತರಬೇತಿಯ ಅಗತ್ಯವಿರುತ್ತದೆ. ಈ ಆಶಯದಂತೆ 2030ರ ವೇಳೆಗೆ ನಾಲ್ಕು ವರ್ಷಗಳ ಸಂಯೋಜಿತ ಬಿ.ಎಡ್. ಪದವಿಯು ಬೋಧನಾ ವೃತ್ತಿ ಕೈಗೊಳ್ಳಲು ಬೇಕಾದ ಕನಿಷ್ಠ ಅರ್ಹತೆಯಾಗಿರುತ್ತದೆ. ಈಗಿರುವ ಎರಡು ವರ್ಷಗಳ ಬಿ.ಎಡ್. ಕಾರ್ಯಕ್ರಮವನ್ನು ನಾಲ್ಕು ವರ್ಷಗಳ ಸಂಯೋಜಿತ ಬಿ.ಎಡ್. ಪದವಿ ನೀಡುವ ಬಹುವಿಷಯ ಬೋಧಿಸುವ ಬಹುಶಿಸ್ತೀಯ (ಮಲ್ಟಿಡಿಸಿಪ್ಲಿನರಿ) ಉನ್ನತ ಶಿಕ್ಷಣ ಸಂಸ್ಥೆಗಳಿಂದ ಮಾತ್ರ ನಡೆಸಲಾಗುವುದು.*

2021ರ ವೇಳೆಗೆ ಎನ್‌ಸಿಟಿಇ ಸಂಸ್ಥೆಯು ಎನ್‌ಸಿಇಆರ್‌ಟಿಯೊಂದಿಗೆ ಸಮಾಲೋಚಿಸಿ 2020ರ ರಾಷ್ಟ್ರೀಯ ಶಿಕ್ಷಣ ನೀತಿ 2020ರ ತತ್ತ್ವಗಳ ಆಧಾರದ ಮೇಲೆ ಶಿಕ್ಷಕರ ಶಿಕ್ಷಣಕ್ಕಾಗಿ ಹೊಸ ಮತ್ತು ಸಮಗ್ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2021ನ್ನು ರೂಪಿಸುತ್ತದೆ.

ಶಿಕ್ಷಕರ ಶಿಕ್ಷಣ ವ್ಯವಸ್ಥೆಯ ಸಮಗ್ರತೆಯನ್ನು ಸಂಪೂರ್ಣವಾಗಿ ಪುನಃಸ್ಥಾಪಿಸಲು, ಕಳಪೆ ಗುಣಮಟ್ಟದ ಶಿಕ್ಷಕ ಶಿಕ್ಷಣ ಸಂಸ್ಥೆ(ಟಿಇಐ)ಗಳ ವಿರುದ್ಧ, ಅಗತ್ಯವಿದ್ದಲ್ಲಿ ಅವುಗಳನ್ನು ಸ್ಥಗಿತಗೊಳಿಸಲಾಗುವುದೂ ಸೇರಿದಂತೆ ಕಠಿಣ ಕ್ರಮಗಳನ್ನು ತೆಗೆದುಕೊಳ್ಳಲಾಗುವುದು. ಸಮಾಧಾನಕರ ಸಂಗತಿಯೆಂದರೆ ನೀತಿಯು ಮಕ್ಕಳ ಭವಿಷ್ಯವನ್ನು ರೂಪಿಸುವ ಶಿಕ್ಷಕರ ಉದಾತ್ತ ಪಾತ್ರವನ್ನು

* ರಾಷ್ಟ್ರೀಯ ಶಿಕ್ಷಣ ನೀತಿ, ಭಾಗ 1 – ಶಾಲಾ ಶಿಕ್ಷಣ, ಶಿಕ್ಷಣ ಸಚಿವಾಲಯ, ಭಾರತ ಸರ್ಕಾರ

ಗುರುತಿಸಿದೆ. ಜೊತೆಗೆ ಪ್ರಸ್ತುತ ಶಿಕ್ಷಕರ ಶಿಕ್ಷಣದ ಗುಣಮಟ್ಟ, ನೇಮಕಾತಿ, ನಿಯೋಜನೆ, ಸೇವಾ ಪರಿಸ್ಥಿತಿಗಳು ಮತ್ತು ಶಿಕ್ಷಕರ ಸಬಲೀಕರಣವು ಅಪೇಕ್ಷಿತ ರೀತಿಯಲ್ಲಿ ಇಲ್ಲದಿರುವುದನ್ನು ಒಪ್ಪಿಕೊಂಡಿದೆ. ಹಾಗೂ ಬೋಧನಾ ವೃತ್ತಿಯಲ್ಲಿ ಉತ್ತಮ ವ್ಯಕ್ತಿಗಳು ಪ್ರವೇಶಿಸುವಂತೆ ಪ್ರೇರೇಪಿಸುವ ಸಲುವಾಗಿ ಶಿಕ್ಷಕರಿಗೆ ಹೆಚ್ಚಿನ ಗೌರವ ಮತ್ತು ಬೋಧನಾ ವೃತ್ತಿಯ ಉನ್ನತ ಸ್ಥಾನಮಾನವನ್ನು ಪುನ:ಸ್ಥಾಪಿಸಬೇಕಾಗಿದೆ ಎಂಬ ಪ್ರಾಮಾಣಿಕ ಅನಿಸಿಕೆಯನ್ನು ವ್ಯಕ್ತಪಡಿಸಿದೆ.

ಶಿಕ್ಷಕರ ನೇಮಕಾತಿ ಮತ್ತು ನಿಯೋಜನೆಯ ವಿಷಯದಲ್ಲಿ ನೀತಿಯು, ನಾಲ್ಕು ವರ್ಷದ ಗುಣಮಟ್ಟದ ಸಮಗ್ರ ಬಿ.ಎಡ್. ಅಧ್ಯಯನಕ್ಕಾಗಿ ದೇಶಾದ್ಯಂತ ಹೆಚ್ಚಿನ ಸಂಖ್ಯೆಯ ಮೆರಿಟ್ ಆಧಾರಿತ ವಿದ್ಯಾರ್ಥಿವೇತನ ನೀಡುವುದು, ಗ್ರಾಮೀಣ ಶಾಲೆಗಳಲ್ಲಿ ಗುಣಮಟ್ಟದ ಶಿಕ್ಷಕರ ಕೊರತೆಯನ್ನು ಎದುರಿಸುತ್ತಿರುವ ಪ್ರದೇಶಗಳಲ್ಲಿ ಶಿಕ್ಷಕರಿಗೆ ಪ್ರೋತ್ಸಾಹಧನ ನೀಡುವುದು, ಶಾಲಾ ಆವರಣದ ಬಳಿ ಶಿಕ್ಷಕರಿಗೆ ವಸತಿ ಸೌಲಭ್ಯ ಅಥವಾ ವಸತಿ ಭತ್ಯೆಯನ್ನು ಹೆಚ್ಚಿಸುವ ಪ್ರಸ್ತಾಪವನ್ನು ಮಾಡಿರುವುದು ಸರಿಯಾದ ಆಲೋಚನೆಯಾಗಿದೆ.

ಶಿಕ್ಷಕರ ಅರ್ಹತಾ ಪರೀಕ್ಷೆಗಳನ್ನು (ಟಿಇಟಿ) ಬಲಪಡಿಸುವುದರ ಜೊತೆಗೆ ಅದನ್ನು ಶಾಲಾ ಶಿಕ್ಷಣದ ಎಲ್ಲಾ ಹಂತಗಳ (ಬುನಾದಿ, ಪೂರ್ವಸಿದ್ಧತಾ, ಮಾಧ್ಯಮಿಕ ಮತ್ತು ಪ್ರೌಢ) ಶಿಕ್ಷಕರ ನೇಮಕಾತಿಗಾಗಿ ವಿಸ್ತರಿಸುವ ನಿರ್ಧಾರವನ್ನು ಹೊಂದಿರುವುದು ಗಮನಾರ್ಹವಾದುದು. ಮುಂದುವರೆದು, ಶಿಕ್ಷಕರ ನೇಮಕ ಪ್ರಕ್ರಿಯೆಯಲ್ಲಿ ಬೋಧನೆಯ ಕುರಿತು ಉತ್ಸಾಹ ಮತ್ತು ಪ್ರೇರಣೆಯನ್ನು ತಿಳಿದುಕೊಳ್ಳಲು ಬೋಧನಾ ಪ್ರಾತ್ಯಕ್ಷಿಕೆ ಅಥವಾ ಸಂದರ್ಶನ ವಿಧಾನವನ್ನು ಅನುಸರಿಸಲಾಗುತ್ತದೆ.

ಸೇವಾವಧಿಯಲ್ಲಿ ಶಿಕ್ಷಕರ ಸ್ವ-ವಿಕಾಸಕ್ಕೆ ನಿರಂತರ ಅವಕಾಶಗಳನ್ನು ಒದಗಿಸುವ ನಿಟ್ಟಿನಲ್ಲಿ ಪ್ರತಿಯೊಬ್ಬ ಶಿಕ್ಷಕರು ತಮ್ಮ ಆಸಕ್ತಿಗಳಿಗನುಗುಣವಾಗಿ ಪ್ರತಿವರ್ಷ ಕನಿಷ್ಠ ಐವತ್ತು ಗಂಟೆಗಳ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಅವಕಾಶವಿರುತ್ತದೆ. ಶಾಲಾ ಪ್ರಾಂಶುಪಾಲರು ತಮ್ಮ ನಾಯಕತ್ವ ಮತ್ತು ನಿರ್ವಹಣಾ ಕೌಶಲ್ಯಗಳನ್ನು ನಿರಂತರವಾಗಿ ಸುಧಾರಿಸಿಕೊಳ್ಳಲು ಇದೇ ರೀತಿಯ ಸಾಧ್ಯತೆಗಳಿರುತ್ತವೆ.

### ಬದಲಾವಣೆಗಳ ಹಿಂದಿನ ತಾರ್ಕಿಕತೆ

ಶಿಕ್ಷಕರ ಶಿಕ್ಷಣ ಕ್ಷೇತ್ರದಲ್ಲಿ ಕಂಡುಬರುವ ಕೊರತೆಗಳು ಹಾಗೂ ನ್ಯೂನತೆಗಳ ನಡುವೆಯೂ ಕಳೆದ ಎರಡು ದಶಕಗಳಲ್ಲಿ ಶಿಕ್ಷಣ ನೀತಿ ಮತ್ತು ಪಠ್ಯಕ್ರಮದಲ್ಲಿ

ಆಗಿರುವ ಬದಲಾವಣೆಗಳು ಗಣನೀಯವಾದವು ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಶಿಕ್ಷಕರು ಎಲ್ಲ ಮಕ್ಕಳಿಗೆ ಎಷ್ಟು ಪರಿಣಾಮಕಾರಿಯಾಗಿ ಕಲಿಸುತ್ತಾರೆ ಎನ್ನುವುದು, ಅವರು ಯಾವ ರೀತಿ ತಯಾರಾಗಿರುತ್ತಾರೆ, ಅವರು ನಡೆಸುವ ಪೂರ್ವಸಿದ್ಧತೆ, ಅವರು ಶಿಕ್ಷಕರಾಗಿ ರೂಪುಗೊಂಡು ವೃತ್ತಿಯಲ್ಲಿ ಬೆಳೆದ ಬಗೆ, ಒಳಗಾದ ಪ್ರಭಾವಗಳು ಇತ್ಯಾದಿಗಳನ್ನು ಅವಲಂಬಿಸಿದೆ. ಈ ಎಲ್ಲ ಸಿದ್ಧತಾ ಪ್ರಕ್ರಿಯೆಗಳು, ಆ ಶಿಕ್ಷಕರು ತಮ್ಮಲ್ಲಿಯೇ ಬೆಳೆಸಿಕೊಂಡ ನಿರಂತರ ಕಲಿಕೆಯ ಆಸಕ್ತಿಯನ್ನು, ಉತ್ತಮ ಶಿಕ್ಷಕರಾಗಿ ಹುರಿಗೊಳ್ಳಲು ಬೇಕಾದ ಸ್ವಪ್ರೇರಣೆಯನ್ನು ಯಾವ ಪ್ರಮಾಣದಲ್ಲಿ ಜಾಗ್ರತವಾಗಿ ಉಳಿಸಿಕೊಂಡಿದ್ದಾರೆ ಎನ್ನುವುದಕ್ಕೂ ಸಂಬಂಧಿಸಿದೆ.

1964–66ರ ಅವಧಿಯಲ್ಲಿ ಮೂಡಿಬಂದ ಕೊಠಾರಿ ಆಯೋಗದ ವರದಿಯಿಂದ ಹಿಡಿದು 1986/92ರ ರಾಷ್ಟ್ರೀಯ ಶಿಕ್ಷಣ ನೀತಿ, 2005ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು, 2009ರ ಶಿಕ್ಷಣ ಹಕ್ಕು ಕಾಯಿದೆ, 2012ರ ನ್ಯಾಯಮೂರ್ತಿ ವರ್ಮಾ ಆಯೋಗದ ವರದಿ, 2020ರ ರಾಷ್ಟ್ರೀಯ ಶಿಕ್ಷಣ ನೀತಿ ಇವೆಲ್ಲವೂ ಶಿಕ್ಷಕರ ಕಾರ್ಯವನ್ನು ಒಂದು ಗೌರವಾನ್ವಿತ ವೃತ್ತಿಯ ನೆಲೆಗೆ ಕೊಂಡೊಯ್ಯಬೇಕಾದ ಅಗತ್ಯತೆಯನ್ನು ಒತ್ತಿ ಹೇಳುತ್ತಲೇ ಬಂದಿವೆ. ಶಿಕ್ಷಕ ಶಿಕ್ಷಣ ಸಂಸ್ಥೆಗಳೂ ಕೂಡ ಶಿಕ್ಷಕರನ್ನು ಸಿದ್ಧಗೊಳಿಸುವ ಪ್ರಕ್ರಿಯೆಯಲ್ಲಿ ಆಮೂಲಾಗ್ರ ಬದಲಾವಣೆಗಳನ್ನು ಅಳವಡಿಸಿಕೊಳ್ಳಬೇಕೆಂದು ಬಲವಾಗಿ ಪ್ರತಿಪಾದಿಸಿವೆ.

ಹೊಸ ಶಿಕ್ಷಣ ನೀತಿಯನ್ನು ಅರ್ಥಪೂರ್ಣವಾಗಿ ಜಾರಿಗೊಳಿಸಬೇಕಾದ ಇಂತಹ ಪರ್ವಕಾಲದಲ್ಲಿ, ಈ ಬದಲಾವಣೆಗಳ ಹಿಂದಿನ ತಾರ್ಕಿಕ ಚಿಂತನೆಯನ್ನು ಅರ್ಥ ಮಾಡಿಕೊಳ್ಳುವುದು ಅತ್ಯಗತ್ಯವೆನಿಸುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಲು ಯಾರೇ ಆದರೂ ಕೆಲವು ನಿರ್ದಿಷ್ಟ ಸಾಮರ್ಥ್ಯ ಮತ್ತು ಕ್ಷಮತೆಗಳನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಮೂಲಭೂತವಾಗಿ, ಒಂದು ಪರಿಕಲ್ಪನೆಯಾಗಿ ಶಿಕ್ಷಣ ಎಂದರೇನು? ಅದನ್ನು ಅರ್ಥೈಸಿಕೊಳ್ಳುವುದು ಹೇಗೆ? ಶಾಲೆಯ ಸಂದರ್ಭದಲ್ಲಿ ಶಿಕ್ಷಣದ ಗುರಿಗಳನ್ನು ಹೇಗೆ ಪರಿಭಾವಿಸಬೇಕು? ಇದು ಮಾನವ ಸಮಾಜದಲ್ಲಿ ಘಟಿಸುವ ಸಾಮಾಜಿಕ ವಿದ್ಯಮಾನಕ್ಕೆ ಸಂಬಂಧಿಸಿರುವುದರಿಂದ ಇದನ್ನು ಅರ್ಥ ಮಾಡಿಕೊಳ್ಳಲು ವಿಶಿಷ್ಟ ಅಧ್ಯಯನ ಕ್ಷೇತ್ರವನ್ನಾಗಿ ಪರಿಗಣಿಸಬೇಕಾಗುತ್ತದೆ. ಶಾಲೆಯ ಹಂತದಲ್ಲಿ ಶಿಕ್ಷಣದ ಆಚರಣೆ ಸ್ಪಷ್ಟವಾಗಿ ಕಾಣಸಿಗುವುದು ಕಲಿಸುವ–ಕಲಿಯುವ ಪ್ರಕ್ರಿಯೆಯಲ್ಲಿ. ಶಿಕ್ಷಕರು–ವಿದ್ಯಾರ್ಥಿಗಳ ನಡುವೆ ನಡೆಯುವ ಈ ಅನುಸಂಧಾನವೇ ಇಡೀ ಶಿಕ್ಷಣದ ತಿರುಳು. ಇದು ಉದ್ದೇಶಪೂರ್ವಕವಾಗಿ ಜರುಗುವ ಕ್ರಿಯೆಯಾಗಿದೆ. ಅಂದರೆ ನಿರ್ದಿಷ್ಟ ಉದ್ದೇಶದೊಂದಿಗೆ (ಶಿಕ್ಷಣದ ಗುರಿಗಳು), ನಿಗದಿಪಡಿಸಿದ ಕ್ರಮದಲ್ಲಿ (ಪಠ್ಯಕ್ರಮ), ಮಕ್ಕಳ ಅಗತ್ಯಗಳಿಗೆ

ಪೂರಕವಾಗಿ (ಬೋಧನಾ ವಿಧಾನ) ಈ ಪ್ರಕ್ರಿಯೆ ನಡೆಯಬೇಕಾಗುತ್ತದೆ.

ಶಿಕ್ಷಕರ ಶಿಕ್ಷಣವನ್ನು ಕುರಿತಾದ ಈ ಚರ್ಚೆಯ ಸಂದರ್ಭದಲ್ಲಿ, ಶಾಲಾ ಸಂದರ್ಭದಲ್ಲಿ ಕೈಗೊಳ್ಳುವ ಈ ಪ್ರಕ್ರಿಯೆಯನ್ನು ಸ್ವಲ್ಪ ವಿಸ್ತರಿಸಿ ಸಮಗ್ರ ರೀತಿಯಲ್ಲಿ ಪ್ರಸ್ತುತಪಡಿಸುವುದು ಮುಖ್ಯ. ತರಗತಿ ಕೋಣೆಯಲ್ಲಿ ನಡೆಯುವ ಕಲಿಕೆಯ ಪ್ರಕ್ರಿಯೆಯು ಶಾಲೆಯ ಸಾಂಸ್ಥಿಕ ಚೌಕಟ್ಟಿನಲ್ಲಿ ಸಂಭವಿಸುತ್ತದೆ. ತರಗತಿಕೋಣೆ ಮತ್ತು ಶಾಲೆಯ ಪರಿಧಿಯಲ್ಲಿ ಆಯೋಜಿಸುವ ಪ್ರಕ್ರಿಯೆಗಳನ್ನು ಪೋಷಕರು ಮತ್ತು ಎಸ್.ಡಿ.ಎಂ.ಸಿ ಪ್ರಭಾವಿಸುತ್ತವೆ. ಶಿಕ್ಷಕರ ಗುಣಮಟ್ಟವು, ಅವರು ಎಂತಹ ಸಂಸ್ಥೆಗಳಿಂದ ತರಬೇತಿ ಪಡೆದಿದ್ದಾರೆ ಎನ್ನುವುದನ್ನು ಅವಲಂಬಿಸಿದೆ. ಇತ್ತ ಶಾಲೆಗಳ ನಡಾವಳಿಗಳ ಮೇಲುಸ್ತುವಾರಿಯ ಹೊಣೆ ಶೈಕ್ಷಣಿಕ ಆಡಳಿತ ವ್ಯವಸ್ಥೆಯ ಮೇಲಿರುತ್ತದೆ. ಕಲಿಕೆಯನ್ನು ಅನುವುಗೊಳಿಸಲು ಬಳಸುವ ಪಠ್ಯಕ್ರಮ, ಪಠ್ಯಪುಸ್ತಕಗಳು, ಇತರ ಯೋಜನೆಗಳನ್ನು ಒಟ್ಟಾರೆ ಆಡಳಿತ ನಿಯಂತ್ರಣಾ ವ್ಯವಸ್ಥೆಯು (ಕಾನೂನು, ನೀತಿ ನಿಯಮಗಳು, ಇಲಾಖೆ ನಿರ್ದೇಶನಾಲಯ, ಮಂಡಲಿಗಳು, ಇತ್ಯಾದಿ) ರೂಪಿಸುತ್ತದೆ. ಉದಾಹರಣೆಗೆ, ರಾಷ್ಟ್ರೀಯ ಶಿಕ್ಷಣ ನೀತಿಯು, ಶಿಕ್ಷಣ ವ್ಯವಸ್ಥೆಯಿಂದ ದೇಶದ ಅಭ್ಯುದಯಕ್ಕೆ ಪೂರಕವಾದ ಪ್ರಜೆಗಳನ್ನು ಹೊರಹೊಮ್ಮಿಸಬೇಕೆಂಬ ಆಶಯವನ್ನು ಹೊಂದಿರುತ್ತದೆ. ಅವು, ಶಿಕ್ಷಣದ ಗುರಿಗಳಾಗಿ ಪಠ್ಯಕ್ರಮದ ಮುಖೇನ ವ್ಯಕ್ತವಾಗುತ್ತವೆ. ಇವೆಲ್ಲವೂ, ದೇಶದ ಶಿಕ್ಷಣ ನೀತಿ, ಕಾನೂನಾತ್ಮಕ ನಿಯಮಗಳ ಚೌಕಟ್ಟಿನಲ್ಲಿಯೇ ರೂಪಿತವಾಗಿರುತ್ತವೆ. ಇದರೊಂದಿಗೆ, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದೇಶದ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯು ಮಕ್ಕಳ ಸಾಮಾಜಿಕ, ಆರ್ಥಿಕ ಹಿನ್ನೆಲೆ ಮತ್ತು ಪ್ರಾದೇಶಿಕ ಅಗತ್ಯತೆಗಳ ಕುರಿತು ಸೂಕ್ಷ್ಮತೆ ಮತ್ತು ಸಂವೇದನಾಶೀಲತೆಯನ್ನು ಹೊಂದಿರಬೇಕಾಗುತ್ತದೆ.

ಇಲ್ಲಿನ ವಿಶ್ಲೇಷಣೆಯ ಸಾರವಿಷ್ಟೆ. ಶಿಕ್ಷಕರು ಅಥವಾ ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುವವರು ಶಿಕ್ಷಕ-ವಿದ್ಯಾರ್ಥಿಗಳ ನಡುವೆ ಸಂಭವಿಸುವ ಸಾರಭೂತ ಪ್ರಕ್ರಿಯೆಯ ಕುರಿತು ಆಳವಾದ ತಿಳುವಳಿಕೆಯನ್ನು ಗಳಿಸಿಕೊಂಡಿರ ಬೇಕಾಗುತ್ತದೆ; ಮತ್ತು ಅದು ಯಾವ ಸಂದರ್ಭದಲ್ಲಿ, ಯಾವೆಲ್ಲ ಪ್ರಭಾವಗಳಿಗೆ ಒಳಪಟ್ಟು ಜರುಗುತ್ತದೆ ಎನ್ನುವ ಸ್ಪಷ್ಟ ಚಿತ್ರಣ ಅವರಿಗೆ ಇರಬೇಕಾಗುತ್ತದೆ. ವ್ಯಕ್ತಿಪರರಾಗಿ ಅವರು ಶಿಕ್ಷಣ ಕ್ಷೇತ್ರಕ್ಕೆ ಮೌಲಿಕ ಕೊಡುಗೆಯನ್ನು ನೀಡಬೇಕಾದರೆ ಅಗತ್ಯಮಟ್ಟದ ಜ್ಞಾನ (ಕೇವಲ ಸೈದ್ಧಾಂತಿಕ ಸ್ವರೂಪವನ್ನು ಮೀರಿದ ಪ್ರಾಯೋಗಿಕ ನೆಲೆಯದು), ಮೌಲ್ಯ (ತಮ್ಮದೇ ಗುರುತು, ಮೌಲ್ಯಗಳನ್ನು ಒರೆಗೆ ಹಚ್ಚಬಲ್ಲ ರೀತಿಯಲ್ಲಿ) ಹಾಗೂ ಕೌಶಲಗಳನ್ನು (ಸಿದ್ಧಾಂತ- ಆಚರಣೆಯನ್ನು ಬೆಸೆಯುವಂತೆ) ಬೆಳೆಸಿಕೊಳ್ಳಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ತಮ್ಮ ಅನುಭವದ ಮೂಸೆಯಲ್ಲಿ, ಪ್ರತಿಯೊಂದನ್ನೂ ಪ್ರಶ್ನಿಸುವ, ತಾವಿರುವ ಸಂದರ್ಭದಲ್ಲಿ ಯಾವ

ಕ್ರಮವನ್ನು ಹೇಗೆ ಅನ್ವಯಿಸಿಕೊಳ್ಳಬೇಕು ಎನ್ನುವುದನ್ನು ವಿಶ್ಲೇಷಿಸಿ, ಅಗತ್ಯವಿದ್ದರೆ ಪರ್ಯಾಯ ಆಲೋಚನೆಯನ್ನು ಪರಿಕಲ್ಪಿಸುವ ವ್ಯಕ್ತಿತ್ವವನ್ನು ಶಿಕ್ಷಕರು ಬೆಳೆಸಿಕೊಳ್ಳಬೇಕಾಗುತ್ತದೆ.

ಇಷ್ಟೆಲ್ಲ ನಿರೀಕ್ಷೆಗಳನ್ನು ಸಾಧ್ಯವಾಗಿಸಲು ಬೇಕಾಗಿರುವುದು ನಿರಂತರ ಸ್ವ–ಪ್ರಯತ್ನ ಮತ್ತು ಆಳವಾದ ಜಿಜ್ಞಾಸೆ. ಈ ಪ್ರಕ್ರಿಯೆಯು ಒಂದೆರಡು ವರ್ಷಗಳ ಶಿಕ್ಷಕರ ಶಿಕ್ಷಣ ಕೋರ್ಸ್ ಮೂಲಕ ಕೈಗೂಡದ ಮಾತು. ಶಿಕ್ಷಕರ ಪೂರ್ವಸಿದ್ಧತೆಗೆ ಬೇಕಾದ ಅವಧಿಯನ್ನು ನಾಲ್ಕು ವರ್ಷಗಳಿಗೆ ಹೆಚ್ಚಿಸಿರುವುದರ ಹಿಂದೆ ಇರುವ ತಾರ್ಕಿಕ ಕಾರಣವೂ ಇದೇ ಆಗಿದೆ.

ಆದರೆ, ಶಿಕ್ಷಕ ಶಿಕ್ಷಣ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ತಮ್ಮ ದೃಷ್ಟಿಕೋನ, ಆಲೋಚನೆ ಮತ್ತು ಕಾರ್ಯಾಚರಣೆಯ ಪ್ರಕ್ರಿಯೆಯಲ್ಲಿ ಮೂಲಭೂತ ಬದಲಾವಣೆಗಳನ್ನು ತಂದುಕೊಳ್ಳದಿದ್ದರೆ ನಿಜವಾದ ಅರ್ಥದಲ್ಲಿ ಶೈಕ್ಷಣಿಕ ಪರಿವರ್ತನೆ ಎನ್ನುವುದು ಹುಸಿಯಾಗುತ್ತದೆ. ಹಾಗಾಗದಿರಲೆಂದು ಆಶಿಸೋಣ.



13–01–2021

**ಕೋಷ್ಟಕ 5: 1937– 2020ರ ಅವಧಿಯಲ್ಲಿ ಶಿಕ್ಷಕ ಶಿಕ್ಷಣ ಕುರಿತು ಶಿಕ್ಷಣ ಆಯೋಗ/ ನೀತಿಗಳ ಶಿಫಾರಸು**

| ಕ್ರ. ಸಂ. | ಶಿಕ್ಷಣ ಆಯೋಗ / ನೀತಿ | ಅವಧಿ | ಶಿಕ್ಷಕರ ವಿದ್ಯಾರ್ಹತೆ/ತರಬೇತಿ ಪ್ರಮಾಣ | ವ್ಯಾಖ್ಯೆ |
|---|---|---|---|---|
| 1 | ಡಾ.ಜಾಕೀರ್ ಹುಸೇನ್ ಸಮಿತಿಯ 'ಮೂಲ ರಾಷ್ಟ್ರೀಯ ಶಿಕ್ಷಣ' ಕುರಿತಾದ ವರದಿ | 1937ರ ಡಿಸೆಂಬರ್ | ಕನಿಷ್ಠ ಹತ್ತನೇ ತರಗತಿ ಅಥವಾ ದೇಶೀಯ ಭಾಷೆಯೊಂದರ ಪರೀಕ್ಷೆಯಲ್ಲಿ ತೇರ್ಗಡೆ ಹಾಗೂ ಎರಡು ವರ್ಷಗಳ ಬೋಧನಾ ಅನುಭವ ಹೊಂದಿರಬೇಕು. | ಶೈಕ್ಷಣಿಕ ವಿಷಯಗಳಲ್ಲದೆ ಕುಶಲ ಕೆಲಸಗಳ ಕುರಿತ ತರಬೇತಿಗೆ ವಿವರವಾದ ಯೋಜನೆಯನ್ನು ಒಳಗೊಂಡಿದೆ. |
| 2 | ಕೊಠಾರಿ ಶಿಕ್ಷಣ ಆಯೋಗ | 1964–66 | ಪ್ರಾಥಮಿಕ ಹಂತ – ಪಿಯುಸಿ ಮತ್ತು ಎರಡು ವರ್ಷದ ಶಿಕ್ಷಕ ತರಬೇತಿ; ಪ್ರೌಢ ಹಂತ – ಸ್ನಾತಕ ಪದವಿಯೊಂದಿಗೆ ಎರಡು ವರ್ಷದ ಶಿಕ್ಷಕ ತರಬೇತಿ. | ಲೋಯರ್ ಸೆಕೆಂಡರಿ ಆದವರನ್ನು ಪ್ರಾಥಮಿಕ ಶಾಲೆಗಳಿಗೆ ನೇಮಿಸಿಕೊಳ್ಳುತ್ತಿದ್ದುದನ್ನು ಆಯೋಗ ಗಮನಿಸಿದೆ. ಶಿಕ್ಷಕರ ಗುಣಮಟ್ಟ ಬಹುತೇಕ ಕಳಪೆಯಾಗಿದ್ದು, ಶಿಕ್ಷಕ ತರಬೇತಿ ಸಂಸ್ಥೆಗಳನ್ನು ವಿಶ್ವವಿದ್ಯಾಲಯ ಹಂತಕ್ಕೆ ಉನ್ನತೀಕರಿಸಿ, ಸಮರ್ಥ ಬೋಧಕರನ್ನು ನೇಮಿಸುವುದು, ಪಠ್ಯಕ್ರಮ ಮತ್ತು ಪ್ರಕ್ರಿಯೆಗಳನ್ನು ಶಾಲೆಗಳ ಪ್ರಸ್ತುತ ಬೆಳವಣಿಗೆಗಳಿಗೆ ಹೊಂದುವಂತೆ ಶಿಕ್ಷಕ ಶಿಕ್ಷಣವನ್ನು ಮರುರೂಪಿಸಬೇಕೆಂದು ಬಲವಾಗಿ ಹೇಳಿದೆ. |
| 3 | ರಾಷ್ಟ್ರೀಯ ಶಿಕ್ಷಣ ನೀತಿ | 1936–37 | 1986/92 ಪ್ರಾಥಮಿಕ ಹಂತ – ಪಿಯುಸಿ ಜೊತೆಗೆ ಎರಡು ವರ್ಷದ ಡಿ.ಎಡ್;<br>ಪ್ರೌಢ ಹಂತ – ನಿರ್ದಿಷ್ಟ ವಿಷಯದಲ್ಲಿ ಪದವಿ ಮತ್ತು ಒಂದು ವರ್ಷದ ಬಿ.ಎಡ್. | ಸೇವಾಪೂರ್ವ ಮತ್ತು ಸೇವಾನಿರತ ಶಿಕ್ಷಕರ ವೃತ್ತಿಪರ ಅಭಿವೃದ್ಧಿಗೆ ಡಯಟ್ ಹಾಗೂ ಸಿಟಿಇ ಸಂಸ್ಥೆಗಳ ಸ್ಥಾಪನೆಗೆ ಚಾಲನೆ ದೊರೆಯಿತು. |

**ಕೋಷ್ಟಕ 5: 1937– 2020ರ ಅವಧಿಯಲ್ಲಿ ಶಿಕ್ಷಕ ಶಿಕ್ಷಣ ಕುರಿತು ಶಿಕ್ಷಣ ಆಯೋಗ/ ನೀತಿಗಳ ಶಿಫಾರಸು**

| ಕ್ರ ಸಂ. | ಶಿಕ್ಷಣ ಆಯೋಗ / ನೀತಿ | ಅವಧಿ | ಶಿಕ್ಷಕರ ವಿದ್ಯಾರ್ಹತೆ/ತರಬೇತಿ ಪ್ರಮಾಣ | ವ್ಯಾಖ್ಯೆ |
|---|---|---|---|---|
| 4 | ಜಸ್ಟಿಸ್ ವರ್ಮಾ ಸಮಿತಿ ವರದಿ | 2012 | ಪಿಯುಸಿ ಅಥವಾ ಸಮಾನಾಂತರ ಕೋರ್ಸ್ ನಂತರ ನಾಲ್ಕು ವರ್ಷದ ಸಮಗ್ರ ಶಿಕ್ಷಕ ಶಿಕ್ಷಣ ಕಾರ್ಯಕ್ರಮ. | ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸದ, ಶಿಕ್ಷಕ ಶಿಕ್ಷಣ ಸಂಸ್ಥೆಗಳನ್ನು ಮುಚ್ಚಬೇಕೆಂದು ಪ್ರತಿಪಾದಿಸಿದೆ. |
| 5 | ರಾಷ್ಟ್ರೀಯ ಶಿಕ್ಷಣ ನೀತಿ | 2020 | ಪಿ.ಯು.ಸಿ ಅಥವಾ ಸಮಾನಾಂತರ ಕೋರ್ಸ್ ನಂತರ ನಾಲ್ಕು ವರ್ಷದ ಸಮಗ್ರ ಶಿಕ್ಷಕ ಶಿಕ್ಷಣ ಕಾರ್ಯಕ್ರಮ; ಎರಡು ವರ್ಷದ ಬಿ.ಎಡ್. ಅನ್ನು ನಾಲ್ಕು ವರ್ಷದ ಕಾರ್ಯಕ್ರಮ ನಡೆಸುವ ಸಂಸ್ಥೆಗಳಲ್ಲಿ ಮಾತ್ರ ನಡೆಸಲಾಗುತ್ತದೆ. | 2030ರಿಂದ ಶಾಲಾ ಶಿಕ್ಷಣದ ಎಲ್ಲಾ ಹಂತಗಳ ಶಿಕ್ಷಕರ ನೇಮಕಾತಿಗೆ ನಾಲ್ಕು ವರ್ಷದ ಸಮಗ್ರ ಶಿಕ್ಷಕ ಶಿಕ್ಷಣ ಕಾರ್ಯಕ್ರಮ ಕಡ್ಡಾಯವಾಗುತ್ತದೆ. |

## ಕೋಷ್ಟಕ 6: ವಿವಿಧ ದೇಶಗಳಲ್ಲಿ ಶಿಕ್ಷಕರ ನೇಮಕಾತಿಗಾಗಿ ನಿಗದಿಪಡಿಸಲಾಗಿರುವ ಕನಿಷ್ಠ ವಿದ್ಯಾರ್ಹತೆ

| ಶಾಲಾ ಶಿಕ್ಷಣದ ವಿವಿಧ ಹಂತಗಳು | ಅಮೆರಿಕ | ಯುನೈಟೆಡ್ ಕಿಂಗ್ಡಮ್ | ಫಿನ್‌ಲ್ಯಾಂಡ್ | ದಕ್ಷಿಣ ಆಫ್ರಿಕಾ | ಆಸ್ಟ್ರೇಲಿಯಾ | ಭಾರತ |
|---|---|---|---|---|---|---|
| ಆರಂಭಿಕ ಬಾಲ್ಯ ಶಿಕ್ಷಣ/ ಪೂರ್ವ ಪ್ರಾಥಮಿಕ | ಪದವಿ ಕಾರ್ಯಕ್ರಮ | ಪದವಿ ಹಂತದಲ್ಲಿ ವಿಜ್ಞಾನ ವಿಷಯಗಳಲ್ಲಿ ನಿಗದಿತ ಕನಿಷ್ಠ ಮಟ್ಟದ ಗಳಿಕೆ | ಶಿಕ್ಷಣಶಾಸ್ತ್ರದಲ್ಲಿ ಪದವಿ | ಕನಿಷ್ಠ ಪ್ರೌಢ ಶಾಲೆ ಹಂತದ ಶಿಕ್ಷಣವನ್ನು ಮುಗಿಸಿರಬೇಕು | ಮೂರರಿಂದ ನಾಲ್ಕು ವರ್ಷಗಳ ಪದವಿ | ಕನಿಷ್ಠ ವಿದ್ಯಾರ್ಹತೆಯನ್ನು ನಿಗದಿ ಮಾಡಿಲ್ಲ* |
| ಪ್ರಾಥಮಿಕ | ರಾಜ್ಯ/ಜಿಲ್ಲಾ ಮಟ್ಟದ ಶಿಕ್ಷಕರ ಸಿದ್ಧತೆ ಕಾರ್ಯಕ್ರಮ | ಪದವಿ ಹಂತದಲ್ಲಿ ವಿಜ್ಞಾನ ವಿಷಯಗಳಲ್ಲಿ ನಿಗದಿತ ಕನಿಷ್ಠಮಟ್ಟದ ಗಳಿಕೆ | ಸ್ನಾತಕೋತ್ತರ ಕಾರ್ಯಕ್ರಮ | 4 ವರ್ಷದ ಪದವಿ ಅಥವಾ 3 ವರ್ಷದ ಪದವಿ + ಬೋಧನೆಯಲ್ಲಿ ಸರ್ಟಿಫಿಕೇಟ್ ಡಿಪ್ಲೋಮ | ಶಿಕ್ಷಣದಲ್ಲಿ 4 ವರ್ಷಗಳ ಪದವಿ ಅಥವಾ ಸಾಮಾನ್ಯ ಪದವಿಯ ಜೊತೆಗೆ ಶಿಕ್ಷಣದಲ್ಲಿ 2 ವರ್ಷದ ಸ್ನಾತಕೋತ್ತರ ಪದವಿ | ಪದವಿ ಮತ್ತು ಎರಡು ವರ್ಷದ ಬಿ.ಎಡ್ |
| ಪ್ರೌಢ | ಬೋಧನಾ ವಿಷಯದಲ್ಲಿ ಪದವಿ ಹಂತದಲ್ಲಿ ಪರಿಣಿತಿ<br>ರಾಜ್ಯ ಬೋಧನಾ ಪರವಾನಗಿ (ಸರ್ಕಾರಿ ಶಾಲೆಗಳಿಗೆ) | ಬೋಧನಾ ವಿಷಯದಲ್ಲಿ ಪದವಿ ಹಂತದಲ್ಲಿ ಪರಿಣಿತಿ.<br>ಬೋಧನಾ ಪ್ರಮಾಣೀಕರಣ ಕೋರ್ಸ್ | ಸ್ನಾತಕೋತ್ತರ ಕಾರ್ಯಕ್ರಮ | 4 ವರ್ಷದ ಪದವಿ ಅಥವಾ 3 ವರ್ಷದ ಪದವಿ + ಬೋಧನೆಯಲ್ಲಿ ಸರ್ಟಿಫಿಕೇಟ್ ಡಿಪ್ಲೋಮ | ಶಿಕ್ಷಣದಲ್ಲಿ 4 ವರ್ಷಗಳ ಪದವಿ ಅಥವಾ ಸಾಮಾನ್ಯ ಪದವಿಯ ಜೊತೆಗೆ ಶಿಕ್ಷಣದಲ್ಲಿ 2 ವರ್ಷದ ಸ್ನಾತಕೋತ್ತರ ಪದವಿ | ನಿರ್ದಿಷ್ಟ ವಿಷಯದಲ್ಲಿ ಪದವಿ/ ಸ್ನಾತಕೋತ್ತರ ಪದವಿ ಮತ್ತು ಎರಡು ವರ್ಷದ ಬಿ.ಎಡ್ |

**ಟಿಪ್ಪಣಿ: ಮಾಹಿತಿಯನ್ನು ಆಯಾ ದೇಶಗಳ ಸರ್ಕಾರಿ ಮತ್ತು ಇತರ ಜಾಲತಾಣಗಳಿಂದ ತೆಗೆದುಕೊಳ್ಳಲಾಗಿದೆ**

* ಹೊಸ ರಾಷ್ಟ್ರೀಯ ಶಿಕ್ಷಣ ನೀತಿ–2020ರಲ್ಲಿ ಆರಂಭಿಕ ಬಾಲ್ಯ ಶಿಕ್ಷಣ ಹಂತದ ಶಿಕ್ಷಕರಿಗೂ ನಾಲ್ಕು ವರ್ಷದ ಸಂಯೋಜಿತ ಬಿ.ಎಡ್ ಕಾರ್ಯಕ್ರಮವನ್ನು ನಿಗದಿಪಡಿಸಲಾಗಿದೆ.



**4 ಮತ್ತು 5ನೇ ಡಿಸೆಂಬರ್ 2017** – ಗಣಿತ ಚತುರ್ಭುಜ ಪರಿಕಲ್ಪನೆಯ ಕುರಿತು ಆಯೋಜಿಸಿದ ಕಾರ್ಯಾಗಾರದ ಚಟುವಟಿಕೆಯಲ್ಲಿ ಸಕ್ರಿಯವಾಗಿ ನಿರತರಾದ ಶಿಕ್ಷಕರು. ಇವರು ಬೆಂಗಳೂರು ದಕ್ಷಿಣ–1 ಬ್ಲಾಕ್‌ಗೆ ಸೇರಿದವರಾಗಿದ್ದಾರೆ.



**10ನೇ ಜುಲೈ 2019** – ಕರ್ನಾಟಕ ರಾಜ್ಯ ಅಕ್ಕಮಹಾದೇವಿ ಮಹಿಳಾ ವಿದ್ಯಾಲಯ, ವಿಜಯಪುರ ಇದರ ಸಹಯೋಗದಲ್ಲಿ 'ಭಾಷೆ ಮತ್ತು ಶಿಕ್ಷಣ' ಕುರಿತು ನಡೆಸಿದ ವಿಚಾರ ಸಂಕಿರಣದ ಸಮಾರಂಭದಲ್ಲಿ ವಿಶ್ವವಿದ್ಯಾಲಯದ ಅಂದಿನ ಕುಲಪತಿ ಸಬೀಹ ಭೂಮಿಗೌಡ ಅವರು ಮಾತನಾಡುತ್ತಿರುವುದು. ಕನ್ನಡದಲ್ಲಿ ಜ್ಞಾನಭಂಡಾರ ಸೃಷ್ಟಿಗೆ ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳೊಂದಿಗಿನ ಸಹಯೋಗ ಪೂರಕವಾಗಿದೆ.

ಪದವಿ ಮತ್ತು ಸ್ನಾತಕೋತ್ತರ ಹಂತದಲ್ಲಿ ವಿದ್ಯಾರ್ಥಿಗಳು ವಿಜ್ಞಾನ ಶಿಕ್ಷಣವನ್ನು ಇಂಗ್ಲಿಷಿನಲ್ಲಷ್ಟೇ ಪಡೆಯಬೇಕಾದ ಅನಿವಾರ್ಯ ಸ್ಥಿತಿಯಿರುವುದು ಕಳವಳಕಾರಿ. ಭೌತಶಾಸ್ತ್ರದ ಸ್ಟ್ರಿಂಗ್ ಸಿದ್ಧಾಂತವನ್ನು ಕಲಿಯಲು ಉತ್ಸುಕನಾಗಿರುವ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಯು ಕೇವಲ ಇಂಗ್ಲಿಷ್ ಚೆನ್ನಾಗಿ ಬಾರದ ಕಾರಣಕ್ಕಾಗಿ ಅವಕಾಶವಂಚಿತನಾಗಬಾರದು.

– **ಡಾ. ಕೆ. ವಿಜಯರಾಘವನ್**, ಪ್ರಧಾನ ಮಂತ್ರಿಗಳ ಮುಖ್ಯ ವೈಜ್ಞಾನಿಕ ಸಲಹೆಗಾರರು

# ಯೋಚಿಸುವ ಭಾಷೆಯಲ್ಲಿ ಉನ್ನತ ಜ್ಞಾನ ದೊರೆಯುವಂತಾದರೆ...

ದೇಶದ ಅರ್ಥವ್ಯವಸ್ಥೆಯ ಬೆಳವಣಿಗೆಯಲ್ಲಿ ಹೆಚ್ಚಿನ ಜನ ಪಾಲ್ಗೊಳ್ಳಬೇಕಾದರೆ ಅವರು ತಮ್ಮ ನೆಲದ ಭಾಷೆಯಲ್ಲೇ ಶಿಕ್ಷಣವನ್ನು ಪಡೆದು ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ಅವಕಾಶಗಳು ಸಿಗುವಂತಾಗಬೇಕು.

ಉಚಿತ ಮತ್ತು ಕಡ್ಡಾಯ ಶಿಕ್ಷಣ ಕಾಯಿದೆಯು ಎಲ್ಲಾ ಮಕ್ಕಳನ್ನೂ ಉತ್ತಮ ನಾಗರಿಕರನ್ನಾಗಿ ರೂಪಿಸುವ ಉದ್ದೇಶವನ್ನು ಹೊಂದಿದೆ. ಮಕ್ಕಳೆಲ್ಲರೂ ಪ್ರಾಥಮಿಕ ಶಿಕ್ಷಣ ಪಡೆಯುವುದು ಮೂಲಭೂತ ಹಕ್ಕಾಗಿದೆ. ಇದರರ್ಥ, ಕಲಿಕೆಯ ಹಂತದಲ್ಲಿ ಕೆಲವು ಕಾರಣಗಳಿಂದ ಮಕ್ಕಳನ್ನು ನಿರ್ಲಕ್ಷಿಸಿದರೆ ಅದು ಅವರ ಹಕ್ಕನ್ನು ಕಡೆಗಣಿಸಿದಂತೆ. ವಿಶೇಷ ಅಗತ್ಯವನ್ನುಳ್ಳ ಮಕ್ಕಳನ್ನು ಸಾಮಾನ್ಯ ಮಕ್ಕಳಂತೆ ಕಲಿಕೆಯಲ್ಲಿ ತೊಡಗಿಸಿಕೊಳ್ಳುವಲ್ಲಿ ಯಾವ ಪ್ರಯತ್ನಗಳಾಗುತ್ತಿವೆ? ಅಂತಹ ಮಕ್ಕಳನ್ನು ಶಾಲಾಪ್ರಕ್ರಿಯೆಯಲ್ಲಿ ಒಳಗೊಳ್ಳುವ ವಿಷಯದಲ್ಲಿ ಎಷ್ಟರಮಟ್ಟಿಗೆ ಸಮನ್ವಯ ಸಾಧಿಸಿದ್ದೇವೆ?

ಮಂಡ್ಯ ತಾಲೂಕಿನ ಸಮನ್ವಯ ಶಿಕ್ಷಕಿಯೊಬ್ಬರು ಈ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು, ಆಯ್ದ ವಿಶೇಷ ಅಗತ್ಯಗಳನ್ನುಳ್ಳ ಮಕ್ಕಳು, ಪೋಷಕರು ಮತ್ತು ಶಿಕ್ಷಕರನ್ನು ಸಂದರ್ಶಿಸಿ, ಜೊತೆಗೆ ಶಾಲಾ ಭೇಟಿ, ತರಗತಿ ವೀಕ್ಷಣೆಯ ಮೂಲಕ ಕಂಡುಕೊಂಡ ಅಂಶಗಳನ್ನು ವಿಶ್ಲೇಷಿಸಿ, ಅಧ್ಯಯನವೊಂದನ್ನು ಕೈಗೊಂಡಿದ್ದರು.

ಈ ಅಧ್ಯಯನವು ಉಪಯುಕ್ತ ಒಳನೋಟಗಳನ್ನು ಒದಗಿಸುತ್ತದೆ. ಇಂತಹ ಮಕ್ಕಳ ವಿಶೇಷ ಅಗತ್ಯಗಳನ್ನರಿಯಲು ಶಿಕ್ಷಕರು ಅವರಿಗೆ ಪೂರಕ ಭೌತಿಕ ಪರಿಸರ ಮತ್ತು ಕಲಿಕೆಯ ಸಂಪನ್ಮೂಲಗಳನ್ನು ಒದಗಿಸಿ, ಅವರ ಕಲಿಕೆಯನ್ನು ಸುಧಾರಿಸುವ ನಿಟ್ಟಿನಲ್ಲಿ ತಮ್ಮ ಅಭ್ಯಾಸಗಳಲ್ಲಿ ಹೆಚ್ಚಿನ ಪಕ್ವತೆ ಸಾಧಿಸಬೇಕಾದ ಅವಶ್ಯಕತೆಯನ್ನು ಸೂಚಿಸುತ್ತದೆ. ಜೊತೆಗೆ ಪೋಷಕರು ತಮ್ಮ ಮಕ್ಕಳ ಅಗತ್ಯಗಳ ಬಗ್ಗೆ ವೃತ್ತಿಪರರ ಸಹಾಯ ಪಡೆದು ಇನ್ನೂ ಆಳವಾದ ಜ್ಞಾನ ಮತ್ತು ಧನಾತ್ಮಕ ದೃಷ್ಟಿಕೋನವನ್ನು ಬೆಳೆಸಿಕೊಳ್ಳಬೇಕಾದುದರ ಬಗ್ಗೆಯೂ ಬೆಳಕು ಚೆಲ್ಲುತ್ತದೆ.

ಶಿಕ್ಷಕರ ಅಸ್ಮಿತೆಯು ಪ್ರಾಥಮಿಕ ಶಿಕ್ಷಣದ ಇನ್ನೊಂದು ಮುಖ್ಯ ಆಯಾಮ. ಈ ವಿಷಯದಲ್ಲಿ ಶಿರಾ ತಾಲೂಕಿನ ಶಿಕ್ಷಣ ಸಂಯೋಜಕರೊಬ್ಬರು ಇನ್ನೊಂದು ಅಧ್ಯಯನವನ್ನು ಕೈಗೊಂಡಿದ್ದರು. ಶಿಕ್ಷಕರು ತಮ್ಮನ್ನು ತಾವೇ ಹೇಗೆ ಗುರುತಿಸಿಕೊಳ್ಳುತ್ತಿದ್ದಾರೆ? ಅವರ ಪ್ರಸ್ತುತ ಆಚರಣೆಗಳು ಅಸ್ಮಿತೆಯನ್ನು ಗುರುತಿಸಿಕೊಳ್ಳಲು ಹೇಗೆ ನೆರವಾಗಿವೆ ಅಥವಾ ತೊಡಕಾಗಿವೆ? ಅವರ ವೃತ್ತಿ ಒಲವು ಮತ್ತು ದೃಷ್ಟಿಕೋನಗಳು ಅವರ ಮಾತು ಮತ್ತು ಕೃತಿಗಳಲ್ಲಿ ಹೇಗೆ ವ್ಯಕ್ತಗೊಳ್ಳುತ್ತಿವೆ? ಈ ಪ್ರಶ್ನೆಗಳನ್ನಿರಿಸಿಕೊಂಡು ಶಿಕ್ಷಕರ ಅಭಿಪ್ರಾಯ, ಅನುಭವಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿ, ಸಂಶೋಧನಾ ಲೇಖನವನ್ನು ಪ್ರಸ್ತುತಪಡಿಸಿದ್ದರು. ಇವು ಹೊರಗೆಡಹಿದ ಅಂಶಗಳು ಶಿಕ್ಷಣದ ಇಂದಿನ ಸ್ಥಿತಿಯ ಬಗ್ಗೆ ಯೋಚಿಸುವಂತಹದ್ದಾಗಿವೆ. ಶಿಕ್ಷಕ ವೃತ್ತಿಯನ್ನು ಇಷ್ಟಪಟ್ಟು ಬರುತ್ತಿರುವವರ ಸಂಖ್ಯೆ ಕಡಿಮೆಯಾಗುತ್ತಿದೆ. ಬಹುತೇಕ ಜನರು ಈ ವೃತ್ತಿಯನ್ನು ಆಕಸ್ಮಿಕವಾಗಿ ಆಯ್ದುಕೊಂಡಿದ್ದಾರೆ. ಶಿಕ್ಷಕರಿಂದ ಸಮಾಜವು ಇರಿಸಿಕೊಂಡಿರುವ ನಿರೀಕ್ಷೆಗಳಿಗೂ ಶಿಕ್ಷಕರ ವೈಯಕ್ತಿಕ ನಿರೀಕ್ಷೆಗಳಿಗೂ ಸಾಮ್ಯತೆಗಳಿಲ್ಲ. ಶಿಕ್ಷಕರ ಸಂಘಗಳು ಶೈಕ್ಷಣಿಕ ವಿಷಯಗಳಿಗೆ ಹೆಚ್ಚಿನ ಆದ್ಯತೆ ಕೊಟ್ಟು ಶಿಕ್ಷಕರ ಅಸ್ಮಿತೆ ಉಳಿಸಿಕೊಳ್ಳುವಲ್ಲಿ ಮಹತ್ತರ ಪಾತ್ರ ವಹಿಸಬೇಕಾಗಿದೆ. ಇತರ ವೃತ್ತಿಗಳೊಂದಿಗೆ ತಮ್ಮನ್ನು ಹೋಲಿಸಿಕೊಂಡು ಶಿಕ್ಷಕರು ಕೀಳರಿಮೆಯಿಂದ ಗುರುತಿಸಿಕೊಳ್ಳುತ್ತಿದ್ದಾರೆ. ಎಲ್ಲ ಒತ್ತಡಗಳ ನಡುವೆಯೂ ವೃತ್ತಿಪ್ರೀತಿಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿದ್ದಾರೆ. ಇಂತಹ ಕೆಲವು ಹೊಳಹುಗಳು ನಿಜಕ್ಕೂ ಗಮನ ಸೆಳೆಯುತ್ತವೆ.

'ಶಾಲಾ ಶಿಕ್ಷಣದ ಪ್ರಸಕ್ತ ಸನ್ನಿವೇಶದಲ್ಲಿ ಶಿಕ್ಷಕರು' ಎಂಬ ವಿಷಯದ ಬಗ್ಗೆ ಕಳೆದ ತಿಂಗಳು ಮೈಸೂರಿನಲ್ಲಿ ರಾಜ್ಯಮಟ್ಟದ ವಿಚಾರ ಸಂಕಿರಣವೊಂದು ನಡೆಯಿತು. ಅದರ ಭಾಗವಾಗಿ ಕನ್ನಡದಲ್ಲಿಯೇ ಮಂಡಿತವಾದ ಎಪ್ಪತ್ತೆರಡು ಲೇಖನಗಳಲ್ಲಿ ಮೇಲಿನ ಎರಡು ಉದಾಹರಣೆಗಳೂ ಇದ್ದವು. ಇಪ್ಪತ್ತೊಮ್ಮರು ಜಿಲ್ಲೆಗಳಿಗೆ ಸೇರಿದ, ಸರಕಾರಿ ಮತ್ತು ಖಾಸಗಿ ಶಾಲೆಗಳ, ವಿಶ್ವವಿದ್ಯಾಲಯಗಳ ಶಿಕ್ಷಕರು, ಶಿಕ್ಷಕ ಶಿಕ್ಷಕರು, ಶೈಕ್ಷಣಿಕ ಅಧಿಕಾರಿಗಳು ಹಾಗೂ ಸ್ವಯಂಸೇವಾ

ಸಂಸ್ಥೆಗಳ ಸದಸ್ಯರು ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಿದ್ದರು. ಈ ವಿಚಾರ ಸಂಕಿರಣವು ಎರಡು ಉದ್ದೇಶಗಳಿಗಾಗಿ ಮುಖ್ಯವಾಗಿತ್ತು. ಮೊದಲನೆಯದು, ಮಂಡನೆಯಾದ ಉತ್ತಮ ಲೇಖನಗಳನ್ನು ಆಯ್ಕೆ ಮಾಡಿ ಪುಸ್ತಕ ರೂಪದಲ್ಲಿ ಪ್ರಕಟಿಸಿ ಶಿಕ್ಷಣ ಕ್ಷೇತ್ರದಲ್ಲಿ ಪದವಿ, ಸ್ನಾತಕೋತ್ತರ ವಿದ್ಯಾರ್ಥಿಗಳು, ಶಿಕ್ಷಕರಿಗೆ ಲಭ್ಯವಾಗುವಂತೆ ಮಾಡುವುದು, ಆ ಮೂಲಕ ಕನ್ನಡದಲ್ಲಿ ಗುಣಮಟ್ಟದ ಸಂಪನ್ಮೂಲದ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ತುಂಬುವುದು. ಎರಡನೆಯದು, ಶಾಲಾ ಶಿಕ್ಷಣದ ಸುತ್ತ ಅರ್ಥಪೂರ್ಣ ಸಂವಾದವನ್ನೇರ್ಪಡಿಸಿ ಈ ಮೂಲಕ ಬಹುವಿಧ ಸಂವೇದನೆ, ಅನುಭವಗಳನ್ನು ಹೊಸ ಜ್ಞಾನಸೃಷ್ಟಿಗೆ ಬಳಸುವುದು.

ವಿಚಾರ ಸಂಕಿರಣದ ಅಧಿವೇಶನಗಳು ಆಸಕ್ತಿದಾಯಕವಾಗಿದ್ದವು. ಅದಕ್ಕೆ, ಶಿಕ್ಷಕರು ಸ್ವಂತ ವಿಚಾರಶಕ್ತಿಯಿಂದ ಆಲೋಚಿಸಿ ಜ್ಞಾನಸೃಷ್ಟಿಯ ಪ್ರಯತ್ನದಲ್ಲಿ ತೊಡಗಿಕೊಂಡಿದ್ದುದೇ ಕಾರಣವಾಗಿತ್ತು. ಇಂಗ್ಲಿಷಿನಲ್ಲಿ ಲೇಖನ ಬರೆದು ಪ್ರಸ್ತುತಪಡಿಸಲು ಕೇಳಿದ್ದರೆ ಇಂಥ ಸ್ವಂತಿಕೆ ಸಾಧ್ಯವಾಗುತ್ತಿರಲಿಲ್ಲ. ಇಂಥ ಚಿಂತನ-ಮಂಥನವು ಕನ್ನಡದಲ್ಲಿ ನಡೆಯುವ ಅವಶ್ಯಕತೆ ಏನು? ಉನ್ನತ ಶಿಕ್ಷಣ ಹಂತದಲ್ಲಿ ಕನ್ನಡದಂತಹ ಭಾರತೀಯ ಭಾಷೆಗಳಲ್ಲಿ ಅನುವಾದ ಮತ್ತು ಸಾಹಿತ್ಯ ರಚನೆ ಪ್ರಸ್ತುತವೇ? ಅದರಲ್ಲೂ ಇಂಗ್ಲಿಷ್ ಮೂಲಕವೇ ಭವಿಷ್ಯ ಕಟ್ಟಿಕೊಳ್ಳಬೇಕೆಂಬ ದೃಢನಂಬಿಕೆಯನ್ನು ಬಹುಜನರು ತಳೆದಿರುವ ಸಂದರ್ಭದಲ್ಲಿ ಇಂತಹ ಪ್ರಯತ್ನಗಳು ಎಷ್ಟು ಸಾರ್ಥಕವಾಗಬಲ್ಲವು?

ಇವತ್ತಿಗೂ ಉನ್ನತ ಶಿಕ್ಷಣವನ್ನು ಅರಸಿ ಬರುತ್ತಿರುವ ಗ್ರಾಮಾಂತರ ಮತ್ತು ಅರೆನಗರ ಪ್ರದೇಶಗಳ ವಿದ್ಯಾರ್ಥಿಗಳು ವಿಶ್ವವಿದ್ಯಾಲಯ ಇಲ್ಲವೇ ಪ್ರೌಢಶಾಲೆಗಳಲ್ಲಿ ಕನ್ನಡ ಅಥವಾ ಇತರ ಭಾರತೀಯ ಭಾಷಾಮಾಧ್ಯಮದಲ್ಲಿಯೇ ಕಲಿಯುತ್ತಿದ್ದಾರೆ. ಬಹುತೇಕ ಇಂಗ್ಲಿಷ್ ಮಾಧ್ಯಮದ ಶಾಲೆ-ಕಾಲೇಜುಗಳಲ್ಲಿ ಇಂಗ್ಲಿಷನ್ನು ಸರಿಯಾಗಿ ಕಲಿಯುವ ವಾತಾವರಣವಿಲ್ಲ. ಮೂಲ ವಿಷಯಗಳನ್ನು ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸುತ್ತೇವೆಂದು ಹೇಳಿಕೊಳ್ಳುತ್ತ ವಿದ್ಯಾರ್ಥಿಗಳನ್ನು ತಮ್ಮತ್ತ ಸೆಳೆಯುವ ಹಲವು ಖಾಸಗಿ ಶಾಲೆಗಳು ಮೇಲ್ನೋಟಕ್ಕೆ ಇಂಗ್ಲಿಷ್ ಬಳಕೆ ಮಾಡುತ್ತ ವಾಸ್ತವದಲ್ಲಿ ಕನ್ನಡ ಭಾಷೆಯನ್ನೇ ಬಳಸುತ್ತಿರುವುದನ್ನು ನೋಡುತ್ತಿದ್ದೇವೆ. ಈ ಸ್ಥಿತಿಗೆ ಹಲವು ಕಾರಣಗಳಿವೆ. ಮುಖ್ಯವಾದದ್ದು, ಪರಿಕಲ್ಪನೆಗಳನ್ನು ಇಂಗ್ಲಿಷಿನಲ್ಲಿ ಅರ್ಥೈಸಿಕೊಂಡು ವಿದ್ಯಾರ್ಥಿಗಳಿಗೆ ಮನದಟ್ಟಾಗುವಂತೆ ಬೋಧಿಸಬಲ್ಲ ಸಮರ್ಥ ಶಿಕ್ಷಕರ ಕೊರತೆ. ಭಾರತೀಯ ಭಾಷೆಗಳಲ್ಲಿ ಉತ್ತಮ ಗುಣಮಟ್ಟದ ಕಲಿಕೆಯ ಸಂಪನ್ಮೂಲಗಳಿಲ್ಲದಿರುವುದು ಈ ಅಂಶವನ್ನು ಇನ್ನಷ್ಟು ಸಂಕೀರ್ಣಗೊಳಿಸುತ್ತದೆ. ವ್ಯಕ್ತಿಯು ಸ್ವಂತ ಭಾಷೆಯಲ್ಲಿ ಆಲೋಚಿಸಿದಾಗ ಮಾತ್ರ ತನ್ನ ಪರಿಕಲ್ಪನಾ

ಚೌಕಟ್ಟನ್ನು ಪರಿಣಾಮಕಾರಿಯಾಗಿ ಬಳಸಬಲ್ಲ. ಮನೆ ಮತ್ತು ಪರಿಸರದಲ್ಲಿ ಬಳಸುವ ಭಾಷೆಗಳಲ್ಲೇ ನಮ್ಮ ಮೂಲ ಪರಿಕಲ್ಪನಾ ಸಂರಚನೆ ಸಿದ್ಧಗೊಂಡಿರುತ್ತದೆ. ತರಗತಿಯಲ್ಲಿ ತಾನು ಅರ್ಥೈಸಿಕೊಳ್ಳುವ ಮತ್ತು ಆಪ್ತವಾಗಿ ಸಂಬಂಧಿಸಿಕೊಳ್ಳುವ ಭಾಷೆಯಲ್ಲೇ ಬೋಧನಾ ಪ್ರಕ್ರಿಯೆ ನಡೆದಾಗ ಆ ವಿದ್ಯಾರ್ಥಿಯು ಕಲಿಕೆಯನ್ನು ತನ್ನದಾಗಿಸಿಕೊಂಡು ಆತ್ಮವಿಶ್ವಾಸದಿಂದ ಮುನ್ನಡೆಯಲು ಸಾಧ್ಯವಾಗುವುದು.

ಪರಿಕಲ್ಪನಾತ್ಮಕವಾಗಿ ಸಮೃದ್ಧವೂ ಸೂಕ್ಷ್ಮವೂ ಆದ ದೃಷ್ಟಿಕೋನಗಳನ್ನು ಒದಗಿಸುವ ಸಂಪನ್ಮೂಲಗಳಿಂದ ವಂಚಿತರಾದ ವಿದ್ಯಾರ್ಥಿಗಳು ಬೇರೆ ದಾರಿಯಿಲ್ಲದೆ ತೀವ್ರ ವಿರೋಧಾಭಾಸಗಳಿಂದ ಕೂಡಿದ, ತಪ್ಪು ಕಲ್ಪನೆಗಳನ್ನು ಎತ್ತಿ ಹಿಡಿಯುವ ಅರೆಬೆಂದ ಜನಪ್ರಿಯ ಜ್ಞಾನಮೂಲಗಳಿಗೆ ಮೊರೆಹೋಗುತ್ತಾರೆ. ಇಂಗ್ಲಿಷ್ ಮಾತನಾಡುವ ಜನರಿಗೆ ಕೈಗೆಟುಕುವ ಪರಿಕಲ್ಪನಾತ್ಮಕ ಸಂರಚನೆಗಳು, ವಿಚಾರಗಳಿಂದ ದೂರವುಳಿಯುವ ಈ ವಿದ್ಯಾರ್ಥಿಗಳು ವಿಶಾಲ ಜಗತ್ತಿನ ದೃಷ್ಟಿಯಿಂದ ಒಪ್ಪಿತ ಜ್ಞಾನವೆಂದು ಪರಿಗಣಿಸಲ್ಪಡುವ ಚೌಕಟ್ಟಿನಲ್ಲಿ ತಮ್ಮ ಅನುಭವಗಳನ್ನು ಒರೆಗೆ ಹಚ್ಚಲಾರದೆ ಹಿಂದೆ ಬೀಳುತ್ತಾರೆ. ಈ ಹಿನ್ನೆಲೆಯಿಂದ ಪರಿಕಲ್ಪನಾತ್ಮಕವಾಗಿ ಸದೃಢವಾದ ಆಯ್ದ ಸಂಪನ್ಮೂಲಗಳನ್ನು ಭಾರತೀಯ ಭಾಷೆಗಳಿಗೆ ಅನುವಾದಿಸಿ ಪದವಿ ಮತ್ತು ಸ್ನಾತಕೋತ್ತರ ಮಟ್ಟದಲ್ಲಿ ಹೆಚ್ಚು ಜನರಿಗೆ ತಲುಪಿಸುವ ಮಹತ್ತರ ಶೈಕ್ಷಣಿಕ ಕೆಲಸವನ್ನು ಕೈಗೊಳ್ಳಬೇಕಾಗಿದೆ.

ಪ್ರಧಾನಿಗಳ ಮುಖ್ಯ ವೈಜ್ಞಾನಿಕ ಸಲಹೆಗಾರರು ಮತ್ತು ಪ್ರಸಿದ್ಧ ಜೀವಶಾಸ್ತ್ರಜ್ಞರಾದ ಡಾ. ಕೆ. ವಿಜಯರಾಘವನ್ ಅವರು ಪದವಿ ಮತ್ತು ಸ್ನಾತಕೋತ್ತರ ಹಂತದಲ್ಲಿ ವಿದ್ಯಾರ್ಥಿಗಳು ವಿಜ್ಞಾನ ಶಿಕ್ಷಣವನ್ನು ಇಂಗ್ಲಿಷಿನಲ್ಲಿಯೇ ಪಡೆಯಬೇಕಾದ ಅನಿವಾರ್ಯ ಸ್ಥಿತಿಯಿರುವುದರ ಬಗ್ಗೆ ಇತ್ತೀಚೆಗೆ ಕಳವಳ ವ್ಯಕ್ತಪಡಿಸಿದ್ದಾರೆ. ಭೌತಶಾಸ್ತ್ರದ ಪ್ರಸಿದ್ಧ ಸ್ಟ್ರಿಂಗ್ ಸಿದ್ಧಾಂತವನ್ನು ಕಲಿಯಲು ಉತ್ಸುಕನಾಗಿರುವ ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಯು ಕೇವಲ ಇಂಗ್ಲಿಷ್ ಚೆನ್ನಾಗಿ ಬಾರದ ಕಾರಣಕ್ಕಾಗಿ ಅವಕಾಶ ವಂಚಿತನಾಗಬಾರದು ಎಂದಿರುವುದು ಗಮನಾರ್ಹ. ಈ ಹೇಳಿಕೆಯ ಬೆನ್ನಲ್ಲೇ ಕೇಂದ್ರ ಸಾಹಿತ್ಯ ಅಕಾಡೆಮಿಯ ಸಾರಥ್ಯ ವಹಿಸಿರುವ ಸಾಹಿತಿ ಚಂದ್ರಶೇಖರ ಕಂಬಾರರೂ ಸಹ ವಿಜ್ಞಾನದ ಪುಸ್ತಕಗಳನ್ನೂ ಒಳಗೊಂಡಂತೆ ಶೈಕ್ಷಣಿಕ ಸಂಪನ್ಮೂಲಗಳ ಅನುವಾದ ಪ್ರಕ್ರಿಯೆಗೆ ಚಾಲನೆ ನೀಡಬೇಕಾಗಿದೆಯೆಂದು ಹೇಳಿರುವುದು ಮಹತ್ತರ ಬೆಳವಣಿಗೆ. ಈ ಹಿನ್ನೆಲೆಯಲ್ಲಿ ರಾಜ್ಯ ಪದವಿಪೂರ್ವ ಶಿಕ್ಷಣ ಇಲಾಖೆಯು ವಿಜ್ಞಾನದ ಪಠ್ಯಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿ ಒದಗಿಸಲು ಮುಂದಾಗಿರುವುದು ಶ್ಲಾಘನೀಯ. ಇತರ ವಿಷಯಗಳಿಗೂ ಈ ಪ್ರಕ್ರಿಯೆ ಅನ್ವಯವಾಗುವುದು ಅಗತ್ಯ.

ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ನಿಟ್ಟಿನಲ್ಲಿ ಯೋಚಿಸತೊಡಗಿರುವುದು ಸ್ವಾಗತಾರ್ಹ. ಲಾಭರಹಿತ ಉದ್ದೇಶದ ಇಂತಹ ಯೋಜನೆಗಳಿಗೆ ಪ್ರಕಾಶಕರಿಂದ ಅನುಮತಿ ದೊರಕಿಸಿಕೊಡುವುದು ಅಗತ್ಯ. ಜೊತೆಗೆ, ವಿಶ್ವವಿದ್ಯಾಲಯಗಳು, ಕಾಲೇಜುಗಳು ಮತ್ತು ಗ್ರಂಥಾಲಯಗಳ ಮೂಲಕ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಗೆ ಅನುವಾದಿತ ಸಂಪನ್ಮೂಲಗಳು ಸುಲಭವಾಗಿ ತಲುಪುವಂತೆ ಮಾಡಲು ಸರಕಾರಗಳು ಮುಂದಾಗುವುದು ಅವಶ್ಯಕ. ನಮ್ಮ ದೇಶವು ಜ್ಞಾನಾಧಾರಿತ, ಸ್ವಾವಲಂಬಿ ಅರ್ಥವ್ಯವಸ್ಥೆಯಾಗಬೇಕೆಂದು ಅಪೇಕ್ಷಿಸುತ್ತಿರುವ ಸನ್ನಿವೇಶದಲ್ಲಿ ಅರ್ಥವ್ಯವಸ್ಥೆಯ ಬೆಳವಣಿಗೆಯಲ್ಲಿ ಹೆಚ್ಚಿನ ಜನರನ್ನು ಒಳಗೊಳ್ಳಬೇಕಾದರೆ ಅವರಿಗೆ ಅವರ ಭಾಷೆಯಲ್ಲೇ ಶಿಕ್ಷಣವನ್ನು ಪಡೆಯಲು ಅವಕಾಶಗಳು ಇರಬೇಕು. ಎಲ್ಲರಿಗೂ ಸಮಾನ ಅವಕಾಶ ಸಿಕ್ಕಾಗಲೇ ನ್ಯಾಯಯುತ ಮತ್ತು ಮಾನವೀಯ ಸಮಾಜದ ನಿರ್ಮಾಣಕ್ಕೆ ನಿಜವಾದ ಅರ್ಥ ಬರುತ್ತದೆ.

■

ವಿಜಯ ಕರ್ನಾಟಕ, 07–06–2018



ಕನ್ನಡದಂತಹ ದೇಸಿ ಭಾಷಾ ಮಾಧ್ಯಮದಲ್ಲಿಯೇ ಓದಿದ ವಿದ್ಯಾರ್ಥಿಗಳು ಪದವಿ ಮತ್ತು ಸ್ನಾತಕೋತ್ತರ ಮಟ್ಟಗಳಲ್ಲಿ ಗುಣಮಟ್ಟದ ಪಠ್ಯಪುಸ್ತಕಗಳ ಲಭ್ಯತೆ ಇಲ್ಲದಿರುವುದರಿಂದ ಅನಿವಾರ್ಯವಾಗಿ ಇಂಗ್ಲಿಷ್ ಮಾಧ್ಯಮವನ್ನೇ ಆರಿಸಿಕೊಳ್ಳಬೇಕಾಗುತ್ತದೆ. ಇಂಗ್ಲಿಷ್ ಮಾಧ್ಯಮದಲ್ಲಿಯೇ ಓದಿದ ವಿದ್ಯಾರ್ಥಿಗಳಿಗೆ ಹೋಲಿಸಿದರೆ ದೇಸಿ ಭಾಷಾ ಮಾಧ್ಯಮದಲ್ಲಿ ಓದಿದ ವಿದ್ಯಾರ್ಥಿಗಳು ತುಂಬಾ ತೊಂದರೆ ಅನುಭವಿಸಬೇಕಾಗುತ್ತದೆ.

# ಕನ್ನಡದಲ್ಲಿಯೇ ವಿಜ್ಞಾನ ವಿಷಯಗಳನ್ನು ಅಧ್ಯಯನ ಮಾಡುವುದಾದರೆ?

ಅದೊಂದು ಶನಿವಾರ. ಮಧ್ಯಾಹ್ನದ ವೇಳೆ. ಅಕ್ಟೋಬರ್ ತಿಂಗಳಾದರೂ ಕೂಡಾ ಬೆಂಗಳೂರಿನಲ್ಲಿ ಮಳೆ ಮತ್ತು ಚಳಿಯ ವಾತಾವರಣವಿತ್ತು. ಎಂಟು ಜನ ಶಿಕ್ಷಣತಜ್ಞರನ್ನೊಳಗೊಂಡ ಸಮಾನಾಸಕ್ತ ಗುಂಪೊಂದು ಪ್ರಖ್ಯಾತ ರಾಮನ್ ಸಂಶೋಧನಾ ಸಂಸ್ಥೆಯ (ರಾಮನ್ ರಿಸರ್ಚ್ ಇನ್ಸ್ಟಿಟ್ಯೂಟ್) ಆವರಣದಲ್ಲಿಯೇ ಇರುವ ಭಾರತೀಯ ವಿಜ್ಞಾನ ಅಕಾಡೆಮಿಯ (ಇಂಡಿಯನ್ ಅಕಾಡೆಮಿ ಆಫ್ ಸೈನ್ಸಸ್) ಸಭಾಂಗಣದಲ್ಲಿ ಸೇರಿತ್ತು. ಅವರಲ್ಲಿ ಬಹುತೇಕ ಜನರು ಬೆಂಗಳೂರು ಮತ್ತು ಸುತ್ತಮುತ್ತಲಿನ ವಿವಿಧ ಸಂಸ್ಥೆ ಹಾಗೂ ಖ್ಯಾತ ವಿಶ್ವವಿದ್ಯಾಲಯಗಳಲ್ಲಿ ಭೌತವಿಜ್ಞಾನದ ಪ್ರಾಧ್ಯಾಪಕರಾಗಿದ್ದರು. ಭೌತವಿಜ್ಞಾನಕ್ಕೆ ಸಂಬಂಧಿಸಿದ, ಮುಖ್ಯವಾಗಿ ಕಾಲೇಜು ಮಟ್ಟದ ಪಠ್ಯಪುಸ್ತಕಗಳಾದ ಬರ್ಕ್‌ಲೀ ಸರಣಿ ಪುಸ್ತಕಗಳನ್ನು ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಿಸುವ ಕಾರ್ಯಯೋಜನೆಯೊಂದನ್ನು ಹಮ್ಮಿಕೊಳ್ಳಲಾಗಿದೆ. ಸಹಭಾಗಿತ್ವದ ಆಧಾರದ ಮೇಲೆ ಕೈಗೊಳ್ಳಲಾದ ಈ ಯೋಜನೆಯಡಿ, ಐದು ಸಂಪುಟಗಳಲ್ಲಿ ಮೂರನ್ನು ಅನುವಾದಿಸುವ ಪ್ರಯತ್ನದಲ್ಲಿ ಅವರು ಕಳೆದ ಒಂದು ವರುಷದಿಂದಲೂ ಬಹಳ ಉತ್ಸಾಹದಿಂದ ತೊಡಗಿಕೊಂಡಿದ್ದರು.

ಬರ್ಕ್‌ಲೀ ಸರಣಿಯ ಪಠ್ಯಪುಸ್ತಕಗಳನ್ನು ಬರೆದಿದ್ದು 1960ರ ದಶಕದ ಮೊದಲ ಭಾಗದಲ್ಲಿ. ಪಶ್ಚಿಮದಲ್ಲಿ ಸಿದ್ಧವಾದ ಈ ಸರಣಿಗೆ ನ್ಯಾಷನಲ್ ಸೈನ್ಸ್

ಫೌಂಡೇಷನ್ ಅನುದಾನ ನೀಡಿತ್ತು. ಕೆಲವು ವರ್ಷಗಳ ಹಿಂದೆ ಮುಖ್ಯವಾಗಿ ಅಂದಿನ ಸೋವಿಯಟ್ ಒಕ್ಕೂಟವು ಜಗತ್ತಿನ ಮೊತ್ತಮೊದಲ ಕೃತಕ ಉಪಗ್ರಹ, ಸ್ಪುಟ್ನಿಕ್ ಅನ್ನು ಉಡಾವಣೆ ಮಾಡಿದ ಹಿನ್ನೆಲೆಯಲ್ಲಿ ವಿಜ್ಞಾನ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವ ಪ್ರಾಮಾಣಿಕ ಆಶಯ ಅಲ್ಲಿತ್ತು. ಮ್ಯಾಕ್‌ಗ್ರಾ ಹಿಲ್ ಪ್ರಕಾಶನ ಸಂಸ್ಥೆಯು ಪ್ರಕಟಿಸಿದ ಈ ಸರಣಿಯು ಐದು ಸಂಪುಟಗಳನ್ನು ಹೊಂದಿದೆ. ಯಂತ್ರವಿಜ್ಞಾನ (ಮೆಕ್ಯಾನಿಕ್ಸ್), ವಿದ್ಯುಚ್ಛಕ್ತಿ ವಿಜ್ಞಾನ (ಎಲೆಕ್ಟ್ರಿಸಿಟಿ) ಮತ್ತು ಕಾಂತೀಯತೆ (ಮ್ಯಾಗ್ನೆಟಿಸಮ್) ತರಂಗಗಳು, ಕ್ವಾಂಟಮ್ ಭೌತವಿಜ್ಞಾನ ಹಾಗೂ ಸಂಖ್ಯಾಶಾಸ್ತ್ರೀಯ ಭೌತವಿಜ್ಞಾನಗಳಂತಹ ಭೌತವಿಜ್ಞಾನದ ಮೂಲಭೂತ ಜ್ಞಾನಕ್ಷೇತ್ರಗಳನ್ನು ಒಳಗೊಂಡಿದೆ. ಭೌತವಿಜ್ಞಾನವನ್ನು ಪ್ರಧಾನ ವಿಷಯವಾಗಿ ಆಯ್ದುಕೊಳ್ಳುವ ಆನರ್ಸ್ ಮತ್ತು ಪದವಿ ತರಗತಿಯ ವಿದ್ಯಾರ್ಥಿಗಳಿಗೆ ಈ ಸರಣಿಯನ್ನು ಇಂದಿಗೂ ಬೋಧಿಸಲಾಗುತ್ತದೆ ಎಂದರೆ ಇದರ ಮಹತ್ವದ ಅರಿವಾಗುತ್ತದೆ.

ವಿಶಾಲ ದೃಷ್ಟಿಕೋನದಿಂದ ನೋಡುವುದಾದರೆ, ಕನ್ನಡ ಮತ್ತು ಇತರ ಭಾರತೀಯ ಭಾಷೆಗಳಲ್ಲಿ ಪದವಿ ಮತ್ತು ಸ್ನಾತಕೋತ್ತರ ಮಟ್ಟಗಳಲ್ಲಿ ಬಹುತೇಕ ಎಲ್ಲಾ ವಿಷಯಗಳಲ್ಲಿಯೂ ಒಳ್ಳೆಯ ಗುಣಮಟ್ಟದ ಪಠ್ಯಪುಸ್ತಕಗಳ ಲಭ್ಯತೆಗೆ ಸಂಬಂಧಿಸಿದಂತೆ ಅಗಾಧವಾದ ಅಂತರವಿದೆ. ಪದವಿಪೂರ್ವ ಅಥವಾ ಪದವಿ ಹಂತದ ತನಕವೂ ಕೂಡ ಹಿಂದಿ ಮತ್ತು ಕನ್ನಡದಂತಹ ದೇಸಿ ಭಾಷಾ ಮಾಧ್ಯಮದಲ್ಲಿ ಓದಿದ ವಿದ್ಯಾರ್ಥಿಗಳು ನಂತರ ಉನ್ನತ ಶಿಕ್ಷಣ ಮಟ್ಟದಲ್ಲಿ ಅಂದರೆ ಪದವಿ ಅಥವಾ ಸ್ನಾತಕೋತ್ತರ ತರಗತಿಗಳಲ್ಲಿ ಓದುವಾಗ ಅನಿವಾರ್ಯವಾಗಿ ಇಂಗ್ಲಿಷ್ ಮಾಧ್ಯಮವನ್ನೇ ಆರಿಸಿಕೊಳ್ಳಬೇಕಾಗುತ್ತದೆ. ಆರಂಭದಿಂದಲೂ ಇಂಗ್ಲಿಷ್ ಮಾಧ್ಯಮದಲ್ಲಿಯೇ ಓದಿದ ವಿದ್ಯಾರ್ಥಿಗಳಿಗೆ ಹೋಲಿಸಿದರೆ ಅವರು ತುಂಬಾ ತೊಂದರೆ ಅನುಭವಿಸಬೇಕಾಗುತ್ತದೆ. ಉಳಿದಿರುವ ಪರ್ಯಾಯ ಮಾರ್ಗವೆಂದರೆ, ತಮ್ಮದೇ ಭಾಷೆಯಲ್ಲಿನ ಕಳಪೆ ಗುಣಮಟ್ಟದ ಪುಸ್ತಕಗಳು ಅಥವಾ ಗೈಡ್‌ಗಳನ್ನು ಅವಲಂಬಿಸುವುದು. ಇದು ಇನ್ನಷ್ಟು ಹಾನಿಕಾರಕ.

ಆತಂಕ ಹುಟ್ಟಿಸುವ ಈ ಸನ್ನಿವೇಶಕ್ಕೆ ಸ್ಪಂದನೆಯ ರೂಪದಲ್ಲಿ ನಮ್ಮ ವಿಶ್ವವಿದ್ಯಾಲಯವು, ಶಿಕ್ಷಕರು ಮತ್ತು ವಿದ್ಯಾರ್ಥಿಗಳಿಬ್ಬರಿಗೂ ಅನುಕೂಲವಾಗುವ ರೀತಿಯಲ್ಲಿ ಹಿಂದಿ ಮತ್ತು ಕನ್ನಡದಲ್ಲಿ ಗುಣಮಟ್ಟದ ಸಂಪನ್ಮೂಲ ಸಾಮಗ್ರಿ ಲಭ್ಯವಾಗುವಂತೆ ದೊಡ್ಡ ಪ್ರಮಾಣದಲ್ಲಿ ಅನುವಾದ ಉಪಕ್ರಮವನ್ನು ಕೈಗೊಂಡಿದೆ. ಮುಂದಿನ ಕೆಲವು ವರ್ಷಗಳಲ್ಲಿ ವೃತ್ತಿನಿರತರೂ ಸೇರಿದಂತೆ ವಿದ್ಯಾರ್ಥಿಗಳಿಗೆ 'ಶಿಕ್ಷಣ' ವಿಷಯದಡಿ ಈ ಎರಡೂ ಮಾಧ್ಯಮಗಳಲ್ಲಿ ಅಗತ್ಯ ಕೋರ್ಸ್‌ಗಳನ್ನು ನೀಡುವ ಸಾಧ್ಯತೆಗಳತ್ತ ಗಮನಹರಿಸುತ್ತಿದೆ. ಈ ವಿಶಾಲ ಹಿನ್ನೆಲೆಯಲ್ಲಿ ಭೌತವಿಜ್ಞಾನ ಅನುವಾದ ತಂಡದ ಅನುಸಂಧಾನವು ಹೆಚ್ಚಿನ ಮಹತ್ವ ಪಡೆಯುತ್ತದೆ.

ಭೌತವಿಜ್ಞಾನ ತಂಡದ ಸಭೆಯು ಆರಂಭದಲ್ಲಿ ಈಗಾಗಲೇ ಆಗಿರುವ ಅನುವಾದ ಹಾಗೂ ಪರಿಶೀಲನೆಯ ಕಾರ್ಯಗಳನ್ನು ನಿಖರವಾಗಿ ಪುನರಾವಲೋಕನ ಮಾಡಿತು. ಮುಂದಿನ ಕೆಲವು ತಿಂಗಳುಗಳಲ್ಲಿ ಅನುವಾದಿತ ಆ ತಂಡವು ಅಧ್ಯಾಯಗಳ ಪರಿಶೀಲನೆಯನ್ನು ಕುರಿತು ತಾನು ಮಾಡಬೇಕಿರುವ ಕೆಲಸವನ್ನು ತೀವ್ರಗೊಳಿಸಲು ನಿರ್ಧರಿಸಿತು. ಅನುವಾದ ಪ್ರಕ್ರಿಯೆಗೆ ಸಂಬಂಧಿಸಿದಂತೆ ಅನುಸರಿಸಬೇಕಾದ ಸೂಕ್ಷ್ಮ ಸಂಗತಿಗಳನ್ನು ಕುರಿತಂತೆ ತಂಡವು ಸಹಮತಕ್ಕೆ ಬಂದಿತು. ಅನುವಾದಕರ ಸ್ವತಂತ್ರ ಅರ್ಥವಿವರಣೆಗಳನ್ನು ದೂರವಿಡಲು ಕೂಡ ತೀರ್ಮಾನಿಸಲಾಯಿತು. ತಂಡವು ಅನುವಾದಕ್ಕೆ ಸಂಬಂಧಿಸಿದಂತೆ ಕೆಲವು ಪ್ರಮುಖ ತತ್ತ್ವಗಳನ್ನು ಪ್ರಜಾತಾಂತ್ರಿಕ ರೀತಿಯಲ್ಲಿ ರೂಪಿಸಿದ್ದು ಅತ್ಯಂತ ಆಸಕ್ತಿದಾಯಕವಾಗಿತ್ತು.

ಮೂಡಿಬಂದಿರುವ ಅನುವಾದವು ಓದಿಸಿಕೊಂಡು ಹೋಗುತ್ತದೆಯೇ ಎಂಬುದನ್ನು ಪರಿಶೀಲಿಸಲು ಆದ್ಯತೆಯ ಮೇರೆಗೆ ವಿಜ್ಞಾನದ ಹಿನ್ನೆಲೆಯುಳ್ಳ ಮತ್ತೊಬ್ಬ ಭಾಷಾ ವಿದ್ವಾಂಸರನ್ನು ಹೆಚ್ಚುವರಿಯಾಗಿ ಸೇರಿಸಿಕೊಳ್ಳುವುದು ಹಾಗೂ ನಿರ್ದಿಷ್ಟ ವೈಜ್ಞಾನಿಕ ಪದಗಳನ್ನುಳ್ಳ ಪಾರಿಭಾಷಿಕ ಪದಕೋಶವೊಂದನ್ನು ಸಿದ್ಧಪಡಿಸುವುದು– ಇವು ತಂಡವು ಚರ್ಚಿಸಿದ ಇನ್ನಿತರ ಪ್ರಮುಖ ಸಂಗತಿಗಳು. ಪಂಜಾಬಿನ ಮೊಹಾಲಿಯಲ್ಲಿರುವ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್ ಎಜುಕೇಷನ್ ಅಂಡ್ ರಿಸರ್ಚ್ ಸಂಸ್ಥೆಗೆ ಸೇರಿದ ಇಂತಹುದೇ ತಂಡವು ಬರ್ಕ್‌ಲೀ ಸರಣಿಯ ಹಿಂದಿ ಅವತರಣಿಕೆಯನ್ನು ಸಿದ್ಧಪಡಿಸುತ್ತಿದೆ. ಅಲ್ಲಿನ ತಂಡದ ಸದಸ್ಯರ ಅನುಭವಗಳಿಂದ ಕಲಿಯುವ ಉದ್ದೇಶವನ್ನು ಬೆಂಗಳೂರಿನ ತಂಡವು ಹೊಂದಿತ್ತು. ಪ್ರಸ್ತುತ ಹಾಗೂ ಸಂಬಂಧಿತ ಟಿಪ್ಪಣಿಗಳನ್ನು ವಿನಿಮಯಿಸಿಕೊಳ್ಳಲು ತಂಡದ ಸದಸ್ಯರು ಉತ್ಸುಕರಾಗಿದ್ದರು.

ಭೌತವಿಜ್ಞಾನದಂತೆಯೇ, ಹಿಂದಿ ಭಾಷೆ ಮಾತನಾಡುವ ಎಲ್ಲ ರಾಜ್ಯಗಳಲ್ಲಿ ಮತ್ತು ಕರ್ನಾಟಕದಲ್ಲಿ ಜೀವವಿಜ್ಞಾನ, ಗಣಿತವಿಜ್ಞಾನ, ಮಾನವಿಕ, ಅರ್ಥಶಾಸ್ತ್ರ, ಇತಿಹಾಸ, ತತ್ತ್ವಶಾಸ್ತ್ರ, ಸಮಾಜವಿಜ್ಞಾನ, ಮನೋವಿಜ್ಞಾನ ಮುಂತಾದ ವಿಷಯಗಳನ್ನು ಅನುವಾದಿಸುವವರ ಹಲವಾರು ತಂಡಗಳನ್ನು ರಚಿಸಲಾಗಿದೆ. ಅನುವಾದಕರು, ಪರಿಶೀಲಕರು ಹಾಗೂ ಪುನರಾವಲೋಕನ ಮಾಡುವವರು ತಮ್ಮೊಡನೆ ನಿರ್ದಿಷ್ಟ ವಿಷಯಜ್ಞಾನ ಹಾಗೂ ಬೋಧನೆ ಅಥವಾ ಸಂಶೋಧನೆಯಲ್ಲಿನ ಸಮೃದ್ಧ ಅನುಭವಗಳನ್ನು ತರುತ್ತಾರೆ. ಅವರು ಇಂಗ್ಲಿಷ್ ಮತ್ತು ಹಿಂದಿ ಅಥವಾ ಇಂಗ್ಲಿಷ್ ಮತ್ತು ಕನ್ನಡ ಹೀಗೆ ಎರಡು ಭಾಷೆಗಳಲ್ಲಿ ಸಾಕಷ್ಟು ಸಾಮರ್ಥ್ಯವನ್ನು ಹೊಂದಿರಬೇಕಾದುದು ಅಗತ್ಯ. ಈ ಶೈಕ್ಷಣಿಕ ಮರುಸೃಷ್ಟಿಯ ಕಾರ್ಯದ ಭಾಗವಾಗಿರುವವರಲ್ಲಿ ಬಹುತೇಕ ಪ್ರತಿಯೊಬ್ಬರೂ ಸ್ವಇಚ್ಛೆಯಿಂದ ಸೇರಿದವರಾಗಿರುತ್ತಾರೆ. ಏಕೆಂದರೆ, ಅವರು ರಾಜ್ಯದ ದೂರ

ಪ್ರದೇಶದಲ್ಲಿರುವ ಅಗಾಧ ಸಂಖ್ಯೆಯ ಅವಕಾಶವಂಚಿತ ವಿದ್ಯಾರ್ಥಿಗಳಿಗೆ ಜ್ಞಾನವನ್ನು ಹರಡುವ ಮಹಾನ್ ಉದ್ದೇಶದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಆಸಕ್ತಿಯನ್ನು ಹೊಂದಿರುತ್ತಾರೆ. ಕರ್ನಾಟಕವೊಂದರಲ್ಲಿಯೇ ಸುಮಾರು ಇಪ್ಪತ್ತು ಚಿಕ್ಕ ಚಿಕ್ಕ ವಿಷಯ–ನಿರ್ದಿಷ್ಟ ಗುಂಪುಗಳಲ್ಲಿ ಕೆಲಸ ಮಾಡುತ್ತಿರುವ ನೂರಿಪ್ಪತ್ತಕ್ಕೂ ಹೆಚ್ಚು ಕನ್ನಡಿಗರಿದ್ದಾರೆ.

ಭೌತವಿಜ್ಞಾನದ ಗುಂಪಿನಂತಹ ವಿಷಯತಜ್ಞರ ಪ್ರಯತ್ನಗಳು, ಅವರು ಅಭಿವೃದ್ಧಿ ಪಡಿಸುವ ಸಾಮಗ್ರಿಯು ಉನ್ನತ ಶಿಕ್ಷಣ ಹಂತದಲ್ಲಿರುವ ಸಾವಿರಾರು ವಿದ್ಯಾರ್ಥಿಗಳಿಗೆ ಲಭ್ಯವಾದಾಗ ಮಾತ್ರ ಫಲಪ್ರದವಾಗುತ್ತವೆ. ಅದಿಲ್ಲದಿದ್ದಾಗ ಆ ವಿದ್ಯಾರ್ಥಿಗಳಿಗೆ ತಮ್ಮದೇ ಭಾಷೆಯಲ್ಲಿ ಒಳ್ಳೆಯ ಗುಣಮಟ್ಟದ ಕಲಿಕೆಯ ಸಾಮಗ್ರಿಯು ಸಿಗುವುದಿಲ್ಲ. ಕರ್ನಾಟಕವೊಂದರಲ್ಲೇ ನಾನೂರಕ್ಕೂ ಹೆಚ್ಚು ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು, ಮುನ್ನೂರು ಅನುದಾನಿತ ಕಾಲೇಜುಗಳು ಹಾಗೂ ಹಲವು ಅಂಗಸಂಸ್ಥೆಗಳ ಮೇಲುಸ್ತುವಾರಿ ಹೊಂದಿರುವ ಹದಿನೈದು ವಿಶ್ವವಿದ್ಯಾಲಯಗಳಿವೆ. ಅವು ಹಲವಾರು ಪದವಿ ಕಾರ್ಯಕ್ರಮಗಳನ್ನು ನೀಡುತ್ತವೆ. ಅನುದಾನರಹಿತ ಖಾಸಗಿ ಸಂಸ್ಥೆಗಳಲ್ಲಿ ಓದುತ್ತಿರುವ ಲಕ್ಷಾಂತರ ವಿದ್ಯಾರ್ಥಿಗಳ ಜೊತೆಗೆ, ಈ ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಓದುವ ವಿದ್ಯಾರ್ಥಿಗಳ ಸಂಖ್ಯೆಯೇ ಸುಮಾರು ಮೂರು ಲಕ್ಷ ಇದೆ. ಈ ವಿದ್ಯಾರ್ಥಿಗಳಿಗೆ ಅನುವಾದಿತ ಸಾಮಗ್ರಿಯು ಸುಲಭವಾಗಿ ದೊರಕುವಂತಾದಾಗ ಮಾತ್ರ, ಪ್ರಧಾನ ವಿಷಯಗಳನ್ನು ಆಳವಾಗಿ ಅರ್ಥಮಾಡಿಕೊಳ್ಳಲು ಏಕಕಾಲಕ್ಕೆ ಇಂಗ್ಲಿಷ್ ಪಠ್ಯಪುಸ್ತಕಗಳನ್ನು ಅಥವಾ ಅನುವಾದಿತ ಕನ್ನಡ ಆವೃತ್ತಿಗಳನ್ನು ಆಯ್ದುಕೊಳ್ಳುವ ಅವಕಾಶ ಅವರಿಗೆ ಇರುತ್ತದೆ.

ಹಲವಾರು ಪ್ರಸ್ತುತ ವಿಷಯಗಳಿಗೆ ಸಂಬಂಧಿಸಿದಂತೆ, ಕನ್ನಡದಲ್ಲಿ ಸಾಂದರ್ಭಿಕ ಶೈಕ್ಷಣಿಕ ಸಾಹಿತ್ಯವನ್ನು ಅಭಿವೃದ್ಧಿಪಡಿಸಬೇಕಾದ ಅಗತ್ಯವನ್ನು ಮೇಲಿನ ತರಹದ ಅನುವಾದ ಕಾರ್ಯವು ಭಾಗಶಃ ಈಡೇರಿಸುತ್ತದೆ. ಸರ್ಕಾರವು ಬರ್ಕ್‌ಲೀ ಸರಣಿಯಂತಹ ಪುಸ್ತಕಗಳ ಅನುವಾದಿತ ಅವತರಣಿಕೆಯನ್ನು ಪದವಿಪೂರ್ವ ಹಾಗೂ ಪದವಿ ಹಂತದ ಎಲ್ಲಾ ಕಾಲೇಜುಗಳ ಗ್ರಂಥಾಲಯಗಳಿಗೆ ಒದಗಿಸುವುದಾದರೆ ಅದು ನಿಜಕ್ಕೂ ಒಂದು ಅದ್ಭುತವಾದ ಆಲೋಚನೆ. ಇದರಿಂದ ಬೀದರ್ ಮತ್ತು ಚಾಮರಾಜನಗರದಂತಹ ದೂರದೂರದ ಜಿಲ್ಲೆಗಳ ವಿದ್ಯಾರ್ಥಿಗಳಿಗೆ ವಿಜ್ಞಾನ ಅಥವಾ ಮಾನವಿಕ ವಿಷಯಗಳೆರಡನ್ನೂ ಒಂದೇ ರೀತಿಯಲ್ಲಿ ಗಂಭೀರವಾಗಿ ತೆಗೆದುಕೊಳ್ಳಲು ಉತ್ತೇಜನ ದೊರಕಬಹುದು. ಆ ಮೂಲಕ ಶಿಕ್ಷಣವೂ ಸೇರಿದಂತೆ ವಿಭಿನ್ನ ಕ್ಷೇತ್ರಗಳಲ್ಲಿ ತಮ್ಮ ವೃತ್ತಿಯನ್ನು ರೂಪಿಸಿಕೊಳ್ಳುವುದು ಸಾಧ್ಯವಾಗಬಹುದು.

■ ಪ್ರ.ಫಸ್ಟ್, 08–11–2017

'ಉದ್ಯೋಗಕ್ಕಾಗಿಯೇ ಓದು' ಎಂಬುದರಷ್ಟೇ ಮುಖ್ಯವಾಗಿ 'ಜ್ಞಾನಕ್ಕಾಗಿ ಓದು' ಎಂದು ಹಾತೊರೆಯುವ ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಗೆ ಪೂರಕ ಸಂಪನ್ಮೂಲ ಸಾಮಗ್ರಿಗಳನ್ನು ತಯಾರಿಸಿ ಒದಗಿಸುವುದು ಜರೂರಾದುದು. ಕನ್ನಡದಲ್ಲಿ ವಿಷಯಾಧಾರಿತ ಪದಕೋಶವನ್ನು ಸಿದ್ಧಗೊಳಿಸುವುದರ ಜೊತೆಗೆ ಅನುವಾದಿತ ಸಾಮಗ್ರಿಯು ವಿದ್ಯಾರ್ಥಿಗಳ ತಿಳುವಳಿಕೆಗೆ ನಿಲುಕುವಂತೆ ಇರಬೇಕಾದುದು ಅಗತ್ಯವಾಗಿದೆ.

# ಹೀಗೊಂದು ವಿಶಿಷ್ಟ ಭಾಷಾಂತರ ಯೋಜನೆ

## ಹಿನ್ನೆಲೆ

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯವು ನಿರ್ದಿಷ್ಟ ಸಾಮಾಜಿಕ ಕಳಕಳಿಯನ್ನು ಹೊಂದಿದ್ದು ಶಿಕ್ಷಣದ ಮೂಲಕ ನ್ಯಾಯಯುತ, ಸಮಾನ, ಮಾನವೀಯ ಮತ್ತು ಸುಸ್ಥಿರ ಸಮಾಜದ ನಿರ್ಮಾಣದ ಉದ್ದೇಶದಿಂದ ಸ್ಥಾಪಿತವಾಗಿದೆ. ಈಗಾಗಲೇ ಶಿಕ್ಷಣ ಮತ್ತು ಅಭಿವೃದ್ಧಿ ಕ್ಷೇತ್ರಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಅಲ್ಲದೆ ಮಾನವಿಕ ಶಾಸ್ತ್ರ, ವಿಜ್ಞಾನ ಮತ್ತು ಸಮಾಜ ವಿಜ್ಞಾನ ವಿಷಯಗಳಲ್ಲಿ ಪದವಿ ಹಂತದ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಇದುವರೆಗಿನ ಅನುಭವಗಳ ಹಿನ್ನೆಲೆಯಲ್ಲಿ ವಿಶ್ವವಿದ್ಯಾಲಯವು ಕನ್ನಡ ಮಾಧ್ಯಮದಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿ ಕಾರ್ಯಕ್ರಮಗಳನ್ನು ಪ್ರಾರಂಭಿಸಿ ತನ್ನ ಕಾರ್ಯವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವ ಉದ್ದೇಶವನ್ನು ಹೊಂದಿದೆ. ವೈವಿಧ್ಯಮಯ ಸಾಮಾಜಿಕ ಹಿನ್ನೆಲೆಗಳನ್ನು ಹೊಂದಿರುವ ಕರ್ನಾಟಕದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸಿ ಅವರು ಗುಣಾತ್ಮಕ ಉನ್ನತ ಶಿಕ್ಷಣ ಪಡೆಯುವಂತೆ ಮಾಡುವುದು ವಿಶ್ವವಿದ್ಯಾಲಯದ ಆದ್ಯತೆಗಳಲ್ಲಿ ಒಂದು. ಈ ಉದ್ದೇಶದ ಮೊದಲ ಹೆಜ್ಜೆಯಾಗಿ, ಮುಂಬರುವ ವರ್ಷಗಳಲ್ಲಿ ಎರಡು ವರ್ಷಗಳ ಎಮ್‌ಎ (ಶಿಕ್ಷಣ) ಕಾರ್ಯಕ್ರಮ ಪ್ರಾರಂಭಿಸಲು ಉದ್ದೇಶಿಸಲಾಗಿದೆ. ಮುಂದೆ ಇತರ ಪದವಿ ಮತ್ತು ಸ್ನಾತಕೋತ್ತರ ಪದವಿ

ಕಾರ್ಯಕ್ರಮಗಳನ್ನೂ ಇತರ ಅಲ್ಪಾವಧಿ ಕೋರ್ಸ್‌ಗಳನ್ನೂ ಕನ್ನಡ ಮಾಧ್ಯಮದಲ್ಲಿ ನಡೆಸುವ ಆಲೋಚನೆಯಿದೆ.

## ಭಾಷಾಂತರ ಪ್ರಯತ್ನದ ಉದ್ದೇಶ

ಪ್ರಸ್ತುತ ಪದವಿ ಮತ್ತು ಸ್ನಾತಕೋತ್ತರ ಪದವಿ ಹಂತಗಳಲ್ಲಿ ಬೋಧಿಸುವ ಪ್ರಾಧ್ಯಾಪಕರಿಗೆ (ಅವರು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಕನ್ನಡದಲ್ಲೇ ಬೋಧಿಸುತ್ತಿದ್ದರೂ) ಕನ್ನಡದಲ್ಲಿ ಗುಣಮಟ್ಟದ ಪಠ್ಯ ಮತ್ತು ಆಕರ ಗ್ರಂಥಗಳ ಲಭ್ಯತೆಯ ಕೊರತೆಯಿದೆ. ಈ ವಾಸ್ತವವು ಕನ್ನಡವಲ್ಲದೆ ಭಾರತದ ಇತರ ದೇಶೀಯ ಭಾಷೆಗಳಿಗೂ ಅನ್ವಯವಾಗುತ್ತದೆ. ಹೀಗಾಗಿಯೇ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣದ ಹಂತದಲ್ಲಿ ಇಂಗ್ಲಿಷ್ ಮಾಧ್ಯಮವನ್ನೇ ಆಯ್ಕೆ ಮಾಡಿಕೊಳ್ಳಬೇಕಾದ ಅನಿವಾರ್ಯತೆಯಿದೆ. ಇಂತಹ ವಿದ್ಯಾರ್ಥಿಗಳು ಗೈಡ್‌ಗಳನ್ನೋ ಅಥವಾ ಗುಣಾತ್ಮಕವಲ್ಲದ ಭಾಷಾಂತರ ಸಂಪನ್ಮೂಲಗಳನ್ನೋ ಬಳಸಿ ಪರೀಕ್ಷೆಗೆ ಸಿದ್ಧರಾಗಬೇಕಾದ ಪರಿಸ್ಥಿತಿಯಿದೆ. ಈ ಶೈಕ್ಷಣಿಕ ಕೊರತೆಯನ್ನು ನೀಗಿಸುವುದು ಪ್ರಸ್ತುತ ಭಾಷಾಂತರ ಕೆಲಸದ ಹಿಂದಿನ ಮುಖ್ಯ ಉದ್ದೇಶ.

ಇದು ಎಲ್ಲ ವಿಶ್ವವಿದ್ಯಾಲಯಗಳ ಬೋಧಕ ವರ್ಗ ಮತ್ತು ಆಸಕ್ತ ವಿದ್ಯಾರ್ಥಿಗಳಿಗೂ ಸಿಗಬೇಕೆಂಬುದು ಇನ್ನೊಂದು ಉದ್ದೇಶ.

ಮುಂಬರುವ ಕನ್ನಡ ಮಾಧ್ಯಮ ವಿದ್ಯಾರ್ಥಿಗಳ ಗುಂಪಿನಲ್ಲಿ ಪ್ರಸ್ತುತ ವೃತ್ತಿನಿರತರಾಗಿರುವ ಅನುಭವಿ ಶಿಕ್ಷಕರು, ಶಿಕ್ಷಣ ಕ್ಷೇತ್ರದಲ್ಲಿ ವಿವಿಧ ಹುದ್ದೆಗಳಲ್ಲಿರುವ ಅಧಿಕಾರಿಗಳು, ಸ್ವಯಂಸೇವಾ ಸಂಸ್ಥೆಗಳ ಕಾರ್ಯಕರ್ತರು ಉನ್ನತ ಮಟ್ಟದ ವ್ಯಾಸಂಗಕ್ಕಾಗಿ ಆಸಕ್ತಿ ತೋರಿದಲ್ಲಿ ಅವರಿಗೆ ಅನುಕೂಲವಾಗುವಂತೆ ಸ್ನಾತಕೋತ್ತರ ಪದವಿ ಕೋರ್ಸ್‌ನ್ನು ಪುನರ್‌ರೂಪಿಸುವ ಆಲೋಚನೆಯಿದೆ. ಈ ಅನುಭವಿ ಗುಂಪು, ತಮ್ಮ ಜ್ಞಾನದ ಹರಹನ್ನೂ, ದೃಷ್ಟಿಕೋನವನ್ನೂ ವಿಸ್ತೃತಗೊಳಿಸಿಕೊಳ್ಳುವ ಮೂಲಕ ತಮ್ಮ ವೃತ್ತಿ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವುದಲ್ಲದೆ ತಮ್ಮ ತರಗತಿಗಳಲ್ಲಿ ಇನ್ನೂ ಹೆಚ್ಚಿನ ಆಳವಾದ ಜ್ಞಾನವನ್ನು, ಮಾರ್ಗದರ್ಶನವನ್ನು ವಿದ್ಯಾರ್ಥಿಗಳಿಗೆ ನೀಡುವ ಆತ್ಮವಿಶ್ವಾಸವನ್ನು ಗಳಿಸಿಕೊಂಡು, ಎಲ್ಲ ಸ್ತರದ ವಿದ್ಯಾರ್ಥಿಗಳಿಗೆ ನ್ಯಾಯ ಒದಗಿಸುವ ಸಾಧ್ಯತೆ ಹೆಚ್ಚುತ್ತದೆ.

## ಭಾಷಾಂತರದ ವಿಶಿಷ್ಟತೆ

ಈ ಶೈಕ್ಷಣಿಕ ಭಾಷಾಂತರ ಕಾರ್ಯವು ಒಂದು ಬಗೆಯಲ್ಲಿ ವಿಶಿಷ್ಟವಾಗಿದೆ. ಈ ಸಂವಾದವನ್ನು ಗಮನಿಸೋಣ:

"ಪಿಯಾಜೆರವರ – *sensory motor stage, pre-operational stage, concrete operational stage* – ಇವುಗಳಿಗೆ ಕನ್ನಡದಲ್ಲಿ ಯಾವ ಸಮಾನಾಂತರ ಪದಗಳನ್ನು

ಬಳಸಬಹುದು?" "ನಿಮ್ಹಾನ್ಸ್ ನ ಡಾ. ಉಮಾ ಬರೆದಿರುವ ಪುಸ್ತಕದಲ್ಲಿ *sensory motor stage* ಗೆ ಇಂದ್ರಿಯ ಆಂಗಿಕ ಹಂತವೆಂದು ಬಳಸಲಾಗಿದೆ".

"ಸಾಮಾಜಿಕ ಸಾಂಸ್ಕೃತಿಕ ಕಲಿಕೆಗೆ ಬೇಕಾದ ಪ್ರಮುಖ ಸಂಜ್ಞಾನ ಸಾಮರ್ಥ್ಯ ಎಂದರೆ ವ್ಯಕ್ತಿಗಳ ನಡುವಿನ ಅಂತರ್-ವೈಯಕ್ತಿಕತೆ ಇದು *the most basic cognitive ability needed for socio-cultural learning is inter-subjectivity*ಗೆ ನಾನು ಮಾಡಿರುವ ಭಾಷಾಂತರ. ಬೇರೆ ಪರ್ಯಾಯವಿದ್ದರೆ ತಿಳಿಸಿ."

"ಈ ಇಂಗ್ಲಿಷ್ ವಾಕ್ಯ ಅಥವಾ ನುಡಿಗಟ್ಟುಗಳಿಗೆ, *`To construct jigsaw puzzle of a Totem pole', 'therapeutic consultation', 'zone of proximal development' 'guided participation'* ಹತ್ತಿರದ ಸೂಕ್ತ ಕನ್ನಡದ ವಾಕ್ಯ ಅಥವಾ ನುಡಿಗಟ್ಟುಗಳಾವುವು?".

ಈ ಮೇಲಿನ ಸಂವಾದವು ಕಾಲೇಜಿನ ತರಗತಿಕೋಣೆಯಲ್ಲಿ ನಡೆದದ್ದಲ್ಲ. ಬದಲಾಗಿ ಈ ಭಾಷಾಂತರ ಕಾರ್ಯದ ಅಂಗವಾಗಿ ಶೈಕ್ಷಣಿಕ ಮನಃಶಾಸ್ತ್ರದ ಆಯ್ದ ಲೇಖನಗಳನ್ನು ಭಾಷಾಂತರಿಸಲು ಹೊರಟಿರುವ ಬೆಂಗಳೂರು ವಿಶ್ವವಿದ್ಯಾಲಯದ ಮನಃಶಾಸ್ತ್ರ ವಿಭಾಗದ ಅನುಭವಿ ಪ್ರಾಧ್ಯಾಪಕರು, ಮುಖ್ಯಸ್ಥರು, ಮನೋವೈಜ್ಞಾನಿಕ ವೃತ್ತಿಪರರು ಸಂಶೋಧನಾ ವಿದ್ಯಾರ್ಥಿಗಳ ನಡುವೆ ಅವರೇ ರಚಿಸಿಕೊಂಡಿರುವ ವಾಟ್ಸ್ಆ್ಯಪ್ ಗುಂಪಿನಲ್ಲಿ ನಡೆದಿರುವ ಆಸಕ್ತಿದಾಯಕ ಚರ್ಚೆ. ಈ ಗುಂಪು ಅನೇಕ ಪರಸ್ಪರ ನೇರ ಕಾರ್ಯಾಗಾರಗಳಲ್ಲೂ ಭಾಗವಹಿಸಿದೆ. ಈ ಪ್ರಕ್ರಿಯೆಯಲ್ಲಿ, ಎಂಟು ಜನರ ಈ ತಂಡವು ಕಳೆದ ಎರಡು ವರ್ಷಗಳ ಅವಧಿಯಲ್ಲಿ ಅದಾಗಲೇ ಇಪ್ಪತ್ತು ಲೇಖನಗಳನ್ನು ಭಾಷಾಂತರಗೊಳಿಸಿದೆ.

ಈ ತಂಡದ ಅದಮ್ಯ ಉತ್ಸಾಹದ ಹಿಂದೆ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಆದಷ್ಟೂ ಸುಲಭವಾದ, ಗುಣಮಟ್ಟದ ಸಂಪನ್ಮೂಲವನ್ನು ಒದಗಿಸುವ ಹಂಬಲವಿದೆ. ಸಾಧ್ಯವಿದ್ದಲ್ಲಿ ತಮ್ಮ ತರಗತಿಗಳಲ್ಲೂ ಈ ಲೇಖನಗಳನ್ನು ಬಳಸಿಕೊಳ್ಳುವ ಆಸಕ್ತಿ ಅವರಿಗಿದೆ. ಈ ಪ್ರಕ್ರಿಯೆಯ ಮೂಲಕ ಕನ್ನಡದಲ್ಲಿ ಹೊಸ ಪದಕೋಶವೇ ಸಿದ್ಧಗೊಳ್ಳುತ್ತಿದೆ. ಇವೆಲ್ಲವೂ ಪ್ರಜಾಪ್ರಭುತ್ವದ ತತ್ವವನ್ನು ಅಳವಡಿಸಿಕೊಂಡು ಸಮಾಲೋಚನಾ ವಿಧಾನದಲ್ಲಿಯೇ ನಡೆದಿರುವುದು ಮತ್ತು ಈ ಕೆಲಸದಲ್ಲಿ ತೊಡಗಿರುವವರು ಎಷ್ಟೇ ತಜ್ಞರಾಗಿದ್ದರೂ ತಾವು ಮಾಡುವ ಕೆಲಸವು ವಿದ್ಯಾರ್ಥಿಗಳ ತಿಳುವಳಿಕೆಗೆ ನಿಲುಕುವಂತಿರಬೇಕು ಎಂಬ ಮೂಲ ಆಶಯಕ್ಕೆ ಬದ್ಧರಾಗಿದ್ದುಕೊಂಡು ಮುನ್ನಡೆದಿರುವುದು ಗಮನಾರ್ಹ. ಕನಿಷ್ಠವೆಂದರೂ ಮೂರು ಹಂತಗಳ ಪರಿಶೀಲನೆಗೆ ಒಳಪಟ್ಟು ನಂತರ ಸ್ನಾತಕೋತ್ತರ ಪದವಿ ಓದುತ್ತಿರುವ ವಿದ್ಯಾರ್ಥಿಗಳಿಗೆ ಅಧ್ಯಯನ-ಚರ್ಚೆಗೆ ಬಳಸಲು ಕೊಡಲಾಗುತ್ತದೆ. ಅವರಿಗೆ ಸುಲಭವಾಗಿ ಅರ್ಥವಾದರೆ ಮಾತ್ರ ಈ ಭಾಷಾಂತರ ಕ್ರಿಯೆಯ ಒಂದು

ಆವರ್ತವು ಪೂರ್ಣಗೊಂಡಂತಾಗುತ್ತದೆ. ಮೇಲಿನ ಲೇಖನಗಳಲ್ಲಿ ಬಳಸಿರುವ ಅನೇಕ ಉದಾಹರಣೆಗಳು ಪಾಶ್ಚಿಮಾತ್ಯ ದೇಶಗಳ ಹಿನ್ನೆಲೆಯದ್ದಾಗಿವೆ. ಎಲ್ಲೆಲ್ಲಿ ಅವಶ್ಯಕವೋ ಅಲ್ಲಲ್ಲಿ ಮೂಲ ಪರಿಕಲ್ಪನೆಗಳಿಗೆ ಧಕ್ಕೆಯಾಗದಂತೆ ಈ ನೆಲದ ವಾಸ್ತವಕ್ಕೆ ಸೂಕ್ತವಾಗುವ ಸನ್ನಿವೇಶಗಳನ್ನು ಬಳಸುವ ಸ್ವಾತಂತ್ರ್ಯವು ಈ ತಂಡಕ್ಕಿದೆ. ಮೂಲ ಲೇಖನದ ಇಡೀ ಸಾರವನ್ನು ಅರ್ಥೈಸಿಕೊಂಡು ಅದಕ್ಕೆ ಹತ್ತಿರವಾದ ಭಾವವನ್ನು ಸರಳ ಮಾತಿನಲ್ಲಿ ಹಿಡಿದಿಡಬೇಕಾಗುತ್ತದೆ. ಹೀಗಾಗಿ ಇದೊಂದು 'ಪುನರ್ನಿರ್ಮಾಣ'ದ ಕಾರ್ಯವೇ ಆಗಿದ್ದು ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ್ದಾಗಿದೆ.

## ವಿಸ್ತೃತ ಸಹಯೋಗದ ಯೋಜನೆ

ಶೈಕ್ಷಣಿಕ ಮನಃಶಾಸ್ತ್ರದ ಗುಂಪಿನಂತೆಯೇ ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳಲ್ಲಿನ ವಿಷಯ ತಜ್ಞರನ್ನೊಳಗೊಂಡ ಇಪ್ಪತ್ತಕ್ಕೂ ಹೆಚ್ಚಿನ ಗುಂಪುಗಳು ಈ ಭಾಷಾಂತರ ಕ್ರಿಯೆಯಲ್ಲಿ ತೊಡಗಿಸಿಕೊಂಡಿವೆ. ತಮ್ಮ ವಿಷಯಗಳಲ್ಲಿ ಇವರೆಲ್ಲರೂ ಉನ್ನತ ಮಟ್ಟದ ಪರಿಣಿತಿ ಹೊಂದಿರುವುದರ ಜೊತೆಗೆ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಸಾಕಷ್ಟು ಹಿಡಿತ ಹೊಂದಿದವರಾಗಿದ್ದಾರೆ. ಆಸಕ್ತಿದಾಯಕ ವಿಷಯವೆಂದರೆ ಇವರಾರೂ ಸಾಂಪ್ರದಾಯಿಕ ಅರ್ಥದಲ್ಲಿ ಭಾಷಾಂತರಕಾರರಲ್ಲ. ಆದರೂ ಪುನರ್‌ಸೃಷ್ಟಿ ಕ್ರಿಯೆಯಲ್ಲಿ ಸ್ವಇಚ್ಛೆಯಿಂದ ಭಾಗವಹಿಸುತ್ತಿರುವುದು ಭವಿಷ್ಯದಲ್ಲಿ ವಿದ್ಯಾರ್ಥಿಗಳ ಹೆಚ್ಚಿನ ಓದಿಗೆ ಬುನಾದಿಯಾಗಲಿದೆ. ಯಾವೊಂದು ವಿಶ್ವವಿದ್ಯಾಲಯವೂ ತನ್ನಷ್ಟಕ್ಕೇ ಇಂಥ ಬೃಹತ್ ಕಾರ್ಯವನ್ನು ಕೈಗೆತ್ತಿಕೊಂಡು ಸಾಧಿಸಲಾಗದು. ಇತರ ಶೈಕ್ಷಣಿಕ ತಜ್ಞರ ಸಹಯೋಗದಿಂದಲೇ ಇದನ್ನು ಸಾಧ್ಯವಾಗಿಸಬೇಕಾಗುತ್ತದೆ.

## ವಾಸ್ತವ ನೆಲೆಯ ಪ್ರಶ್ನೆಗಳು

ಇಡೀ ಉನ್ನತ ಶಿಕ್ಷಣವು ಇಂಗ್ಲಿಷ್ ಮಾಧ್ಯಮದಲ್ಲಿ ನಡೆದಿರುವಾಗ ಎಷ್ಟು ವಿದ್ಯಾರ್ಥಿಗಳು, ಸೇವಾನಿರತ ಶಿಕ್ಷಕರು, ಶಿಕ್ಷಣಾಸಕ್ತರು ಈ ಕೋರ್ಸ್‌ಗೆ ನೊಂದಾಯಿಸಿಕೊಂಡಾರು? ಕೋರ್ಸ್ ಮುಗಿಸಿದವರಿಗೆ ಇದರಿಂದ ಭವಿಷ್ಯದಲ್ಲಿ ಏನು ಲಾಭ? ಇನ್ನೂ ಹೆಚ್ಚಿನ ಅಧ್ಯಯನವನ್ನು ಮತ್ತು ಸಂಶೋಧನೆಯನ್ನು ಕನ್ನಡದಲ್ಲಿಯೇ ಮುಂದುವರೆಸಬಲ್ಲರೆ? ಮುಂತಾದ ಪ್ರಶ್ನೆಗಳು ಸ್ವಾಭಾವಿಕವಾಗಿ ಎದುರಾಗುತ್ತವೆ ಮತ್ತು ಜಿಜ್ಞಾಸೆಗೆ ಹಚ್ಚುತ್ತವೆ.

ಒಂದಂತೂ ಸತ್ಯ. ಕನ್ನಡ ಅಥವಾ ಇತರ ದೇಶೀಯ ಭಾಷೆಗಳ ಮಾಧ್ಯಮದಲ್ಲಿಯೇ ಪದವಿ ಅಥವಾ ಪಿಯುಸಿ ಹಂತವನ್ನು ಮುಗಿಸಿದವರಿಗೆ, ಅದರಲ್ಲೂ ಗ್ರಾಮೀಣ ಭಾಗಗಳ ವಿದ್ಯಾರ್ಥಿಗಳಿಗೆ ಉನ್ನತ ತರಗತಿಗಳಲ್ಲಿ ಇಂಗ್ಲಿಷಿನ ಕಠಿಣ ಗ್ರಂಥಗಳನ್ನು, ಸಂಪನ್ಮೂಲಗಳನ್ನು ಬಳಸಲಾಗುವುದಿಲ್ಲ. ಆ

ಮಟ್ಟಿಗೆ ಈ ಪ್ರಯತ್ನದ ಮೂಲಕ ಹೊರಬರುವ ಭಾಷಾಂತರಗೊಂಡ ಪುಸ್ತಕಗಳು, ಲೇಖನಗಳು ಅವರಿಗೆ ನೆರವಾಗಬಲ್ಲವು. ಮೇಲಾಗಿ 'ಉದ್ಯೋಗಕ್ಕಾಗಿಯೇ ಓದು' ಎಂಬುದರಷ್ಟೇ ಮುಖ್ಯವಾಗಿ 'ಜ್ಞಾನಕ್ಕಾಗಿ ಓದು' ಎಂದು ಹಾತೊರೆಯುವ ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಅನುಕೂಲಕರವಾದ ಪೂರಕ ಸಂಪನ್ಮೂಲ ಸಾಮಗ್ರಿಗಳನ್ನು ತಯಾರಿಸಿ ಒದಗಿಸುವುದು ಜರೂರಾದುದು.

ಇದರೊಂದಿಗೆ, ಉನ್ನತ ಮಟ್ಟದ ಜ್ಞಾನ ಸಂಪಾದನೆಗಾಗಿ ಇಂಗ್ಲಿಷಿನ ಹಿಡಿತ ಬೇಕೇಬೇಕಾಗುತ್ತದೆ. ಶ್ರೇಷ್ಠ ಮಟ್ಟದ ಇಂಗ್ಲಿಷ್ ಪುಸ್ತಕಗಳು, ಲೇಖನಗಳು, ಪ್ರಕಟಣೆಗಳನ್ನು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ದೊರಕಿಸಿಕೊಡುವುದು ಅಗತ್ಯ. ಜೊತೆಗೆ, ಅವನ್ನು ಓದಿ, ಅರ್ಥೈಸಿಕೊಂಡು ತಮ್ಮ ಗ್ರಹಿಕೆಯನ್ನು ಬರಹ ರೂಪದಲ್ಲಿ ವ್ಯಕ್ತಪಡಿಸುವ ಶಿಸ್ತುಬದ್ಧ ಅಭ್ಯಾಸವನ್ನು, ಶೈಕ್ಷಣಿಕ ವಾತಾವರಣದಲ್ಲಿ ಸಂಕೋಚವಿಲ್ಲದೆ ಇಂಗ್ಲಿಷಿನಲ್ಲಿ ಸಂವಹಿಸುವ ಮುಕ್ತ ಅವಕಾಶಗಳನ್ನು ಇಂತಹ ವಿದ್ಯಾರ್ಥಿಗಳಿಗೆ ಹೆಚ್ಚುಹೆಚ್ಚಾಗಿ ಒದಗಿಸಬೇಕಾಗುತ್ತದೆ. ನಿರಂತರ ಅಭ್ಯಾಸದಿಂದ ಹೆಚ್ಚಿನ ಅವಕಾಶಗಳನ್ನು ಪಡೆದ ಇತರ ವಿದ್ಯಾರ್ಥಿಗಳಂತೆ ಅವರೂ ಸಹ ಆತ್ಮವಿಶ್ವಾಸವನ್ನು ಗಳಿಸಿ, ತಮ್ಮ ವೃತ್ತಿ ಬದುಕಿನಲ್ಲಿ ಬೆಳವಣಿಗೆಯ ಹಾದಿಯನ್ನು ರೂಪಿಸಿಕೊಳ್ಳಲು ಇದರಿಂದ ಸಾಧ್ಯವಾಗುತ್ತದೆ.

ಏನೇ ಸವಾಲುಗಳಿದ್ದರೂ ಅವುಗಳನ್ನು ಮೀರಿ, ಈ ರೀತಿಯ ಶೈಕ್ಷಣಿಕ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕಾದ ಅನಿವಾರ್ಯತೆ ಮತ್ತು ಅವಕಾಶಗಳು ಒಟ್ಟಿಗೇ ಒದಗಿ ಬರುವುದು ಒಮ್ಮೊಮ್ಮೆ ಮಾತ್ರ. ಇದು ಶಿಕ್ಷಣ ರಂಗಕ್ಕೆ, ಸಮಾಜಕ್ಕೆ ತನ್ನ ಕಾಲದ ಸೀಮಿತ ಪರಿಧಿಯನ್ನು ಮೀರಿ ನಿಲ್ಲುವ, ಹೊಸ ಮಾರ್ಗದಲ್ಲಿ ನಡೆಯುವ ಸವಾಲನ್ನು ಒಡ್ಡುತ್ತದೆ. ಈ ಹಿನ್ನೆಲೆಯಲ್ಲಿ, ದೇಶೀಯ ಭಾಷೆಗಳಲ್ಲಿ ಉನ್ನತ ಮಟ್ಟದ ಮೂಲ ಕೃತಿಗಳನ್ನು, ಬರಹಗಳನ್ನು ಎಲ್ಲ ಶೈಕ್ಷಣಿಕ ವಿಷಯಗಳಲ್ಲಿ ರಚಿಸುವ ಕೆಲಸವನ್ನು ವಿಶ್ವವಿದ್ಯಾಲಯಗಳು ಕೈಗೆತ್ತಿಕೊಳ್ಳಬೇಕಾದುದು ಅತ್ಯಗತ್ಯ ಎಂದು ತೋರುತ್ತದೆ. ಮೂಲ ಚಿಂತನೆಗಳನ್ನೊಳಗೊಂಡ ಪ್ರಕಟಣೆಗಳನ್ನು ಕನ್ನಡದಲ್ಲಿ ಹೊರತರುವ, ಶೈಕ್ಷಣಿಕ ವಿಚಾರಗೋಷ್ಠಿಗಳನ್ನು ಆಯೋಜಿಸಿ, ಅಲ್ಲಿ ನಡೆಯುವ ಚರ್ಚೆಗಳನ್ನು ಪ್ರಕಟಿಸುವ ಜವಾಬ್ದಾರಿಯನ್ನು ವಿಶ್ವವಿದ್ಯಾಲಯಗಳು ತೆಗೆದುಕೊಳ್ಳಬೇಕಾಗುತ್ತದೆ. ಈ ಹೊಸ ಸ್ನಾತಕೋತ್ತರ ಪದವಿ ಕಾರ್ಯಕ್ರಮದ ಭಾಗವಾಗುವ ವಿದ್ಯಾರ್ಥಿಗಳಲ್ಲಿ ಸ್ವಂತ ವಿವೇಚನಾ ಶಕ್ತಿಯೊಂದಿಗೆ ಶಿಕ್ಷಣದ ಬಗ್ಗೆ ಆಳವಾದ ತಿಳುವಳಿಕೆ, ಸಾಮಾಜಿಕಬದ್ಧತೆ ಮತ್ತು ಕ್ರಿಯಾಶೀಲ ಸಾಮರ್ಥ್ಯವನ್ನು ಬೆಳೆಸುವ ಉದ್ದೇಶವಿರುವುದರಿಂದ ಇವೆಲ್ಲವನ್ನೂ ಕನ್ನಡದಲ್ಲೇ ನಡೆಸುವುದು ಇನ್ನೂ ಆಪ್ಯಾಯಮಾನವಾಗುತ್ತದೆ.



ವಿಜಯವಾಣಿ, 01–07–2017

# ಪರಾಮರ್ಶನ ಕೃತಿ/ಆಕರಗಳು

1. ಡಿ. ಆರ್. ವೆಂಕಟರಮಣನ್, ಕಗ್ಗಕ್ಕೊಂದು ಕೈಪಿಡಿ, ಮೂರನೆಯ ಮುದ್ರಣ, ಶ್ರೀ ನಿತ್ಯಾನಂದ ಪ್ರಿಂಟರ್ಸ್, ಬೆಂಗಳೂರು, 2001

2. ಎಂ.ಆರ್. ಶ್ರೀನಿವಾಸಮೂರ್ತಿ, 'ರಂಗಣ್ಣನ ಕನಸಿನ ದಿನಗಳು' ಪುಸ್ತಕದ ಮೊದಲ ಮುದ್ರಣಕ್ಕೆ 1949ರಲ್ಲಿ ಬರೆದ ಮುನ್ನುಡಿಯ ಭಾಗ, ಅಂಕಿತ ಪುಸ್ತಕ, ಆರನೆಯ ಮುದ್ರಣ, 2009

3. ಕೆ.ಪಿ.ಪೂರ್ಣಚಂದ್ರ ತೇಜಸ್ವಿ, 'ಹೊಸ ವಿಚಾರಗಳು', ಪುಸ್ತಕ ಪ್ರಕಾಶನ, ಮೈಸೂರು, 2012

4. ಡಾ.ಕೆ.ಶಿವರಾಮ ಕಾರಂತ, 'ಆದರ್ಶ ಶಿಕ್ಷಕ ಮತ್ತು ಶಿಕ್ಷಕನ ಆದರ್ಶ – ಚಿಣ್ಣರ ಲೋಕದಲ್ಲಿ ಕಾರಂತರು', ಎಸ್.ಜಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ನಾಲ್ಕನೇ ಮುದ್ರಣ, ಜನವರಿ 2013

5. Phooley, Joteerao Govindrao, "A Statement for the Information of the Education Commission" in G.P.Deshpande (ed.) Selected Writings of Jotirao Phule (New Delhi: Leftword, 2002): 102-112

6. J P Naik, 'Equality, Quality and Quantity: An Elusive Triangle in Indian Education', International Review of Education, Vol 25., 1979, pp .167-185

7. Basu, Aparna, "The Origins and Operations of the Indian Education System, 1757-1947", in Essays in the History of Indian Education, New Delhi, Concept Publishing Company, 1982

8. Kamala V Mukunda, 'What did you ask at school today?' Harper Collins, 2009

9. 'Corporal Punishment: Everyday Reality of India's Children', a study by National Commission for Protection of Child Rights, 2009-10

10. Guidelines for Eliminating Corporal Punishment in Schools: NCPCR, 2009-10

11. Krishnakumar, "Banning is just the beginning. Corporal Punishment in Schools will prove Tenacious"

12. Nayantara, S. Ramaswamy, S. Kumar, N.S.S 'Study of Effectiveness of BRCs and CRCs in providing academic support to Elementary Schools', EDCIL, 2010

13. 'What makes a School Successful? Issues in Elementary Education - Findings from the Learning Guarentee Program', Vol X, Issue II, Azim Premji Foundation, October 2010

14. Draft Report for Discussion, Submitted by the Committee to Suggest Indicative Operational Guidelines for Strengthening and

Revitalization of Block Resource Centers and Cluster Resource Centers, to the Department of School Education and Literacy, Ministry of HRD, New Delhi. 2011

15. Jean Dreze and Amartya Sen, 'An Uncertain Glory - India and its Contradictions', Penguin Books, 2014
16. D.D.Karopady, Does school choice help rural children from disadvantaged sections improve their learning outcomes? - Evidence from a longitudinal research in Andhra Pradesh, a brief paper, Azim Premji University, October 2014
17. Andre Beteille, "The School as an Institution", in 'School, Society and Nation', Kumar Rajni, et al (ed.), Orient Longman P. Ltd., Hyderabad, 2015
18. Harsh Mander, 'Looking Away', Speaking Tiger, 2015
19. Centre of Equity Studies' 'India Exclusion Report' Yoda Press, New Delhi, 2016
20. V Santhakumar, Namita Gupta and Ramamurthy Sripada, 'Schooling for All - Can we Neglect the Demand?', Oxford University Press, 2016
21. Teacher Absenteeism Study, Field Studies in Education, Research Group, Azim Premji Foundation, March 2017
22. Basic National Education: Report of the Zakir Hussain Committee. Wardha: Hindustani Nai Talimi Sangh, 1938
23. Report of the Education Commission 1964-66, Education and National Development, Ministry of Education, Government of India
24. National Curriculum Framework, National Council of Educational Research and Training, New Delhi, 2005
25. National Curriculum Framework for Teacher Education, Towards Preparing Professional and Humane Teacher, National Council for Teacher Education, New Delhi, 2009
26. Vision of Teacher Education in India - Quality and Regulatory Perspective: Report of the High Powered Commission on Teacher Education constituted by the Hon'ble Supreme Court of India Vol 1, August 2012, Govt. of India, Ministry of HRD, Department of School Education and Literacy
27. National Education Policy - 2020, Ministry of Education, Govt. of India.

# Abbreviations
## ಸಂಕ್ಷಿಪ್ತಾಕ್ಷರ ಪದಸೂಚಿ

AEO : Assistant Educational Officer - ಸಹಾಯಕ ಶಿಕ್ಷಣಾಧಿಕಾರಿ

B. Ed : Bachelors in Education - ಶಿಕ್ಷಣ ಕುರಿತ ಪದವಿ

BBMP : Bruhat Bengaluru Mahanagara Palike
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

BEO : Block Education Officer – ಬ್ಲಾಕ್ ಶಿಕ್ಷಣಾಧಿಕಾರಿ

BRCs : Block Resource Centres – ಬ್ಲಾಕ್ ಸಂಪನ್ಮೂಲ ಕೇಂದ್ರಗಳು

BRCC : Block Resource Centre Coordinators
- ಬ್ಲಾಕ್ ಸಂಪನ್ಮೂಲ ಕೇಂದ್ರ ಸಂಯೋಜಕರು

BRP : Block Resource Person – ಬ್ಲಾಕ್ ಸಂಪನ್ಮೂಲ ವ್ಯಕ್ತಿ

CCC : Common Core Curriculum – ಸಮಾನ ಮೂಲ ಪಠ್ಯಕ್ರಮ

CBSE : Central Board of Secondary Education
– ಕೇಂದ್ರ ಪ್ರೌಢ ಶಿಕ್ಷಣ ಮಂಡಳಿ

CCE : Continuous and Comprehensive Evaluation
ನಿರಂತರ ಹಾಗೂ ಸಮಗ್ರ ಮೌಲ್ಯಮಾಪನ

CET : Common Entrance Test – ಸಾಮಾನ್ಯ ಪ್ರವೇಶ ಪರೀಕ್ಷೆ

CRCs : Cluster Resource Centers – ಸಮೂಹ ಸಂಪನ್ಮೂಲ ಕೇಂದ್ರಗಳು

CRP : Cluster Resource Person – ಸಮೂಹ ಸಂಪನ್ಮೂಲ ವ್ಯಕ್ತಿ

CTE : College of Teacher Education – ಶಿಕ್ಷಕ ಶಿಕ್ಷಣ ಮಹಾವಿದ್ಯಾಲಯ

D. Ed : Diploma in Education – ಶಿಕ್ಷಣ ಕುರಿತ ಡಿಪ್ಲೊಮಾ

DIET : District Institute for Education and Training
ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ

DISE : District Information System for Education
ಜಿಲ್ಲಾ ಶೈಕ್ಷಣಿಕ ಮಾಹಿತಿ ವ್ಯವಸ್ಥೆ

DPEP : District Primary Education Program
ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ

DSERT : Department of State Educational Research and Training
– ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಇಲಾಖೆ

ECO : Educational Coordinator ಶೈಕ್ಷಣಿಕ ಸಂಯೋಜಕರು

ELDP : Education Leadership and Development Programme -
ಶೈಕ್ಷಣಿಕ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮ

GDP : Gross Domestic Product – ಒಟ್ಟು ರಾಷ್ಟ್ರೀಯ ಉತ್ಪನ್ನ

IAS : Indian Administrative Service – ಭಾರತೀಯ ಆಡಳಿತಾತ್ಮಕ ಸೇವೆ

IASEs : Institute of Advanced Studies in Education – ಶಿಕ್ಷಣಶಾಸ್ತ್ರದಲ್ಲಿನ ಉನ್ನತ ಅಧ್ಯಯನ ಸಂಸ್ಥೆಗಳು

ICSE : Indian Certificate of Secondary Education – ಭಾರತೀಯ ಪ್ರೌಢ ಶಿಕ್ಷಣ ಪ್ರಮಾಣಪತ್ರ

IDEA(USA) : Individuals with Disabilities Act – ಅಂಗವೈಕಲ್ಯವುಳ್ಳ ವ್ಯಕ್ತಿಗಳಿಗೆ ಸಂಬಂಧಿಸಿದ ಕಾಯಿದೆ

IIS : Indian Information Service – ಭಾರತೀಯ ಮಾಹಿತಿ ಸೇವೆ

IIT : Indian Institute of Technology – ಭಾರತೀಯ ತಂತ್ರಜ್ಞಾನ ಸಂಸ್ಥೆ

IT/ ITES : Information Technology/Information Technology Enabled Services – ಭಾರತೀಯ ತಂತ್ರಜ್ಞಾನ ಪೂರಕ ಸಂಸ್ಥೆ

JEE : Joint Entrance Examination – ಜಂಟಿ ಪ್ರವೇಶ ಪರೀಕ್ಷೆ

JRM : Joint Review Mission – ಜಂಟಿ ಪರಿಶೀಲನಾ ನಿಯೋಗ

KPS : Karnataka Public School – ಕರ್ನಾಟಕ ಪಬ್ಲಿಕ್ ಸ್ಕೂಲ್

KREIS : Karnataka Residential Education Institutions Society – ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ರಾಷ್ಟ್ರೀಯ

MDM : Mid-day Meal – ಮಧ್ಯಾಹ್ನ ಬಿಸಿಯೂಟ ಕಾರ್ಯಕ್ರಮ

MDP : Management Development Programme – ಆಡಳಿತ ಅಭಿವೃದ್ಧಿ ಕಾರ್ಯಕ್ರಮ

NCC : National Cadet Corps – ನ್ಯಾಷನಲ್ ಕೆಡೆಟ್ ಕೋರ್

NCERT : National Council for Educational Research and Training – ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಂಸ್ಥೆ

NCF : National Curriculum Framework – ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು

NCFTE : National Curriculum Framework for Teacher Education, 2009 – ಶಿಕ್ಷಕ ಶಿಕ್ಷಣ ಕುರಿತ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2009

NCPCR : National Commission for Protection of Child Rights – ಮಕ್ಕಳ ಹಕ್ಕುಗಳ ರಕ್ಷಣೆ ಕುರಿತಾದ ರಾಷ್ಟ್ರೀಯ ಆಯೋಗ

NCTE : National Council for Teacher Education – ಶಿಕ್ಷಕ ಶಿಕ್ಷಣ ಕುರಿತಾದ ರಾಷ್ಟ್ರೀಯ ಮಂಡಳಿ

NIE : National Institute of Education (Singapore) – ರಾಷ್ಟ್ರೀಯ ಶಿಕ್ಷಣ ಸಂಸ್ಥೆ

OECD : Organisation for Economic Cooperation and Development – ಆರ್ಥಿಕ ಸಹಕಾರ ಮತ್ತು ಅಭಿವೃದ್ಧಿ ಕುರಿತಾದ ಸಂಸ್ಥೆ

## ಸಂಕ್ಷಿಪ್ತಾಕ್ಷರ ಪದಸೂಚಿ

Ph.D : Doctor of Philosophy – ಸಂಶೋಧನಾ ಮಹಾಪ್ರಬಂಧ

PISA : Programme for International Student Assessment
ಅಂತರರಾಷ್ಟ್ರೀಯ ವಿದ್ಯಾರ್ಥಿಗಳ ಮೌಲ್ಯಮಾಪನ ಕಾರ್ಯಕ್ರಮ

PPU : Policy Planning Unit – ನೀತಿ ನಿರೂಪಣೆ ಯೋಜನಾ ಘಟಕ

PTA : Parents Teachers Association
– ಶಿಕ್ಷಕರು ಮತ್ತು ಪೋಷಕರ ಸಂಘ

PUC : Pre-University Course – ಪದವಿ-ಪೂರ್ವ ಶಿಕ್ಷಣ

RMSA : Rashtriya Madhyamika Shikshana Abhiyaan
– ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ

RTE : Right of Children to Free and Compulsory Education Act
– ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣ ಹಕ್ಕು

RIE : Regional Education Institute – ಪ್ರಾದೇಶಿಕ ಶಿಕ್ಷಣ ಸಂಸ್ಥೆ

SCERT : State Council for Educational Research and Training
– ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಂಸ್ಥೆ

SDMC : School Development and Monitoring Committee
– ಶಾಲಾ ಅಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿ

SI : Subject Inspector – ವಿಷಯ ಪರಿಶೀಲಕರು

SRPs : State Resource Persons – ರಾಜ್ಯ ಸಂಪನ್ಮೂಲ ವ್ಯಕ್ತಿಗಳು

SSA : Sarva Shikshana Abhiyaan – ಸರ್ವ ಶಿಕ್ಷಣ ಅಭಿಯಾನ

SSK : Samagra Shikshana Karnataka – ಸಮಗ್ರ ಶಿಕ್ಷಣ ಅಭಿಯಾನ

SSLC : Secondary School Leaving Certificate
– ಪ್ರೌಢಶಾಲಾ ತೇರ್ಗಡೆ ಪ್ರಮಾಣ ಪತ್ರ

STEM : Science, Technology, Engineering and Mathematics
– ವಿಜ್ಞಾನ, ತಂತ್ರಜ್ಞಾನ, ಎಂಜಿನಿಯರಿಂಗ್ ಮತ್ತು ಗಣಿತ

TCH : Teacher Certificate Higher

TCL : Teacher Certificate Lower

TLCs : Teacher Learning Centers – ಶಿಕ್ಷಕ ಕಲಿಕಾ ಕೇಂದ್ರಗಳು

TTC : Teacher Training College – ಶಿಕ್ಷಕ ತರಬೇತಿ ವಿದ್ಯಾಲಯ

TTMS : Teacher Training Management System
– ಶಿಕ್ಷಕ ತರಬೇತಿ ನಿರ್ವಹಣಾ ವ್ಯವಸ್ಥೆ

U-DISE : Unified District Information System for Education
– ಏಕೀಕೃತ ಜಿಲ್ಲಾ ಶೈಕ್ಷಣಿಕ ಮಾಹಿತಿ ವ್ಯವಸ್ಥೆ

# ಅಭಿಪ್ರಾಯಗಳು

## ಭರವಸೆಯನ್ನು ಗಟ್ಟಿಗೊಳಿಸುವ ಅನುಭೂತಿಯುಳ್ಳ ಬರಹಗಳು

**ಕ**ರ್ನಾಟಕವೂ ಸೇರಿದಂತೆ ಇಡೀ ದೇಶದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಹೆಚ್ಚಿನ ಗಮನ ಕೊಟ್ಟು, ದೂರಗಾಮಿ ಉದ್ದೇಶವಿರಿಸಿಕೊಂಡು ಕೆಲಸ ಮಾಡುತ್ತಿರುವ ಸಂಸ್ಥೆಗಳಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್ ಪ್ರಮುಖವಾದುದು. ಅಂಥ ಸಂಸ್ಥೆಯಲ್ಲಿ ಕರ್ನಾಟಕ ರಾಜ್ಯದ ಮುಖ್ಯಸ್ಥರಾಗಿ ಕೆಲಸ ಮಾಡುವುದಕ್ಕೆ ಮಂಜುನಾಥ್ ಅವರಿಗೆ ಅವಕಾಶ ಸಿಕ್ಕಿದ್ದು ಅದೃಷ್ಟದಾಯಕ ತಿರುವೆಂದು ನನಗನಿಸುತ್ತದೆ. ಸಿಕ್ಕ ಇಂತಹ ಅವಕಾಶವನ್ನು ಮಂಜುನಾಥ್ ಅವರು ಶ್ರದ್ಧೆಯಿಂದ ಬಳಸಿಕೊಂಡು ಈ ಕ್ಷೇತ್ರದಲ್ಲಿ ಪಡೆದ ಅನುಭವ ಮತ್ತು ಒಳನೋಟಗಳನ್ನು ಈ ಪುಸ್ತಕದಲ್ಲಿ ನಮ್ಮೊಂದಿಗೆ ಹಂಚಿಕೊಂಡಿದ್ದಾರೆ.

ಶಿಕ್ಷಣ ಇಲಾಖೆಯ ಆಯುಕ್ತನಾಗಿ ಮತ್ತು ತದನಂತರ ಕಾರ್ಯದರ್ಶಿಯಾಗಿ ನಾನು ಕಾರ್ಯ ನಿರ್ವಹಿಸಿದ ಸಂದರ್ಭದಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್ ಹಾಗೂ ಮಂಜುನಾಥ್ ಅವರ ಜೊತೆ ಒಡನಾಡುವಾಗ ಫೌಂಡೇಷನ್‌ನಂತಹ ಸಂಸ್ಥೆಗಳು ಕೇವಲ ಬೆಂಗಳೂರಿನ ಸುತ್ತಮುತ್ತಲೇ ನೆಲೆಯೂರದೆ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಅತ್ಯಂತ ಪ್ರತಿಕೂಲ ಸವಾಲುಗಳನ್ನು ಎದುರಿಸುತ್ತಿರುವ ಉತ್ತರ ಕರ್ನಾಟಕದ ಜಿಲ್ಲೆಗಳಿಗೆ ಕೊಡುಗೆ ನೀಡಬೇಕೆಂಬ ಸಲಹೆಯಿತ್ತ ನೆನಪು ನನಗೆ ಇನ್ನೂ ಹಸಿರಾಗಿದೆ. ಆ ಸವಾಲಿಗೆ ಅವರು ಸಕಾರಾತ್ಮಕವಾಗಿ ಸ್ಪಂದಿಸಿ ಅನೇಕ ವರ್ಷಗಳಿಂದ ಆ ಭಾಗದಲ್ಲಿ ಅತ್ಯಂತ ಬದ್ಧತೆಯಿಂದ ಕೆಲಸ ಮಾಡುತ್ತಾ ಬಂದಿರುವುದು ಬಹಳ ಸಂತೋಷದ ವಿಷಯ. ಫೌಂಡೇಷನ್‌ನ ಈ ನಡೆ ಅನೇಕ ಸರ್ಕಾರೇತರ ಸಂಸ್ಥೆಗಳಿಗೆ ಅನುಕರಣೀಯವಾಗಿದೆ.

ಕರ್ನಾಟಕದ ಅತ್ಯಂತ ಅವಕಾಶವಂಚಿತ ಭಾಗಗಳಾದ ಯಾದಗಿರಿ, ರಾಯಚೂರು, ಕಲಬುರಗಿಯಂತಹ ಪ್ರದೇಶಗಳಲ್ಲಿ ಕೆಲಸ ಮಾಡುತ್ತ ಕ್ಲಿಷ್ಟಕರವಾದ ಸನ್ನಿವೇಶಗಳನ್ನು ಫೌಂಡೇಷನ್ ಎದುರಿಸಿದ ರೀತಿ, ಈ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಹುರುಪನ್ನೂ ನಂಬಿಕೆಯನ್ನೂ ಮೂಡಿಸುತ್ತದೆ. ಮಂಜುನಾಥ್ ಅವರು ಟಾಗೋರರ "ನಂಬಿಕೆ ಎನ್ನುವುದು ನಸುಕಿನಲ್ಲಿ ಇನ್ನೂ ಕತ್ತಲಿರುವಾಗಲೇ ಬೆಳಕನ್ನು ಗ್ರಹಿಸಿ ಹಾಡುವ

ಹಕ್ಕಿಯಂತೆ" ಎಂಬ ನುಡಿಯನ್ನು ಉಲ್ಲೇಖಿಸಿ ಕಟ್ಟಿಕೊಟ್ಟಿರುವ ಈ ಪುಸ್ತಕ ಉತ್ತಮವಾಗಿ ಓದಿಸಿಕೊಂಡು ಹೋಗುವುದಲ್ಲದೆ ಭರವಸೆಯ ಭಾವವನ್ನು ಗಟ್ಟಿಗೊಳಿಸುತ್ತದೆ.

ಸೇವಾಪೂರ್ವ ಮತ್ತು ಸೇವಾನಿರತ ಶಿಕ್ಷಣದ ಬಗೆಗೆ ಆಳವಾದ ಅನುಭವದಿಂದ ನೀಡಿರುವ ವಿಚಾರಗಳು ಬಹಳ ಉಪಯುಕ್ತವಾಗಿವೆ. ಅಜೀಂ ಪ್ರೇಮ್‌ಜಿ ಫೌಂಡೇಷನ್ ಮತ್ತು ಮಂಜುನಾಥ್‌ರ ಬಗ್ಗೆ ಸರ್ಕಾರಿ ಅಧಿಕಾರಿಯಾಗಿ ನನಗೆ ಅತ್ಯಂತ ಇಷ್ಟವಾಗುವ ಧೋರಣೆ ಎಂದರೆ, ಸರ್ಕಾರ ಮಾಡುತ್ತಿರುವಂಥ ಹಲವಾರು ಕೆಲಸಗಳನ್ನು ಅತ್ಯಂತ ಪ್ರೀತಿಯಿಂದ ಗಮನಿಸುತ್ತಾ ಅವನ್ನು ಯಾವ ರೀತಿ ಬೆಂಬಲಿಸಬಹುದು ಎನ್ನುವುದರ ಬಗ್ಗೆ ತೀವ್ರ ಕಾಳಜಿಯನ್ನು ಹೊಂದಿ ಸೂಕ್ತ ಅಧ್ಯಯನಗಳನ್ನು ಕೈಗೊಂಡು, ಅದಕ್ಕೆ ಬೇಕಾದಂಥ ಚಟುವಟಿಕೆಗಳನ್ನು ರೂಪಿಸಿ, ಇವುಗಳನ್ನು ಸಂಘಟಿಸಲು ಬೇಕಾದಂಥ ವ್ಯವಸ್ಥೆಗಳನ್ನು ಫೌಂಡೇಷನ್ ತಳಮಟ್ಟದಿಂದಲೇ ಆಯೋಜಿಸುವ ಕೆಲಸವನ್ನು ಮಾಡುತ್ತಿದೆ. ಈ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಕೊಂಡಿರುವ ಮಂಜುನಾಥ್ ಅವರು ತಮ್ಮ ಅನುಭವಗಳನ್ನು ಈ ಪುಸ್ತಕದಲ್ಲಿ ಕ್ರೋಡೀಕರಿಸಿ ಕೊಟ್ಟಿರುವಂಥದ್ದು ನಿಜವಾಗಿಯೂ ಉಪಯುಕ್ತವಾದುದು.

ಸರ್ಕಾರದ ವ್ಯವಸ್ಥೆಯಲ್ಲಿರುವ ಒಳ್ಳೆಯ ಮತ್ತು ಕೆಟ್ಟ ಅಂಶಗಳೆರಡನ್ನೂ ಮಂಜುನಾಥ್ ಅವರು ವಿಮರ್ಶಾತ್ಮಕವಾಗಿ ನೋಡಿದ್ದಾರೆ. ಇದಕ್ಕೆ ಉತ್ತಮ ಉದಾಹರಣೆಯಾಗಿ ಅಧಿಕಾರಿಗಳಿಗೆ ನ್ಯಾಯೋಚಿತ ಅಧಿಕಾರದ ಬಗೆಗಿನ ಲೇಖನವನ್ನು ಗುರುತಿಸಬಹುದು. ಯಾವುದೇ ಅಧಿಕಾರಿ ತನ್ನ ಕೆಲಸವನ್ನು ಇಷ್ಟಪಟ್ಟು ಮಾಡುತ್ತಿರುವಾಗಲೇ, ಅದನ್ನು ಪೂರೈಸಲು ಅವರಿಗೆ ಸರಿಯಾದಂತಹ ಅಧಿಕಾರಾವಧಿಯನ್ನು ಕೊಡಬೇಕಾಗುತ್ತದೆ ಎನ್ನುವುದನ್ನು ಸರಿಯಾಗಿಯೇ ಗುರುತಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಕೆಲಸ ಮಾಡುವಾಗ ಎಷ್ಟು ಜನ ಅಧಿಕಾರಿಗಳು ಬದಲಾವಣೆ ಆಗಿದೆ ಎನ್ನುವುದನ್ನು ನೋಡಿ, ಈ ರೀತಿಯ ಬದಲಾವಣೆಗಳಾದರೆ ಸರ್ಕಾರದ ಧ್ಯೇಯೋದ್ದೇಶಗಳು ಯಾವ ರೀತಿ ಸಫಲತೆಯನ್ನು ಕಂಡುಕೊಳ್ಳುತ್ತವೆ ಎಂದು ಕೇಳಿರುವ ಪ್ರಶ್ನೆಯು ನಿಜವಾಗಿಯೂ ಈ ವ್ಯವಸ್ಥೆಯ ಜವಾಬ್ದಾರಿ ಹೊತ್ತಂತಹ ರಾಜಕೀಯ ಮುಖಂಡರಾಗಲಿ ಹಿರಿಯ ಅಧಿಕಾರಿಗಳಾಗಲಿ ಪರ್ಯಾಲೋಚಿಸಬೇಕಾದದ್ದು.

ಈ ಪುಸ್ತಕದಲ್ಲಿ ಕಂಡುಬಂದ ಇನ್ನೊಂದು ಮುಖ್ಯವಾದ ವಿಷಯವೆಂದರೆ ಯಾರು ಅನಕ್ಷರತೆಯನ್ನು ಹೋಗಲಾಡಿಸಲಿಕ್ಕೆ ಯೋಧರಾಗಿ ಕೆಲಸ ಮಾಡುತ್ತಿದ್ದಾರೋ, ಅಂದರೆ ಯಾವುದೋ ಒಂದು ಪ್ರದೇಶದಿಂದ ಬಂದು, ಇನ್ಯಾವುದೋ ಹಳ್ಳಿಯಲ್ಲಿ ಪ್ರತಿನಿತ್ಯ ಕಷ್ಟಪಟ್ಟುಕೊಂಡು ಬಂದು ತರಗತಿಗಳಲ್ಲಿ ಪಾಠ ಕಲಿಸುವುದಕ್ಕೆ ಹೋರಾಡುತ್ತಿರುವಂಥ ಶಿಕ್ಷಕ ಶಿಕ್ಷಕಿಯರ ಬಗ್ಗೆ ಇಲ್ಲಿನ ಬರಹಗಳಲ್ಲಿ ತೋರಿರುವ ಅಗಾಧವಾದ ಅನುಭೂತಿ ನನ್ನ ಮನಸ್ಸಿಗೆ ತುಂಬ ಹಿಡಿಸಿತು. ಶಿಕ್ಷಕರ ಸಂಘಗಳು, ಶಿಕ್ಷಕರ ಸಮಸ್ಯೆಗಳು ಮತ್ತು ಇವುಗಳ ಬಗ್ಗೆ ಕೂಲಂಕಷವಾಗಿ ವಿಶ್ಲೇಷಣೆ ಮಾಡಿರುವಂಥದ್ದು ನಮ್ಮ ಶಿಕ್ಷಣ ವ್ಯವಸ್ಥೆ ಮತ್ತು ಆಡಳಿತ ವ್ಯವಸ್ಥೆ ಬಗ್ಗೆ ಹೆಚ್ಚಿನ ಬೆಳಕು ಚೆಲ್ಲುವಲ್ಲಿ ಸಹಕಾರಿಯಾಗಿದೆ.

ಇದರ ಜೊತೆಗೆ, ಶಿಕ್ಷಣದಂಥ ಕ್ಷೇತ್ರದಲ್ಲೂ ವೆಚ್ಚಗಳಿಗೆ ಕಡಿವಾಣ ಹಾಕುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಳ್ಳುವ ನಿರ್ಧಾರಗಳಿಗೆ ಸಂಬಂಧಿಸಿದಂತೆ ಹಣಕಾಸಿನ ಇಚ್ಛಾಶಕ್ತಿಯನ್ನು ನಾವು ತೋರದೆ ಹೋದರೆ, ಮಹತ್ತರವಾದ ಆಸೆ-ಆಕಾಂಕ್ಷೆಗಳು

ಹಿನ್ನೆಡೆಯನ್ನು ಪಡೆದುಕೊಳ್ಳುತ್ತವೆ. ಯಾವುದೇ ದೀರ್ಘಕಾಲಿಕ ಬದಲಾವಣೆಯನ್ನು ಮಾಡಹೊರಟಾಗ ಅದಕ್ಕೆ ಬೇಕಾದಂಥ ಹಣಕಾಸಿನ ಸಂಪನ್ಮೂಲ ಒದಗಿಸಲೇಬೇಕು. ಇದನ್ನು ಮಂಜುನಾಥ್ ಸ್ಪಷ್ಟವಾದ ಉದಾಹರಣೆಗಳ ಮೂಲಕ ಮತ್ತು ಹಲವಾರು ಅಧ್ಯಯನಗಳ ಹಿನ್ನೆಲೆಯಲ್ಲಿ ವಾದಿಸಿರುವುದು ಈ ಪುಸ್ತಕದ ಉತ್ತಮ ಅಂಶವಾಗಿದೆ. ಶಿಕ್ಷಣದಲ್ಲಿ ಆಸಕ್ತಿಯುಳ್ಳ ನನ್ನಂತಹ ಅಧಿಕಾರಿಗಳು ಇಂತಹ ಪರಿಸ್ಥಿತಿಯನ್ನು ಮತ್ತೆ ಮತ್ತೆ ಅನುಭವಿಸುತ್ತಿರುವುದು ವಾಸ್ತವ ಅಂಶವೆಂದು ಈ ಸಂದರ್ಭದಲ್ಲಿ ಹೇಳಬಹುದು.

ಈ ಪುಸ್ತಕದಲ್ಲಿ ನನ್ನ ಮನಸ್ಸಿಗೆ ನಾಟಿದ ಇನ್ನೊಂದು ಮುಖ್ಯವಾದ ಅಂಶವೆಂದರೆ ಲೇಖಕರು ಕೇವಲ ಶೈಕ್ಷಣಿಕ ಅಂಕಿ–ಅಂಶಗಳು ಅಥವಾ ವಿಚಾರಗಳನ್ನು ಪ್ರಸ್ತಾಪ ಮಾಡಿರುವುದಲ್ಲದೆ, ನಾಡಿನ ಹಿರಿಯ ಸಾಹಿತಿಗಳು ಮತ್ತು ಸಾಂಸ್ಕೃತಿಕ ನಾಯಕರ ದೃಷ್ಟಿಕೋನದಲ್ಲಿಯೂ ನಮ್ಮ ಶಿಕ್ಷಣ ಹೇಗಿರಬೇಕು, ಅವರ ಚಿಂತನೆಗಳು ಶಿಕ್ಷಣದ ಸಾರ್ವತ್ರೀಕರಣಕ್ಕೆ ಹೇಗೆ ನೆರವಾಗುತ್ತವೆ ಎಂಬುದನ್ನು ಪರಿಶೀಲಿಸಿರುವುದು ಪ್ರಸ್ತುತ.

ಮಂಜುನಾಥ್ ತಮ್ಮ ಸ್ವಂತ ಅನುಭವವನ್ನು ಕೂಡ ಹಂಚಿಕೊಳ್ಳುತ್ತಾ ಹೋಗುತ್ತಾರೆ. ಅವುಗಳಲ್ಲಿ ನ್ಯಾಷನಲ್ ಮಿಡಲ್ ಸ್ಕೂಲ್ ಮತ್ತು ಹೈಸ್ಕೂಲ್‌ನಲ್ಲಿ ತಾವು ಕಲಿತಂಥ ಸಂದರ್ಭದಲ್ಲಿ ಆ ಸಂಸ್ಥೆ ಯಾವ ರೀತಿ ನಿಜವಾಗಿಯೂ ನಾವು ಅಪೇಕ್ಷಿಸುವ ಉದಾತ್ತವಾದ ಶೈಕ್ಷಣಿಕ ವಿಚಾರಗಳನ್ನು ತನ್ನಲ್ಲೇ ಒಳಗೊಂಡಿತ್ತು; ಅವುಗಳನ್ನು ಅನೇಕ ತಲೆಮಾರುಗಳ ಕಾಲ ಮಕ್ಕಳಿಗೆ ದಾಟಿಸಿರುವುದಕ್ಕೆ ನಿದರ್ಶನಗಳನ್ನು ನೀಡಿದ್ದಾರೆ. ಈ ಮೂಲಕ ಉತ್ತಮವಾದದ್ದು ಏನು ಎನ್ನುವುದನ್ನು ಕೂಡ ವಿಶ್ಲೇಷಿಸುತ್ತಾ, ಅದು ಕೇವಲ ಕೆಲಸಕ್ಕೆ ತಯಾರು ಮಾಡುವಂಥದ್ದೋ, ವಿದ್ಯಾರ್ಥಿಗಳನ್ನು ಕೇವಲ ಅಂಕಗಳನ್ನು ಪಡೆಯುವುದಕ್ಕೆ ತಯಾರು ಮಾಡುವಂಥದ್ದೋ, ಅವುಗಳನ್ನು ಮೀರಿ ರಾಷ್ಟ್ರೀಯತೆಯ, ಸಮಾನತೆಯ ಭಾವನೆಗಳು ಸೇರಿದಂತೆ ಉದಾತ್ತ ಅಂಶಗಳನ್ನು ಮಕ್ಕಳಲ್ಲಿ ಉದ್ದೀಪಿಸುವ ಶೈಕ್ಷಣಿಕ ವ್ಯವಸ್ಥೆ ರೂಪಿಸುವುದು ಮುಖ್ಯವೋ ಎನ್ನುವ ಜಿಜ್ಞಾಸೆಯನ್ನು ಈ ಕೃತಿ ಮುಂದಿಡುತ್ತದೆ.

ಶಿಕ್ಷಣ ಕ್ಷೇತ್ರವು ಈಗ ಬದಲಾವಣೆಯ ಪರ್ವದಲ್ಲಿದೆ. ಹಲವಾರು ವರ್ಷಗಳ ಪ್ರಯತ್ನಗಳ ಫಲವಾಗಿ ನಾವು ಸುದೀರ್ಘ ಹಾದಿಯನ್ನು ಕ್ರಮಿಸಿದ್ದೇವೆ. ಇದೇ ಸಮಯದಲ್ಲಿ ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಜಾರಿಯಾಗುತ್ತಿದೆ. ಒಂದು ದಶಕಕ್ಕಿಂತಲೂ ಹೆಚ್ಚು ಅವಧಿಯ ಕೆಲಸದ ಅನುಭವದಿಂದ ಮಂಜುನಾಥ್ ಹತ್ತು ಹಲವು ವಿಷಯಗಳನ್ನು ಮನಗಂಡು ಈ ಕೃತಿಯಲ್ಲಿ ಪ್ರಸ್ತಾಪಿಸಿರುವ ಬಹುಶಿಸ್ತಿಯ ಅಧ್ಯಯನ, ಒಳಗೊಳ್ಳುವಿಕೆ, ಶಿಕ್ಷಣದ ಮುಂದುವರಿಕೆಯಂತಹ ಅನೇಕ ವಿಚಾರಗಳು ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಬೆಳಕು ಕಂಡಿವೆ. ಪ್ರಾಯಶಃ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಅರ್ಥೈಸಿಕೊಳ್ಳುವ ನೆಲೆಯಲ್ಲಿಯೂ ಈ ಕೃತಿಯು ಬುನಾದಿಯಾಗಬಲ್ಲದು.

● **ಜಿ.ಕುಮಾರ್ ನಾಯಕ್,** ಭಾ.ಆ.ಸೇ., ಹೆಚ್ಚುವರಿ ಮುಖ್ಯ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ ಮತ್ತು ಇಂಧನ ಇಲಾಖೆ, ಕರ್ನಾಟಕ ಸರ್ಕಾರ



## ಕ್ರಿಯೆಗೆ ಇಳಿಸುವ ದಿಕ್ಕಿನಲ್ಲಿರುವ ಲೇಖನಗಳು

ಶಿಕ್ಷಣದ ಬಗ್ಗೆ ಇದೊಂದು ತುಂಬಾ ವಿಶಿಷ್ಟವಾದ ಸಂಕಲನ. ಮಾನವ ಸಂಪನ್ಮೂಲ ಅಭಿವೃದ್ಧಿ ಕ್ಷೇತ್ರದಲ್ಲಿ ದೀರ್ಘ ಅನುಭವದ ಹಿನ್ನಲೆಯಲ್ಲಿ ಮಂಜುನಾಥ್ ಅವರು ಶಿಕ್ಷಣ ಕ್ಷೇತ್ರವನ್ನು ನೋಡುವ ದೃಷ್ಟಿ ತುಂಬಾ ಗಂಭೀರ ಹಾಗೂ ಅನನ್ಯವಾದದ್ದು.

ಶಿಕ್ಷಣವು ತುಂಬಾ ಆಗಾಧವಾದ ವಿಷಯಗಳನ್ನು ಒಳಗೊಂಡ ದೊಡ್ಡ ಕ್ಷೇತ್ರವಾಗಿದೆ. ಈ ಕ್ಷೇತ್ರದಲ್ಲಿ ಸಾಧಾರಣವಾಗಿ ಚರ್ಚೆ ಆಗುವ ವಿಚಾರ ಕೆಲವೇ ಕೆಲವು. ಹೆಚ್ಚು ಚರ್ಚೆ ಹಾಗೂ ಬರವಣಿಗೆಗಳು ಈ ಕೆಲವೇ ವಿಷಯಗಳ ಸುತ್ತ ಸುತ್ತುತ್ತಿರುತ್ತವೆ. ಆದರೆ, ಈ ಪುಸ್ತಕವು ಅಷ್ಟಾಗಿ ಗಮನಹರಿಸದ ವಿಷಯಗಳ ಬಗೆಗೂ ಗಮನಸೆಳೆದು ಅವುಗಳನ್ನು ನೋಡುವ ಹಾಗೆ ನಮನ್ನು ಪ್ರೇರೇಪಿಸುತ್ತದೆ. ಉದಾಹರಣೆಗೆ, ಈ ಪುಸ್ತಕದಲ್ಲಿ ನೀತಿ ನಿರೂಪಣೆ ಆಡಳಿತ ಕ್ರಮದ ಬಗೆಗೆ ಇರುವ ಲೇಖನಗಳು, ಅನೇಕ ನೀತಿಗಳ ಬಗೆಗೆ ಸೂಕ್ಷ್ಮವಾದ ಒಳನೋಟಗಳನ್ನು ನೀಡಿ ತುಂಬಾ ಗಂಭೀರವಾದ ಚರ್ಚೆಗಳನ್ನು ನಮ್ಮ ಮುಂದೆ ಇಡುತ್ತವೆ.

ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಸಬಲೀಕರಣ ಮತ್ತು ಒಟ್ಟು ಶಿಕ್ಷಣ ವ್ಯವಸ್ಥೆಯನ್ನು ಬಲಗೊಳಿಸಲು ಶಾಲಾ ಶಿಕ್ಷಣ ವ್ಯವಸ್ಥೆಯ ಸಾರಥಿಗಳಿಗೆ ಮಂಜುನಾಥ್ ಅವರು ಕೆಲವು ಉತ್ತಮ ಸಲಹೆಗಳನ್ನು ನೀಡುತ್ತಾರೆ. ಪೋಷಕರು ಮತ್ತು ಶಿಕ್ಷಕರ ದೃಷ್ಟಿಕೋನ ಹಾಗೂ ಸಮತೆಯ ಒಳಗೊಳ್ಳುವಿಕೆಯಲ್ಲಿ ಮಂಜುನಾಥ್ ಅವರು ನಾವು ಸಾಮಾನ್ಯವಾಗಿ ಕಡೆಗಣಿಸುವ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಾರೆ.

ಮಂಜುನಾಥ್ ಅವರ ಬರವಣಿಗೆಗಳಲ್ಲಿ ಯಾವುದೋ ಪ್ರೌಢ ಸಿದ್ಧಾಂತದ ಒತ್ತಡವಾಗಲಿ, ಯಾವುದೋ ತತ್ವದ ಹೇರಿಕೆಯಾಗಲಿ ಇಲ್ಲ. ಅವರು ಬಲವಾದ ಸೈದ್ಧಾಂತಿಕ ನಿಲುವನ್ನು ತೆಗೆದುಕೊಳ್ಳುವುದಿಲ್ಲ ಎನಿಸುತ್ತದೆ. ಆದರೆ ಅವರ ನಿರೂಪಣೆಯಲ್ಲಿ ಜನಪರವಾದ ಧೋರಣೆ ಇದೆ.

ಈ ಲೇಖನಗಳನ್ನು ಓದಿದ ಮೇಲೆ ನಾವು ಯಾವುದರ ಕುರಿತು ಯೋಚನೆ ಮಾಡಿಲ್ಲ ಮತ್ತು ಇದರ ಕುರಿತು ಯೋಚನೆ ಮಾಡಬೇಕಲ್ಲ! ಎನ್ನುವ ಗಟ್ಟಿಯಾದ ನಿಲುವು ನಮ್ಮಲ್ಲಿ ಹುಟ್ಟಿಕೊಳ್ಳುತ್ತವೆ ಮತ್ತು ಹಾಗೆ ಮಂಜುನಾಥ್ ಅವರು ಈ ವಿಷಯಗಳನ್ನು ಪ್ರತಿಪಾದಿಸುತ್ತಾರೆ. ಹಾಗೆ ಪ್ರತಿಪಾದಿಸುತ್ತಲೇ, ತುಂಬ ಸರಳವಾಗಿ, 'ಓ ಇಲ್ಲಿ ನೋಡಿ, ಇದನ್ನು ಗಮನಿಸಿ' ಎನ್ನುವಂತೆ ತುಂಬಾ ಸ್ವಾಭಾವಿಕವಾಗಿ ನಮ್ಮ ಜೊತೆಗೆ ಮಾತನಾಡುವಂತೆಯೇ ನಮ್ಮನ್ನು ಎಚ್ಚರಿಸುತ್ತಾರೆ. ಇದರಿಂದ ನಾವು ಕಡೆಗಣಿಸಿದ್ದ ವಿಷಯಗಳ ಮೇಲೆ ನಾವು ಹೆಚ್ಚು ಗಮನ ಕೊಟ್ಟು ನೋಡುವಂತಾಗುತ್ತದೆ.

ಇಲ್ಲಿನ ವಿಷಯ ವೈವಿಧ್ಯ, ಸೂಕ್ಷ್ಮ ನಿರೂಪಣೆ ನಮ್ಮ ಮನಸ್ಸನ್ನು ಚುಚ್ಚುತ್ತದೆ. ಹೃದಯವನ್ನು ತಟ್ಟುತ್ತದೆ. ಎಲ್ಲಕ್ಕಿಂತಲೂ ಇದು ಹೆಚ್ಚಾಗಿ ನಮ್ಮೊಂದಿಗೆ ಬೆಸದುಕೊಂಡಿದೆ.

ಈ ತರಹದ ಚರ್ಚೆಗಳನ್ನು ಮಂಜುನಾಥ್ ಅವರಿಂದ ನಾವು ಹೆಚ್ಚು ಬಯಸಬಹುದು. ಈ ಬರಹಗಳು ನಮ್ಮನ್ನು ಕ್ರಿಯೆಗೆ ಇಳಿಸುವ ದಿಕ್ಕಿನಲ್ಲಿರುವ ಲೇಖನಗಳಾಗಿವೆ ಮತ್ತು ಇವುಗಳಲ್ಲಿ ಒಟ್ಟು ಸಮಾಜದ ಒಳಿತಿಗೆ ನಾವೇನು ಮಾಡಬಹುದು ಎನ್ನುವ ಸೂಚನೆ ಇದೆ.

**● ಉಮಾಶಂಕರ್ ಪೆರಿಯೋಡಿ**
ರಾಜ್ಯ ಮುಖ್ಯಸ್ಥರು, ಅಜೀಂ ಪ್ರೇಮ್‌ಜಿ ಫೌಂಡೇಷನ್, ಕರ್ನಾಟಕ



## ಸ್ಥೂಲನೋಟ ಮತ್ತು ಸೂಕ್ಷ್ಮ ದಾಖಲಾತಿಯ ಸಮಾಗಮ

**ಶಿ**ಕ್ಷಣವನ್ನು ಕುರಿತಾದ ಬರಹಗಳು ಮತ್ತು ಪುಸ್ತಕಗಳು ಕನ್ನಡದಲ್ಲಿ ಬಂದಿರುವುದು ವಿರಳ. ಇದೊಂದು ದೊಡ್ಡ ಕೊರತೆ. ಶಿಕ್ಷಣರಂಗಕ್ಕೆ ಸಂಬಂಧಿಸಿದಂತೆ ವಿವಿಧ ವಿಷಯಗಳ ಬಗ್ಗೆ ಸಾರ್ವಜನಿಕ ಚರ್ಚೆ ನಡೆಯಬೇಕಾಗಿರುವುದು ತುಂಬಾ ಅಗತ್ಯ. ಇಂತಹ ಚರ್ಚೆಗಳು ನಡೆಯಬೇಕಾದರೆ ಶಿಕ್ಷಣವನ್ನು ಕುರಿತಾದ ಬರಹಗಳು ಮತ್ತು ಪುಸ್ತಕಗಳು ನಿರಂತರವಾಗಿ ಹೊರಬರುತ್ತಿರಬೇಕು. ಕನ್ನಡದಲ್ಲಿ ಇದು ಆಗುತ್ತಿಲ್ಲ. ಈ ಕೊರತೆಯನ್ನು ತುಂಬುವ ಒಂದು ಪ್ರಯತ್ನವನ್ನು ಲೇಖಕರು ಈ ಪುಸ್ತಕದ ಮೂಲಕ ಮಾಡಿದ್ದಾರೆ.

ಇಲ್ಲಿರುವುದು ದೇಶದ ಮತ್ತು ಕರ್ನಾಟಕ ರಾಜ್ಯದ ಶಿಕ್ಷಣರಂಗದತ್ತ ಬೀರಿದ ಒಂದು ಸ್ಥೂಲ ನೋಟ. ಆದರೆ, ಇಲ್ಲಿ ವಿವರಣೆ ಮತ್ತು ವಿಶ್ಲೇಷಣೆಗೆ ಒಳಗಾದ ವಸ್ತುಗಳ ದೃಷ್ಟಿಯಿಂದ ಈ ಕೃತಿಯು ಇತರೆಡೆಗಳಲ್ಲಿ ಎಲ್ಲೂ ದಾಖಲಾಗದ ಶಿಕ್ಷಣರಂಗದ ಹಲವು ಅಪೂರ್ವ ವಿಚಾರಗಳನ್ನು ಮುನ್ನೆಲೆಗೆ ತರುತ್ತದೆ. ಹಾಗಾಗಿ, ಒಂದು ಸ್ಥೂಲ ಚಿತ್ರಣದ ಜೊತೆಜೊತೆಗೆ ಶಿಕ್ಷಣರಂಗಕ್ಕೆ ಸಂಬಂಧಿಸಿದ ಸೂಕ್ಷ್ಮ ಚರಿತ್ರೆ(Microhistory)ಯ ದಾಖಲಾತಿಯಾಗಿಯೂ ಈ ಕೃತಿಯಲ್ಲಿರುವ ಲೇಖನಗಳು ಕಾಣಿಸುತ್ತವೆ.

ಪುಸ್ತಕವು ಬಿಡಿಲೇಖನಗಳ ಸಂಕಲನವಾದರೂ, ವಿಷಯದ ವ್ಯಾಪ್ತಿಯ ದೃಷ್ಟಿಯಿಂದ ಇಲ್ಲೊಂದು ಸಮಗ್ರತೆ ಇದೆ. ಶಿಕ್ಷಣರಂಗಕ್ಕೆ ಸಂಬಂಧಿಸಿದ ಬಹುತೇಕ ಎಲ್ಲಾ ಪ್ರಮುಖ ವಸ್ತುಗಳನ್ನೂ ಇಲ್ಲಿರುವ ಲೇಖನಗಳು ಅಷ್ಟಿಷ್ಟು ಚರ್ಚಿಸುತ್ತವೆ. ಶಾಲಾತರಗತಿಗಳಲ್ಲಿ ನಡೆಯುವ ಬೋಧನೆ–ಕಲಿಕೆಗೆ ಸಂಬಂಧಿಸಿದ ವಿಚಾರಗಳಿಂದ ತೊಡಗಿ, ಶಿಕ್ಷಣರಂಗದ ಕುರಿತಾದ ಉನ್ನತ ಮಟ್ಟದ ನೀತಿ–ನಿರೂಪಣೆಯವರೆಗೆ, ಭಾರತದ ಹಳ್ಳಿಗಳ ಶಾಲಾತರಗತಿಯ ಚಿತ್ರಣದಿಂದ ತೊಡಗಿ, ಅಮೆರಿಕಾದಂತಹ ಮುಂದುವರೆದ ದೇಶಗಳಲ್ಲಿ ಶಿಕ್ಷಣ ಮತ್ತು ಶಿಕ್ಷಕರ, ಶಿಕ್ಷಣದ ಪರಿಸ್ಥಿತಿಯ ಕುರಿತಾದ ವಿವರಣೆಯವರೆಗೆ ಇಲ್ಲಿನ ಲೇಖನಗಳ ವ್ಯಾಪ್ತಿ ಹರಡಿದೆ. ಅದೇ ರೀತಿ, ಶಿಕ್ಷಣಕ್ಷೇತ್ರದ

ವಿವಿಧ ರೀತಿಯ ಸಂಬಂಧಗಳು; ಶಿಕ್ಷಕ–ವಿದ್ಯಾರ್ಥಿಗಳ ಸಂಬಂಧ; ಶಿಕ್ಷಕ–ಪಾಲಕರ ಸಂಬಂಧ; ಶಿಕ್ಷಕ–ಅಧಿಕಾರಿವರ್ಗದ ಸಂಬಂಧ; ಶಿಕ್ಷಣರಂಗ ಮತ್ತು ಸಮಾಜದ ಸಂಬಂಧ ಇಲ್ಲಿ ಚರ್ಚೆಯಾಗಿವೆ.

ಶಿಕ್ಷಣದ ಭಾಷಾ ಮಾಧ್ಯಮಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ನಡೆಯುತ್ತಿರುವ ಸುದೀರ್ಘ ವಿವಾದದ ಸುತ್ತ ಬೆಳಕು ಚೆಲ್ಲುವ ಪ್ರಯತ್ನ ಇಲ್ಲಿದೆ. ಶಿಕ್ಷಣರಂಗದ ಕುರಿತಾದ ಒಂದು ಚಾರಿತ್ರಿಕ ಇಣುಕು ನೋಟವನ್ನೂ ಪುಸ್ತಕ ಒಳಗೊಂಡಿದೆ. ಈ ಚಾರಿತ್ರಿಕ ದೃಷ್ಟಿಕೋನ ಒಂದೆಡೆ ಶಿಕ್ಷಣರಂಗಕ್ಕೆ ಸಂಬಂಧಿಸಿದ ವಿವಿಧ ನೀತಿಗಳು ವಿವಿಧ ಕಾಲಘಟ್ಟಗಳಲ್ಲಿ ಪಡೆದ ಸ್ವರೂಪವನ್ನು ಚರ್ಚಿಸಿದರೆ ಇನ್ನೊಂದೆಡೆ ಶಾಲಾತರಗತಿ ಕಾಲಕಾಲಕ್ಕೆ ಕಂಡ ಪರಿವರ್ತನೆಗಳನ್ನು ಲೇಖಕರ ನೆನಪುಗಳ ಮತ್ತು ವಿವಿಧ ವರದಿಗಳ ಆಧಾರದಲ್ಲಿ ದಾಖಲಿಸುವ ಕೆಲಸವನ್ನು ಮಾಡುತ್ತದೆ. ಜೊತೆಗೆ ಶಿಕ್ಷಣವನ್ನು ಕುರಿತಂತೆ ಕನ್ನಡದ ಈರ್ವರು ಪ್ರಸಿದ್ಧ ಲೇಖಕರಾದ ಡಾ. ಕೋಟ ಶಿವರಾಮಕಾರಂತ ಮತ್ತು ಪೂರ್ಣಚಂದ್ರ ತೇಜಸ್ವಿ ಇವರ ಚಿಂತನೆಗಳ ಪ್ರಸ್ತಾಪವಿದೆ. ಒಟ್ಟಿನಲ್ಲಿ ಈ ಕೃತಿಯ ವ್ಯಾಪಕ ಹರವು ಇದನ್ನು ಶಿಕ್ಷಣಕ್ಷೇತ್ರದಲ್ಲಿ ಆಸಕ್ತಿ ಹೊಂದಿದ ಎಲ್ಲರಿಗೂ ಬೇಕಾಗುವ ಒಂದು ಕೈಪಿಡಿ ಎನ್ನುವ ರೀತಿಯಲ್ಲಿ ರೂಪಿಸಿದೆ.

ಪುಸ್ತಕದಲ್ಲಿರುವ ಬಹುತೇಕ ಎಲ್ಲಾ ಬರಹಗಳೂ ಲೇಖಕರು ತನ್ನ ವೃತ್ತಿಜೀವನದ ಭಾಗವಾಗಿ ನೋಡಿದ, ಕೇಳಿದ ಮತ್ತು ಯೋಚಿಸಿದ ವಿಚಾರಗಳ ಸುತ್ತ ಇವೆ. ಅಲ್ಲೊಮ್ಮೆ ಇಲ್ಲೊಮ್ಮೆ ವೃತ್ತಿಜೀವನದಾಚೆಗಿನ ಬದುಕಿನ ನೆನಪುಗಳೂ ಹಾದುಹೋಗುವುದುಂಟು. ಯಾವುದೇ ಒಂದು ಕೃತಿಯನ್ನು ಅದರ ಲೇಖಕ ಯಾವ ನೆಲೆಯಲ್ಲಿದ್ದುಕೊಂಡು (Location of the author) ಬರೆದಿದ್ದಾರೆ ಎನ್ನುವ ಅಂಶದ ಆಧಾರದಲ್ಲಿ, ಆ ಕೃತಿಯಲ್ಲಿ ಇರುವ ವಿಚಾರಗಳ ಸತ್ವ, ವಿಶ್ವಾಸಾರ್ಹತೆ ಮತ್ತು ಮಹತ್ವ ಬೇರೆ ಬೇರೆ ರೀತಿಯಲ್ಲಿ ಓದುಗರನ್ನು ತಲುಪುತ್ತವೆ. ಶಿಕ್ಷಣದಂತಹ ಒಂದು ವಿಷಯವನ್ನೇ ತೆಗೆದುಕೊಳ್ಳೋಣ. ಶಿಕ್ಷಣದ ಬಗ್ಗೆ ಒಬ್ಬ ಶಿಕ್ಷಕ ಬರೆದ ಕೃತಿ ಒಬ್ಬ ಶಿಕ್ಷಣ ವಿದ್ವಾಂಸ ಬರೆದ ಕೃತಿಗಿಂತ ಭಿನ್ನವಾಗಿ ಓದುಗರನ್ನು ತಟ್ಟುತ್ತದೆ. ಅದೇ ವಿಷಯದ ಮೇಲೆ ಶಿಕ್ಷಣರಂಗದಲ್ಲಿ ಆಡಳಿತದ ಅನುಭವ ಇದ್ದ ಇನ್ನೊಬ್ಬರು ಬರೆದರೆ ಅದು ಓದುಗರಿಗೆ ನೀಡುವ ಗ್ರಹಿಕೆ ಬೇರೆಯೇ ಆಗಿರುತ್ತದೆ.

ಈ ದೃಷ್ಟಿಯಿಂದ ಪ್ರಸ್ತುತ ಕೃತಿಯನ್ನು ಇದರ ಲೇಖಕರು ಯಾವ ನೆಲೆಯಲ್ಲಿ ನಿಂತು ಬರೆದಿದ್ದಾರೆ ಎನ್ನುವುದನ್ನು ನೋಡಬೇಕಿದೆ ಮತ್ತು ಹಾಗೆ ನೋಡಿದಾಗ ಅಲ್ಲೊಂದು ವಿಶಿಷ್ಟತೆಯನ್ನು ಕೂಡ ಗುರುತಿಸಬೇಕಾಗುತ್ತದೆ. ಲೇಖಕರು ಸುಮಾರು ಇಪ್ಪತ್ತು ವರ್ಷಗಳ ಕಾರ್ಪೊರೇಟ್ ರಂಗದ ವೃತ್ತಿಜೀವನದ ನಂತರ ಶಿಕ್ಷಣರಂಗದಲ್ಲಿ ಕೆಲಸ ಪ್ರಾರಂಭಿಸುತ್ತಾರೆ– ಶಿಕ್ಷಕರಾಗಿ ಅಲ್ಲ, ಶಿಕ್ಷಣ ಸಂಶೋಧಕರಾಗಿ ಅಲ್ಲ, ಶಿಕ್ಷಣ ಆಡಳಿತಶಾಹಿಯಾಗಿ ಅಲ್ಲ. ಅವರು ಶಿಕ್ಷಣರಂಗದಲ್ಲಿ ನೆಲೆಯಾಗಿದ್ದು ಸರಕಾರದ ಜೊತೆಗೆ ಕೈಜೋಡಿಸಿರುವ ಒಂದು ಬೃಹತ್ ಸರಕಾರೇತರ ಸಂಸ್ಥೆಯ ಭಾಗವಾಗಿ. ಅಭೇದ್ಯ ಸರಕಾರಿ ಯಂತ್ರದ ಒಳಪ್ರವೇಶಿಸಿ ಶಿಕ್ಷಣಕ್ಷೇತ್ರದ ಕಾರ್ಯನಿರ್ವಹಣೆಯ ಬೇರೆಬೇರೆ ಆಯಾಮಗಳನ್ನು ಅರಿಯುವ ಹಾಗೂ ಅದರ ಕುರಿತಾಗಿ ಬರೆಯುವ ಅವಕಾಶ ಈ ಮೂಲಕ ಲೇಖಕರಿಗೆ ಲಭಿಸುತ್ತದೆ. ಹೀಗೆ ಸರಕಾರದ ಜೊತೆ ಕೆಲಸ ಮಾಡುತ್ತಲೇ, ಅದರಿಂದ ದೂರವುಳಿದುಕೊಂಡು ವ್ಯವಸ್ಥೆಯನ್ನು ನೋಡಿ ಬರೆದ ಸಂಕಥನಗಳು.

ಶಿಕ್ಷಣರಂಗ ಅಂತ ಅಲ್ಲ, ಯಾವುದೇ ರಂಗದ ಕುರಿತಾಗಿ ಕನ್ನಡದಲ್ಲಿ ಇಲ್ಲಿಯತನಕ ಸೃಷ್ಟಿಯಾಗಿದ್ದು ತೀರಾ ಕಡಿಮೆ. ಈ ಕಾರಣಕ್ಕೂ ಈ ಕೃತಿ ತನ್ನದೇ ಆದ ಮಹತ್ವ ಪಡೆದುಕೊಳ್ಳುತ್ತದೆ.

ಇನ್ನೊಂದೆಡೆ ಇದೇ ಕಾರಣಕ್ಕೆ ಸರಕಾರಿ ವ್ಯವಸ್ಥೆಯೊಳಗೆ ನಡೆಯುತ್ತಿರುವ ಒಂದು ದೊಡ್ಡ ಸ್ಥಿತ್ಯಂತರವನ್ನು ಈ ಕೃತಿ ಪರೋಕ್ಷವಾಗಿ ದಾಖಲಿಸುತ್ತದೆ. ಒಂದು ಕಾಲದಲ್ಲಿ ಸರಕಾರದ ಮಟ್ಟದಲ್ಲೇ ನಡೆಯುತಿದ್ದ ಕಾರ್ಯಗಳು ಈಗ ಸರಕಾರೇತರ ಸಂಸ್ಥೆಗಳ ಆಳವಾದ ಸಹಯೋಗದೊಂದಿಗೆ ನಡೆಯುತ್ತದೆ. ಸಾರ್ವಜನಿಕ ಆಡಳಿತದ ಪರಿಭಾಷೆಯಲ್ಲಿ Networked Governance, Hybrid Governance, Collaborative Governance ಮುಂತಾಗಿ ಗುರುತಿಸಲ್ಪಡುವ ಈ ವಿದ್ಯಮಾನದ ಸ್ವರೂಪ ಮತ್ತು ಪರಿಣಾಮಗಳು ಏನು ಎನ್ನುವುದರ ಬಗ್ಗೆ ಇನ್ನೂ ಅಧ್ಯಯನಗಳು ನಡೆಯುತ್ತಲೇ ಇವೆ. ಅದರ ಸಾಧಕ-ಬಾಧಕಗಳ ಕುರಿತು ವಿವಾದಗಳೂ ಹುಟ್ಟಿಕೊಂಡಿವೆ. ಆಡಳಿತರಂಗದಲ್ಲಿ ಆಗುತ್ತಿರುವ ಈ ಪರಿವರ್ತನೆಯು ಅಧ್ಯಯನಕಾರರಿಗೆ ಮತ್ತು ಈ ಎಲ್ಲಾ ಬೆಳವಣಿಗೆಗಳ ಕುರಿತಾದ ಚರ್ಚೆಗಳಲ್ಲಿ ಆಸಕ್ತಿ ಹೊಂದಿದವರಿಗೆ ಹಲವು ಇಣುಕು ನೋಟಗಳನ್ನು ಇಲ್ಲಿರುವ ಲೇಖನಗಳು ನೀಡಬಲ್ಲವು. ಅಂದರೆ, ಈ ಪುಸ್ತಕ ಕೇವಲ ಶಿಕ್ಷಣಕ್ಷೇತ್ರದ ಆಸಕ್ತರಿಗಷ್ಟೇ ಅಲ್ಲ, ಆಧುನಿಕ ಆಡಳಿತಶಾಸ್ತ್ರ(Public Administration)ದ ವಿದ್ಯಾರ್ಥಿಗಳಿಗೂ ಉಪಯುಕ್ತವಾಗಬಲ್ಲ ಹಲವು ರೀತಿಯ ಮಾಹಿತಿಯನ್ನು ಒಳಗೊಂಡಿದೆ. ಅಷ್ಟೇ ಅಲ್ಲ, ಇಲ್ಲಿನ ಲೇಖನಗಳು ಇಡೀ ವಿದ್ಯಾಭ್ಯಾಸರಂಗದ ನೀತಿಗಳ ಚಾರಿತ್ರಿಕ ವಿಕಸನ ಮತ್ತು ಸಮಕಾಲೀನ ಸ್ಥಿತಿಗತಿಗಳ ಬಗ್ಗೆ ತಿಳುವಳಿಕೆ ಒದಗಿಸುತ್ತವಾದುದರಿಂದ ಈ ಕೃತಿಯು ಆಡಳಿತಶಾಸ್ತ್ರದ ಇತ್ತೀಚೆಗಿನ ಕವಲಾಗಿ ಬೆಳೆಯುತ್ತಿರುವ ಕಾರ್ಯನೀತಿಶಾಸ್ತ್ರ (Policy Science)ದ ಅಧ್ಯಯನದ ದೃಷ್ಟಿಯಿಂದಲೂ ಮಹತ್ವ ಪಡೆಯುತ್ತದೆ.

ಕೊನೆಯದಾಗಿ ಇಲ್ಲಿನ ಬರಹಗಳಲ್ಲಿ ಕಾಣುವುದು ಸಾರ್ವಜನಿಕ ಶಿಕ್ಷಣದ ಸಾಮಾಜಿಕ ಪ್ರಾಮುಖ್ಯದ ಕುರಿತಾಗಿ ಇರುವ ಅನನ್ಯ ಕಳಕಳಿ. ಸರಕಾರಿ ಶಾಲೆಗಳನ್ನು ಸುಃಸ್ಥಿತಿಯಲ್ಲಿಡುವುದು ಇಡೀ ಸಮಾಜದ ಸ್ವಾಸ್ಥ್ಯದ ದೃಷ್ಟಿಯಿಂದ ಹೇಗೆ ಪ್ರಾಮುಖ್ಯವೆನ್ನುವ ಅಂಶವನ್ನು ಮತ್ತೆ ಮತ್ತೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಇಲ್ಲಿರುವ ಲೇಖನಗಳಲ್ಲಿ ಎತ್ತಿತೋರಿಸಲಾಗಿದೆ. ಈ ಕಾಲಕ್ಕೆ ಬಹಳ ಅಗತ್ಯವಾದ ಸತ್ಯ ಇದು. ಶಿಕ್ಷಣರಂಗದ ಎಲ್ಲಾ ಭಾಗೀದಾರರೂ ಬಹಳ ಗಂಭೀರವಾಗಿ ಪರಿಗಣಿಸಲೇಬೇಕಾದ ಸತ್ಯ.

ಶಿಕ್ಷಣಕ್ಷೇತ್ರದಲ್ಲಿ ಮುಂದಿನ ದಿನಗಳಲ್ಲಿ ನಡೆಯುವ ಅಧ್ಯಯನಗಳಿಗೆ, ಸಂಶೋಧನೆಗಳಿಗೆ ಮತ್ತು ಬರವಣಿಗೆಗಳಿಗೆ ಈ ಕೃತಿಯಲ್ಲಿರುವ ಲೇಖನಗಳು ಹಲವು ರೀತಿಯ ವಸ್ತುಗಳನ್ನಷ್ಟೇ ಅಲ್ಲದೆ ಒಳನೋಟಗಳನ್ನೂ ಒದಗಿಸಬಲ್ಲವು. ಈ ನಿಟ್ಟಿನಲ್ಲಿ ಈ ಕೃತಿಯು ಶಿಕ್ಷಣಕ್ಷೇತ್ರದ ಕುರಿತಾಗಿ ಕನ್ನಡದಲ್ಲಿ ಬಹಳ ಆವಶ್ಯಕವಾಗಿರುವ ಬರವಣಿಗೆ ಮತ್ತು ಚರ್ಚೆಗಳ ಒಂದು ಹೊಸ ಪರಂಪರೆಗೆ ನಾಂದಿ ಹಾಡಿದರೆ ಪುಸ್ತಕದ ಉದ್ದೇಶ ಮತ್ತು ಲೇಖಕರ ಶ್ರಮ ಸಾರ್ಥಕತೆ ಕಂಡಂತಾಗುತ್ತದೆ.

● ಎ. ನಾರಾಯಣ

ಅಂಕಣಕಾರರು ಮತ್ತು ಸಹಪ್ರಾಧ್ಯಾಪಕರು, ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ

## ವಿಶ್ಲೇಷಣಾತ್ಮಕ ಮನೋಭಾವ, ಕಥೆಗಾರನ ಶೈಲಿ

**ಟೆ**ಸ್ಟ್ ಕ್ರಿಕೆಟ್ ಅನ್ನು ಸದಾ ನೋಡುವ ನಮ್ಮಂತಹ ಬಹುತೇಕ ಜನರಿಗೆ ಸಾಧಾರಣವಾಗಿ ಎರಡನೆಯ ಇನ್ನಿಂಗ್ಸ್ ಪ್ರದರ್ಶನವು ಹೆಚ್ಚು ಕುತೂಹಲಕಾರಿಯಾಗಿರುತ್ತದೆ. ಕಾರಣ, ಇಡೀ ಪಂದ್ಯದ ಫಲಿತಾಂಶ ಆ ಪ್ರದರ್ಶನವನ್ನು ಆಧರಿಸಿರುತ್ತದೆ. ಎಸ್.ವಿ. ಮಂಜುನಾಥ್ ಅವರು ದೊಡ್ಡ ಖಾಸಗಿ ಸಂಸ್ಥೆಗಳ ಮಾನವ ಸಂಪನ್ಮೂಲ ವಿಭಾಗದಲ್ಲಿ ಮುಂದಾಳತ್ವ ವಹಿಸಿ, ತನ್ನ ಮೊದಲನೆಯ ಇನ್ನಿಂಗ್ಸ್‌ನಲ್ಲಿ ಎಂತಹ ಪ್ರದರ್ಶನ ನೀಡಿದ್ದರು ಎಂಬುದು ನನಗೆ ಗೊತ್ತಿಲ್ಲ. ಆದರೆ ಈ ಪುಸ್ತಕವನ್ನು ರಚಿಸಲು ಒಗ್ಗೂಡಿಸಿದ ಅವರ ಲೇಖನಗಳ ಸರಣಿಯು ಓದುಗನಿಗೆ ಅವರ 'ಎರಡನೆಯ ಇನ್ನಿಂಗ್ಸ್'ನಲ್ಲಿಯ –ಪುಸ್ತಕದ ಪ್ರಸ್ತಾವನೆಯಲ್ಲಿ ಅವರು ತಮ್ಮ ಪ್ರಸಕ್ತ ವೃತ್ತಿಯನ್ನು ಹಾಗೆಂದು ಕರೆದುಕೊಂಡಿದ್ದಾರೆ– ಪ್ರದರ್ಶನದ ಕುರಿತಾಗಿ ಅತ್ಯಂತ ಉತ್ತಮ ಒಳನೋಟವನ್ನು ನೀಡುತ್ತದೆ.

ಈ ಪುಸ್ತಕದ ಅನನ್ಯತೆಯೆಂದರೆ, ಲೇಖಕರು ಪ್ರತಿಯೊಂದು ಸಂಗತಿಯನ್ನೂ ಸಮೃದ್ಧ ವಿವರಗಳೊಂದಿಗೆ ಹಂಚಿಕೊಂಡಿರುವ ರೀತಿ. ಓದುಗನಿಗೆ ಘಟನೆಗಳು ತನ್ನ ಕಣ್ಣೆದುರೇ ಅನಾವರಣಗೊಳ್ಳುತ್ತ ಹೋದಂತೆ ಭಾಸವಾಗುತ್ತದೆ. ಅದು ಮಿಷಿಗನ್ ಸ್ಟೇಟ್ ಯೂನಿವರ್ಸಿಟಿಗೆ ಅವರು ಕೈಗೊಂಡ ಪ್ರವಾಸವಿರಬಹುದು ಅಥವಾ ಅವರು ನೇತೃತ್ವ ವಹಿಸಿದ ಸಾಮರ್ಥ್ಯ ನಿರ್ಮಾಣ ಕಾರ್ಯಾಗಾರಗಳಿರಬಹುದು ಅಥವಾ ಶಾಲೆಗಳೊಳಗಿನದೇ ದೃಷ್ಟಾಂತಗಳಿರಬಹುದು, ಪ್ರತಿಯೊಂದೂ ಓದುಗನ ಮನಸ್ಸಿನಲ್ಲಿ ಸ್ಪಷ್ಟಚಿತ್ರಣವೊಂದನ್ನು ಮೂಡಿಸುವಷ್ಟು ಹಾಗೂ ಓದಿದ ಸಂಗತಿಗಳು ಜೀವತಳೆಯುವಷ್ಟು ಸಶಕ್ತವಾದ ವಿವರಗಳಿಂದ ಕೂಡಿವೆ. ಓದುಗನೊಬ್ಬನಿಗೆ ತಾನು ಓದುತ್ತಿರುವುದರಲ್ಲಿ ಆನಂದ ಹಾಗೂ ಅರ್ಥವನ್ನು ಕಂಡುಕೊಳ್ಳುವುದಕ್ಕೆ ಹೀಗೆ ಪುಸ್ತಕವೊಂದನ್ನು ಓದುತ್ತಿರುವಾಗ ಆಗುವ ಇಂತಹ ಅನುಭವಕ್ಕಿಂತಲೂ ಉತ್ತಮ ಮಾರ್ಗ ಇನ್ನಾವುದೂ ಇಲ್ಲ. ಹೀಗೆ ಇದು ಪುಸ್ತಕವನ್ನು ಓದಿಮುಗಿಸದೇ ಕೆಳಗಿಡಲು ಸಾಧ್ಯವೇ ಇಲ್ಲದಂತೆ ಮಾಡುತ್ತದೆ. ಪುಸ್ತಕವು ಕೆಲವು ವರ್ಷಗಳ ಅವಧಿಯಲ್ಲಿ ಲೇಖಕರು ಬರೆದ ಲೇಖನಗಳಿಂದ ತುಂಬಿದ್ದರೂ ನಿರೂಪಣೆಯ ಶೈಲಿಯು ಅದನ್ನು ಒಂದೇ ದೊಡ್ಡ ಕಥೆಯಂತೆ ಕಾಣುವ ಹಾಗೆ ಮಾಡುತ್ತದೆ. ಹಲವಾರು ದೃಷ್ಟಾಂತಗಳನ್ನು ಪ್ರಧಾನ ಕಥೆಯೊಳಗೆ ಹೆಣೆಯುವ ಸ್ವಾತಂತ್ರ್ಯವನ್ನು ತೆಗೆದುಕೊಂಡು ಸುಂದರವಾಗಿ ಕಥೆ ಹೇಳುವ ಭಾರತೀಯ ಕಥೆಗಾರನೊಬ್ಬನ ಶೈಲಿ ಅವರದು. ವಾಸ್ತವದಲ್ಲಿ, ಇದು ಶಿಕ್ಷಣಕ್ಷೇತ್ರದಲ್ಲಿ ವೃತ್ತಿ ನಿರ್ವಹಿಸುತ್ತಿರುವ ಲೇಖಕರ ಬದುಕಿನ ನೈಜಕಥೆಗಳಿಂದಲೇ ರೂಪಿತವಾಗಿದ್ದು, ವಿಶೇಷವಾಗಿ ಸಾರ್ವಜನಿಕ ಶಿಕ್ಷಣವ್ಯವಸ್ಥೆಯಲ್ಲಿ ಸುಧಾರಣೆ ತರುವ ನಿಟ್ಟಿನಲ್ಲಿ ಅವರು ತೊಡಗಿಕೊಂಡ ಹಲವಾರು ಕಾರ್ಯ, ಯೋಜನೆ, ಸಂಗತಿಗಳ ನೇರವಾದ ನಿರೂಪಣೆಯಾಗಿದೆ.

ಲೇಖಕರು ತಾವು ಭಾಗವಾಗಿದ್ದ ವಿವಿಧ ಕಾರ್ಯಕ್ರಮಗಳನ್ನು ಚಲನಚಿತ್ರವೊಂದರ ಹಾಗೆ ನಿರೂಪಿಸುತ್ತ ಹೋಗುವುದರ ಜೊತೆಗೆ ವಿಶ್ಲೇಷಣಾತ್ಮಕ ಮನೋಭಾವವನ್ನು ಕೂಡ ಹೊಂದಿದ್ದು ತಮ್ಮ ಹಲವಾರು ಲೇಖನಗಳಲ್ಲಿ ನೀತಿನಿರೂಪಣೆಗೆ ಸಂಬಂಧಿಸಿದ ಸಂಗತಿಗಳ ಬಗ್ಗೆ ಸಮೃದ್ಧ ನೋಟಗಳನ್ನೂ ಒದಗಿಸುತ್ತಾರೆ. ವಿವಿಧ ರೀತಿಯ ಲೇಖನಗಳ ಈ ಸಂಯೋಜನೆಯು ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಮೇಲೆಯೇ ಸಂಪೂರ್ಣ ಗಮನವನ್ನು ಕೇಂದ್ರೀಕರಿಸಿದೆ ಮತ್ತು ಈ ವ್ಯವಸ್ಥೆಯ ಸಂಕೀರ್ಣತೆಗಳು, ಅದರ ಮುಖ್ಯ ಭಾಗೀದಾರರು ಹಾಗೂ ಅವರ ಭಾವನೆಗಳು, ನಿರ್ಣಯ ತೆಗೆದುಕೊಳ್ಳುವ ಕ್ರಿಯೆಯಲ್ಲಿನ ಸೂಕ್ಷ್ಮತೆ, ನೀತಿ-ನಿರೂಪಣೆಯಲ್ಲಿನ ಸಂವೇದನಾಶೀಲತೆ, ಅದರ ಮೂಲತತ್ತ್ವಗಳು ಹಾಗೂ ಪ್ರತಿಯೊಂದು ಲೇಖನದಲ್ಲಿಯೂ ತಾನು ಎತ್ತುವ ವಿಷಯಗಳ ಕುರಿತಾಗಿ ಲೇಖಕರು ಸ್ಪಷ್ಟವಾಗಿ ವ್ಯಕ್ತಪಡಿಸಿರುವ ನಿಲುವುಗಳ ಮೂಲಕ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಅರಿಯಲು ಉತ್ಸುಕರಾಗಿರುವ ಯಾರಿಗೇ ಆಗಲಿ ಈ ಪುಸ್ತಕವು ಒಂದು ನಿಧಿಯ ಭಂಡಾರವಾಗುವಂತೆ ಮಾಡಿದೆ.

ಈ ಪುಸ್ತಕವನ್ನು ಕೇವಲ ಕರ್ನಾಟಕದೊಳಗಿನವರಲ್ಲ, ಭಾರತದ ಯಾವುದೇ ಭಾಗದ, ಸಾರ್ವಜನಿಕ ಶಾಲಾಶಿಕ್ಷಣದ ಬಗ್ಗೆ ತಿಳಿದುಕೊಳ್ಳಲು ಆಸಕ್ತಿಯಿರುವ ಯಾರೇ ಆದರೂ ಕೈಗೆತ್ತಿಕೊಳ್ಳಬಹುದು. ಯಾವ ಯೋಜನೆ ಅಥವಾ ಕಾರ್ಯತಂತ್ರವು ಫಲಪ್ರದವಾಗಿದೆ, ಯಾವುದು ಕೆಲಸ ಮಾಡಿಲ್ಲ, ಶಿಕ್ಷಕರಂತಹ ಮುಖ್ಯ ಭಾಗೀದಾರರು ಯಾವ ತರಹದ ಮಧ್ಯಪ್ರವೇಶಗಳಿಂದ ಲಾಭ ಪಡೆದುಕೊಂಡಿದ್ದಾರೆ, ಯಾವುದು ಅವರಿಗೆ ಉಪಯುಕ್ತವಾಗಿಲ್ಲ, ಶಿಕ್ಷಣಕ್ಕೆ ಸಂಬಂಧಿಸಿದಂತೆ ನಗರಪ್ರದೇಶದಲ್ಲಿನ ವಲಸೆ ಕಾರ್ಮಿಕರ ಮಕ್ಕಳು ಎದುರಿಸುವ ಸಮಸ್ಯೆಗಳು, ಶಿಕ್ಷಕರ ಸಂಘಗಳ ಪಾತ್ರ, ಶಿಕ್ಷಕರ ಗೈರುಹಾಜರಿಯ ಹಿಂದಿರುವ ಸತ್ಯ, ತೆರೆದ ಪುಸ್ತಕ ಪರೀಕ್ಷಾ ವಿಧಾನದ ಸಾಧಕ-ಬಾಧಕಗಳು, ಕೇರಳದ ಮಾದರಿ ಮುಂತಾದವುಗಳ ಬಗ್ಗೆ ಒಳನೋಟಗಳನ್ನು ನೀಡುತ್ತದೆ. ಇದರ ಜೊತೆಗೆ ಕಳೆದೆರಡು ದಶಕಗಳ ಅವಧಿಯಲ್ಲಿ ಭಾರತೀಯ ಶಿಕ್ಷಣವು ನಡೆದುಬಂದ ರೀತಿ, ಭರವಸೆಯ ಬೆಳಕಾಗಿ ಹೊಸ ಶಿಕ್ಷಣನೀತಿ ಮತ್ತು ಇಂಗ್ಲೀಷೇತರ ಭಾಷೆಗಳಲ್ಲಿ ಉನ್ನತ ಶಿಕ್ಷಣದ ವಿಷಯಗಳನ್ನು ಬೋಧಿಸುವುದಕ್ಕೆ ಸಂಬಂಧಿಸಿದ ಸಂಗತಿಗಳನ್ನು ಚರ್ಚಿಸಲಾಗಿದೆ.

ಶಿಕ್ಷಣದಲ್ಲಿ ನಿಜಕೂ ಆಸಕ್ತಿಯಿರುವ ಯಾವುದೇ ವ್ಯಕ್ತಿಯು ಈ ಕೃತಿಯಲ್ಲಿ ಆಸಕ್ತಿಯಿಲ್ಲ ಎಂದು ಹೇಳಬಲ್ಲರೇ? ನನಗೆ ಅನುಮಾನವಿದೆ. ವಾಸ್ತವದಲ್ಲಿ ಇದು ಯಾರದೇ ಓದಿನ ಪಟ್ಟಿಗೆ ಸೇರಬಹುದಾದ ಒಂದು ಅಮೂಲ್ಯ ಕೃತಿ.

● **ಬಿ.ಎಸ್. ರಿಷಿಕೇಶ್**
ಶಿಕ್ಷಣ ತಜ್ಞರು ಮತ್ತು ಸಹಪ್ರಾಧ್ಯಾಪಕರು,
ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ



# ಚಿಂತನೆಗೆಡೆಮಾಡುವ ಸಣ್ಣ ನಿಲ್ದಾಣಗಳು

**ಎ**ಸ್.ವಿ.ಮಂಜುನಾಥ್ ಅವರು ಬರೆದಿರುವ ಈ ಲೇಖನಗಳು ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಆಯಾಮಗಳನ್ನು ಚರ್ಚಿಸಿದರೂ ಸಮಗ್ರವಾಗಿ ಶಿಕ್ಷಣ ಕ್ಷೇತ್ರದ ಸವಾಲುಗಳಿಗೆ ಒಂದಷ್ಟು ಪರಿಹಾರಗಳನ್ನು ಕಟ್ಟಿಕೊಡುತ್ತವೆ. ಅಂತಹ ಕೆಲವು ಮುಖ್ಯ ಅಂಶಗಳನ್ನು ಈ ಕೃತಿಯಲ್ಲಿ ಗುರುತಿಸಬಹುದು.

ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ಸವಾಲುಗಳಿಗೆ ಪರಿಹಾರಗಳು ಶಾಲೆಯಲ್ಲಿ ಹುಡುಕಿದರೆ ಅಲ್ಲಿಯೇ ಸಿಗುತ್ತವೆ. ಶಿಕ್ಷಣ ಕ್ಷೇತ್ರದಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದು ಒಂದು ಆದರ್ಶವಾದರೂ ಪರಿಪೂರ್ಣತೆಯ ಬೆನ್ನಟ್ಟಿದರೆ ಒಂದಷ್ಟು ಉತ್ತಮವಾದುದನ್ನು ಸಾಧಿಸಬಹುದಾಗಿದೆ ಎಂಬುದು ಲೇಖಕರ ಒಳದನಿಯಾಗಿದೆ. ಈ ಹಿನ್ನೆಲೆಯಲ್ಲಿ ಈ ಕೃತಿಯು ಶಿಕ್ಷಕರ ಶಿಕ್ಷಣದ ಮಹತ್ವವನ್ನು, ಅದು ಬದಲಾಗಬೇಕಾದ ಆಯಾಮಗಳನ್ನು ಚರ್ಚಿಸುತ್ತಾ ವಿವಿಧ ದೇಶಗಳ ಶಿಕ್ಷಕರ ಶಿಕ್ಷಣದ ಆಚರಣೆಗಳು, ಅಂಕಿ–ಅಂಶಗಳು, ಸನ್ನಿವೇಶಗಳ ಮೂಲಕ ವಾಸ್ತವ ಸ್ಥಿತಿಗತಿಗಳ ಪರಿಚಯ ಮಾಡಿಕೊಟ್ಟಿರುವುದು ಔಚಿತ್ಯಪೂರ್ಣವಾಗಿದೆ.

ಜೊತೆಗೆ ಭಾರತದಲ್ಲಿ ಶೈಕ್ಷಣಿಕ ಸುಧಾರಣೆಯ ಬಗೆಗೆ ವಿಮರ್ಶಾತ್ಮಕವಾಗಿ ಆತ್ಮಾವಲೋಕನ ಮಾಡಿಕೊಳ್ಳಲು ಓದುಗರನ್ನು ಈ ಕೃತಿಯು ಪ್ರೇರೇಪಿಸುತ್ತದೆ. ನಮ್ಮ ಶೈಕ್ಷಣಿಕ ಸಂದರ್ಭದಲ್ಲಿ, ಶಿಕ್ಷಕರು ಸ್ಥಾಪಿತ ಹಿತಾಸಕ್ತಿಗಳ ಚೌಕಟ್ಟಿನಲ್ಲೇ ಆಲೋಚಿಸುವಂತೆ ಮತ್ತು ಕೆಲಸ ಮಾಡುವಂತೆ ಅವರ ಮೇಲೆ ಒತ್ತಡಗಳಿವೆ. ಇದರಿಂದ ಶೈಕ್ಷಣಿಕ ನೀತಿ ನಿರೂಪಣಾ ಆಶಯಗಳ ಹಿನ್ನೆಲೆಯಲ್ಲಿ ಆಲೋಚಿಸಲು, ಕೆಲಸ ಮಾಡಲು ಶಿಕ್ಷಕರಿಗೆ ಸಾಧ್ಯವಾಗುತ್ತಿಲ್ಲ. ಆದರೆ ವಿಪರ್ಯಾಸವೆಂದರೆ, ಒಂದು ಕಡೆ ಶಿಕ್ಷಕರು ಆದರ್ಶ ವ್ಯಕ್ತಿಯಾಗಿರಬೇಕು, ಆದರ್ಶಗಳನ್ನೇ ಕಲಿಸಬೇಕೆಂಬ ಅಪೇಕ್ಷೆಯಿದ್ದು ಮತ್ತೊಂದು ಕಡೆ ಮಕ್ಕಳನ್ನು ಹೇಗಾದರೂ ಪರೀಕ್ಷೆಗೆ ಸಿದ್ಧಪಡಿಸುವ ಒತ್ತಡ ಶಿಕ್ಷಕರ ಮೇಲಿದೆ. ಇಲ್ಲಿನ ಬರಹಗಳು ಇಂತಹ ಅನೇಕ ವಿಪರ್ಯಾಸ ಮತ್ತು ಒತ್ತಡಗಳನ್ನು ಸೂಕ್ಷ್ಮವಾಗಿ ಗುರುತಿಸುತ್ತವೆ.

ಮಕ್ಕಳಿಗೆ ಕಲಿಸುವಾಗ, ಪೋಷಕರು, ಎಸ್‌ಡಿಎಂಸಿ ಸದಸ್ಯರು 'ದಂಡಂ ದಶಗುಣಂ ಭವೇತ್' ('ದಂಡನೆಯಿಂದ ಹತ್ತು ಗುಣಗಳು ಬರುತ್ತವೆ'), ಮಗುವಿಗೆ ಶಿಕ್ಷೆ ಕೊಡುವುದು ಸರಿ, ಅದು ಶಿಕ್ಷಕರಿಗೆ ಅನಿವಾರ್ಯವೆಂದು ಮುಕ್ತವಾಗಿ ಹೇಳುತ್ತಾರೆ. ಆದರೆ ಈ ನಂಬಿಕೆಯನ್ನು ವಾಸ್ತವ ಚಿತ್ರಣಗಳ ಆಧಾರದಲ್ಲಿ ಈ ಕೃತಿಯು ಪ್ರಶ್ನಿಸುತ್ತದೆ ಮಾತ್ರವಲ್ಲ, ಶಿಕ್ಷೆ ಕೊಡುವ ಶಿಕ್ಷಕರನ್ನು ಯಶಸ್ವಿ ಶಿಕ್ಷಕರೆಂದು ಗುರುತಿಸುವ ಪೋಷಕರ ಮತ್ತು ಶಿಕ್ಷಕರ ದೃಷ್ಟಿಕೋನವನ್ನು ನಿಕಷಕ್ಕೊಡ್ಡುತ್ತದೆ.

ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ಪದೇ ಪದೇ ವರ್ಗಾವಣೆ ಮಾಡುವುದರಿಂದ ಅವರಿಗೆ ಇಲಾಖೆಯನ್ನು ಆಮೂಲಾಗ್ರವಾಗಿ ಅರ್ಥಮಾಡಿಕೊಳ್ಳಲಾಗುವುದಿಲ್ಲವೆಂದು

ಗುರುತಿಸಿರುವುದಲ್ಲದೆ, ಹಾಡು ಹೊಗಳಿಕೆಗಳಿಲ್ಲದ ನಮ್ಮ ಶಿಕ್ಷಣ ವ್ಯವಸ್ಥೆಯ ಅಜ್ಞಾತ ಕಾಲಾಳುಗಳು ಎಂಬ ಶೀರ್ಷಿಕೆಯ ಲೇಖನವು ತಳಮಟ್ಟದಲ್ಲಿ ಶಿಕ್ಷಣ ವ್ಯವಸ್ಥೆಯ ಶೈಕ್ಷಣಿಕ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನ ಮಾಡುವ ಅಧಿಕಾರಿಗಳು ಎದುರಿಸುತ್ತಿರುವ ದ್ವಂದ್ವಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಅಲ್ಲದೆ, ಸಿಆರ್‌ಪಿ, ಬಿಆರ್‌ಪಿಗಳಂತಹ ಹುದ್ದೆಗಳನ್ನು ಶಾಲೆಗಳಿಗೆ ಶೈಕ್ಷಣಿಕ ಬೆಂಬಲ ನೀಡುವ ಉದ್ದೇಶದಿಂದ ಸೃಷ್ಟಿಸಿದ್ದರೂ ಇಂದು ಆ ಉದ್ದೇಶಕ್ಕೆ ಅನುಗುಣವಾಗಿ ನಡೆಯದಿದ್ದರೆ ಆ ಉದ್ದೇಶವೇ ಈಡೇರದಿರುವ ಪರಿಯನ್ನು ವಿವರವಾಗಿ ಚರ್ಚಿಸುತ್ತದೆ.

ಶಿಕ್ಷಕ ಬೋಧನೆಗೆ ಆದ್ಯತೆ ಕೊಡದೆ ಇದ್ದರೆ, ಅಧಿಕಾರಿಗಳು ಶಿಕ್ಷಕರಿಗೆ ತರಗತಿ ನಿರ್ವಹಣೆಯ ಅವರ ಪಾತ್ರಕ್ಕೆ ಬಂಬಲ ನೀಡದಿದ್ದರೆ ಶಿಕ್ಷಣದ ಧ್ಯೇಯೋದ್ದೇಶಗಳನ್ನು ಈಡೇರಿಸಲು ಸಾಧ್ಯವಾಗುವುದಿಲ್ಲ. ಇದಕ್ಕೆ ಸೂಕ್ತ ಜನರ ಆಯ್ಕೆ ಹಾಗೂ ಕಾರ್ಯ ನಿರ್ವಹಿಸಲು ಅಗತ್ಯ ಸ್ವಾತಂತ್ರ್ಯ ನೀಡುವುದು ಅಪೇಕ್ಷಣೀಯ ಎನ್ನುವುದನ್ನು ಇಲ್ಲಿನ ಲೇಖನಗಳು ಒತ್ತಿ ಹೇಳುತ್ತವೆ.

ಶೈಕ್ಷಣಿಕ ವ್ಯವಸ್ಥೆಯ ವಾಸ್ತವವನ್ನು ಅರ್ಥಮಾಡಿಸಲು ಲೇಖಕರು ನಿಖರವಾದ ಅಂಕಿ–ಅಂಶಗಳ ಸಹಿತ ವಿವರಿಸಿರುವುದು ಪರಿಸ್ಥಿತಿಯನ್ನು ವಸ್ತುನಿಷ್ಠವಾಗಿ ಅರ್ಥ ಮಾಡಿಕೊಳ್ಳಲು ಸಹಾಯಕವಾಗಿವೆ. ತಲಸ್ತರದಲ್ಲಿ ನಡೆಸಿದ ಅಧ್ಯಯನದಿಂದ ದೊರಕಿದ ಅಂಕಿ–ಅಂಶಗಳು, ಮಾಹಿತಿಗಳ ಮೂಲಕ ವ್ಯವಸ್ಥೆಯ ಚಿತ್ರಣವನ್ನು ಅನಾವರಣಗೊಳಿಸಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಲೇಖಕರು ತಮ್ಮ ಶಾಲಾ ದಿನಗಳ ಅನುಭವಗಳನ್ನು ನಲವತ್ತು ವರ್ಷಗಳ ನಂತರ ಮೆಲುಕುಹಾಕುತ್ತಾ ಇಂದಿನ ಶಿಕ್ಷಣ ವ್ಯವಸ್ಥೆಯೊಂದಿಗೆ ಅಂದಿನ ಶಾಲಾ ದಿನಗಳನ್ನು ಹೋಲಿಸಿ ನೋಡಿ, ಮಾನವ ಸಂಬಂಧಗಳನ್ನು, ಬಹುಮುಖ್ಯವಾಗಿ ಕಾಪಿಟ್ಟುಕೊಳ್ಳಬೇಕಾದ ನಮ್ಮ ನಡವಳಿಕೆಗಳ ಬಗ್ಗೆ ಬೆಳಕು ಚೆಲ್ಲಿರುವುದು ಕುತೂಹಲಕಾರಿಯಾಗಿದೆ.

ಅಲ್ಲದೆ, ಯಾರು ಶಿಕ್ಷಕರಾಗಬೇಕು? ಶಿಕ್ಷಕ ವೃತ್ತಿಯ ಆಶಯಗಳೇನು? ಶಿಕ್ಷಕ ವೃತ್ತಿಯ ಅಭಿವೃದ್ಧಿಯನ್ನು ಮಾಡಲು ಕೈಗೊಳ್ಳುವ ಕ್ರಮಗಳು, ಶಿಕ್ಷಕನ ಶೈಕ್ಷಣಿಕ ದೃಷ್ಟಿಕೋನಗಳು ಹೇಗಿರಬೇಕು ಎನ್ನುವ ಪ್ರಶ್ನೆಗಳನ್ನು ಶಿಕ್ಷಕರಲ್ಲಿ ಹುಟ್ಟುಹಾಕಿ, ಆ ಮೂಲಕ ಶಿಕ್ಷಕರ ಪರ್ಯಾಲೋಚನೆ ಮತ್ತು ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿದ್ದ 'ಗುರುಚೇತನ ಕಾರ್ಯಕ್ರಮ'ದಡಿಯಲ್ಲಿ ಶಿಕ್ಷಕರ ವೃತ್ತಿಪರ ಬೆಳವಣಿಗೆಗೆ ಸಂಬಂಧಿಸಿದಂತೆ ನಡೆದ ಪ್ರಕ್ರಿಯೆಗಳನ್ನು ತಮ್ಮ ಅನುಭವದ ಮೂಲಕ ಕಟ್ಟಿಕೊಟ್ಟಿರುವುದು ಅತ್ಯಂತ ಉಪಯುಕ್ತವಾಗಿದೆ. ಇದು ಶಿಕ್ಷಕರ ಸಾಮರ್ಥ್ಯ ಅಭಿವೃದ್ಧಿಯ ನಿಟ್ಟಿನಲ್ಲಿ ಸರ್ಕಾರದ ಪ್ರಯತ್ನವನ್ನು ತಿಳಿಸುತ್ತದೆ. ಅಲ್ಲದೆ ನಿಜವಾಗಿ ಇಂತಹ ಕಾರ್ಯಕ್ರಮಗಳ ನಿರಂತರತೆಯನ್ನು ಕಾಯ್ದುಕೊಳ್ಳುವುದು ಶಿಕ್ಷಕರ ಸಾಮರ್ಥ್ಯವೃದ್ಧಿಯ ನಲೆಯಿಂದ ತೀರಾ ಅಗತ್ಯವಾಗಿದೆ ಎನ್ನುವುದನ್ನು ನೆನಪಿಸುತ್ತದೆ.

ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಉಳಿಸಿಕೊಂಡು ಅದನ್ನು ಸಬಲೀಕರಣಗೊಳಿಸುವುದರಿಂದ ಮಾತ್ರ ಮಕ್ಕಳಿಗೆ ಅವರ ಶಿಕ್ಷಣ ಹಕ್ಕುಗಳನ್ನು ನೀಡಲು ಸಾಧ್ಯವಾಗುತ್ತದೆ. ತಾರತಮ್ಯವಿಲ್ಲದೆ ಎಲ್ಲರಿಗೂ ಶಿಕ್ಷಣ ನೀಡುವ ಮೂಲಕ ಉತ್ತಮ ಸಮಾಜ ನಿರ್ಮಾಣಕ್ಕೆ ಸಹಕಾರಿಯಾಗುತ್ತದೆ ಎನ್ನುವ ಗಟ್ಟಿ ನಿಲುವನ್ನು ಹೊಂದಿರುವ

ಲೇಖಕರು, ಇದನ್ನು ಸಾಧಿಸಲು ಸಾರ್ವಜನಿಕ ಶಿಕ್ಷಣದ ನಿರ್ಲಕ್ಷ್ಯ ಸಲ್ಲದು ಎನ್ನುವುದನ್ನು ಸ್ಪಷ್ಟವಾಗಿಯೇ ವಾದಿಸುತ್ತಾರೆ.

ನಾವು ಶಿಕ್ಷಣ ಕ್ಷೇತ್ರದಲ್ಲಿರುವ ವಾಸ್ತವ ಮತ್ತು ವಿಪರ್ಯಾಸಗಳನ್ನು ಒಪ್ಪಿಕೊಳ್ಳದಿದ್ದರೆ ಸಹಜತೆಯಿಂದ ದೂರ ಸರಿದು ಸಂವೇದನೆಯನ್ನು ಕಳೆದುಕೊಳ್ಳುತ್ತೇವೆ. ಶಿಕ್ಷಕರು ತಮ್ಮ ನಂಬಿಕೆಗಳನ್ನು ಮುಕ್ತ ಮನಸ್ಸಿನಿಂದ ಆಗಾಗ ಪರಿಷ್ಕರಿಸಿಕೊಳ್ಳಬೇಕಾಗುತ್ತದೆ. ಇಲ್ಲಿರುವ ಒಂದೊಂದು ಲೇಖನವೂ ಕುಳಿತು ಚಿಂತನೆಗೆಡೆಮಾಡುವ ಸಣ್ಣ ನಿಲ್ದಾಣದಂತೆ ಇದೆ. ಪ್ರತಿಯೊಂದು ನಿಲ್ದಾಣವೂ ತನ್ನದೇ ಆದ ದಾರಿಯಲ್ಲಿ ಶಿಕ್ಷಣ ಕ್ಷೇತ್ರದ ಬೇರೆ ಬೇರೆ ಆಯಾಮಗಳ ಬಗ್ಗೆ ಚಿಂತನೆಗೆ ಹಚ್ಚುತ್ತದೆ. ಹಾಗಾಗಿ ಸಮಗ್ರವಾಗಿ ಶಿಕ್ಷಣ ಕ್ಷೇತ್ರದ ವಾಸ್ತವಗಳು ಮತ್ತು ವಿಪರ್ಯಾಸಗಳ ಮೇಲೆ ಬೆಳಕು ಚೆಲ್ಲಿ ಅವುಗಳನ್ನು ಅರ್ಥ ಮಾಡಿಕೊಳ್ಳಲು ಮತ್ತು ಇರುವ ಇತಿಮಿತಿಗಳಲ್ಲಿ ಪರಿಹಾರಗಳನ್ನು ಕಂಡುಕೊಳ್ಳಲು ಪ್ರೇರೇಪಿಸುತ್ತವೆ.

● **ಎಸ್. ಶಿವಕುಮಾರ್**

ಸಹ ಶಿಕ್ಷಕರು, ಕೊರಟಗೆರೆ, ಪ್ರೌಢಶಾಲಾ ವಿಭಾಗ,

ಸರ್ಕಾರಿ ಪದವಿಪೂರ್ವ ಕಾಲೇಜು ಮತ್ತು ಸಂಪನ್ಮೂಲ ವ್ಯಕ್ತಿ





**23ನೇ ಜೂನ್ 2016–** ಮಂಡ್ಯ ಜಿಲ್ಲೆಯ ಭೇಟಿಯ ಸಂದರ್ಭದಲ್ಲಿ ನಮ್ಮ ಜಿಲ್ಲಾ ಸಂಸ್ಥೆಯ ಸಂಪನ್ಮೂಲ ತಂಡದ ಸದಸ್ಯರೊಂದಿಗೆ ಫೌಂಡೇಷನ್‌ನ ಸಿಇಓ ದಿಲೀಪ್ ರಂಜೇಕರ್ ಇದ್ದ ಕ್ಷಣ. ಸಂಸ್ಥೆಯ ನಾಯಕತ್ವ ಸ್ಥಾನದಲ್ಲಿರುವವರು ಕಾರ್ಯಕ್ಷೇತ್ರಕ್ಕೆ ಹೀಗೆ ಆಗಾಗ್ಗೆ ಭೇಟಿ ನೀಡುವುದು ಉಪಯುಕ್ತ ಒಳನೋಟಗಳನ್ನೊದಗಿಸುತ್ತದೆ. ಅಲ್ಲದೆ, ತಂಡದ ಸದಸ್ಯರಿಗೆ ಮುಂದಿನ ನಡೆಗಳ ಬಗ್ಗೆ ಸ್ಪಷ್ಟಚಿತ್ರಣ ಸಿಗುತ್ತದೆ.



**1ನೇ ಮಾರ್ಚ್ 2010–** ಜೈಪುರದಲ್ಲಿ ನಡೆದ ಫೌಂಡೇಷನ್‌ನ ರಾಜ್ಯ ಮತ್ತು ಜಿಲ್ಲಾ ಸಂಸ್ಥೆಗಳ ಮುಖ್ಯಸ್ಥರ ಸಮಾವೇಶದಲ್ಲಿ ಆಗಿನ ಕ್ಷೇತ್ರ ಸಂಸ್ಥೆಗಳ ಮುಖ್ಯಸ್ಥರಾಗಿದ್ದ ಆನಂದ್ ಸ್ವಾಮಿನಾಥನ್ ಜೊತೆಯಲ್ಲಿ. ಈ ರೀತಿಯ ವೇದಿಕೆಗಳು ವಿವಿಧೆಡೆಗಳಲ್ಲಿ ಜಾರಿಯಾದ ಉತ್ತಮ ಕ್ರಮಗಳ ಹಿನ್ನೆಲೆಯಲ್ಲಿ ನಮ್ಮ ಕಾರ್ಯಯೋಜನೆಗಳನ್ನು ಗಟ್ಟಿಗೊಳಿಸಿ, ಮರುರೂಪಿಸಿಕೊಳ್ಳಲು ನೆರವಾಗಿವೆ.

ಈ ಪುಸ್ತಕ ಉತ್ತಮವಾಗಿ ಓದಿಸಿಕೊಂಡು ಹೋಗುತ್ತದೆ. ಅಲ್ಲದೆ, ಭರವಸೆಯ ಭಾವವನ್ನು ಗಟ್ಟಿಗೊಳಿಸುತ್ತದೆ. ಸರ್ಕಾರ ಮಾಡುತ್ತಿರುವಂತಹ ಹಲವಾರು ಕೆಲಸಗಳನ್ನು ಅತ್ಯಂತ ಪ್ರೀತಿಯಿಂದ ಗಮನಿಸುತ್ತ, ಸರ್ಕಾರದ ವ್ಯವಸ್ಥೆಯಲ್ಲಿರುವ ಒಳ್ಳೆಯ ಮತ್ತು ಕೆಟ್ಟ ಅಂಶಗಳನ್ನು ಮಂಜುನಾಥ್ ಅವರು ವಿಮರ್ಶಾತ್ಮಕವಾಗಿ ನೋಡಿದ್ದಾರೆ. ನಾಡಿನ ಹಿರಿಯ ಸಾಹಿತಿಗಳು ಮತ್ತು ಸಾಂಸ್ಕೃತಿಕ ನಾಯಕರ ದೃಷ್ಟಿಕೋನದಲ್ಲಿ ನಮ್ಮ ಶಿಕ್ಷಣ ಹೇಗಿರಬೇಕು ಎಂಬುದನ್ನು ಪರಿಶೀಲಿಸಿರುವುದು ಪ್ರಸ್ತುತವಾಗಿದೆ.

– ಜಿ. ಕುಮಾರ್ ನಾಯಕ್

ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಸಬಲೀಕರಣ ಮತ್ತು ಒಟ್ಟು ಶಿಕ್ಷಣ ವ್ಯವಸ್ಥೆಯನ್ನು ಬಲಗೊಳಿಸಲು ಶಾಲಾ ಶಿಕ್ಷಣ ವ್ಯವಸ್ಥೆಯ ಸಾರಥಿಗಳಿಗೆ ಮಂಜುನಾಥ್ ಅವರು ಕೆಲವು ಉತ್ತಮ ಸಲಹೆಗಳನ್ನು ನೀಡುತ್ತಾರೆ... ಬರಹಗಳು ನಮ್ಮನ್ನು ಕ್ರಿಯೆಗೆ ಇಳಿಸುವ ದಿಕ್ಕಿನಲ್ಲಿರುವ ಲೇಖನಗಳಾಗಿವೆ ಮತ್ತು ಇವುಗಳಲ್ಲಿ ಒಟ್ಟು ಸಮಾಜದ ಒಳಿತಿಗೆ ನಾವೇನು ಮಾಡಬಹುದು ಎನ್ನುವ ಸೂಚನೆ ಇದೆ.

– ಉಮಾಶಂಕರ್ ಪೆರಿಯೋಡಿ

ಸರಕಾರದ ಜೊತೆ ಕೆಲಸ ಮಾಡುತ್ತಲೇ, ಅದರಿಂದ ಹೊರಗುಳಿದುಕೊಂಡು ವ್ಯವಸ್ಥೆಯನ್ನು ನೋಡಿಬರೆದ ಸಂಕಥನಗಳು, ಶಿಕ್ಷಣರಂಗ ಅಂತ ಅಲ್ಲ, ಯಾವುದೇ ರಂಗದ ಕುರಿತಾಗಿ ಕನ್ನಡದಲ್ಲಿ ಇಲ್ಲಿಯತನಕ ಸೃಷ್ಟಿಯಾಗಿದ್ದು ತೀರಾ ಕಡಿಮೆ. ಈ ಕಾರಣಕ್ಕೂ ಈ ಕೃತಿ ತನ್ನದೇ ಆದ ಮಹತ್ವ ಪಡೆದುಕೊಳ್ಳುತ್ತದೆ.

– ಎ. ನಾರಾಯಣ

ಪ್ರತಿಯೊಂದು ಲೇಖನವೂ ತಾನು ಎತ್ತುವ ವಿಷಯಗಳ ಕುರಿತಾಗಿ ಲೇಖಕರು ಸ್ಪಷ್ಟವಾಗಿ ವ್ಯಕ್ತಪಡಿಸಿರುವ ನಿಲುವುಗಳ ಮೂಲಕ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಅರಿಯಲು ಉತ್ಸುಕರಾಗಿರುವ ಯಾರಿಗೇ ಆಗಲಿ ಈ ಪುಸ್ತಕ ಒಂದು ನಿಧಿಯ ಭಂಡಾರವಾಗುವಂತೆ ಮಾಡಿದೆ.

– ಬಿ.ಎಸ್. ರಿಷಿಕೇಶ್

ಶಿಕ್ಷಕರು ತಮ್ಮ ನಂಬಿಕೆಗಳನ್ನು ಮುಕ್ತ ಮನಸ್ಸಿನಿಂದ ಆಗಾಗ ಪರಿಷ್ಕರಿಸಿಕೊಳ್ಳಬೇಕಾಗುತ್ತದೆ. ಇಲ್ಲಿರುವ ಒಂದೊಂದು ಲೇಖನವೂ ಕುಳಿತು ಚಿಂತನೆಗೆಡೆ ಮಾಡುವ ಸಣ್ಣ ನಿಲ್ದಾಣದಂತೆ ಇದೆ.

– ಎಸ್. ಶಿವಕುಮಾರ್

## ಸುಭಗ ಕನ್ನಡದ ಸಮಾಜಮುಖಿ ಕೃತಿ

ಎಸ್.ವಿ. ಮಂಜುನಾಥ್ ಶಿಕ್ಷಣರಂಗದ ಬಗ್ಗೆ ಗಂಭೀರ ಕಾಳಜಿಯಿಂದ ಕೆಲಸ ಮಾಡುತ್ತಿರುವ ಅಪರೂಪದ ವ್ಯಕ್ತಿ. 'ಕಲಿವ ಶಾಲೆಯ ಹಲವು ಮುಖಗಳು'- ಸ್ವಾನುಭವ, ಸಂಶೋಧನೆ, ನಿಸ್ವಾರ್ಥ ಆಸಕ್ತಿಯಿಂದ ಅವರು ರಚಿಸಿರುವ ಮಹತ್ವದ ಕೃತಿ. ಶಿಕ್ಷಣ ಕ್ಷೇತ್ರದ ನಾನಾ ಮುಖಗಳನ್ನು, ಸರ್ಕಾರಿ ಶಾಲೆಗಳ ಪುರೋಭಿವೃದ್ಧಿಯನ್ನು, ಅವಕಾಶವಂಚಿತ ಮಕ್ಕಳ ಹಿತಾಸಕ್ತಿಯ ನೆಲೆಯಲ್ಲಿ ಚಿಂತಿಸುವ, ಸುಭಗ ಕನ್ನಡದಲ್ಲಿ ರಚಿತವಾದ ಇಂಥ ಪುಸ್ತಕವನ್ನು ಈಚಿನ ದಿನಗಳಲ್ಲಿ ನಾನು ಕಂಡಿರಲಿಲ್ಲ.

ನಮ್ಮ ಸರ್ಕಾರಿ ಆರಂಭಿಕ ಕಲಿಕಾ ಕೇಂದ್ರಗಳಿಗೆ ಕೇರಳ ಮಾದರಿಯ ಪರ್ಯಾಯದ ಸೂಚನೆ ಸೂಕ್ತವೆನಿಸಿತು. ತಮ್ಮ ಅನುಭವಗಳನ್ನು ಹಾಗೂ ಅರಿವನ್ನು ಹೀಗೆ ಕನ್ನಡದಲ್ಲಿ ಸೃಷ್ಟಿಸುವ ಕೃತಿಗಳು ಇವತ್ತಿನ ತುರ್ತು ಅಗತ್ಯಗಳಾಗಿವೆ. ಮಂಜುನಾಥ್‌ರ ಕನ್ನಡ ಕೂಡ ಅದರ ಗಾಂಭೀರ್ಯ, ಶುದ್ಧತೆ, ಅಧಿಕೃತತೆಯಿಂದ ನನಗೆ ತುಂಬಾ ಪ್ರಿಯವಾಗಿದೆ. ಲೇಖಕರ ಸಮಾಜಮುಖಿಗುಣ, ಶಿಕ್ಷಣ ಬಗೆಗಿನ ಅನನ್ಯವಾದ ಕಾಳಜಿಯನ್ನು ನಾನು ವಿಶೇಷವಾಗಿ ಪ್ರಸ್ತಾಪಿಸುತ್ತೇನೆ. ಶ್ರೀಯುತರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಎಚ್.ಎಸ್. ವೆಂಕಟೇಶಮೂರ್ತಿ, ಪ್ರಸಿದ್ಧ ಕವಿಗಳು



## ಕಲಿಯುತ್ತಾ ಕಲಿಸುವ ಕ್ರಿಯೆ

ಶಿಕ್ಷಣ ಸಂಸ್ಕೃತಿಯನ್ನು ಸೂಕ್ತವಾಗಿ ಗ್ರಹಿಸಿ, ಸಕ್ರಿಯವಾಗಿ ಆ ವಲಯದಲ್ಲಿ ಭಾಗವಹಿಸುವುದು ಹೇಗೆ ಎಂಬುದನ್ನು ಕುರಿತು ಆ ನಮ್ಮ ವಿಚಾರಗಳನ್ನು ತಲೆಕೆಳಗೆ ಮಾಡಿ ಹೊಸ ದೃಷ್ಟಿಕೋನವೊಂದನ್ನು ಮಂಜುನಾಥ್ ಅವರ ಇಲ್ಲಿಯ ಲೇಖನಗಳು ನಮಗೆ ನೀಡುತ್ತವೆ. ಇವು ಕೇವಲ 'ಬರಹ'ಗಳಲ್ಲ. ಕ್ಷೇತ್ರಕಾರ್ಯ, ಪ್ರಯೋಗ, ಚರ್ಚೆ, ಆತ್ಮಪರೀಕ್ಷೆ, ಅಧ್ಯಯನಗಳ ಹಿನ್ನೆಲೆಯಲ್ಲಿ ಮೂಡಿರುವ ಮಂಜುನಾಥ್‌ರ ಕಳಕಳಿಯ ಪ್ರಾರ್ಥನೆ ಮತ್ತು ಒತ್ತಾಯ.

ಶಿಕ್ಷಣವೆಂದರೆ ಕಲಿಸುವುದು ಎಂಬುದು ಸಾಂಪ್ರದಾಯಿಕ ತಿಳುವಳಿಕೆ. ಹಾಗಲ್ಲ, ಅದು ನಿರಂತರವಾಗಿ ಕಲಿಯುತ್ತಾ ನಂತರ ಕಲಿಸುವ ಕ್ರಿಯೆ; ಕೇವಲ ಶಿಕ್ಷಕರುಗಳಿಗೆ ಮಾತ್ರವಲ್ಲ, ಪೋಷಕರಿಗೆ, ಆಡಳಿತಗಾರರಿಗೆ ಮತ್ತು ಸಾಂಸ್ಕೃತಿಕ ನಾಯಕರುಗಳಿಗೆ ಕೂಡ. ಎಲ್ಲರೂ ಎಲ್ಲ ಕಾಲದಲ್ಲಿಯೂ ಕಲಿಯುತ್ತಲೇ ಇರಬೇಕಾದ ಆಯಾಮವನ್ನು ನಾವು ಮರೆತಿರುವುದರಿಂದಲೇ ಶಿಕ್ಷಣ ಕ್ಷೇತ್ರದ ಸಮಸ್ಯೆಗಳು ಬಿಗಡಾಯಿಸಿರುವುದು. ನಮ್ಮ ಪ್ರಾಮಾಣಿಕ ಕಾಳಜಿ, ಉದ್ದೇಶಗಳನ್ನು ಮೀರಿ ಹೀಗೆಂದು ಮಂಜುನಾಥ್ ಅವರು ಮತ್ತೆ ಮತ್ತೆ ನಮಗೆ ನೆನೆಪಿಸುತ್ತಾರೆ. ಮಂಜುನಾಥ್ ಕ್ರಿಯಾಶೀಲ ಆಶಾವಾದಿ. ಆಶಾವಾದವೆಂಬುದು ಅವರ ಮನೋಧರ್ಮ ಮಾತ್ರವಲ್ಲ, ಮಕ್ಕಳಿಗಾಗಿ ಇರುವ ಆಸೆ ಮತ್ತು ನಂಬಿಕೆ. ಈ ಆಶಾವಾದಕ್ಕೆ ಓದುಗರೆಲ್ಲರನ್ನೂ ಒಳಗೊಳ್ಳುವಷ್ಟು ನಿಸ್ಪೃಹತೆ ಮತ್ತು ಆರ್ದ್ರತೆಯಿದ್ದು ಇಲ್ಲಿಯ ಬರವಣಿಗೆ ಸಾಂಸ್ಕೃತಿಕವಾಗಿದೆ, ಗಾಢವಾಗಿದೆ.

ಸಾರ್ವಜನಿಕ ಸಮಸ್ಯೆಯೆಂದು ನಾವು ತಿಳಿದಿರುವುದನ್ನು ನಮ್ಮ ಅಂತರಂಗದ ಮತ್ತು ಕೌಟುಂಬಿಕ ಸಮಸ್ಯೆಯೆಂದು ಮನವರಿಕೆ ಮಾಡಿಕೊಡುವುದರಲ್ಲೇ ಈ ಪುಸ್ತಕದ ಸಾರ್ಥಕತೆ ಇರುವುದು.

ಕೆ. ಸತ್ಯನಾರಾಯಣ, ಸಾಹಿತಿಗಳು ಮತ್ತು ನಿವೃತ್ತ ಮುಖ್ಯ ಆಯುಕ್ತರು,
ಆದಾಯ ತೆರಿಗೆ ಇಲಾಖೆ, ಭಾರತ ಸರ್ಕಾರ

ಸ್ವಾಮಿ ವಿವೇಕಾನಂದ ಶೈಕ್ಷಣಿಕ ಅನುಸಂಧಾನ
ಗೊಟ್ಟಿಗೆರೆ, ಬೆಂಗಳೂರು
ಪರವಾಗಿ




ಎಂ. ಎಂ. ಪಬ್ಲಿಕೇಷನ್
ಬೆಂಗಳೂರು

₹ 300/-